# ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಪುಲಿಗೆಮ್ಮ ಬಿ.

ಮಾರ್ಗದರ್ಶಕರು

ಡಾ. ಕೆ. ರವೀಂದ್ರನಾಥ

ಪ್ರವಾಚಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಭಾಷಾನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ ೫೮೩ ೨೭೬

೨೦೦೯

# ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಹುಲಿಗೆಮ್ಮ ಬಿ.**

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಪ್ರವಾಚಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಭಾಷಾನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ ೫೮೩ ೨೭೬

೨೦೦೯



**ಡಾ.ಕೆ.ರವೀಂದ್ರನಾಥ**
ಪ್ರವಾಚಕರು ಹಾಗೂ ಮಾರ್ಗದರ್ಶಕರು

ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಪ್ರಮಾಣ ಪತ್ರ

"ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಕುರಿತು ಕು.ಹುಲಿಗೆಮ್ಮ ಬಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನೆಡೆಸಿ ಈ ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಅಥವಾ ಡಿಪ್ಲೋಮಾಗಳಿಗೆ ಸಲ್ಲಿಸಿರುವುದಿಲ್ಲ. ಇದು ಇವರ ಸ್ವತಂತ್ರ ಸಂಶೋಧನಾಧ್ಯಯನವಾಗಿದೆ. ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲಾಗಿದೆ.

ದಿನಾಂಕ: ೧-೮-೨೦೦೬
ಸ್ಥಳ : ವಿದ್ಯಾರಣ್ಯ

(ಡಾ.ಕೆ.ರವೀಂದ್ರನಾಥ)
ಮಾರ್ಗದರ್ಶಕರು

## ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ "ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ" ಎಂಬ ಮಹಾಪ್ರಬಂಧವು ಡಾ.ಕೆ.ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನಾಧರಿಸಿ ರಚನೆಗೊಂಡಿದ್ದಾಗಿದೆ.

ಈ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ, ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೇ ಇಡಿಯಾಗಿ ಎಲ್ಲಿಯೂ ಪ್ರಕಟಣೆಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

B Huligemma

ದಿನಾಂಕ : 1/08/09

ಸ್ಥಳ : ವಿದ್ಯಾರಣ್ಯ

(ಹುಲಿಗೆಮ್ಮ ಬಿ)

ಸಂಶೋಧನಾ ವಿದ್ಯಾರ್ಥಿನಿ

ಹಸ್ತಪ್ರತಿಶಾಸ್ತ್ರ ವಿಭಾಗ

# ಅರಿಕೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪುರಾಣಗಳಿಗೆ ಸಿಂಹಪಾಲು. ಇಲ್ಲಿಯ ಅವತಾರ ವೃತ್ತಾಂತಗಳನ್ನು ತೊಡೆದು ಹಾಕಿದರೆ ಚಾರಿತ್ರಿಕ ಸಂಗತಿಗಳು ಅಧ್ಯಯನ ಯೋಗ್ಯ. ಈ ಹಿನ್ನೆಲೆಯಲ್ಲಿ ಹಾಲುಮತ ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ನಿರೂಪಿಸುವ ಹಾಲುಮತ ಪುರಾಣಗಳನ್ನು ಅನುಲಕ್ಷಿಸಿ "ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದ ಕುರಿತು ಸಂಶೋಧನೆ ಕೈಗೊಳ್ಳಲಾಗಿದೆ. ಇದಕ್ಕೆ ಅವಕಾಶ ಮಾಡಿಕೊಟ್ಟ ವಿಶ್ರಾಂತ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡರು, ಮಾನ್ಯ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೂ, ಕುಲಸಚಿವರಾದ ಶ್ರೀ.ಎಸ್.ಎಸ್.ಪೂಜಾರ ಅವರಿಗೂ, ಅಧ್ಯಯನಾಂಗದ ನಿರ್ದೇಶಕರಾದ ಪ್ರೊ.ವೀರೇಶ ಬಡಿಗೇರ ಅವರಿಗೂ ಕೃತಜ್ಞತೆಗಳು.

ಎಂ.ಎ ಪದವಿಯ ವ್ಯಾಸಂಗದಲ್ಲೂ ನನ್ನ ವಿದ್ಯಾಗುರುಗಳಾಗಿರುವ ಡಾ.ಕೆ.ರವೀಂದ್ರನಾಥ ಅವರು ಈ ಮಹಾಪ್ರಬಂಧದ ಮಾರ್ಗದರ್ಶಕರಾಗಿ ಶಾಸ್ತ್ರ-ಶಾಸನ-ಕಾವ್ಯ ಆಕರಗಳ ಜೊತೆಗೆ ಸಮುದಾಯ ಅಧ್ಯಯನದಲ್ಲಿ ಕೃಷಿ ಮಾಡಿದ್ದಾರೆ. ಇವರು ನೀಡಿದ ಬೆಲೆಯುಳ್ಳ ಮಾರ್ಗದರ್ಶನಕ್ಕೆ ಕೃತಜ್ಞಾಪೂರ್ವಕ ವಂದನೆಗಳು.

ಹಸ್ತಪ್ರತಿಶಾಸ್ತ್ರ ವಿಭಾಗದ ಅಧ್ಯಾಪಕರುಗಳಾದ ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಎಸ್.ಎಸ್.ಅಂಗಡಿ, ಮುಖ್ಯಸ್ಥರಾದ ಡಾ.ಎಸ್.ಆರ್.ಚನ್ನವೀರಪ್ಪ ಮತ್ತು ವಿಭಾಗದ ಸಿಬ್ಬಂದಿ ವರ್ಗದವರಾದ ಶ್ರೀ.ಈರಪ್ಪ ಮೇಟಿ ಮತ್ತು ಶ್ರೀ.ಬಿ.ಈರಪ್ಪ ಇವರುಗಳಿಗೆ ಮತ್ತು ವಿಷಯವನ್ನು ವಿಸ್ತರಿಸಿಕೊಳ್ಳಲು ಬೌದ್ಧಿಕ ತಿಳುವಳಿಕೆ ನೀಡಿದ ಡಾ.ರಹಮತ್ ತರೀಕೆರೆ, ಡಾ.ವೀರಣ್ಣ ದಂಡೆ, ಶ್ರೀರಾಮ ಇಟ್ಟಣ್ಣನವರ ಅವರುಗಳಿಗೆ,

ಅಧ್ಯಯನಕ್ಕೆ ಪ್ರೀತಿಯಿಂದ ಸಹಕರಿಸಿದ ಅಪ್ಪ, ಅವ್ವ, ಅಣ್ಣಂದಿರಾದ ಭರಮಪ್ಪ, ಹನುಮಂತಪ್ಪ ಮತ್ತು ಮಂಜು, ಅಕ್ಕಂದಿರಾದ ಲೋಕಮ್ಮ, ಸುಮ, ಮಂಜುಳ, ತಮ್ಮಂದಿರಾದ ಮಧುಸೂಧನ, ಮುರುಳಿ, ಮಾವಂದಿರು, ಅತ್ತಿಗೆಯವರಿಗೂ, ಮಟಾಣಿಗಳಾದ ಶಿವರಾಜು, ಸುನೀಲ್, ಗವಿ, ಸುಜನ್, ಶುಭಾ, ಮಾನಸ, ವಿದ್ಯಾ, ಪ್ರಿಯಾ ಮತ್ತು ಕುಟುಂಬ ವರ್ಗದವರಿಗೆ,

ಸಂಶೋಧನೆಯಲ್ಲಿ ಹಲವು ಸಲಹೆ, ಸೂಚನೆಗಳನ್ನು ನೀಡಿ ಹಸ್ತಪ್ರತಿಯನ್ನು ತಿದ್ದುವಲ್ಲಿ ಸಹಾಯ ಮಾಡಿದ ಆತ್ಮೀಯ ಸ್ನೇಹಿತರಾದ ಸೋಮಕ್ಕ ಎಂ., ಲಿಂಗಣ್ಣ ಎಚ್., ಶಂಕರ ಕೆ., ಕಲ್ಲಯ್ಯ ಹಿರೇಮಠ, ಕುಮಾರ್ ಜೆ., ರಂಗಸ್ವಾಮಿ, ರಾಜೇಶ್ವರಿ, ಸುನಂಧ, ಆರ್ಮುಗಂ ಮತ್ತು ಚಂದ್ರಪ್ಪ ಸೊಬಟಿ ಹಿರಿಯರಾದ ಬಿ.ಜಿ.ಬಿರಾದಾರ ಇವರುಗಳಿಗೆ,

ಅಕ್ಷರ ಸಂಯೋಜನೆ ಮಾಡಿಕೊಟ್ಟ ಶ್ರೀಮತಿ ಭಾರತಿ ಹಾಗೂ ಶ್ರೀ. ನಾಗರಾಜ ಬಡಿಗೇರ, ರವಿಕುಮಾರ್.ಎ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು.

ಸಂಶೋಧನೆಗೆ ಬೇಕಾದ ಪುಸ್ತಕಗಳನ್ನು ಕೊಟ್ಟು ಸಹಕರಿಸಿದ ಕನ್ನಡ ವಿಶ್ವವಿದ್ಯಾಲಯದ ಅಕ್ಷರ ಗ್ರಂಥಾಲಯ ಮತ್ತು ಸಿರಿಗನ್ನಡ ಗ್ರಂಥಾಲಯದ ಎಲ್ಲ ಸಿಬ್ಬಂದಿ ವರ್ಗಕ್ಕೆ ಕೃತಜ್ಞತೆಗಳು.

ಹುಲಿಗೆಮ್ಮ ಬಿ.

ಪರಿವಿಡಿ

* * *

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ಸ್ವರೂಪ

೧. ಪೀಠಿಕೆ

೨. ಅಧ್ಯಯನದ ಉದ್ದೇಶ

೩. ಅಧ್ಯಯನದ ವ್ಯಾಪ್ತಿ

೪. ಅಧ್ಯಯನದ ಮಹತ್ವ

೫. ಅಧ್ಯಯನದ ಸ್ವರೂಪ

೬. ಅಧ್ಯಯನದ ಸಮೀಕ್ಷೆ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ಸ್ವರೂಪ

### ೧. ಪೀಠಿಕೆ

ಕರ್ನಾಟಕ ಸಂಸ್ಕೃತಿಯಲ್ಲಿ ಹಾಲುಮತ ಸಮುದಾಯದ ಚರಿತ್ರೆಯನ್ನು ಗುರುತಿಸುವ ಕೆಲಸ ಇತ್ತೀಚೆಗೆ ಬಹು ತೀವ್ರತೆಯಿಂದ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಹಾಲುಮತ ಅಧ್ಯಯನ ಆಕರಗಳು, ಹಾಲುಮತ ಗುರು ಒಡೆಯರು, ಹಾಲುಮತ ಒಳಪಂಗಡಗಳು ಅಲ್ಲದೆ ಹಾಲುಮತ ಗೀತ ಸಾಹಿತ್ಯ, ಕಾವ್ಯ ಸಾಹಿತ್ಯ ಇತ್ಯಾದಿ ನೆಲೆಗಳಿಂದ ಹಾಲುಮತ ಸಮಾಜದ ಇತಿಹಾಸ, ಪ್ರಾಚೀನತೆ ಹಾಗೂ ಸಾಧನೆಗಳನ್ನು ಕುರಿತು ಕೆಲವು ಅಧ್ಯಯನಗಳು ನಡೆದಿವೆ. ಹಾಲುಮತ ಸಮಾಜವು ವಿಶಿಷ್ಟ ಆಚರಣೆ, ನಂಬಿಕೆ ಹಾಗೂ ಸಂಪ್ರದಾಯಗಳಿಂದ ಪ್ರಾಚೀನ ಕನ್ನಡಿಗರ ಸಾಮೂಹಿಕ ಪ್ರಜ್ಞೆಗೆ ಪ್ರತಿನಿಧಿ ಎನ್ನುವಂತೆ ಬೆಳೆದು ಬಂದಿದೆ. ಮೂಲತಃ ಪಶುಪಾಲನ ಸಂಸ್ಕೃತಿಯಿಂದ ತಮ್ಮ ಬದುಕನ್ನು ರೂಪಿಸಿಕೊಂಡ ಹಾಲುಮತಸ್ಥರು ಪ್ರಾಚೀನ ಭಾರತದ ಆದಿವಾಸಿಗಳಂತೆ ಅತ್ಯಂತ ಪ್ರಾಚೀನ ಇತಿಹಾಸವನ್ನು ಉಳ್ಳವರಾಗಿದ್ದಾರೆ. ಇವರನ್ನು ಕುರಿತು ಕನ್ನಡದಲ್ಲಿ ಡಾ. ಶಂಬಾ ಜೋಶಿಯವರಂತಹ ವಿದ್ವಾಂಸರು 'ಹಾಲುಮತ ದರ್ಶನ' ಕುರಿತು ಅಧ್ಯಯನ ಮಾಡಿದ್ದಾರೆ. ಅದೇ ರೀತಿ ಇವರ ಸಾಹಿತ್ಯ, ಇವರ ಪ್ರಾದೇಶಿಕ ವೈಶಿಷ್ಟ್ಯ, ಈ ಸಮುದಾಯದ ದೈವ ಮತ್ತು ಸಂಸ್ಕೃತಿಯನ್ನು ಕುರಿತು ಕನ್ನಡದಲ್ಲಿ ಕಾವ್ಯ ಪುರಾಣಗಳು ರಚನೆಯಾಗಿವೆ. ಈ ಎಲ್ಲಾ ಆಕರಗಳನ್ನು ಪರಾಮರ್ಶಿಸಿ ಹಾಲುಮತಸ್ಥರ ಐತಿಹಾಸಿಕ ಹಿನ್ನೆಲೆ, ಅವರ ದ್ರಾವಿಡ ಮೂಲ, ಒಳಪಂಗಡಗಳು ಮುಂತಾದ ಸಂಗತಿಗಳನ್ನು ದಾಖಲಿಸುವ ಪ್ರಯತ್ನ ನಡೆದಿದೆ.

ಕನ್ನಡ ಸಾಹಿತ್ಯ ಆರಂಭದಿಂದಲೂ ಪುರಾಣ ಪ್ರಜ್ಞೆಯಿಂದ ಬೆಳೆದು ಬಂದಿದೆ. ಇದಕ್ಕೆ ಆದ್ಯರು ಜೈನರು. ತಮ್ಮ ಧರ್ಮದ ತೀರ್ಥಂಕರರನ್ನು ಕುರಿತು ಆಗಮಿಕ ಪುರಾಣಗಳನ್ನು ಮತ್ತು ಆಶ್ರಿತರನ್ನು ಕುರಿತು ಲೌಕಿಕ ಪುರಾಣಗಳನ್ನು ರಚನೆ ಮಾಡಿದರು. ಮುಂದೆ ವೀರಶೈವ ವಸ್ತು

ಆ ಧರ್ಮದ ಧಾರ್ಮಿಕ ಪುರುಷರಾದರು. ಈ ಎರಡೂ ಧರ್ಮಿಯರ ಪುರಾಣ ರಚನೆಯ ಹಿಂದೆ ಐತಿಹಾಸಿಕ ಸಂಗತಿಗಳು ಇರುವುದನ್ನು ಅಲ್ಲಗಳೆಯುವಂತಿಲ್ಲ. ಉದಾಹರಣೆಗೆ ಪಂಪ ಭಾರತ, ಗದಾಯುದ್ಧಗಳಂತಹ ಜೈನ ಪುರಾಣಗಳಲ್ಲಿ ಕರ್ನಾಟಕ ಅರಸು ಮನೆತನಗಳ ಚರಿತ್ರೆ ಅಡಕವಾಗಿರುವುದು ಕಂಡುಬರುತ್ತದೆ. ಹಾಗೆಯೇ ಐತಿಹಾಸಿಕ ವ್ಯಕ್ತಿಗಳಾದ ಶಿವಶರಣರನ್ನು ಕುರಿತು ಬಂದ ಪುರಾಣಗಳು ನಮ್ಮ ಜನರ ಚಾರಿತ್ರಿಕ ಮನೋಧರ್ಮವನ್ನು ಪ್ರತಿನಿಧಿಸುತ್ತವೆ. ವ್ಯಕ್ತಿ ವರ್ಣನೆ ಅತಿಯೆನಿಸಿದರು ಇತಿಹಾಸದ ಅಂಶದೆಡೆಗೆ ಇಲ್ಲಿ ಸ್ಥಾನ ದೊರೆತಿದೆ. ಹೀಗಾಗಿ ಬಹುತೇಕ ಕನ್ನಡ ಸಾಹಿತ್ಯ ಕಾವ್ಯ ಪುರಾಣದ ಅಡಿಯಲ್ಲಿ ರಚನೆಗೊಂಡಿದೆ. ಇಲ್ಲಿ ಒಂದು ಮಾತನ್ನು ಗಮನಿಸಬೇಕು. ಕರ್ನಾಟಕದ ಅರಸು ಮನೆತನಗಳು ಮತ್ತು ಧಾರ್ಮಿಕ ಪುರುಷರ ಚರಿತ್ರೆಯನ್ನು ಒಳಗೊಂಡ ಪುರಾಣ ಸಾಹಿತ್ಯ ಉಳ್ಳವರ ಚರಿತ್ರೆಯಾಗಿ ಬೆಳೆದಿರುವುದು ನಿಜಸಂಗತಿ. ಆದ್ದರಿಂದ ಒಂದು ನಾಡಿನ ಪರಿಪೂರ್ಣ ಇತಿಹಾಸ ಬರೆಯಿಸಿಕೊಳ್ಳಲಿಲ್ಲ. ಈ ಕಾರಣವಾಗಿ ಚರಿತ್ರೆಯ ನಿರ್ಮಾಣದಲ್ಲಿ ಕನ್ನಡ ಸಾಹಿತ್ಯ ತೊಟ್ಟ ನಿಲುವು-ಇಟ್ಟ ಹೆಜ್ಜೆ ಅಪೂರ್ಣವೆಂದೆ ಹೇಳಬೇಕು. ಈ ಅಪೂರ್ಣತೆಗೆ ಪರಿಪೂರ್ಣತೆ ಬರಬೇಕಾದರೆ ಎಲ್ಲ ನೆಲೆಯಲ್ಲಿಯೂ ಅಧ್ಯಯನ ನಡೆಯಬೇಕಾದುದು ಅನಿವಾರ್ಯ ಮತ್ತು ಅಗತ್ಯ

ಮೇಲೆ ವಿವರಿಸಿದ ಎರಡು ಪ್ರಬಲ ಸಮುದಾಯಗಳ ಪುರಾಣಗಳನ್ನು ಕುರಿತು ಈಗಾಗಲೇ ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ಹಾಲುಮತ ಸಮುದಾಯದ ಪುರಾಣಗಳನ್ನು ನಿರ್ದಿಷ್ಟವಾಗಿ ಅಧ್ಯಯನ ಮಾಡುವ ಕಾರ್ಯ ಅಲ್ಪಸ್ವಲ್ಪ ಕನ್ನಡದಲ್ಲಿ ಇತ್ತೀಚೆಗೆ ಆರಂಭವಾಗಿದೆ. ಇದರಿಂದ ಸಮಸ್ತ ಜನಾಂಗ ಅಭಿವ್ಯಕ್ತಿಯ ಮಾಧ್ಯಮದ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡುವುದು, ಆ ಮೂಲಕ ಕನ್ನಡ ಕವಿಗಳ ಕಾವ್ಯ ಸಾಮರ್ಥ್ಯವನ್ನು ಹಾಗೂ ಆ ಕಾವ್ಯಕ್ಕೆ ವಸ್ತುವಾದ ಸಾಮಾಜಿಕರ ಸಾಂಸ್ಕೃತಿಕ ಬದುಕನ್ನು ನಿರೂಪಿಸುವ ದೃಷ್ಟಿಯಿಂದ ಇಂತಹ ಅಧ್ಯಯನಗಳು ಮಹತ್ವದ ದಾಖಲೆಗಳಾಗುತ್ತವೆ. ಹಾಲುಮತ ಪುರಣಗಳಲ್ಲಿ ಅನೇಕ ವೈವಿಧ್ಯತೆಯಿದೆ. ಸಿದ್ಧಮಂಕ ಚರಿತ್ರೆ, ತಗರ ಪವಾಡ, ಗೊಲ್ಲಾಳಯ್ಯನ ಪುರಾಣ, ಹಾಲುಮತೋತ್ತೇಜಕ ಪುರಾಣ (ರಸ್ತಾಪುರ ಭೀಮಕವಿ) ಹಾಲುಮತದ ಪುರಾಣವು (ಪಂಡಿತ ಚನ್ನಬಸವ ಕವಿ ದಾವಣಗೆರೆ), ಜನಪದ ಹಾಲುಮತ ಮಹಾಕಾವ್ಯ (ಸಿದ್ಧಪ್ಪ ಮೇಟಿ), ಹಾಲುಮತ ಪುರಾಣ (ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ), ಮಾಳಿಂಗರಾಯನ ಕಾವ್ಯ, ಶ್ರೀ ಸುಕ್ಷೇತ್ರ ಮಹಿಮಾಂತಕ ಮಹಾಲಿಂಗರಾಯರ ಹಾಲುಮತ ಪುರಾಣ (ಅಡಿವೆಪ್ಪ ಮಾಳಪ್ಪ ಸೋಮುತ್ತೆ ಒಡೆಯರ್), ಹಾಲ್ಮತದ ಶ್ರೀ ಸಿದ್ಧಬೀರೇಶ್ವರ್ ಅರ್ಥಾತ್ ಶ್ರೀ ಕರಿಸಿದ್ದೇಶ್ವರ ಪುರಾಣ ಮುಂತಾದವು ಹಾಲುಮತ ಸಮಾಜದ ಐತಿಹಾಸಿಕ ಹಿನ್ನೆಲೆ, ಅವರ ಒಳಪಂಗಡ, ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳನ್ನು ಚಿತ್ರಿಸುತ್ತವೆ.

ಹಾಲುಮತ ಪುರಾಣಗಳು ಆ ಸಮಾಜದ ಸಂಪ್ರದಾಯಗಳಾದ ರೇವಣಸಿದ್ಧ ಸಂಪ್ರದಾಯ, ಸಿದ್ಧರಾಮ ಸಂಪ್ರದಾಯ ಮತ್ತು ಅಮೋಘಸಿದ್ಧ ಸಂಪ್ರದಾಯಗಳನ್ನು, ಗುರು ಒಡೆಯರ ಪರಂಪರೆಯ ವೈಶಿಷ್ಟ್ಯವನ್ನು ವಿವರವಾಗಿ ನೀಡುತ್ತವೆ. ರೇವಣಸಿದ್ಧ ಸಂಪ್ರದಾಯದಲ್ಲಿ ಶಾಂತಮುತ್ತಯ್ಯ, ಶಾಂತೊಡೆಯರು, ಸಿದ್ಧರಾಮೇಶ್ವರ ಸಂಪ್ರದಾಯದಲ್ಲಿ ಸಿದ್ಧಮಂಕ,

ಮಂಕೊಡೆಯರು, ಅಮೋಘಸಿದ್ಧ ಸಂಪ್ರದಾಯದಲ್ಲಿ ಅಮೋಘಸಿದ್ಧೊಡೆಯರು ಧಾರ್ಮಿಕ ವ್ಯಕ್ತಿಗಳಾಗಿ ಗೋಚರಿಸುವುದು ಕಂಡುಬರುತ್ತದೆ. ಭೌಗೋಳಿಕ ವಿಸ್ತಾರದ ದೃಷ್ಟಿಯಿಂದ ಹಾಲುಮತ ಪುರಾಣಗಳು ಬಿಜಾಪುರ, ಬಾಗಲಕೋಟೆ, ಬೆಳಗಾವಿ, ಚಿತ್ರದುರ್ಗ, ತುಮಕೂರು ಮುಂತಾದ ಕಡೆಗಳಲ್ಲಿ ವ್ಯಾಪಿಸಿರುವುದು ಕಂಡುಬರುತ್ತದೆ. ಹಾಗೆಯೇ ಹಾಲುಮತಸ್ಥರ ಪುಣ್ಯಕ್ಷೇತ್ರಗಳಾದ ಸರೂರು, ಹುಲಜಂತಿ, ಗೊಲ್ಲೇರಿ, ಬಂಕಾಪುರ ಇವುಗಳ ಸಾಂಸ್ಕೃತಿಕ ಮಹತ್ವವನ್ನು ಢಾಳವಾಗಿ ಪರಿಚಯಿಸುತ್ತವೆ.

ಇನ್ನೂ ಸಾಂಸ್ಕೃತಿಕವಾಗಿ ಹಬ್ಬ, ಉತ್ಸವ, ಜಾತ್ರೆ, ಕಂಥಾ ಧಾರಣ ಸೇವೆ, ಕುರುಬರ ಹೇಳಿಕೆಗಳು, ಮೂರೇಣಿನ ಕಂತೆ, ಕಂಬಳಿ ಮಾಡುವ ವಿಧಾನ ಇವುಗಳಿಂದ ಒಂದು ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ನಿರ್ವಚಿಸುವ ಹೆಗ್ಗಳಿಕೆಗೆ ಈ ಪುರಾಣಗಳು ಪಾತ್ರವಾಗಿವೆ. ವಿಶೇಷವಾಗಿ ಕಲ್ಯಾಣದ ಶರಣ ಚಳುವಳಿಯ ಸಂದರ್ಭದಲ್ಲಿ ಲಿಂಗಾಯತ ಧರ್ಮಕ್ಕೆ ಪರಿವರ್ತನೆಗೊಂಡ ಐತಿಹಾಸಿಕ ಸಂಗತಿಗಳನ್ನು ನಿರೂಪಿಸುವುದರ ಮೂಲಕ ಹಾಲುಮತ ಪುರಾಣಗಳಿಗೆ ಚಾರಿತ್ರಿಕ ಮಹತ್ವ ಪ್ರಾಪ್ತವಾಗುತ್ತದೆ. ಇತ್ತೀಚೆಗೆ ಮೈಲಾರಲಿಂಗನ ಸಂಪ್ರದಾಯದಲ್ಲಿ ತಮ್ಮನ್ನು ಗುರುತಿಸಿಕೊಂಡ ಹಾಲುಮತಸ್ಥರು ಮತ್ತೆ ಲಿಂಗಾಯತ ಮತದಿಂದ ಪ್ರತ್ಯೇಕೀಕರಣಗೊಂಡ ಸಂಕ್ರಮಣ ಸಮಯವನ್ನು ಈ ಪುರಾಣಗಳ ಮೂಲಕ ತಿಳಿಯಬಹುದಾಗಿದೆ. ಈ ಎಲ್ಲಾ ಉದ್ದೇಶಗಳನ್ನು ಪರಮರ್ಶಿಸುವ ಮತ್ತು ಈಗಾಗಲೇ ಸ್ಥಾಪಿತವಾದ ಫಲಿತಗಳ ಮರುಚಿಂತನೆಗೆ ಹಚ್ಚುವ ದೃಷ್ಟಿಯಿಂದ ''ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ'' ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ವಿಶೇಷವಾಗಿ ರಾಜಾಶ್ರಯದಲ್ಲಿ ಬೆಳೆದ ಕೃತಿಗಳ ಸಾಮಾಜಿಕ ಮೌಲ್ಯಕ್ಕಿಂತ ದುಡಿಯುವ ವರ್ಗದ ಪುರಾಣಗಳು ನೈಜ ಜೀವನಕ್ಕೆ ತುಂಬಾ ಸಮೀಪ ಇದೆಯೆಂದು ಹಾಲುಮತ ಪುರಾಣಗಳು ತಿಳಿಸುತ್ತವೆ. ಮೌಖಿಕ ಪರಂಪರೆಯಲ್ಲಿದ್ದರೂ ಶಿಷ್ಟ ಪುರಾಣಗಳಿಗೆ ಸಮಾನಾಗಿ ನಿಲ್ಲುವ ಸ್ಥೈರ್ಯವು ಈ ಪುರಾಣಗಳಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಮೌಖಿಕದಿಂದ ಲಿಖಿತರೂಪಕ್ಕೆ ಪರಿವರ್ತನೆಯಾಗುವುದರ ಮೂಲಕ ಸಮುದಾಯದ ಚರಿತ್ರೆಯನ್ನು ದಾಖಲೀಕರಿಸಲಾಗಿದೆ. ಜೊತೆಗೆ ಈ ದಾಖಲೀಕರಣಕ್ಕೆ ವಿದ್ವಾಂಸರು, ಆಯಾ ಸಮುದಾಯದಲ್ಲಿನ ಆಸಕ್ತಿಯ ವಕ್ತಾರರು ಸಂಗ್ರಹಣೆ ಕಾರ್ಯವನ್ನು ಮಾಡಿದ್ದಾರೆ. ಆದರೂ ಹಾಲುಮತ ಸಮಾಜ ಕುರಿತು ಕೆಲವು ಬಿಡಿ ಬಿಡಿ ಪುಸ್ತಕಗಳು ವಿಮರ್ಶಾತ್ಮಕ ನೆಲೆಯಲ್ಲಿ ಬಂದಿರುವುದು ವಿರಳ. ಹಾಗಾಗಿ ಈಗಾಗಲೇ ಲಿಖಿತ ರೂಪದಲ್ಲಿ ದೊರೆತಿರುವ ಹಾಲುಮತ ಪುರಾಣಗಳ ಮೂಲಕ ಹಾಲುಮತ ಸಮಾಜದ ಸಂಕರಶೀಲತೆಯನ್ನು ಚರ್ಚಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ. ಬದಲಾದ ಸಂಸ್ಕೃತಿಯ ಜೊತೆಗೆ ಮಾಡಿಕೊಂಡ ಒಪ್ಪಂದ, ಒಕ್ಕಲುಗಳು ಮತ್ತು ಸಂಘರ್ಷಗಳು ಕುರಿತು ವಿಶ್ಲೇಷಣೆ ಮಾಡುವುದಾಗಿದೆ.

ಅಲ್ಲದೆ ಕರ್ನಾಟಕದ ಪರಿಸರದಲ್ಲಿ ಹಾಲುಮತದವರು ಬೇಡರು, ಗೌಳಿಗರ ವೃತ್ತಿಯ ಜೊತೆಗೆ ನಡೆಸಿದ ಸಾಂಸ್ಕೃತಿಕ ಸಂಘರ್ಷವು ಸಂಸ್ಕೃತಿಯ ಪರಿವರ್ತನೆಗೆ ಕಾರಣವಾಯಿತು.

ಇಂತಹ ಬದಲಾದ ಸಂದರ್ಭದಲ್ಲಿ ಬಲಿಷ್ಠ ಸಮುದಾಯಗಳ ಜೊತೆ ಸ್ನೇಹ ಬೆಳೆಸಿ ತನ್ನ ಮನೋಧರ್ಮವನ್ನು ಸಮಾಜಕ್ಕೆ ತಿಳಿಸುವಂತಹ ಸಾಂಸ್ಕೃತಿಕ ಚೌಕಟ್ಟನ್ನು ಈ ಪುರಾಣಗಳು ರೂಪಿಸಿಕೊಂಡಿವೆ. ಹಾಗೂ ಸಮುದಾಯದ ಮೌಲ್ಯಗಳನ್ನು ಕಟ್ಟು ನಿಟ್ಟಾಗಿ ಪಾಲಿಸಿಕೊಂಡು ಬಂದಿವೆ. ಅವುಗಳನ್ನೇ ಆಚರಣೆ, ನಂಬಿಕೆ, ಸಾಮಾಜಿಕ ಆಶಯ, ಸಾಂಸ್ಕೃತಿಕ ಮಹತ್ವ ಎಂದು ನಿತ್ಯ ಜೀವನದಲ್ಲಿ ಕಾನೂನುಗಳಾಗಿವೆ. ಅಲ್ಲದೆ ಈ ಕಾನೂನುಗಳನ್ನು ಬಹಿಷ್ಕರಿಸಿದವರಿಗೆ ಸಮಾಜವು ಶಿಕ್ಷೆಯನ್ನು ನೀಡುತ್ತಿತ್ತು. ಈ ಮೂಲಕ ಸಾಮಾಜಿಕ ಸುವ್ಯವಸ್ಥೆಗೆ ಭದ್ರ ಚೌಕಟ್ಟನ್ನು ಒದಗಿಸುವ ಕಾರ್ಯವನ್ನು ಹಾಲುಮತ ಪುರಾಣಗಳು ಮಾಡುತ್ತವೆ.

ಸಮುದಾಯದ ಜೀವನ ಮೌಲ್ಯಗಳು ಆಯಾ ಸಮಾಜದ ವ್ಯಕ್ತಿಗಳ ಜೀವನ ಕ್ರಮ ಮತ್ತು ಸಾಮಾಜಿಕ ಮೌಲ್ಯಗಳೇ ಆಗಿವೆ. ಅವುಗಳು ಆಚರಣೆಯ ರೂಪದಲ್ಲಿ ಮಹತ್ವನ್ನು ಪಡೆದಿವೆ. ಇವು ರಾಜ ಮಹಾರಾಜರ ಇತಿಹಾಸ ಅಲ್ಲದಿದ್ದರೂ, ಜನ ಸಾಮಾನ್ಯರ ಚರಿತ್ರೆ ನಿರೂಪಿಸಲು ಮುಖ್ಯ ಆಕರವಾಗಿವೆ. ಹೀಗೆ ಪ್ರತಿಯೊಂದು ಸಮುದಾಯವು ತನ್ನ ಅಸ್ತಿತ್ವವನ್ನು ಉಳಿಸಿ ಬೆಳಸಿಕೊಂಡಂತೆ ಹಾಲುಮತ ಸಮುದಾಯವು ಸಹ ತನ್ನ ಕಾವ್ಯ ಪುರಾಣಗಳಲ್ಲಿ ಸಂಸ್ಕೃತಿಯನ್ನು ಅಡಗಿಸಿಕೊಂಡಿದೆ. ಈ ಕಾರಣದಿಂದ ಸುಪ್ತಚೇತನವಾಗಿದ್ದ ಕಾವ್ಯ ಪುರಾಣಗಳಲ್ಲಿನ ಹಾಲುಮತ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ.

**೨. ಅಧ್ಯಯನದ ಉದ್ದೇಶ**

'ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧದ ಅಧ್ಯಯನದಲ್ಲಿ ಪುರಾಣಗಳು ಗರ್ಭೀಕರಿಸಿಕೊಂಡ ಹಾಲುಮತದವರ ಆಚರಣೆ, ನಂಬಿಕೆ, ಸಂಪ್ರದಾಯಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರಾಚೀನ ಇತಿಹಾಸದಲ್ಲಿ ಹಾಲುಮತದವರು ಕುರುಬರೆಂದು ಕರೆಯಿಸಿಕೊಂಡಿದ್ದಾರೆ. ಸಮಾಜದಲ್ಲೂ, ಧರ್ಮದಲ್ಲೂ ಮುಂಚೂಣಿಯಲ್ಲಿರುವ [illegible] ಸಮುದಾಯದ ಶ್ರೇಷ್ಠತೆಯನ್ನು ಹಾಲುಮತ ಕಾವ್ಯ ಪುರಾಣಗಳು ಅಭಿವ್ಯಕ್ತಪಡಿಸುತ್ತವೆ. ಇಂತಹ ಸಮುದಾಯ ಪ್ರಬಲವಾಗಿ ಬೆಳೆಯಬೇಕಾದರೆ ಕೆಲವು ಬಲಿಷ್ಠ ಸಮುದಾಯಗಳಿಂದ ತುಳಿತಕ್ಕೆ ಒಳಗಾಗಿ ತನ್ನತನವನ್ನು ಉಳಿಸಿಕೊಳ್ಳಲು ಪ್ರತಿಕ್ಷಣವೂ ಪ್ರಯತ್ನ ಪಡುತ್ತಿರುತ್ತದೆ. ಈ ಹಿನ್ನೆಲೆಯಲ್ಲಿಯೇ ಹಾಲುಮತ ಪುರಾಣಗಳಲ್ಲಿನ ಸಾಂಸ್ಕೃತಿಕ ಅನನ್ಯತೆಯನ್ನು ತಿಳಿದುಕೊಳ್ಳುವುದು ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಹಾಲುಮತ ಸಮಾಜ ಇನ್ನಿತರ ಸಮುದಾಯಗಳಿಗಿಂತ ಆಚರಣೆ, ನಂಬಿಕೆ ಮತ್ತು ಸಂಪ್ರದಾಯದಲ್ಲಿ ಶ್ರೇಷ್ಠತೆಯನ್ನು ಪಡೆದಿದೆ. ೧೨ ನೇ ಶತಮಾನದಿಂದಲೂ ರಾಜಕೀಯ ಸಂಘರ್ಷದಲ್ಲಿದ್ದ ಸಂಗತಿಯನ್ನು ವಚನ ಚಳುವಳಿಯಲ್ಲಿ ಅನೇಕ ಹಾಲುಮತದ ಶಿವಶರಣರ ಪರಮಭಕ್ತಿಯನ್ನು ವೀರಶೈವ ಶಿವಶರಣರು ಉಲ್ಲೇಖಿಸುತ್ತಾರೆ. ಆದರೂ ಹಾಲುಮತದ ನಾಯಕರು ಪ್ರತ್ಯೇಕವಾಗಿ ನಿಂತು ಪ್ರತಿಭಟನೆ ಏಕೆ ಮಾಡಿದರು ಎನ್ನುವುದನ್ನು ಚರ್ಚಿಸಲಾಗಿದೆ.

ಹಾಲುಮತ ಪುರಾಣಗಳು ಯಾವ ಕಾರಣಕ್ಕಾಗಿ ರಚನೆಯಾದವು? ಹಾಲುಮತ ಸಮುದಾಯಕ್ಕೂ ಕಲ್ಯಾಣಕ್ಕೂ ಇರಬಹುದಾದ ರಾಜಕೀಯ ಸಂಬಂದವೇನು?, ಹಾಲುಮತದವರ ಅಸ್ತಿತ್ವವನ್ನು ಪುರಾಣಗಳು ಪರಿಗ್ರಹಿಸಿದ ಪರಿಯೇನು? 'ಸಿದ್ಧ ಸಂಪ್ರದಾಯವು' 'ಲಿಂಗಾಯಿತ ಸಂಪ್ರದಾಯವಾಗಿ ಪರಿವರ್ತನೆಗೊಂಡ ರೀತಿಯನ್ನು ಪುರಾಣಗಳು ಪ್ರತಿಪಾಧಿಸಿದ ಬಗೆ ಬದಲಾದ ಸಾಮಾಜಿಕ ಸಂದರ್ಭದಲ್ಲಿ ಅಂದಿನ ಆಚರಣೆಗಳೂ ಇಂದಿಗೂ ಹೇಗೆ ಪ್ರಚಲಿತದಲ್ಲಿವೆ ಅಥವಾ ಪರಿವರ್ತನೆಗೊಂಡಿವೆ ಎಂಬುದರ ಅಧ್ಯಯನವನ್ನು ಕೈಗೊಳ್ಳುವುದು. ಹೀಗೆ ಹಾಲುಮತ ಪುರಣಾಗಳ ಸಾಂಸ್ಕೃತಿಕತೆಯನ್ನು ಚರ್ಚಿಸುವ ಉದ್ದೇಶವನ್ನು ಈ ಮಹಾಪ್ರಬಂಧ ಹೊಂದಿದೆ.

## ೩.ಅಧ್ಯಯನದ ವ್ಯಾಪ್ತಿ

ಈಗಾಗಲೇ ಹಸ್ತಪ್ರತಿಯಿಂದ ಮತ್ತು ಮೌಖಿಕ ಪರಂಪರೆಯಿಂದ ಲಿಖಿತರೂಪಕ್ಕೆ ಹಾಲುಮತ ಪುರಾಣಗಳು ಮುದ್ರಣಗೊಂಡಿವೆ. ಹಾಲುಮತ ಸಮಾಜದ ಕುರಿತ ಹತ್ತು ಕಾವ್ಯ ಪುರಾಣಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಜೊತೆಗೆ ಅಧ್ಯಯನಕ್ಕೆ ಪೂರಕ ಆಕರಗಳಾಗಿ ಕುರುಬ ಸಮುದಾಯ ಕುರಿತು ಬಂದಿರುವ ವಿಮರ್ಶಾ ಕೃತಿಗಳನ್ನು, ಅದಕ್ಕೆ ಸಂಬಂಧಿಸಿದಂತೆ ಅನ್ಯ ಸಮುದಾಯಗಳ ಕೃತಿಗಳನ್ನು ಮಾದರಿಯಾಗಿ ಬಳಸಿಕೊಳ್ಳಲಾಗಿದೆ. ಆಚರಣೆ, ನಂಬಿಕೆ ಮತ್ತು ಸಾಮಾಜಿಕ ಆಶಯವನ್ನು ಭೌಗೋಳಿಕತೆಗೆ ಅನುಗುಣವಾಗಿ ಈ ಸಮುದಾಯ ನಡೆಸಿಕೊಂಡು ಬಂದಿದೆ. ಆದ್ದರಿಂದ ಪುರಾಣಗಳಲ್ಲಿ ಸ್ಥಳ, ವ್ಯಕ್ತಿನಾಮಗಳಲ್ಲಿ ವೈರುಧ್ಯವನ್ನು ಹೊಂದಿವೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ತಮಿಳುನಾಡು ಗಡಿ ಪ್ರದೇಶಗಳಲ್ಲಿಯೂ ಈ ಸಮುದಾಯವು ನೆಲೆಯೂರಿದೆ. ಅಲ್ಲದೆ ಮಹಾರಾಷ್ಟ್ರದ ಗಡಿ ಭಾಗದಲ್ಲಿ ಪ್ರಬಲ ಸಮುದಾಯವಾಗಿ ಹಾಲುಮತಸ್ಥರು ಕಂಡುಬರುವರು. ಹಾಗಾಗಿ ಈ ಅಧ್ಯಯನಕ್ಕೆ ಕರ್ನಾಟಕದಲ್ಲಿನ ಕೆಲವು ಜಿಲ್ಲೆಯ ತಾಲ್ಲೂಕುಗಳಲ್ಲಿನ ಗ್ರಾಮಗಳಿಗೆ ಭೇಟಿಕೊಟ್ಟು ಮಾಹಿತಿ ಸಂಗ್ರಹಿಸಲಾಗಿದೆ. ಈ ಹಿನ್ನೆಲೆಯಲ್ಲಿ ಬಿಜಾಪುರದ ಗೊಲ್ಗೇರಿ, ಸರೂರು, ಧಾರವಾಡದ ಬಂಕಾಪುರ, ಮಹಾರಾಷ್ಟ್ರದ ಹುಲಜಂತಿ ಇನ್ನೂ ಮುಂತಾದ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯದಿಂದ ಛಾಯಾಚಿತ್ರಗಳನ್ನು ದಾಖಲಿಸಲಾಗಿದೆ. ಕಾವ್ಯ ಪುರಾಣಗಳ ಜೊತೆಗೆ ಈ ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ಮೀರದೆ ಮಹಾಪ್ರಬಂಧದ ಅಧ್ಯಯನವನ್ನು ಸೀಮಿತ ವ್ಯಾಪ್ತಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಮೂಲಕ ಜನಪದ ಅಧ್ಯಯನದ ಮಾದರಿಯಲ್ಲಿ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗಿದೆ.

## ೪. ಅಧ್ಯಯನದ ಮಹತ್ವ

ಇತಿಹಾಸದುದ್ದಕ್ಕೂ ಸಾಂಸ್ಕೃತಿಕ ಮಹತ್ವವನ್ನು ಕಲೆ, ಸಾಹಿತ್ಯ ಮತ್ತು ವಾಸ್ತುಶಿಲ್ಪದಲ್ಲಿಯೇ ಹೇಳಲಾಗಿದೆ. ಆದರೆ ಸಮುದಾಯಗಳ ಅಧ್ಯಯನಕ್ಕೆ ಬಂದಾಗ ಸಾಂಸ್ಕೃತಿಕ ಮಹತ್ವ ಎನ್ನುವುದು ಆ ಸಮುದಾಯದ ನಿತ್ಯ ಜೀವನದ ಕಲೆಯೇ ಆಗಿರುತ್ತದೆ. ಜನಪದರ ಮೌಖಿಕ ಚರಿತ್ರೆಗೆ ಲಿಖಿತ ಚರಿತ್ರೆಯು ಮುಖ್ಯ ಆಕರ ಸಾಮಗ್ರಿಗಳನ್ನು ಒದಗಿಸುವ ಮೂಲಕ ಆಯಾ ಸಮುದಾಯಗಳ ತಾತ್ತ್ವಿಕ ಜ್ಞಾನ, ಸಾಹಿತ್ಯ, ಕಲೆ, ಸಾಮಾಜಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ಬಿತ್ತರಿಸುವ

ಕಾರ್ಯ ನಿರ್ವಹಿಸುತ್ತದೆ. ಇದನ್ನೇ ಪುರಾಣ ಕಾವ್ಯಗಳು ಸ್ಥಿರ ಸಮುದಾಯಕ್ಕೆ ಗಿಳಿಪಾಠದಂತೆ ಚರಿತ್ರೆಯನ್ನು ಒಪ್ಪಿಸುತ್ತವೆ. ಜೊತೆಗೆ ತಾರ್ಕಿಕ ಚಿಂತನೆಗೆ ಪ್ರತಿಯೊಬ್ಬರನ್ನು ತೊಡಗಿಸುತ್ತವೆ. ಇಂತಹ ಕಾವ್ಯ ಪುರಾಣಗಳಿಂದಲೇ ಭಾರತದ ಇತಿಹಾಸ ರಚನೆಗೊಂಡಿರುವುದು ನಿಜ ಸಂಗತಿ.

ಚರಿತ್ರೆಯಲ್ಲಿ ಯಾವುದೋ ಕಾರಣಕ್ಕೆ ಸಮುದಾಯದ ಬದುಕಿನಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು ನಡೆದಿರುತ್ತವೆ. ಅದನ್ನು ಹಾಗೆಯೇ ಸಮುದಾಯಗಳು ಉಳಿಸಿಕೊಂಡು ಬರಬಹುದು. ಇಲ್ಲವೆ ಪರಿವರ್ತನೆಗೊಂಡಿರಲೂ ಸಾಧ್ಯವಿದೆ. ಪ್ರಾರಂಭದಲ್ಲಿ ಅಲೆಮಾರಿಯಾಗಿದ್ದ ಹಾಲುಮತ ಸಮುದಾಯವು ಒಂದು ಕಡೆ ನೆಲೆನಿಂತು ಸ್ಥಿರ ಜೀವನವನ್ನು ರೂಪಿಸಿಕೊಂಡ ನಂತರ ನಿರ್ದಿಷ್ಟ ಜೀವನ ಕ್ರಮವು ಸಂರಚಿತವಾಯಿತು. ನಂತರದಲ್ಲಿ ಇತರೆ ಶಿಷ್ಟ ಸಮುದಾಯಗಳು ಈಗಾಗಲೇ ರೂಪಿಸಿಕೊಂಡಿದ್ದಂತಹ ಪುರಾಣಗಳು ಅಂದರೆ ಜೈನ, ವೈದಿಕ ಮತ್ತು ವೀರಶೈವ ಪುರಾಣಗಳು ಇಡೀ ಸಮಾಜವನ್ನು ನಿರ್ದೇಶನ ಮಾಡಿ ನಿಯಂತ್ರಣ ಮಾಡುತ್ತಿದ್ದವು. ಈ ವಿಷಯವನ್ನು ಅರಿತ ಶೂದ್ರ ಸಂಪ್ರದಾಯಗಳು ಅವುಗಳನ್ನು ಯಥಾ ರೀತಿಯಲ್ಲಿ ಸ್ವೀಕರಿಸದೆ ತಮ್ಮದೇ ಬದುಕಿನ ವಿವರಗಳನ್ನೊಳಗೊಂಡ ದೇಶಿ ಪುರಾಣಗಳನ್ನು ಕಟ್ಟಿಕೊಳ್ಳುವುದಕ್ಕೆ ಪ್ರಯತ್ನಿಸಿದವು. ಇದರ ಪ್ರತಿಫಲವಾಗಿ ನೂರಾರು ಜನಪದ ಪುರಾಣಗಳು ರಚನೆಯಾದವು. ಇಂತಹ ಸಂಕ್ರಮಣಾವಸ್ಥೆಯಲ್ಲಿ ಕುರುಬ ಸಮುದಾಯಕ್ಕೆ ಸಂಬಂಧಿಸಿದಂತೆ ಕೆಲ ಪುರಾಣಗಳು ರಚನೆಗೊಂಡವು. ಹೀಗೆ ರಚನೆಗೊಂಡ ಹಾಲುಮತ ಪುರಾಣಗಳು ಸಮಾಜದ ಏಣಿಶ್ರೇಣೀಕರಣ ವ್ಯವಸ್ಥೆಯ ಕಪಿಮುಷ್ಠಿಯಿಂದ ಬಿಡಿಸಿಕೊಳ್ಳುವಲ್ಲಿ ಅತಿಮಾನುಷ ವರ್ಣನೆ, ಪವಾಡಗಳನ್ನು ಆಶ್ರಮಿಯಿಸಿರುವುದು ಮಹತ್ವದ ಅಂಶವಾಗಿದೆ. ಪ್ರತಿಭಟನೆಯ ರೀತಿಯಲ್ಲಿಯೇ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿರುವುದು ವಿಶೇಷವಾಗಿದೆ. ಅಲ್ಲದೆ ಶಿಷ್ಟ ಪುರಾಣಗಳ ಪರಿಸರದಲ್ಲಿ ಜನಪದ ಪುರಾಣಗಳು ತನ್ನ ಸ್ವಂತಿಕೆ ಮತ್ತು ಅನನ್ಯತೆಯನ್ನು ತಿಳಿಸುವುದರಲ್ಲಿ ಈ ಸಮುದಾಯವು ಹೊಂದಿದ್ದ ಶಾಶ್ವತ ನೆಲೆಯ ಮಹತ್ವವನ್ನು ಪ್ರತಿನಿಧಿಸುತ್ತದೆ.

**೫. ಅಧ್ಯಯನದ ಸ್ವರೂಪ**

ಅಧ್ಯಾಯ ಒಂದರಲ್ಲಿ ಅಧ್ಯಯನದ ಪ್ರವೇಶ, ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಅದರ ಸ್ವರೂಪವನ್ನು ವಿವರಿಸಲಾಗಿದೆ ಹಾಗೂ ಹಾಲುಮತ ಪುರಾಣಗಳಿಗೆ ಸಂಬಂಧಿಸಿದಂತೆ ಈ ಕುರಿತು ಕನ್ನಡದಲ್ಲಿ ಈವರೆಗೆ ನಡೆದಿರುವ ಅಧ್ಯಯನ ಸಮೀಕ್ಷೆಯನ್ನು ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಪುರಾಣದ ಅರ್ಥ-ಲಕ್ಷಣ, ಉಗಮ-ವಿಕಾಸ ಮತ್ತು ಪುರಾಣಗಳ ವರ್ಗೀಕರಣದ ಹಿನ್ನೆಲೆಯಲ್ಲಿ ಜೈನ ಪುರಾಣಗಳು, ವೀರಶೈವ ಪುರಾಣಗಳು, ವೈದಿಕ ಪುರಾಣಗಳು ಹಾಗೂ ಹಾಲುಮತ ಪುರಾಣಗಳೆಂದು ವಿಭಾಗಿಸಿಕೊಂಡು ಚರ್ಚಿಸಲಾಗಿದೆ. ಅನೇಕ ಕಾಲ ಘಟ್ಟಗಳಲ್ಲಿ ಪುರಾಣಗಳ ಉದ್ದೇಶ ಮತ್ತು ಮಹತ್ವವನ್ನು ಯಾವ ರೀತಿ ವ್ಯಕ್ತಪಡಿಸಿದೆಂಬುದನ್ನು ವಿವರಿಸಲಾಗಿದೆ. ಇಂತಹ ಪುರಾಣಗಳು ಧರ್ಮಕ್ಕೂ ಮತ್ತು ಸಮುದಾಯಕ್ಕೂ ಯಾವ ರೀತಿ ಋಣಿಯಾಗಿದೆ ಎಂಬುದನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಹಾಲುಮತ ಪುರಾಣಗಳು ರಚನೆಯಾಗಲು ಕಾರಣವೇನು? ಈ ಮೂಲಕ ಪೌರಾಣಿಕ, ಧಾರ್ಮಿಕ, ಸಾಮಾಜಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಹಾಲುಮತ ಸಮುದಾಯದ ಪ್ರಾಚೀನತೆಯನ್ನು ಪ್ರಸ್ತುತ ಪುರಾಣಗಳು ಚಿತ್ರಿಸಿರುವುದನ್ನು ಸೈದ್ಧಾಂತಿಕವಾಗಿ ನಿರೂಪಿಸಲಾಗಿದೆ.

ನಾಲ್ಕನೆ ಅಧ್ಯಾಯದ ಹಾಲುಮತ ಪುರಾಣಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರತಿಯೊಂದು ವ್ಯಕ್ತಿಗಳನ್ನು ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ. ಜೊತೆಗೆ ಹತ್ತು ಹಾಲುಮತ ಪುರಾಣಗಳ ಒಟ್ಟು ಕಥಾ ಸಮೀಕ್ಷೆಯನ್ನು ತಿಳಿಸಲಾಗಿದೆ. ಪುರಾಣಗಳಲ್ಲಿನ ಮುಖ್ಯ ವ್ಯಕ್ತಿಗಳ ಚರಿತ್ರೆ, ಪವಾಡ ತಂತ್ರವನ್ನು ಅವತಾರ, ಸಾಂಸ್ಕೃತಿಕ ವೀರರು ಎಂಬಲ್ಲಿ ಮಾಹಿತಿಯನ್ನು ವಿವರಿಸಲಾಗಿದೆ. ಹಾಗೂ ಪುರಾಣಗಳಲ್ಲಿ ದೈವ ಪುರುಷರಿಗೆ ನೆರವಾಗುವ ಪ್ರಾಣಿ ಜಗತ್ತನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ. ಅಲ್ಲದೆ ಹಾಲುಮತ ಪುರಾಣಗಳು ಭೌಗೋಳಿಕವಾಗಿ ವೈವಿಧ್ಯತೆಯನ್ನು ಹೊಂದಿರುವುದನ್ನು, ಸಾಂಸ್ಕೃತಿಕ ಸಂಘರ್ಷವನ್ನು ಆಧ್ಯಾತ್ಮಿಕ ನೆಲೆಯಲ್ಲಿ ಮಾಡಿದುದರ ಬಗೆಯನ್ನು ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹಾಲುಮತ ಸಮುದಾಯದ ಒಳಪಂಗಡಗಳ ಹುಟ್ಟಿಗೆ ಕಾರಣ, ಅವುಗಳ ನಿರ್ವಚನ, ಹಾಗೂ ಅವುಗಳು ಸಮಾಜದಲ್ಲಿ ಮಾನ್ಯತೆಯನ್ನು ಹೊಂದಿರುವುದರ ಕುರಿತು ಸವಿಸ್ತಾರವಾಗಿ ಹೇಳಲಾಗಿದೆ. ಮದುವೆ, ನಾಮಕರಣ, ಸುರಗಿ ಶಾಸ್ತ್ರಗಳನ್ನು ಆಚರಣೆ ನಂಬಿಕೆಯಗಳಲ್ಲಿ ಅಧ್ಯಯನ ಮಾಡಿದರೆ, ಕಂತೆ ಸೇವೆ, ದೋಣಿ ಸೇವೆ, ಅಗ್ನಿಕುಂಡ, ಲಿಂಗದೀಕ್ಷೆ ಮುಂತಾದವುಗಳನ್ನು ಧಾರ್ಮಿಕ ಮೌಲ್ಯಗಳಾಗಿ ವಿವರಿಸಲಾಗಿದೆ. ಸಾಮಾಜಿಕ ಆಶಯಗಳಲ್ಲಿ ಹಾಲುಮತ ಸಮಾಜದ ಜೊತೆಗೆ ಅನ್ಯ ಸಮಾಜದ ಅನನ್ಯತೆಯನ್ನು ಕುರಿತು ಚರ್ಚಿಸಲಾಗಿದೆ. ಕೊನೆಗೆ ಪುಣ್ಯಕ್ಷೇತ್ರಗಳ ಮಹಾತ್ಮೆಯನ್ನು ಪುರಾಣಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಈ ಎಲ್ಲಾ ಆಕರಗಳಿಂದ ಹಾಲುಮತ ಪುರಾಣೋಕ್ತ ಸಾಂಸ್ಕೃತಿಕ ಚರಿತ್ರೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಹಾಲುಮತ ಪುರಾಣಗಳ ಸಾಂಸ್ಕೃತಿಕ ಅಧ್ಯಯನದಿಂದ ಮೂಡಿ ಬಂದಿರುವ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಪ್ರಬಂಧಕ್ಕೆ ಪೂರಕವಾಗಿ ಮತ್ತು ಅಧ್ಯಯನದಲ್ಲಿ ಚರ್ಚಿಸಲಾದ ಮಹತ್ವದ ದಾಖಲೆಗಳನ್ನು ಅನುಬಂಧಗಳಲ್ಲಿ ಸಂಯೋಜಿಸಲಾಗಿದೆ.

ಒಟ್ಟಿನಲ್ಲಿ ಕಲ್ಯಾಣ ರಾಜ್ಯದಲ್ಲಿ ನಡೆದ ಘಟನೆಯಿಂದ ಹಿಡಿದು ಇಂದಿಗೂ ಒಂದು ಜನವರ್ಗದ ಧಾರ್ಮಿಕ ಶಕ್ತಿಗಳಾಗಿ ಆರಾಧನೆಗೊಳ್ಳುತ್ತಿರುವ ಹಾಲುಮತ ಸಾಂಸ್ಕೃತಿಕ ವೀರರ, ಧಾರ್ಮಿಕ ಪುರುಷರ ಜೊತೆಗೆ ಈ ಸಮುದಾಯದ ಲೌಕಿಕ ಬದುಕನ್ನು ಸಾಂಸ್ಕೃತಿಕವಾಗಿ ನಿರೂಪಿಸುವಲ್ಲಿ ಹಾಲುಮತ ಪುರಾಣಗಳ ಪಾಲು-ಪಾತ್ರವನ್ನು ವಸ್ತು ನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸುವ ಮಹತ್ವದ ಉದ್ದೇಶದಿಂದ ಸಿದ್ಧಗೊಂಡ ಮಹಾಪ್ರಬಂಧವೇ ''ಹಾಲುಮತ ಪುರಾಣಗಳು: ಸಾಂಸ್ಕೃತಿಕ ಅಧ್ಯಯನ''.

## ೬. ಅಧ್ಯಯನ ಸಮೀಕ್ಷೆ

ಹಾಲುಮತ ಸಮುದಾಯದ ಇತಿಹಾಸ, ಸಂಸ್ಕೃತಿ, ಆಚರಣೆ ಮತ್ತು ಗುರು ಒಡೆಯರು, ಇತ್ಯಾದಿ ಅಂಶಗಳನ್ನು ಕುರಿತು ಬಿಡಿ ಬಿಡಿ ಲೇಖನಗಳು ಬಂದಿವೆ. ಕೇವಲ ಬೆರಳೆಣಿಕೆಯಷ್ಟು ಲೇಖನಗಳು ಮಾತ್ರ ಬಂದಿರುವುದು ಈ ಕ್ಷೇತ್ರದಲ್ಲಿಯ ಕೊರತೆಯನ್ನು ಸ್ಪಷ್ಟಪಡಿಸುತ್ತದೆ. ಈವರೆಗೆ ಹಾಲುಮತ ಪುರಾಣಗಳ ಸಂಗ್ರಹ ಕಾರ್ಯ ಮಾತ್ರ ನಡೆದಿದೆ. ಜೊತೆಗೆ ಕೆಲವು ವಿದ್ವಾಂಸರು ಒಂದೊಂದು ಕಾವ್ಯ ಪುರಾಣವನ್ನು ಪರಿಚಯಿಸಿಕೊಟ್ಟಿದ್ದಾರೆ. ಆದರೆ ಹಾಲುಮತ ಪುರಾಣಗಳನ್ನು ಆಚರಣೆ, ನಂಬಿಕೆ ಮತ್ತು ಸಂಪ್ರದಾಯದ ನೆಲೆಯಲ್ಲಿ ಸಾಂಸ್ಕೃತಿಕ ಅನನ್ಯತೆ ಕುರಿತ ಅಧ್ಯಯನ ಮಾಡಿರುವುದು ವಿರಳ. ಆದ್ದರಿಂದ ಹಾಲುಮತ ಪುರಾಣಗಳಿಗೆ ಸಂಬಂಧಿಸಿದಂತೆ ಮತ್ತು ಕುರುಬರ ಚರಿತ್ರೆಯ ಬಗೆಗೆ ಬಂದ ಕೃತಿಗಳ ಸಮೀಕ್ಷೆ ಮಾಡಲಾಗಿದೆ.

**ಕುರುಬರ ಚರಿತ್ರೆ : ವ್ಹಿ.ಆರ್. ಹನುಮಂತಯ್ಯ (೧೯೨೬)**

ಹಾಲುಮತ ಸಮಾಜವು ಅತ್ಯಂತ ಗೌರವದಿಂದ ಸ್ಮರಿಸಬೇಕಾದ ಮುಖ್ಯ ವಿದ್ವಾಂಸರುಗಳಲ್ಲಿ ಶ್ರೀ ವ್ಹಿ.ಆರ್. ಹನುಮಂತಯ್ಯನವರು ಒಬ್ಬರು. ಕ್ರಿ.ಶ. ೧೯೨೬ ರಷ್ಟು ಹಿಂದೆಯೇ ಕುರುಬ ಸಮುದಾಯವನ್ನು ಕುರಿತು ಸಂಶೋಧನಾತ್ಮಕ ಗ್ರಂಥವನ್ನು ರಚಿಸಿದ ಅಭಿಮಾನ, ಕೀರ್ತಿ ಇವರಿಗೆ ಸಲ್ಲುತ್ತದೆ. ಕುರುಬ ಜನಾಂಗದವರಿಗೆ ಕರೆಯುವ ಬೇರೆ ಬೇರೆ ಹೆಸರುಗಳು, ಕುರುಬ ಜನಾಂಗದ ಅರಸು ಮನೆತನಗಳು ಮತ್ತು ಕುರುಬ ಸಮುದಾಯದ ಕವಿ, ಸಂತರನ್ನು ಕುರಿತು ಈ ಕೃತಿಯಲ್ಲಿ ವಿವರಿಸಿದ್ದಾರೆ. ಕುರುಬರ ಒಳ ಪ್ರಭೇಧಗಳನ್ನು ಹೇಳುತ್ತಾ ಕುರುಬರ ಗುರು ಒಡೆಯರುಗಳ ಬಗ್ಗೆಯೂ ನಿರೂಪಿಸುತ್ತಾರೆ. ಅಲ್ಲದೆ ಹಾಲುಮತದವರನ್ನು ಮೊದಲಿಗೆ ಕುರುಬರೆಂದು ಕರೆಯುತ್ತಾರೆಂದು ಇಲ್ಲಿನ ಮಹಾಪುರುಷರ ಪರಿಚಯದಲ್ಲಿ ಹೇಳಿದ್ದಾರೆ. ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ಅಮುಗಿದೇವಯ್ಯ, ವೀರ ಗೋಲ್ಲಾಳ, ಅಮುಗಿ ರಾಯಮ್ಮ, ಕಲಕೇತ ಬೊಮ್ಮಯ್ಯ, ತುರುಗಾಹಿ ರಾಮಣ್ಣ, ಕದಿರ ರೆಮ್ಮವ್ವ, ಇಟಗಿ ಭೀಮವ್ವ ಸಜ್ಜಲ ಗುಡ್ಡದ ಶರಣಮ್ಮ ಮುಂತಾದವರು ಶಿವ ಶರಣರೆಂದು ರೇವಣಸಿದ್ಧ, ಸಿದ್ಧರಾಮ, ಅಮುಗಿದೇವ ಮತ್ತು ವೀರ ಗೊಲ್ಲಾಳ ಸಿದ್ಧ ಪುರುಷರು ಮತ್ತು ಒಡೆಯ ಪರಂಪರೆಯನ್ನು ಹೊಂದಿದ ಮಹಾಪುರುಷರೆಂದು ನಿರೂಪಿಸಿದ್ದಾರೆ.

**ಜನ-ಜನಪದ-ಜಾನಪದ: ಎಂ. ಚಿದಾನಂದ ಮೂರ್ತಿ (೨೦೦೨)**

ಡಾ.ಎಂ. ಚಿದಾನಂದ ಮೂರ್ತಿ ಅವರು ಕನ್ನಡ ಸಂಶೋಧನೆ, ಶಾಸನ, ಸಂಸ್ಕೃತಿ, ವಚನ ಸಾಹಿತ್ಯ, ಹಳಗನ್ನಡ, ಜಾನಪದ ಸಾಹಿತ್ಯ, ವ್ಯಾಕರಣ ಛಂದಸ್ಸು ಮತ್ತು ಭಾಷಾ ವಿಜ್ಞಾನ ಹೀಗೆ ಹಲವು ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿ ಮಹತ್ವ ಪೂರ್ಣ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಇದು ಇವರ ಸಮಗ್ರ ಸಂಪುಟ-೨ರ ಕೃತಿಯಾಗಿದೆ. "ಕುರುಬ ಜಾತಿಯ ಒಡೆಯರು ಮತ್ತು ಒಡೇರಮ್ಮ (ಒಡೆಯರಮ್ಮ)" ಮತ್ತು 'ಐನೋರು ಮತ್ತು ಕಾಲಿಲ್ಲದ ಐನೋರು' ಎಂಬ ಎರಡು ಲೇಖನದಲ್ಲಿ ಕುರುಬ ಸಮುದಾಯದಲ್ಲಿ 'ಒಡೆಯ' ಎಂಬ ಪದವಿಯು ಪುರುಷರಿಗೆ ದೊರೆಯುವಂತೆ ಸ್ತ್ರೀಯರಿಗೂ ದೊರೆಯುತ್ತದೆಂದು ನಿರೂಪಿಸಿದ್ದಾರೆ. ಕುರುಬ ಸಮುದಾಯದಲ್ಲಿಯೇ

ಶ್ರೇಷ್ಠತೆಯನ್ನು ಪಡೆದಿದೆ ಎಂದು ಅವರು ಹೇಳಿದ್ದಾರೆ. ವೀರಶೈವರಿಗೂ ಕುರುಬರಿಗೂ ಇರುವ ಸಾಮ್ಯಗಳನ್ನು, ವೀರಶೈವ ಧರ್ಮದ ಪ್ರಭಾವವೂ ಕುರುಬ ಸಮಾಜದ ಮೇಲೆ ಆಗಿರುವುದನ್ನು ಇಲ್ಲಿ ಸ್ಪಷ್ಟ ಪಡಿಸುತ್ತಾರೆ. ಹಾಗೂ 'ಕಾಲಿಲ್ಲದ ಐನೋರು' ಎಂಬ ಪರಿಕಲ್ಪನೆಯ ಕುರಿತು ಮಹತ್ವ ಪೂರ್ಣವಾದ ಮಾಹಿತಿಯನ್ನು ನೀಡುತ್ತಾರೆ. ಈ ಪರಿಕಲ್ಪನೆಯು ವ್ಯಕ್ತಿಗೆ ಸಂಬಂಧಿಸಿದಲ್ಲ. ಬದಲಾಗಿ ಒಡೆಯರು ಮಂತ್ರಿಸಿಕೊಟ್ಟಿರುವ ಒಂದು ವಿಭೂತಿ ಗಟ್ಟಿ, ಇದು ಕುರುಬ ಗೌಡನ ಮನೆಯಲ್ಲಿ ಒಂದು ಜೋಳಿಗೆಯಲ್ಲಿ ಇರುತ್ತದೆ. ಕುರುಬ ಜನಾಂಗದಲ್ಲಿ ಜನನ, ಮರಣ, ಮದುವೆಯಂಥ ಸಂದರ್ಭದಲ್ಲಿ ಐನೋರು (ಒಡೆಯರು)ಗಳು ದೊರೆಯದಿದ್ದರೆ 'ಕಾಲಿಲ್ದ ಐನೋರನ್ನು ಕರೆತನ್ನಿ' ಎನ್ನುತ್ತಾರೆ. ಅಂತಹ ಸಂದರ್ಭದಲ್ಲಿ ಬರುವ ವಿಭೂತಿ ಗಟ್ಟಿಗೆ ಕಾಲಿಲ್ಲದ ಐನೋರು ಎನ್ನುವರು. ಇದನ್ನು ಗೌಡನು ತರುತ್ತಾನೆ. ಈ ಮೂಲಕ ವಿಭೂತಿ ಗಟ್ಟಿಯಿಂದ ಮೈಲಿಗೆಯನ್ನು ಒಡೆಯರ ಅನುಪಸ್ಥಿತಿಯಲ್ಲಿಯೂ ಕಾರ್ಯಗಳು ಶುದ್ಧಿಯಾಗುವುದನ್ನು ತಿಳಿಸುವುದು. ಹೀಗೆ ಕುರುಬರು ಮಂತ್ರಿಸಿದ ವಿಭೂತಿ ಗಟ್ಟಿಯು ಒಡೆಯರ ಪ್ರತಿನಿಧಿಯಾಗಿ ಧಾರ್ಮಿಕ ಕಾರ್ಯಗಳನ್ನು ಮಾಡುತ್ತದೆ. ಇಂತಹ ಅದ್ಭುತ ಪರಿಕಲ್ಪನೆ ವಿಶೇಷತೆಯನ್ನು ಚಿದಾನಂದ ಮೂರ್ತಿ ಅವರು ಮೊದಲ ಬಾರಿಗೆ ದಾಖಲಿಸಿದ್ದಾರೆ.

**ಕುರುಬ ಜನಾಂಗದ ಒಂದು ಪ್ರಚಲಿತ ಪ್ರಾಚೀನ ಸಂಪ್ರದಾಯಗಳು**

**'ಕರಿಯ ಕಂಥೆ-ಸಿ.ಕೆ. ಪರಶುರಾಮಯ್ಯ (ಪಾವನ: ಸಂಸ್ಮರಣ ಗ್ರಂಥ, ೧೯೯೨)**

ಈ ಲೇಖನದಲ್ಲಿ ಸಿ.ಕೆ. ಪರಶುರಾಮಯ್ಯನವರು ಕುರುಬ ಸಮುದಾಯದವರಲ್ಲಿ ಪ್ರಚಲಿದಲ್ಲಿರುವ ಪ್ರಾಚೀನವಾದ ಆಚರಣಾ ಪದ್ಧತಿಯನ್ನು ಕುರಿತು ವಿವರಿಸಿದ್ದಾರೆ. ಕುರುಬ (ಹಾಲುಮತ) ಸಮುದಾಯಕ್ಕೆ ಕರಿಯ ಕಂಬಳಿಯು ತುಂಬಾ ಪವಿತ್ರವಾದ ವಸ್ತುವಾಗಿದೆ. ಇಂತಹ ಪವಿತ್ರವಾದ ಕಂಥೆಯನ್ನು ತಯಾರಿಸಿ ಕುರುಬರ ಕುಲಗುರುವಾದ ರೇವಣಸಿದ್ಧರಿಗೆ ಅರ್ಪಿಸುವುದು ಈ ಸಮುದಾಯದವರಿಗೆ ಸಡಗರ, ಸಂಭ್ರಮದ ಆಚರಣೆಯಾಗಿದೆ. ಈ ಮೂಲಕ ಹಾಲುಮತ ಸಮುದಾಯದವರು ಮತ್ತು ಗುರು ಒಡೆಯರು ಅನುಸರಿಸುವ ವಿಧಿ-ವಿಧಾನಗಳು ರೇವಣಸಿದ್ದೇಶ್ವರರನ್ನು ಗೌರವ ಭಾವದಿಂದ ಕಾಣುವ ಪ್ರತೀಕಗಳಾಗಿವೆ. ಕರಿಯ ಕಂಥೆಯ ತಯಾರಿಕೆಗೆ ಕಂಥೆ ಮರಿಯನ್ನು ನಿಗದಿಗೊಳಿಸುವುದು. ಹೀಗೆ ನಿಗದಿಗೊಳಿಸಿದ ಕಂಥೆ ಮರಿಯಿಂದ ಮಡಿಯಲ್ಲಿ ಉಣ್ಣೆ ಸಂಗ್ರಹಿಸುವುದು. ನಂತರ ಉಣ್ಣೆಯಿಂದ ಕಂಥೆಯನ್ನು ತಯಾರಿಸಲಾಗುತ್ತದೆ ಎಂಬ ಅಂಶವನ್ನು ಈ ಲೇಖನವು ತಿಳಿಸುತ್ತದೆ.

**ಮಾರ್ಗ-೪: ಎಂ.ಎಂ. ಕಲಬುರ್ಗಿ (೨೦೦೪)**

ಡಾ. ಎಂ.ಎಂ. ಕಲಬುರ್ಗಿ ಅವರ ಮಾರ್ಗ-೪ ರಲ್ಲಿ ಕುರುಬ ಸಮುದಾಯ ಕುರಿತು ಮೂರು ಲೇಖನಗಳನ್ನು ಬರೆದಿದ್ದಾರೆ. ಅವುಗಳೆಂದರೆ "ಕುರುಬ ಸಮಾಜ ಮತ್ತು ಲಿಂಗಾಯತ ಸಮಾಜ', 'ಕುರುಬರ ಗುರು ಶಾಂತ ಮುತ್ತಯ್ಯ' ಮತ್ತು 'ರೇವಣಸಿದ್ಧ' ಲೇಖನಗಳು ಕುರುಬ ಸಮಾಜವು ಲಿಂಗಾಯತ ಸಮಾಜವಾದುದನ್ನು, ಕುರುಬರ ಗುರು ಒಡೆಯರಲ್ಲಿ ಶಾಂತಮುತ್ತಯ್ಯನ

ಪ್ರತಿನಿಧಿಕರಿಸುವುದು ಮತ್ತು ರೇವಣ ಸಿದ್ಧೇಶ್ವರರು ಕುರುಬರ ಪರಮ ಗುರು ಎಂದು ಶಾಸನಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.

ಕುರುಬ ಸಮಾಜವು ವೈದಿಕ, ಜೈನ, ಲಿಂಗಾಯತ ಸಮಾಜಗಳು ಧರ್ಮಗಳಾದಂತೆ ಹಾಲುಮತ ಧರ್ಮವಿರುವುದನ್ನು ವಿವರಿಸಿದ್ದಾರೆ. ಕಲ್ಯಾಣದ ಚಳುವಳಿಯ ಪ್ರಭಾವಕ್ಕೆ ಒಳಗಾದ ಸಮಾಜದಲ್ಲಿ ಕುರುಬ ಸಮಾಜವು ಒಂದು ಎಂದು ನಿರೂಪಿಸಿದ್ದಾರೆ. ಇಂತಹ ಬದಲಾವಣೆಗೆ ಈ ಎರಡು ಸಮಾಜಗಳಲ್ಲಿನ ಕೆಲ ಆಚರಣೆಗಳೇ ಕಾರಣ ಎಂಬ ಖಚಿತ ನಿರ್ಧಾರಗಳನ್ನು "ಕುರುಬ ಸಮಾಜ ಮತ್ತು ಲಿಂಗಾಯತ ಸಮಾಜ' ಲೇಖನದಲ್ಲಿ ವಿವರಿಸಿದ್ದಾರೆ.

'ಕುರುಬರ ಗುರು ಶಾಂತಮುತ್ತಯ್ಯ' ಎಂಬ ಲೇಖನದಲ್ಲಿ ವಿ.ಆರ್. ಹನುಮಂತಯ್ಯ ಅವರು ಬರೆದ "ಕುರುಬರ ಚರಿತ್ರೆ"ಯಲ್ಲಿ ಕುರುಬರ ಮದುವೆಯಲ್ಲಿ ವಧುವರರಿಗೆ ಹೇಳುವ ಹಾರೈಕೆಯ ನುಡಿಯಿಂದ ಪ್ರೇರಿತರಾಗಿ ಕುರುಬರ ಸಂಸ್ಕೃತಿಯನ್ನು, ಇತಿಹಾಸವನ್ನು ತಿಳಿಸುವುದಾಗಿ ಹೇಳಿದ್ದಾರೆ. ಹಾರೈಕೆಯ ನುಡಿ ಪಠ್ಯದಲ್ಲಿ ಬರುವ ಸರೂರು ಎಲ್ಲಿದೆ? ಸರೂರ ಶಾಂತಮುತ್ತಯ್ಯ ಯಾರು? ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ರೇವಣಸಿದ್ಧರ ಜೊತೆಗೆ ಶಾಂತಮುತ್ತಯ್ಯನ ಸಂಬಂಧವನ್ನು ಕುರಿತು ಶೋಧಿಸಿದ್ದಾರೆ. ಅಲ್ಲದೆ ಇಲ್ಲಿ ಪ್ರಸ್ತಾಪವಾಗಿರುವ ಸರೂರು ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಎಂದು ಖಚಿತಪಡಿಸಿದ್ದಾರೆ. ಈ ಶಾಂತಮುತ್ತಯ್ಯನನ್ನು ಕುರಿತು ತಗರ ಪವಾಡ ಎಂಬ ಸಾಂಗತ್ಯ ಕೃತಿಯು, ಸಿರಿವಾಳ (೧೧೭೦, ೧೧೭೮,) ಕೆಲ್ಲೂರು (೧೧೭೫,) ಹೋತಗಲ್ಲ (೧೧೭೫,) ನಾಲ್ಕು ಶಾಸನಗಳು ದೊರೆತಿರುವುದನ್ನು ವಿವರಿಸುತ್ತಾರೆ. ಹೀಗೆ ಕಾವ್ಯ ಶಾಸನಗಳಲ್ಲಿ ಬರುವ 'ಸರೂರು ಶಾಂತ ಮುತ್ತಯ್ಯ' ದೂರದ ಮೈಸೂರು ಪ್ರಾಂತದಲ್ಲಿನ ಮದುವೆಯಲ್ಲಿ ವಧುವರರಿಗೆ ಹಾರೈಸುವ ಮಂತ್ರದಲ್ಲಿ ಕಡ್ಡಾಯವಾಗಿ ಬಳಕೆಯಾಗಿತ್ತಿರುವುದನ್ನು ಗಮನಿಸಿದರೆ ಶಾಂತಮುತ್ತಯ್ಯನು ಮಹತ್ವದ ವ್ಯಕ್ತಿ ಆಗಿರಬೇಕು ಎಂಬ ಅಂಶವನ್ನು ಹೇಳಿದ್ದಾರೆ.

'ರೇವಣಸಿದ್ಧ' ಈ ಲೇಖನದಲ್ಲಿ ಈತನ ಜೀವನದ ಕನಿಷ್ಠ ಕಾಲಾವಧಿ, ಗರಿಷ್ಠ ಕಾಲಾವಧಿಗಳನ್ನು ಶಾಸನಗಳ ಮೂಲಕ ತಿಳಿಸಿಕೊಟ್ಟಿದ್ದಾರೆ. ರೇವಣಸಿದ್ಧರ ಕುರಿತು ಕಕ್ಕೇರಿ (೧೧೨೭,) ಸಿರಿವಾಳ (೧೧೭೦) ಹೋತಗಲ್ಲ (೧೧೭೫) ಸಿರಿವಾಳ (೧೧೭೮,) ಹೋತಗಲ್ಲ(೧೨೦೮)ರಲ್ಲಿನ ಶಾಸನಗಳಲ್ಲಿನ ಉಲ್ಲೇಖಗಳಿಂದ ಈತನು ಕುರುಬರ ಗುರುವೆಂದು ಖಚಿತ ಪಡಿಸಿದ್ದಾರೆ. ಹಾಗೂ ರೇವಣಸಿದ್ಧ ದೇವರಾಗಿ, ಪುತ್ರನಾಗಿ, ಗುರುವಾಗಿ, ಪವಾಡ ಪುರುಷನಾಗಿದ್ದದನ್ನು ಶಾಸನ ಮತ್ತು ಪುರಾಣಗಳ ಉಲ್ಲೇಖದಿಂದ ಸ್ಪಷ್ಟಪಡಿಸಿದ್ದಾರೆ.

**ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು:**

**ಡಾ.ಎಫ್.ಟಿ.ಹಳ್ಳಿಕೇರಿ ಇತಿಹಾಸದರ್ಶನ (೨೦/೨೦೦೭)**

ಕುರುಬರ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿದ ವಿದ್ವಾಂಸರಲ್ಲಿ ಪ್ರೊ. ಎಫ್.ಟಿ.ಹಳ್ಳಿಕೇರಿ ಅವರು ಪ್ರಮುಖರಾಗಿದ್ದಾರೆ. ಇವರು "ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು"

ಎಂಬ ಲೇಖನದಲ್ಲಿ ಹಾಲುಮತ ಸಮುದಾಯದ ಗುರು ಪರಂಪರೆಯಲ್ಲೊಂದಾದ ರೇವಣಸಿದ್ಧ ಸಂಪ್ರದಾಯ ಮಠಗಳು, ಅವುಗಳ ಭೌಗೋಳಿಕ ವ್ಯಾಪ್ತಿಯನ್ನು, ಸಮಾಜ ಕಾರ್ಯ, ಅವರ ಇಂದಿನ ಸ್ಥಿತಿಗತಿಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಇದೇ ರೀತಿ "ಅಮೋಘ ಸಿದ್ಧ ಸಂಪ್ರದಾಯದ ಹಾಲುಮತ ಮಠಗಳ" ಕುರಿತು ನಿರೂಪಿಸಿದ್ದಾರೆ.

ಈ ಎಲ್ಲಾ ಲೇಖನಗಳ ಮಾಹಿತಿಯನ್ನು ಅಧ್ಯಯನದ ಪೂರಕ ಆಕರವಾಗಿಟ್ಟುಕೊಂಡು ಹಾಲುಮತ ಪುರಾಣಗಳು ಸಾಂಸ್ಕೃತಿಕ ಅನನ್ಯತೆಯನ್ನು ಇವುಗಳೊಂದಿಗೆ ಮೇಳೈಸಿ ನೋಡುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

ಅಧ್ಯಾಯ : ಎರಡು

# ಕನ್ನಡ ಪುರಾಣಗಳು

೧. ಅರ್ಥ-ಲಕ್ಷಣ

೨. ಉಗಮ-ವಿಕಾಸ

೩. ಪುರಾಣ ಪ್ರಕಾರಗಳು

i. ಜೈನ ಪುರಾಣಗಳು

ii. ವೀರಶೈವ ಪುರಾಣಗಳು

iii. ವೈದಿಕ ಪುರಾಣಗಳು

iv. ಹಾಲುಮತ ಪುರಾಣಗಳು

## ಅಧ್ಯಾಯ : ಎರಡು

# ಕನ್ನಡ ಪುರಾಣಗಳು

### ೧. ಅರ್ಥ-ಲಕ್ಷಣ

ಭಾರತೀಯ ಸಮಾಜದ ಜನಜೀವನದಲ್ಲಿ ಪುರಾಣ ಕಲ್ಪನೆಯು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಕನ್ನಡ ಸಾಹಿತ್ಯದ ಬಹುಭಾಗವೂ ಪುರಾಣವನ್ನು ಅವಲಂಬಿಸಿ ರಚಿತವಾಗಿರುವುದು ವಿಪುಲವಾಗಿ ಕಂಡುಬರುತ್ತದೆ. ವೇದೋಪನಿಷತ್ತುಗಳಂತೆ ಪುರಾಣಗಳು ಪೂಜ್ಯನೀಯವಾಗಿವೆ. ಪ್ರಪಂಚದ ವಿಷಯವನ್ನು ಜನಪದರಿಗೆ ಕಾಲದಿಂದ ಕಾಲಕ್ಕೆ, ತಲೆಮಾರಿನಿಂದ ತಲೆಮಾರಿಗೆ ಕೊಂಡೊಯ್ಯುವ ಮಹತ್ವದ ಕಾರ್ಯವನ್ನು 'ಪುರಾಣ' ಎಂಬ ಮಾಧ್ಯಮ ಸಮರ್ಥವಾಗಿ ಮಾಡುತ್ತದೆ. ಮಾನವನಿಗೆ ಭಾಷೆಯು ಮನಸ್ಸಿನ ಭಾವನೆಯನ್ನೂ ಅಭಿವ್ಯಕ್ತಪಡಿಸಲು ಸಾಧನವಾಗಿದ್ದರೆ, ಪುರಾಣ ಕಾವ್ಯಗಳು ಮನಸ್ಸಿನ ಜಡತ್ವವನ್ನು ದೂರವಾಗಿಸುವ, ಶರೀರಕ್ಕೆ ಚೈತನ್ಯವನ್ನು ತುಂಬುವ ಶಕ್ತಿಯಾಗಿದ್ದವು. ಪ್ರತಿಯೊಬ್ಬ ಮನುಷ್ಯನು ಪ್ರಕೃತಿಯ ವಿರೋಧವಾಗಿ ಜೀವಿಸಲು ಸಾಧ್ಯವಿಲ್ಲ. ಅದಕ್ಕೆ ಹೊಂದಿಕೊಂಡು ಜೀವನವನ್ನು ಸುಖ, ನೆಮ್ಮದಿಯಿಂದ ಧರ್ಮದ ನೆಲೆಯಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಆಧ್ಯಾತ್ಮಿಕ ಕೃತಿಗಳು ಮಾಡುತ್ತವೆ. ನಾವು ಎಷ್ಟೋ ಯುಗಗಳನ್ನು ದಾಟಿ ಬಂದರೂ ಪುರಾಣ ಯುಗವನ್ನು ಮಾತ್ರ ದೇಹದಲ್ಲಿ ರಕ್ತಗತಮಾಡಿಕೊಂಡು ಬರುತ್ತಿದ್ದೇವೆ. ಈ ಕಾರಣಕ್ಕೆ ಪ್ರತಿಯೊಂದು ಶತಮಾನಗಳಲ್ಲಿ ವೈಜ್ಞಾನಿಕವಾಗಿ ಆಲೋಚಿಸುವ ವ್ಯಕ್ತಿಗಳು ಜನಿಸಿದರೂ, ಆಧ್ಯಾತ್ಮಿಕ ಗರಡಿಯಲ್ಲಿ ಬೆಳೆದು ಜಗತ್ತನ್ನು ದೀಪವಾಗಿಸಿದ್ದಾರೆ. ಇಂತಹವರ ಸಾಲಿನಲ್ಲಿ ಸ್ವಾಮಿ ವಿವೇಕಾನಂದರು, ರಾಮಕೃಷ್ಣ ಪರಮಹಂಸರು, ಮೀರಾಬಾಯಿ ಮುಂತಾದ ಮಹನೀಯರು ಭಾರತೀಯ ಧರ್ಮವನ್ನು ವಿಶ್ವಕ್ಕೆ ಪರಿಚಯಿಸಿದರು. ಇವರು ಆಧುನಿಕತೆಯಲ್ಲಿ ಆಧ್ಯಾತ್ಮಿಕತೆಯ ಮಹತ್ವ ಮತ್ತು ಪ್ರಸಾರವನ್ನು ಮಾಡಿದ್ದಾರೆ. ಆದರೆ ನಮ್ಮ ಸಂಸ್ಕೃತಿಯ ಹಿರಿಯ ಜೀವಗಳು ಅನುಭವ ಮುಖಿಗಳಾಗಿದ್ದರು. ಹಾಗಾಗಿ ಅವರು ಲಿಖಿತಕ್ಕಿಂತ

ಮೌಖಿಕ ಪರಂಪರೆಯನ್ನು ತುಂಬಾ ನಂಬಿದ್ದರು. ಈ ನಂಬಿಕೆಯನ್ನು ಕಾರ್ಯರೂಪಕ್ಕೆ ಸಾಕಾರಗೊಳಿಸಲು ನೆರವಾಗಿದ್ದು ಪುರಾಣ ಕಾವ್ಯಗಳು.

ಪುರಾಣಗಳು ಕಾಯಕವನ್ನು, ದೀಕ್ಷೆಯನ್ನು ಕೈಗೊಳ್ಳುವುದರ ಮೂಲಕ ಸದ್ಧರ್ಮವನ್ನು ಪ್ರಸರಣ ತಂತ್ರಗಾರಿಕೆಯನ್ನು ಗರ್ಭೀಕರಿಸಿಕೊಂಡಿವೆ. ವಾಸ್ತವ ಮತ್ತು ಅವಾಸ್ತವದ ಮೊತ್ತಗಳ ಸಂಗಮವಾಗಿದ್ದರೂ ಪ್ರಸ್ತುತ ಜೀವನಕ್ಕೆ ಆಸರೆಯನ್ನು ಒದಗಿಸುವ ನವಚೇತನಗಳಾಗಿವೆ. ಮಾನವನ ಆಧ್ಯಾತ್ಮಿಕ ಜ್ಞಾನಕೇಂದ್ರವಾಗಿಯೂ ಕಾರ್ಯ ನಿರ್ವಹಿಸುವವು. ನಾವು ಎಷ್ಟೆ ನಗರೀಕರಣ, ಉದಾರೀಕರಣ, ಖಾಸಗೀಕರಣದಿಂದ ಸ್ಥಿರೀಕರಣಗೊಂಡರೂ ಸಂಸ್ಕೃತಿಯು ಹಿಂದಿನ ಮಾನವನ ಸಹಜ ಮೌಲ್ಯವನ್ನು ಪ್ರತಿಬಿಂಬಿಸುವ ಜಾಡನ್ನು ಮರೆತಿಲ್ಲ. ವೈಜ್ಞಾನಿಕ ಮನೋಧರ್ಮದ ಮೂಲಕ ಮತ್ತಷ್ಟು ಜೀವನ ಸಂಸ್ಕೃತಿಯ ನೆಲೆಯನ್ನು ಮನುಷ್ಯ ಇವುಗಳಿಂದ ಕಲಿತುಕೊಳ್ಳಬಹುದು. ಹೊಸ ಹೊಸ ಪರಿಕಲ್ಪನೆಗಳು ಬಂದು 'ಪುರಾಣ' ಎಂಬ ಪದದ ಮೌಲ್ಯವನ್ನು ಅಲ್ಲಗಳೆಯುತ್ತವಾದರೂ ಜೀವನ ಮೌಲ್ಯವನ್ನು ಅಂತರ್ಗತ ಮಾಡಿಕೊಂಡಿದ್ದರಿಂದ ಇಂದಿಗೂ ಅನೇಕರ ಮನಸ್ಸಿನಲ್ಲಿ ನೆಲೆ ನಿಂತಿವೆ.

ಸದ್ಗುಣಗಳಾದ ದಯೆ, ಸಮಾನತೆ, ಏಕತೆಯನ್ನು ಒತ್ತಿಹೇಳುವ ಸಂಸ್ಕೃತಿಯ ವಾಹಕವೆಂದರೆ ಪುರಾಣ. ಸಾಹಿತ್ಯ ಸಮಾಜದ ಪ್ರತಿಬಿಂಬ ಎನ್ನುವುದು ಜನಜನಿತವಾದುದು. ಹಾಗೆಯೇ ಜನರ ಜೀವನ, ಅವರ ಸಂಸ್ಕೃತಿ ಹಿನ್ನೆಲೆಯು ಸ್ವರೂಪವನ್ನು ಪುರಾಣಗಳು ಸಾಹಿತ್ಯದ ಪ್ರತಿಬಿಂಬವೆಂದು ತೋರಿಸಿಕೊಟ್ಟಿವೆ. ವೇದ-ತತ್ವಶಾಸ್ತ್ರಗಳು, ಉಪನಿಷತ್ತುಗಳು ಜನರ ಸ್ಮರಣ ಶಕ್ತಿಗೆ ನಿಲುಕದಾದವೋ ಆ ಕ್ಷಣವೇ ಪುರಾಣ ಕಥೆಗಳು ಮನುಷ್ಯನ ಪ್ರಪಂಚದಲ್ಲಿ ಸ್ಥಾನ ಪಡೆದವು. ಇದು ಅಂದು ಅನಿವಾರ್ಯ ಕೂಡ ಆಗಿತ್ತು. ಮನಸ್ಸು ಕುತೂಹಲ, ಪವಾಡಗಳ ಮೂಲಕ ಜ್ಞಾನವನ್ನು ಸಂಪಾದಿಸುವ, ಅರಿಯುವ ತವಕವನ್ನೂ ಕಾಯುತ್ತಿದ್ದವು. ಆದರೆ ಪುರಾಣಗಳು ಸಂಸ್ಕೃತ ಭಾಷೆಯ ಹತೋಟಿಯಲ್ಲಿದ್ದ ಒಂದು ಪ್ರಕಾರವೆಂತಲೂ ಹೇಳಬಹುದು. ಪುರಾಣವೆಂದರೆ ಸಂಸ್ಕೃತ ಎನ್ನುವಷ್ಟರ ಮಟ್ಟಿಗೆ ಸಂಸ್ಕೃತ ಸಾಹಿತ್ಯ ಮತ್ತು ಪುರಾಣ ಮಾಧ್ಯಮಕ್ಕೆ ನಿಕಟ ಸಂಬಂಧ ಏರ್ಪಡಿಸಲಾಗಿತ್ತು. ಹಲವಾರು ಭಾಷೆಗಳು ಜನರ ಭಾಷೆಯಾಗಿದ್ದರೂ ಪುರಾಣ ಭಾಷೆ ಮಾತ್ರ ಸಂಸ್ಕೃತದ ಪಾಲಾಗಿತ್ತು. ಹಲವಾರು ಭಾಷೆಗಳ ಉಗಮದಿಂದಲೂ ಸಂಸ್ಕೃತವೂ ಕೆಲವೇ ಪ್ರದೇಶಗಳ, ಕೆಲವೇ ಪಂಡಿತ ಜನರ ಸೊತ್ತಾಗಿ ಮಾರ್ಪಟ್ಟಿತ್ತು. ಅಂತಹ ಸಂದರ್ಭದಲ್ಲಿ ಭಾರತದ ಭಾಷೆಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಸಾಹಿತ್ಯ ರಚನೆಯನ್ನು ಮಾಡತೊಡಗಿದವು.

ಸಾಹಿತ್ಯ ರಚನೆಯಲ್ಲಿ ವಸ್ತುವು ಸಂಸ್ಕೃತ ಭಾಷೆಯದಾದರೆ ಪ್ರಸರಣ ಕಲೆಯು ಕನ್ನಡ ಸಾಹಿತ್ಯ ಜಾಯಮಾನ ಆಗಿತ್ತು. ಇಲ್ಲಿಯೂ ಶಿಷ್ಟ ಮತ್ತು ದೇಶಿ ಎಂಬ ನೆಲೆಯಲ್ಲಿ ಸಾಹಿತ್ಯ

ರಚನೆಯಾಗಿದೆ. ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಹಾಡುಗಬ್ಬದಿಂದಲೇ ಉದಾಹರಿಸುತ್ತೇವೆ. ಲಿಖಿತಕ್ಕಿಂತ ಮುಂಚೆ ಅದು ಮೌಖಿಕವಾಗಿತ್ತು. ತದನಂತರ ಕಾಲಕ್ಕೆ ಅನುಗುಣವಾಗಿ ರಚನೆಯನ್ನು ಪಡೆದು ಲಿಖಿತರೂಪ ತಾಳಿತು ಎಂಬುದು ತಿಳಿದ ಸಂಗತಿ. ಇದೇ ರೀತಿ ಪುರಾಣಗಳು ಮೊದಲು ಮೌಖಿಕರೂಪದಲ್ಲಿ ಜನಪದರ ನಾಲಿಗೆಯಲ್ಲಿ ಲಿಖಿತವಾಗಿದ್ದವು. ಆದ್ದರಿಂದ ಅವುಗಳ ಕರ್ತೃ ಯಾರೆಂದು ತಿಳಿದುಬರುವುದಿಲ್ಲ. ಪ್ರತಿಯೊಬ್ಬರು ಪ್ರಸರಣ ಕಾರ್ಯವನ್ನು ಮಾಡುವ ಮನೋಭಾವದವರೆಂದು ಖಚಿತ ಪಡಿಸುತ್ತಾರೆ. ಹಾಗಾಗಿ ಅವರು ಕಾಲವನ್ನು ಗಮನಿಸದೆ ಹೋದರು. ಕಾಲ ಮತ್ತು ಕರ್ತೃವಿನ ವಿಷಯವನ್ನು ನಿರ್ದಿಷ್ಟವಾಗಿ ಪುರಾಣ ರಚನೆಯಲ್ಲಿ ತಿಳಿಯಲು ಅಸಾಧ್ಯ ಸಂಸ್ಕೃತ ಭಾಷೆಯು ಕ್ಲಿಷ್ಟತೆಯಿಂದ ದೂರವಾಗ ತೊಡಗಿದಂತೆ ವೇದ ಉಪನಿಷತ್ತುಗಳು ಜನಸಾಮಾನ್ಯರಿಂದ ಹಿಂದಕ್ಕೆ ಸರಿಯತೊಡಗಿದವು. ಯಾವುದು ಸರಳವಾಗಿದೆಯೋ ಆ ಕಡೆಗೆ ಜನರ ಮನಸ್ಸು ಕುತೂಹಲದಿಂದ ಸಂಚಲನೆಯನ್ನು ಕೈಗೊಂಡಿತ್ತು. ಇವು ಅನಾದಿ ಕಾಲದಿಂದಲೂ ನಡೆದು ಬಂದ ಸಂಗತಿಗಳಾಗಿವೆ. ಇಂದಿನ ಸಂಸ್ಕೃತಿಯ ತಾಯಿಬೇರು ಆದಿಮಾನವನ ಚಿಂತನ-ಮಂಥನ, ಭಾವನೆ, ಕಲ್ಪನೆ ಹಾಗೂ ಅವನ ಆಚರಣೆ, ನಂಬಿಕೆಗಳವರೆಗೆ ವಿಸ್ತರಿಸಿದೆ. ಇವುಗಳ ಜ್ಞಾನ ಸಂಗ್ರಹ ಮತ್ತು ಜ್ಞಾನ ಪ್ರಸಾರಕ್ಕೆ ಪುರಾಣವೂ ಇಂದಿನ ಮಾಧ್ಯಮದಂತೆ ನೆರವು ನೀಡಿತ್ತು. ನಿಸರ್ಗದಿಂದ ತಿಳುವಳಿಕೆಯನ್ನು ಪಡೆದು ಮತ್ತೆ ಆ ತಿಳುವಳಿಕೆಯನ್ನು ಮರುಪ್ರಸಾರಕ್ಕೆ ಪುರಾಣವನ್ನು ಅವಲಂಬಿಸಿದ್ದೇವೆ. ಕೊನೆಗೆ ವ್ಯಕ್ತಿಗೆ ದಾನ, ಧರ್ಮ, ಮೋಕ್ಷಗುಣಗಳಿಗೆ ಆಧಾರಸ್ತಂಭವಾಗಿ ಪುರಾಣ ಸಾಹಿತ್ಯ ನಿಂತಿತ್ತು. ಹೀಗೆ ಆಧ್ಯಾತ್ಮಿಕ ಹಾಗೂ ದಾರ್ಶನಿಕ ಸತ್ಯಗಳನ್ನು ವಿವರಿಸುತ್ತಾ ಮೋಕ್ಷಕ್ಕೆ ಸೇತುವೆಯಾಗುವುದು ಪುರಾಣವೇ ಎಂದು ಅರಿಯಲಾಗಿದೆ.

ಇತಿಹಾಸ ಐತಿಹ್ಯಕ್ಕೆ ಆಧಾರವಾದರೆ, ಐತಿಹ್ಯ ಪುರಾಣಕ್ಕೆ ಮೂಲವಾದುದು. ಅಂದರೆ ಐತಿಹ್ಯಗಳು ಮಾನವನ ಅನುಭವಗಳ ಘಟನೆಯ ವಾಸ್ತವತೆಯನ್ನು ಹಿಡಿದಿಡುವ ನಂಬಿಕೆಯಾಗಿವೆ. ಇಂತಹ ನಂಬಿಕೆಗಳ ಅಗಾಧವಾದ ಸಂಗ್ರಹವೇ ಪುರಾಣ ಎನ್ನಬಹುದು. ಕಲ್ಪನೆ ಆದಿ ಮಾನವನ ವಿಶಿಷ್ಟ ಲಕ್ಷಣಗಳಲ್ಲಿ ಒಂದು. ಅದೇ ಅವನ ಜೀವನದ ಚಾಲಕ ಶಕ್ತಿಯಾಗಿತ್ತು. ಆಲೋಚನೆ, ವ್ಯವಹಾರ, ಸಾಹಸ, ಸಾಧನೆಗಳ ಕಥನ ಅಭಿವ್ಯಕ್ತಿಗೆ ಮಾಧ್ಯಮವು ಹೌದು. ಜನಪದರು ಸೃಷ್ಟಿಸಿರುವ ಪುರಾಣಗಳಲ್ಲಿ ಮುಖ್ಯ ಉದ್ದೇಶ ಚಿಂತನೆ ಆಗಿತ್ತು. ಆದ್ದರಿಂದಲೇ ಈ ಪ್ರಕಾರವನ್ನು ಸಾಹಿತ್ಯದಲ್ಲಿ ಸೇರಿಸಲಿಲ್ಲ ಎಂದು ಹೇಳಬಹುದು.

ಸಾಹಿತ್ಯ ಪ್ರಕಾರಗಳಲ್ಲಿ ಸಿಗದ ಮಾನವ ಜ್ಞಾನವೆಲ್ಲ ಪುರಾಣಗಳಲ್ಲಿ ದೊರೆಯುತ್ತದೆ. ಇದರಲ್ಲಿ ವಿಶ್ವಸೃಷ್ಟಿಗೆ ಸಂಬಂಧಿಸಿದ ಕಲ್ಪನೆಗಳು ಮತ್ತು ನಂಬಿಕೆಗಳು, ಧಾರ್ಮಿಕ ಹಾಗೂ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದ ಕಥೆಗಳು, ಚಾರಿತ್ರಿಕ ಸಂಗತಿಗಳು, ದೇವರಿಗೆ ಅಥವಾ ಅತಿ ಮಾನವರಿಗೆ

ಸೇರಿದ ವಿಷಯಗಳು ಪುರಾಣ ಚೌಕಟ್ಟಿನಲ್ಲಿ ಬರುತ್ತವೆ. ಮೊದಲು ಪುರಾಣಗಳಲ್ಲಿ ಬರುವ ರಾಮ, ಕೃಷ್ಣ, ಇಂದ್ರ, ವೃಷಭನಾಥ, ಬುದ್ಧ ಮುಂತಾದವರು ಒಂದಾನೊಂದು ಕಾಲದಲ್ಲಿ ಚಾರಿತ್ರಿಕ ವ್ಯಕ್ತಿಗಳಾಗಿದ್ದರು ಎಂದು ಹೇಳಲಾಗಿದೆ. ಇವರ ಮೂಲಕ ಪ್ರೀತಿ, ಪ್ರೇಮ, ಹೋರಾಟ, ಸಂಹಾರ, ಸಮಾಜೋದ್ಧಾರ ಕಾರ್ಯ, ಸುಧಾರಣೆಗಳು ಸಹ ಪುರಾಣಗಳಲ್ಲಿ ನಿರೂಪಣೆಯ ಹಂತಕ್ಕೆ ಬಂದವು. ಸೃಷ್ಟಿಯೂ ನಿಂತಿರುವುದು ಇಂತಹ ಮೂಲಭೂತ ಅಂಶಗಳಲ್ಲಿಯೇ ಆಗಿದೆ. ಅದಕ್ಕಾಗಿ ಪುರಾಣಗಳಲ್ಲಿ ಜೀವನವನ್ನು ಕೆಳಸ್ತರದಿಂದ ಉನ್ನತ ಮಟ್ಟಕ್ಕೆ ಹೇಗೆ ಸಾಗಿಸಬೇಕೆಂದು ತೋರಿಸಿಕೊಡಲು ಪ್ರಯತ್ನಿಸಿದವು. ಇಲ್ಲಿ ಕಥೆಯಾಗಿ ಬರುವ ವ್ಯಕ್ತಿಗಳ ಸ್ಥಾನಮಾನ ನಮ್ಮ ಜೀವನಕ್ಕೆ ಬೇಕಾದುದೇ ಆಗಿರುತ್ತದೆ. ಆದ್ದರಿಂದ ಜನರು ಐತಿಹ್ಯಗಳನ್ನು ಬೆಳೆಸದೆ ಪುರಾಣೀಕರಣದಿಂದ ಜೀವನದ ಸಾರ್ಥಕತೆಯನ್ನು ತೋರಪಡಿಸಿದ್ದಾರೆ. ಮುಂದೆ ಪುರಾಣ ವಿಶಾಲವಾದ ಅರ್ಥವನ್ನು ಹೊಂದಿ ವಿವಿಧ ದೃಷ್ಟಿಕೋನದಿಂದ ಜನತೆಯಲ್ಲಿ ಪ್ರಯೋಗಕ್ಕೆ ಒಳಪಡುತ್ತಾ ಬರುತ್ತಿದೆ ; ಹಾಗೂ ಪ್ರಾಕೃತಿಕ ವಸ್ತು ಕ್ರಿಯೆಗಳೇ ಪುರಾಣಕ್ಕೆ ಪ್ರೇರಕ ಎನ್ನಬಹುದು.

ಸಾಹಿತ್ಯ ಲೋಕದಲ್ಲಿ ಒಂದು ಪದದ ಅರ್ಥಕ್ಕೆ ಅನೇಕರು ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸ್ವತಂತ್ರವಿದೆ. ಪ್ರತಿಯೊಂದು ಪರಿಕಲ್ಪನೆಗೆ ಅವರದ್ದೇ ಆದ ಅರ್ಥವನ್ನು ಕೊಟ್ಟಿರುತ್ತಾರೆ. ಹಾಗಾದರೆ ಈ 'ಪುರಾಣ' ಎಂಬುದರ ಬಗೆಗೆ ಯಾವ ರೀತಿಯ ಅಭಿಪ್ರಾಯವನ್ನು ನೀಡಿದ್ದಾರೆಂದು ಮೊದಲು ತಿಳಿಯುವುದು ಸೂಕ್ತ. ಪುರಾತನ ಪದದ ಹಳೆಯ ರೂಪವೇ ಪುರಾಣ. ಇದಕ್ಕೆ ಹಳೆಯ, ಪ್ರಾಚೀನವೆಂಬ ಅರ್ಥಗಳುಂಟು. ಋಗ್ವೇದ ಕಾಲದಲ್ಲಿ 'ಪಳಗತೆಗಳು' 'ಪ್ರಾಚೀನ ಗಾಥಾ' ಎಂದು ಕರೆಯುತ್ತಿದ್ದರು. ಅನೇಕ ಸಾಹಿತ್ಯ ಕೃತಿಗಳಲ್ಲಿ ಪುರಾಣದ ಅರ್ಥವನ್ನು ಪರಿಮಿತ ಅರ್ಥದಲ್ಲಿಯೇ ಕೊಟ್ಟಿದ್ದಾರೆ.

ಮತ್ಸ್ಯ ಪುರಾಣವು ಹಿಂದಿನ ಕಲ್ಪಗಳಲ್ಲಿ ನಡೆದ ಸಂಗತಿಗಳನ್ನು ತಿಳಿಸುವುದರಿಂದ ಪಂಡಿತರ ಪುರಾಣಗಳೆಂದು ತಿಳಿಯುತ್ತಾರೆ. ವಾಯು ಪುರಾಣದಲ್ಲಿ "ಯಸ್ಮಾತಂ ಪುರಾಹ್ಯ ನತೇತಿ ಪುರಾಣಂ ತೇನ ಹಿಸ್ಮೃತಂ ನಿರುಕ್ತಮುಸ್ಯಯೋ ವೇದ ಸರ್ವ ಪಾಪ್ಯೆಃ ಪ್ರಮುಚ್ಯತೇ" ಅಂದರೆ ಪುರಾಣ ಅನಾದಿ ಕಾಲದಿಂದಲೂ ನಡೆದು ಬಂದಿರುವುದರಿಂದ ಪುರಾಣ ಎಂಬ ಹೆಸರು ಪ್ರಾಪ್ತವಾಯಿತು. ಸಾಮಾನ್ಯವಾಗಿ ಪುರಾಣದ ಅರ್ಥವೆಂದರೆ ಹಳೆಯ ರೂಪ ಎಂದರ್ಥ. ಕಾಳಿದಾಸ ಕವಿ 'ಮಾಳವಿಕಾಗ್ನಿ ಮಿತ್ರ' ನಾಟಕದಲ್ಲಿ "ಪುರಾಣ ಮಿತ್ಯೇವ ನಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ" ಎನ್ನುವಲ್ಲಿ ಸನಾತನ ಮತ್ತು ವಿನೂತನ ಎಂದು ಅರ್ಥೈಸುತ್ತಾನೆ. ಪಾಣಿನಿಯು "ಪುರಾಭವಂ" ಎಂದು ಹೇಳುವರು. ಪುರಾಣನಾಮ ಚೂಡಾಮಣಿಯಲ್ಲಿ "ಪುರಾನೀಯತೇ ಇತಿ ಪುರಾಣಂ" ಎಂದು ಹೇಳಿದ್ದಾರೆ. ಪುರಾಣದ ಬಗ್ಗೆ ನಮ್ಮ ದೇಶದಲ್ಲಿ ಮಾತ್ರ ಅಧ್ಯಯನ ವ್ಯಾಖ್ಯಾನಗಳನ್ನು ಹೇಳಿಲ್ಲ. ಪಾಶ್ಚಾತ್ಯರು ತಮಗೆ ಅನುಗುಣವಾಗಿ ಅರ್ಥೈಸಿದ್ದಾರೆ. ಗ್ರೀಕ್ ಮೈಥಾಲಜಿ ಎಂದರೆ ಗ್ರೀಕ್

ರಿಲಿಜಿಯನ್ ; ರೋಮನ್ ಮೈಥಾಲಜಿ ಎಂದರೆ ರೋಮನ್ ರಿಲಿಜಿಯನ್ ಎಂಬ ಅರ್ಥವನ್ನು ಬಳಕೆಗೆ ತಂದರು. ಇಂಗ್ಲೀಷ್‌ನಲ್ಲಿ ಪುರಾಣಕ್ಕೆ ಸಂವಾದಿಯಾಗಿ MYTH (ಮಿಥ್) ಎಂದು ಬಳಕೆಯಾಯಿತು. ದಾನವ ಮತ್ತು ಮಾನವರೂಪದ ದೇವತೆಗಳ ನಡುವೆ ಏರ್ಪಡುವ ಹೋರಾಟವನ್ನು ವಿವರಣಾತ್ಮಕವಾಗಿ ತಿಳಿಸುವುದು ಪುರಾಣ. ಈ ಹಿನ್ನೆಲೆಯಲ್ಲಿ ಮಹಾಭಾರತ, ರಾಮಾಯಣಗಳು ಪುರಾಣ ಸ್ಥಾನಕ್ಕೆ ಏರಿದವು. ಸಂಸ್ಕೃತ ವಿದ್ವಾಂಸರಾದ ರಾಘವಾಚಾರ್ಯರು ಪುರಾಣವನ್ನು 'ಪುರಾ+ನವ' ಎಂದು ಬಿಡಿಸಿ ಪ್ರಾಚೀನವಾದರೂ ಸದಾ ನೂತನವಾದುದು ಎಂದು ಅರ್ಥೈಸಿದ್ದಾರೆ.

"ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರಿಷ್ಯತಿ ॥

ಭಾರತೀಯ ಸಾಹಿತ್ಯದಲ್ಲಿ ಪುರಾಣಗಳಿಗೆ ವಿಶೇಷವಾದ ಮಹತ್ವವಿದೆ. ಭಾರತೀಯ ಸಂಸ್ಕೃತಿ ಮತ್ತು ನಾಗರೀಕತೆಯನ್ನು ಸಾಧಾರಣ ಜನತೆಯಲ್ಲಿ ಪ್ರಚಾರ ಮಾಡಿದುದರ ಶ್ರೇಯಸ್ಸು ಪುರಾಣಗಳಿಗೆ ಸೇರಿದ್ದು. ಈಗಲೂ ಸಹ ಹಿಂದೂ ಧರ್ಮಕ್ಕೆ ಈ ಪುರಾಣಗಳೇ ಮೂಲಾಧಾರವಾದವು."[7]

"Myth; a Story presented as having occurred in previous age explaining the cosmological and supernatural, traditions of the people, their God, Heroes, Cultural traits, religious beliefs etc."[8]

ಹೀಗೆ ಪ್ರಾಚೀನ ಪುರಾಣ ಶಬ್ದವೂ ಹಳೆಯ ಕಥೆಯನ್ನು ಮಾತ್ರ ವಿವರಿಸದೆ, ಇತಿಹಾಸದ ಮುಂಚಿನ ವಿಶ್ವೋತ್ಪತ್ತಿಯನ್ನು ಕಾಲ್ಪನಿಕತೆಯಲ್ಲಿ ಕಟ್ಟಿಕೊಡುತ್ತದೆ. ಕಥೆ, ಪಳಗತೆಗಳಿಗೆ ಪುರಾಣ ಆವೃತ್ತಿಯಲ್ಲಿ ಅಧ್ಯಯನ ಮಾಡತೊಡಗುವುದೇ ಪುರಾಣ ಶಾಸ್ತ್ರವಾಯಿತು. ಈ ವ್ಯಾಖ್ಯಾನಗಳನ್ನು ಗ್ರಹಿಸಿದಾಗ ಪುರಾಣವು ಕಳೆದು ಹೋದ ಇತಿಹಾಸವನ್ನು ಮರುಕಟ್ಟುವುದಕ್ಕೆ ಆಕರ ಒದಗಿಸುವ ಮೌಖಿಕ ಆಧಾರವೆಂದು ಹೇಳಲಾಗುತ್ತದೆ.

ಎಲ್ಲ ಪುರಾಣಗಳೂ ಸಾಮಾನ್ಯವಾದ ಲಕ್ಷಣ ಹೊಂದಿವೆ. ಅದೇನೆಂದರೆ ಅವೆಲ್ಲವೂ ಬುದ್ಧಿಗೆ ಎಟುಕದ ವಿಷಯವನ್ನು ತಿಳಿಸಲು ಯತ್ನಿಸುತ್ತವೆ ಎಂದು ಎಡ್ವರ್ಡ್‌ಬುಲ್ಲೋ ಅವರ ಅಭಿಪ್ರಾಯ. ಅಂದರೆ ಪುರಾಣಗಳ ಪ್ರಧಾನ ಉದ್ದೇಶ ಪ್ರಕೃತಿಯಲ್ಲೂ, ಸಮಾಜದಲ್ಲೂ, ರಚನೆಯಾದ ನಂಬಿಕೆಗಳನ್ನು ದೃಢಪಡಿಸುವುದು. ಅದು ದೇವತೆಗಳ, ಅಲೌಕಿಕ ಆದರ್ಶಗಳಿಂದ ನಿರೂಪಿಸುತ್ತವೆ. "ಪುರಾಣವೆಂಬುದು ಕೇವಲ ಕಟ್ಟುಕಥೆಯಲ್ಲ, ಕಥನವಲ್ಲ, ಅಲೌಕಿಕ ಅತಿಮಾನುಷ ವ್ಯಕ್ತಿಗಳ ಸಾಹಸವನ್ನೋ, ನೈಸರ್ಗಿಕ ಘಟನೆಗಳ ಅಸಾಧಾರಣ ವಿಚಿತ್ರ ಪ್ರವೃತ್ತಿಯನ್ನೋ ಅಥವಾ ಐತಿಹಾಸಿಕ ಘಟನೆಗಳನ್ನೋ ಇದು ವರ್ಣಿಸುವುದಿಲ್ಲ. ಪುರಾಣಗಳ ಪ್ರಧಾನ ಉದ್ದೇಶವೇನೆಂದರೆ ಪ್ರಕೃತಿಯಲ್ಲೂ ಸಮಾಜದಲ್ಲೂ ಸ್ಥಾಪಿತವಾದ ಕಟ್ಟಳೆಗಳನ್ನು ಸ್ಥಿರಗೊಳಿಸುವುದು, ನಂಬಿಕೆಯನ್ನು ದೃಢಪಡಿಸುವುದು, ದೇವ ದೇವತೆಗಳ

ಉಪಾಸನೆಯ ಸಮರ್ಪಕತೆ, ಸಾರ್ಥಕತೆಗಳನ್ನು ಸಮರ್ಥಿಸುವುದು ಹಾಗೂ ಸಾಂಪ್ರದಾಯಿಕ ವ್ಯವಸ್ಥೆ ವರ್ತನೆಗಳನ್ನು ಅಲೌಕಿಕ ಆದರ್ಶ ಮತ್ತು ದಂಡನೆಗಳ ಮೂಲಕ ಸುಗಮವಾಗಿ ಕಾಪಾಡುವುದು" ಈ ಅಭಿಪ್ರಾಯವೂ ಪುರಾಣವೆಂದರೆ ಕಟ್ಟು ಕಥೆಯಲ್ಲ ಎಂಬ ಸಿದ್ಧಾಂತವನ್ನು ಹೇಳುವುದು. ಅವಿದ್ಯಾವಂತರು, ಅನಾಗರೀಕ ಸಮುದಾಯಗಳ ಕಾಲ್ಪನಿಕ ಸೃಷ್ಟಿಯ ಕಥೆಗಳಲ್ಲಿಯೂ ಧರ್ಮದ ಸಂದೇಶವನ್ನು ಒಳಗೊಂಡಿದೆ ಎಂದು ಖಚಿತ ಪಡಿಸುತ್ತದೆ. ಮಾನವ ಜೀವನಕ್ಕೆ ಬುನಾದಿಯಾಗಿರುವ ಇಂದ್ರಿಯಾನುಭವಾತೀತ ಮಹಾಶಕ್ತಿಯನ್ನು ಪುರಾಣಗಳಲ್ಲಿ ಕಾಣುತ್ತೇವೆ. ಅವು ಅವ್ಯಕ್ತ ಶಕ್ತಿಯ ಕುರಿತು ವಿಚಾರ ಮಾಡುವ ಜ್ಞಾನಿಗಳಾಗಿವೆ. ಪುರಾಣಗಳಲ್ಲಿ ಬರುವ ಪವಾಡ, ಮಹಿಮೆಗಳನ್ನು ಜಾನಪದೀಯ ಚೌಕಟ್ಟಿನಲ್ಲಿ ನೋಡದೆ ವೈಜ್ಞಾನಿಕ ದೃಷ್ಟಿಯಲ್ಲಿ ನೋಡಬೇಕೆಂದು ಜೇಮ್ಸ್ ಅವರು ತಿಳಿಸಿಕೊಡುವರು. ವಿಲಿಯಂ ಮಾಡ್ತ ಅವರು "ಅನಿರ್ವಚನೀಯವಾದ ಅದ್ಭುತ (Mystery) ವನ್ನು ಎಲ್ಲರೂ ಒಪ್ಪಬಹುದಾದ ರೀತಿಯಲ್ಲಿ ಕಾಲದೇಶಕ್ಕನುಗುಣವಾಗಿ ಅರ್ಥವತ್ತಾಗಿ ಹೇಳುವ ಕಥೆಯೇ ಪುರಾಣ" ಎಂದು ಹೇಳುತ್ತಾರೆ.

"ಪುರಾಣಗಳಿಗೆ ಒಂದು ವಿಶೇಷ ಗುಣವಿದೆ. ಯಾವುದೇ ಪುರಾಣ ತಾನು ಹೇಳುತ್ತಿರುವುದು ಸತ್ಯ ಎಂದು ಸಮರ್ಥಿಸುವ ಪ್ರಯತ್ನ ಮಾಡುವುದಿಲ್ಲ. ತಾನು ಹೇಳುತ್ತಿರುವುದು ನಂಬುವಂತಿರಬೇಕು ಎಂದು ತಾರ್ಕಿಕವಾಗಿ, ವೈಚಾರಿಕವಾಗಿ ಒಪ್ಪಿಸಲು ಪ್ರಯತ್ನಿಸುವುದಿಲ್ಲ. ಪುರಾಣವು ಹೇಳುವ ಘಟನೆ ಎಷ್ಟೇ ಅದ್ಭುತವಾಗಿರಲಿ, ನಮಗೆ ಗೊತ್ತಿರುವ ಪ್ರಕೃತಿಯ ನಿಯಮಗಳಿಗೆ ವಿರೋಧವಾಗಲಿ, ಪುರಾಣ ಸುಮ್ಮನೆ ಹೇಳುತ್ತದೆ. ಸುಮ್ಮನೆ ಇರುತ್ತದೆ. ಪುರಾಣಕ್ಕೆ ಅದರದೇ ಆದ ಅಧಿಕಾರ, ಹೀಗೆ ಸಮರ್ಥಿಸಿಕೊಳ್ಳದೆ ತಾನೆ ಸತ್ಯ ಎಂಬಂತೆ ಇರುವುದರಿಂದ ಪ್ರಾಪ್ತವಾಗುತ್ತದೆ" ಎಂದು ಓ.ಎಲ್.ನಾಗಭೂಷಣಸ್ವಾಮಿ ಅವರು ಹೇಳುತ್ತಾರೆ. ಪುರಾಣಗಳು ಯಾರನ್ನು ಇದನ್ನೆ ನಂಬಿ ಎಂದು ಹೇಳಲ್ಲ. ಆದರೆ ಪುರಾಣ ಕಥೆಗಳ, ನಿರೂಪಣಾ ಶೈಲಿಯೂ ಅನುಭವದತ್ತವಾಗಿರುವುದರಿಂದಲೇ ಜನರು ಅವುಗಳನ್ನು ಸಂಪೂರ್ಣ ನಂಬುತ್ತಾರೆ. ಆದಕಾರಣ ಪುರಾಣ ಇಂದಿಗೂ ಜನಮಾನಸದಲ್ಲಿ ಸಂಪರ್ಕ ಸ್ಥಾನದಲ್ಲಿ ನೆಲೆನಿಂತಿದೆ. ಪ್ರತಿಯೊಬ್ಬರ ಅಭಿಪ್ರಾಯಗಳು ಪುರಾಣವನ್ನು ವರ್ಗೀಕರಣ ಮಾಡಿ ಹೇಳಿದಂತೆ ಕಾಣಿಸುತ್ತದೆ. ಪೂರ್ವದಲ್ಲಿ ಪುರಾಣಗಳು ಐತಿಹ್ಯದಂತೆ ಕಥೆ ಮಾತ್ರ ಆಗಿದ್ದವು. ಕೆಲ ಹಂತದಲ್ಲಿ ಸಾಹಿತ್ಯದ ಮೂಲ ಸಂಗ್ರಹವಾಗಿ ಕಂಡುಬಂದವು. ಮತ್ತೊಂದು ಹಂತದಲ್ಲಿ ಇವು ಚಾರಿತ್ರಿಕ ವ್ಯಕ್ತಿಗಳ ಸಾಹಸ-ಸಾಧನೆಯ ಪ್ರತೀಕವಾಗಿ ಬೆಳೆದು ಬಂದವು. ಸಮಾಜದ ಒಟ್ಟು ವಿನ್ಯಾಸವನ್ನು ಉಳಿಸುವ ಮಹತ್ವದ ಕಾರ್ಯ ಪುರಾಣಗಳಾದ್ದಾಗಿದೆ. ಅನ್ಯಜ್ಞಾನ ಶಿಸ್ತುಗಳ ಅಧ್ಯಯನಕ್ಕೂ ಪುರಾಣ ಪ್ರಕಾರವನ್ನು ಒಳಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಪುರಾಣವನ್ನು ಭಾಷಿಕ ವಿಶ್ಲೇಷಣೆಯ ಮೂಲಕ ವಿವೇಚಿಸುವುದು ಸಂರಚನಾವಾದವಾಗಿದೆ. ಮನೋವಿಜ್ಞಾನ ಸಿದ್ಧಾಂತಕ್ಕೂ ಪುರಾಣವನ್ನು

ಒಳಪಡಿಸಲಾಗಿದೆ. ಈ ಆಲೋಚನೆಗಳು ಪುರಾಣ ಕೇವಲ ವಿಶ್ವದ ಸೃಷ್ಟಿ ಕುರಿತು ಮಾತ್ರ ಹೇಳದೆ ವಿಶ್ವದ ಪ್ರತಿಯೊಂದು ಜೀವಿಯ ಸ್ವವಿವರವನ್ನು ಪರಿಚಯಿಸುತ್ತದೆ. ಅಲ್ಲದೆ ನಾಶಕ್ಕೆ ಸಂಬಂಧಿಸಿದಂತೆಯೂ ಕಥೆಯನ್ನು ಹೇಳುತ್ತದೆ. ಆರಾಧಿಸುವ ದೈವ, ಆಚರಿಸುವ ಧರ್ಮ, ನಂಬಿದ ತತ್ತ್ವ ಎಲ್ಲಕ್ಕೂ ವಾಸ್ತವತೆಯ ನೆಲೆಯಲ್ಲಿ ಧಾರ್ಮಿಕ ಸಿದ್ಧಾಂತದ ಮೂಲಕ ಪುರಾಣಗಳು ತಿಳಿಸುತ್ತವೆ.

ಪುರಾಣವು ಅನೇಕರ ಜ್ಞಾನ ಪಿಪಾಸೆಗೆ ಒಳಗಾಗಿ ವರ್ಗೀಕರಣಗೊಳ್ಳುವ ಹಂತವನ್ನು ತಲುಪಿತು. ಪುರಾಣಗಳನ್ನು ಆಧರಿಸಿ ಇವುಗಳನ್ನು ವಿಂಗಡಿಸುವ ಪ್ರಯತ್ನವೂ ನಡೆದಿದೆ.

೧. ಪುರಾಣಗಳು ಕಾಲ ಮತ್ತು ಋತು ಪರಿವರ್ತನೆ
೨. ಪ್ರಕೃತಿಯ ವಸ್ತುಗಳು
೩. ಅಸಹಜ ಅಥವಾ ಅಸಾಮಾನ್ಯ ಕ್ರಿಯೆಗಳನ್ನು ವಿವರಿಸುವ ಪ್ರಯತ್ನ
೪. ವಸ್ತು, ವ್ಯಕ್ತಿ, ದೇವರುಗಳು, ಪ್ರಾಣಿಗಳ ಹುಟ್ಟು
೫. ಅತಿಮಾನುಷದ ಪ್ರಭಾವದಿಂದ ವ್ಯಕ್ತಿ ಪ್ರಾಣಿಯಾಗಿ ಮತ್ತೆ ಮಾನವನಾಗಿ ಪರಿವರ್ತನೆ ಹೊಂದುವುದು
೬. ಕುಟುಂಬಗಳ ಸಾಮಾಜಿಕ ಸ್ಥಿತಿಗಳಲ್ಲಿ ಅಥವಾ ವಿಶ್ವದ ಸೃಷ್ಟಿಯಲ್ಲಿ ಬದಲಾವಣೆ ತಂದ ದೈವಿಕ ನಾಯಕರ ಕಥೆ
೭. ಅತಿಮಾನುಷ ನಂಬಿಕೆಯ ಪರಿಣಾಮವಾಗಿ ಹುಟ್ಟಿಕೊಂಡ ಸಾಮಾಜಿಕ ಸಂಸ್ಥೆಗಳು ಮತ್ತು ಅವುಗಳ ವಿವರಣೆ, ನಿಯಮಗಳು
೮. ದೈವತ್ವ ಆರೋಪಿತ ಸಂಶೋಧನೆ. ಉದಾ: ಬೆಂಕಿ ಕುರಿತು ಇರುವ ಕಥೆ
೯. ರಾಕ್ಷಸರ ಕಥೆ
೧೦. ಸಾವಿನ ನಂತರದ ಬದುಕನ್ನು ಕುರಿತ ಕಥೆ
೧೧. ಧಾರ್ಮಿಕ ನಂಬಿಕೆಯ ವಿವರಣೆಗಳು ಇವುಗಳನ್ನು ಒಳಗೊಂಡು ಚರಿತ್ರೆಯ ಅಂಶವನ್ನು ತೀರ ಸ್ಪಷ್ಟವಾಗಿ ಹೇಳಿರುವುದೇ ಪುರಾಣ"[೬] ಎಂದು ಓ.ಎಲ್.ನಾಗಭೂಷಣ ಸ್ವಾಮಿ ವರ್ಗೀಕರಿಸುತ್ತಾರೆ

**೨. ಪುರಾಣಗಳ ಉಗಮ-ವಿಕಾಸ**

ಭಾರತೀಯ ಸಂಸ್ಕೃತಿಯ ನೆಲಗಟ್ಟನ್ನು ತಿಳಿಯಬೇಕಾದರೆ ವೇದ, ವೇದಾಂತ, ಸ್ಮೃತಿಗಳ ಅಧ್ಯಯನ ಅವಶ್ಯಕ. ವೇದಗಳ ಅಧ್ಯಯನ ಸಮಾಜದ ಎಲ್ಲ ವರ್ಗದ ಜನರಿಗೂ ಲಭ್ಯವಿರಲಿಲ್ಲ.

ಇತಿಹಾಸ, ಪುರಾಣಗಳು ಸಹ ವೇದೋಕ್ತವಾದ ಹಾಗೂ ಗಹನವಾದ ವಿಚಾರಗಳನ್ನು ಪಂಡಿತ ಪಾಮರರಿಗೆ ಸುಲಭವಾಗುವಂತೆ ನಿರೂಪಿಸುತ್ತವೆ. ಇವುಗಳು ವಿಷಯದ ವ್ಯಾಪ್ತಿಯ ದೃಷ್ಟಿಯಿಂದಲೂ ಗಾತ್ರದ ದೃಷ್ಟಿಯಿಂದಲೂ ವಿಸ್ತಾರವಾದುವುಗಳಾಗಿವೆ. ಪುರಾಣ ಎಂಬ ಶಬ್ದವು ಕಿವಿಗೆ ಬಿದ್ದೊಡನೆಯೇ ನಿಷ್ಪ್ರಯೋಜಕ, ಕಂತೆ ಸುದ್ಧಿ, ಅದರಿಂದ ತಿಳಿಯಬೇಕಾದದ್ದು ಏನಿಲ್ಲ ಎಂಬಿತ್ಯಾದಿ ಪ್ರಶ್ನೆಗಳು ಆಧುನಿಕರಲ್ಲಿ ಉಂಟುಮಾಡಿವೆ. ಕಾರಣ ಸ್ವಾತಂತ್ರ್ಯ ಪೂರ್ವದಿಂದಲೂ ಪುರಾಣದ ಬಗ್ಗೆ ವಿದ್ವಾಂಸರಲ್ಲಿನ ಭಿನ್ನಾಭಿಪ್ರಾಯವೇ ಆಗಿದೆ. ಆಗಾಗಿ ಉಪೇಕ್ಷೆಗೂ ಈ ಪುರಾಣಗಳು ಒಳಪಟ್ಟವು. ಕಾವ್ಯಮಯವಾದ ಕವನ, ಕಥೆ, ಕಾದಂಬರಿಗಳನ್ನು, ನಾಟಕಗಳ ಆಂಗೀಕಾಭಿಯನವೂ ಪುರಾಣವನ್ನು ಮೂಲೆ ಗುಂಪಾಗುವಂತೆ ಮಾಡಿದವು. ಅಲ್ಲದೆ ಚರಿತ್ರೆಯನ್ನು ಹೊತ್ತ ಪುರಾಣಗಳನ್ನು ಮೌಖಿಕ ರೂಪದಲ್ಲಿರಿಸಿದ್ದು ನಿರ್ಲಕ್ಷತೆಗೆ ಮತ್ತೊಂದು ಕಾರಣವಾಯಿತು. ಹೀಗಾಗಿ ಪುರಾಣ 'ಅಜ್ಜಿ ಪುರಾಣ', 'ಕಂತೆ ಪುರಾಣ', 'ಗೊಡ್ಡು ಪುರಾಣ', 'ಪುಂಡರ ಗೋಷ್ಠಿ' ಎಂದೆಲ್ಲ ಹಾಸ್ಯಾಸ್ಪದಕ್ಕೆ ಒಳಪಟ್ಟಿದೆ. ಯಾವಾಗ ಚರಿತ್ರೆಯನ್ನು ಕನ್ನಡ ಸಾಹಿತ್ಯದ ಮೂಲಕ ಕಟ್ಟಲು ಯೋಚಿಸಿದರೋ ಅಲ್ಲಿಂದ ಪುರಾಣ, ಐತಿಹ್ಯ ಕೈಫಿಯತ್ತುಗಳ ಸಂಗ್ರಹಣೆಯ ಕಾರ್ಯವು ತೀವ್ರಗೊಂಡಿತು. ಈ ಕಾರ್ಯವನ್ನು ಮೊದಲು ಮಾಡಿದವರು ಕರ್ನಲ್ ಮೇಕೆಂಜಿ. ಈತನಿಗೆ ಕರ್ನಾಟಕದ ಸ್ಥಳೀಯರ ಸಹಾಯದಿಂದ ಸ್ಥಳೀಯ ಪುರಾಣಗಳನ್ನು ಸಂಗ್ರಹಿಸುವ ಮತ್ತು ಮೌಖಿಕ ರೂಪದಿಂದ ಲಿಖಿತಕ್ಕೆ ಬದಲಾಯಿಸುವ ಸಂಪಾದನೆ ಕಾರ್ಯಗಳು ಬರತೊಡಗಿದವು. ಈತನ ಪ್ರೇರಣೆಯಿಂದ ಕರ್ನಾಟಕದ ಪ್ರತಿಯೊಂದು ಸಮುದಾಯಗಳು ತಮ್ಮ ತಮ್ಮ ಸ್ಥಳೀಯ ಜೀವನ, ಆಚರಣೆ, ನಂಬಿಕೆಗಳನ್ನು ಪುರಾಣೀಕರಿಸುವ ಮನೋಧರ್ಮ ಬೆಳೆಸಿಕೊಂಡರು. ಹೀಗಾಗಿ ಕಥೆಗಳಿಗೆ ಮೇಕೆಂಜಿ ಪ್ರೋತ್ಸಾಹಿಸಿ ಸ್ಥಳೀಯ ಚರಿತ್ರೆ ಶಾಶ್ವತವಾಗಿ ಲಿಖಿತ ರೂಪಕ್ಕೆ ಬರುವಂತೆ ಮಾಡಿ ಕೀರ್ತಿ ಪಡೆದುಕೊಂಡನು.

ಕವಿವಾಣಿಯು ಪುರಾಣ ಮಿತ್ಯೇವನ ಸಾಧು ಸರ್ವಂ ಎಂದಿದ್ದಾರೆ. ಕವಿಯು ಹಳಿಯದೆಲ್ಲ ಒಳಿತಲ್ಲ ಎಂದು ನುಡಿದಾಗ ಹಳೆಯದರಲ್ಲೂ ಒಳಿತಾದುದು ಇದ್ದೇ ಇರುತ್ತದೆಂಬ ಧ್ವನಿಯನ್ನು ಹೊರಡಿಸುವುದು ಸರ್ವವೇದ್ಯ. ಆದಕಾರಣ ಪ್ರಾಚೀನವಾದುದು ಎಂಬ ಕಾರಣವೊಂದರಿಂದಲೇ ಪುರಾಣಗಳ ಬಗೆಗೆ ಲಘುವಾದ ಭಾವನೆ ತಾಳುವುದು ವಿವೇಕವಾಗಲಾರದು."[2] ಇದರಿಂದ ಪುರಾಣಗಳು ಭಾರತೀಯ ಸಂಸ್ಕೃತಿಯ "ಜ್ಞಾನ ಕೇಂದ್ರ"ಗಳೆಂದು ಹೇಳುತ್ತಾರೆ. ಸನಾತನ, ಸಾಮಾಜಿಕ, ನೈತಿಕ, ಭೌಗೋಳಿಕ ವಿಚಾರಗಳನ್ನರಿಯಲೂ ಆಚಾರ-ವಿಚಾರ ನಂಬುಗೆಗಳು ಅಂದಿನ ಧಾರ್ಮಿಕ ನೆಲಗಟ್ಟನ್ನು ಅರ್ಥಮಾಡಿಕೊಳ್ಳಲು, ರಾಜಮನೆತನಗಳ ಆಳ್ವಿಕೆ, ಸೃಷ್ಟಿಯ ರಹಸ್ಯ, ಅಲ್ಲದೆ ಜನ ಜೀವನದ ಸರ್ವಸ್ವವನ್ನು ಹೊಂದಿರುವ ಕೇಂದ್ರವಾಗಿ ಕಂಡುಬರುತ್ತದೆ. ಪುರಾಣಗಳು ಆದರ್ಶ ಇತಿಹಾಸಗಳು. ಅದಕ್ಕೆ ಇಂದಿನ ಹಲವು ಸಮುದಾಯಗಳನ್ನು ಅಧ್ಯಯನ ಮಾಡಲು ಆಕರ ಸಾಮಾಗ್ರಿಯಾಗಿವೆ.

ಹೀಗೆ ಪುರಾಣ ಸಾಹಿತ್ಯ ಭಾರತದಲ್ಲಿ ಅಲ್ಲದೆ ಜಗತ್ತಿನಲ್ಲಿಯೂ ಉನ್ನತ ಸ್ಥಾನದಲ್ಲಿರುವುದು. ಎಲಿಯಡ್, ಓಡಿಸ್ಸಿ, ಅರೇಬಿಯನ್ ನೈಟ್ಸ್, ಫಿನೆಲೆಂಡಿನ ಕಿರು ಪ್ರಮಾಣದ 'ಕಾಲೆವಾಲ' ಎಂಬ ರಾಷ್ಟ್ರೀಯ ಕೃತಿಗಳೇ ಇದಕ್ಕೆ ಸಾಕ್ಷಿ. ನೂರಾರೂ ಜನರಿಂದ ಸೃಷ್ಟಿಯಾದ ಈ ಕಲ್ಪನಾಶಕ್ತಿ, ಸೃಜನಶಕ್ತಿ, ಅನುಕರಣಶಕ್ತಿಯು ಅಗಾಧವಾಗಿದೆ. ಕನ್ನಡ ಸಾಹಿತ್ಯದ ಆದಿಯಿಂದಲೂ ಪುರಾಣ ಪರಂಪರೆಯು ಬೆಳೆದು ಬಂದಿದೆ. ಕನ್ನಡ ಕಾವ್ಯ ಚರಿತ್ರೆಯಲ್ಲಿ ಹಲವು ಪುರಾಣಗಳು ಕಾವ್ಯಧರ್ಮ ಮತ್ತು ಧರ್ಮಗಳ ಸಮನ್ವಯವನ್ನು ಸಾಧಿಸಿವೆ. ನಮ್ಮ ಕವಿಗಳ ತಾತ್ವಿಕತೆ, ವೈಚಾರಿಕತೆಯ ಪ್ರಬಲವಾದ ದೃಷ್ಟಿಕೋನಕ್ಕೂ ಅವುಗಳು ನಿದರ್ಶನವಾಗಿವೆ. ೧೦ನೇ ಶತಮಾನದಲ್ಲಿ ಬೆಳೆದ ಜೈನಧರ್ಮದ ಪುರಾಣ ಕೃತಿಗಳು ಸಮಾಜದಲ್ಲಿ ಬದಲಾಗುವ ಧರ್ಮಗಳಿಗೆ ಅನುಗುಣವಾಗಿ ಕಾವ್ಯಗಳು ರಚನೆಯಾಗಿವೆ. ಉದಾ: ಪಂಪನ ಆದಿಪುರಾಣ, ರನ್ನನ ಅಜಿತಪುರಾಣ, ಜನ್ನನ ಯಶೋಧರಚರಿತೆ ಮುಂತಾದವು ಜೈನ ತೀರ್ಥಂಕರ ಜೀವನ ಚರಿತ್ರೆಯನ್ನು ಒಳಗೊಂಡಿವೆ. ೧೨ನೇ ಶತಮಾನದಲ್ಲಿ ಬಸವಪುರಾಣ, ಪ್ರಭುಲಿಂಗಲೀಲೆ, ವೀರಶೈವಕ್ಕೆ ಸಂಬಂಧಿಸಿದಂತೆ ಅದೇ ರೀತಿ ಬೆಳೆದು ಬಂದವು. ನಂತರ ರಾಜಾಶ್ರಯವನ್ನು ಕಳೆದುಕೊಳ್ಳಲು ಆಯಾ ಜನಾಂಗಗಳ ಕೇಂದ್ರೀಕೃತ ಪುರಾಣಗಳು ರಚನೆಯಾಗಿರಬಹುದು. ಆಗ ಬರಹ ಮೂಲಕವೇ ಪಂಡಿತ ಪಾಮರರ ಜ್ಞಾನಕ್ಕೆ ನಿಲುಕುವ ಪುರಾಣಗಳು ಕಡಿಮೆಯಾಗತೊಡಗಿದವು. ಮತ್ತೆ ಮೌಖಿಕ ಪರಂಪರೆಯಲ್ಲಿ ಪುರಾಣ ತನ್ನ ಬೇರನ್ನು ಬಿಟ್ಟು ತಲೆಮಾರಿನಿಂದ ತಲೆಮಾರಿಗೆ ಹರಿಯತೊಡಗಿತು. "ಇಡೀ ಮೌಖಿಕ ಪರಂಪರೆಯು ತನ್ನ ದೇಸೀ ಕಥನಗಳ ಸಂಸ್ಕೃತಿಯನ್ನು ಹಾಡಿನ ಮೂಲಕ ಆಚರಿಸುವುದು. ನೀಲಗಾರರು, ಚೌಡಿಕೆಯವರು, ತಂಬೂರಿಯವರು, ಗೆಣೆಯವರು ಮುಂತಾದ ಭಿನ್ನ ಚಹರೆಯ ಹಾಡುಗಾರರು ಜನಪದ ಕಾವ್ಯಗಳನ್ನು ಸೃಷ್ಟಿ ಮಾಡಿದಂಥವರು"[8] ವಚನ ಚಳುವಳಿಗೆ ವಚನವೇ ಅನುಭವದ ಹಂದರವಾದರೆ, ಮಧ್ಯಕಾಲೀನ ಸಂದರ್ಭದಲ್ಲಿ ಸಮೂಹದ ಜನರು ಪುರಾಣ ಸೃಷ್ಟಿಸಿ ಅದಕ್ಕೆ ಗೇಯತೆಯ ಪರದೆಯನ್ನು ಹೊದಿಸಿದರು. ಆಗ ಪುರಾಣಗಳು ಷಟ್ಪದಿ, ಸಾಂಗತ್ಯ, ಕಂದ ಪ್ರಕಾರಗಳಲ್ಲಿ ರಚನೆಯನ್ನು ಪಡೆದವು. ನಂತರ ಗದ್ಯ ಶೈಲಿಯನ್ನು ಬಳಸಿ ಕಾವ್ಯ ಪ್ರಕಾರವನ್ನು ಸರಳಗೊಳಿಸಿದರು. ಕೆಲವರು ಜನಪದ ಛಂದಸ್ಸಿನಿಂದ ಪುರಾಣವನ್ನು ದೂರವಿರಿಸಿದ್ದಾರೆ. ಆದರೆ ಮೂಲತಃ ಜನಪದರು ಲಯ ನಾದವನ್ನು ಸೃಷ್ಟಿಸಿರುವುದನ್ನು ಗಮನಿಸಿದರೆ ಛಂದಸ್ಸಿನ ಜ್ಞಾನ ತಿಳಿದಿತ್ತು ಎನ್ನುವಷ್ಟರ ಮಟ್ಟಿಗೆ ರಚನೆ ಮಾಡಿದ್ದಾರೆ.

ಈ ರೀತಿಯಾಗಿ ಲಯ ಬೆರೆಸಿದ ಕೀರ್ತಿ ಕುಮಾರವ್ಯಾಸನಿಗೆ ಸಲ್ಲುತ್ತದೆ. ಇಲ್ಲಿ ಕೇಳುವ ಮತ್ತು ಹಾಡುವುದಕ್ಕೆ ಹೆಚ್ಚು ಒತ್ತು ನೀಡಲಾಯಿತು. ಎಲ್ಲಿ ಈ ಎರಡು ಕೌಶಲ್ಯಗಳ ಪ್ರಯೋಗವಿರುತ್ತೋ ಅಲ್ಲಿ ಲಯವು ಬರಲೇಬೇಕು. ಏಕವ್ಯಕ್ತಿ ಹಾಡುತ್ತಿದ್ದ ಕಾವ್ಯವನ್ನು ಹಲವರು ಕೇಳುವಂತಹ ಸೌಭಾಗ್ಯವು ಈ ಹಂತದಲ್ಲಿ ಲಭಿಸಿತು.

ಪುರಾಣಗಳು ಆಲಿಸುವ ಮತ್ತು ಹಾಡುವ ಭಾಷಾ ಕೌಶಲ್ಯಗಳನ್ನು ಅನುಸರಿಸಿ ರಚನೆಯಾದವು. ಕನ್ನಡ ಸಾಹಿತ್ಯ ತನ್ನ ಸೃಜನತೆಯ ಪ್ರತಿಭೆಯಿಂದ ಅನೇಕ ಸವಾಲುಗಳನ್ನು ದಾಟಿಕೊಂಡು ತನ್ನ ತನವನ್ನು ರಕ್ಷಿಸಿಕೊಂಡ ಬಗೆಯಲ್ಲಿ ಪುರಾಣಗಳ ಪಾಲು ಹೆಚ್ಚಾಗಿದೆ. ಪಂಪ, ರನ್ನ, ಜನ್ನ ಮುಂತಾದ ಕವಿಗಳು ಪುರಾಣವನ್ನು ಧರ್ಮದ ನೆಲೆಯಲ್ಲಿ ಬರೆದು ಕೀರ್ತಿ ಮತ್ತು ಆಶ್ರಯ, ಪದವಿ, ಬಿರುದುಗಳನ್ನು ಪಡೆದುಕೊಂಡರು. ರಾಜಸತ್ತೆಯ ಆಶ್ರಯದಲ್ಲಿ ಪ್ರಭುಶಕ್ತಿಯ ಸನಿಹದಲ್ಲಿ ಕವಿಗಳು ಜಾಣ್ಮೆಗೆ ಪುರಾಣವನ್ನು ಅಗತ್ಯವಾಗಿ ಬಳಸಿಕೊಂಡರು.

ಕನ್ನಡಕ್ಕೆ ಜೈನ ಪುರಾಣವನ್ನು ನೀಡಿರುವ ಪಂಪನಾಗಲಿ, ಆ ಮಾರ್ಗದಲ್ಲಿ ನಡೆದ ಪೊನ್ನ, ರನ್ನ, ನಾಗವರ್ಮ, ಶಾಂತಿನಾಥ, ನಾಗಚಂದ್ರ, ಜನ್ನ ಇತ್ಯಾದಿ ಕವಿಗಳು ಪುರಾಣ ಪರಂಪರೆಯನ್ನು ಹೆಚ್ಚು ಸಬಲಗೊಳಿಸಿದರು. ತಮ್ಮ ಪುರಾಣ ಕೃತಿಗಳನ್ನು 'ಉಪಮಾತೀತ' ಎಂದು 'ಪುರಾಣ ಚೂಡಾಮಣಿ' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಹಾಗಾಗಿ ಪಂಪನು ಪ್ರಾಕೃತ, ಸಂಸ್ಕೃತ, ಜೈನ ಪುರಾಣಗಳ ಪ್ರೇರಣೆಯಿಂದ ಕನ್ನಡ ಪುರಾಣ ಬೆಳೆಸಿದ ಮೊದಲಿಗನೆಂಬ ಕೀರ್ತಿ ಪಡೆದಿದ್ದಾನೆ.

ಪುರಾಣಗಳ ವಿಕಾಸಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಪುನಃ ವೇದಗಳ ಕಾಲಕ್ಕೆ ತೆರಳಬೇಕು. ಅಂದರೆ ಅಲ್ಲಿ ಪುರಾಣದ ಬಳಕೆಯು ರೂಢಿಯಲ್ಲಿತ್ತು. ವೇದ-ಉಪನಿಷತ್ತುಗಳ ಕಾಲದಲ್ಲಿ ಜನಜೀವನದೊಂದಿಗೆ ಹುಟ್ಟಿ ಧಾರ್ಮಿಕ ಆಚರಣೆಯ ತೊಟ್ಟಿಲಲ್ಲಿ ಬೆಳೆದ ಕೂಸು ಪುರಾಣವಾಗಿದೆ. ಪುರಾಣಗಳ ಪರಿಚಯವು ಪಿತ್ರಾರ್ಜಿತ ಆಸ್ತಿಯಂತೆ ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಯಾಗುತ್ತಲಿವೆ. ಸಾರವತ್ತಾದ ವಿಷಯ ಸ್ಪಷ್ಟತೆಯು ಜನರಿಗೆ ಮನನ ಮಾಡುವಲ್ಲಿ ಕಥೆಗಳ, ಐತಿಹ್ಯಗಳ ಮತ್ತು ಪವಾಡಗಳು ರೂಪದಲ್ಲಿ ರಚನೆಯಾದವು. ಪುರಾಣದ ಕಾಲವನ್ನು ನಿರ್ದಿಷ್ಟವಾಗಿ ತಿಳಿಯಲು ಆಗುವುದಿಲ್ಲ. ಕೆಲಪೇಳಿಕೆಯ ಪ್ರಕಾರ ಕಾಲಮಾನವನ್ನು ಗುರುತಿಸಬಹುದಾಗಿದೆ. ಅಮರಕೋಶದಲ್ಲಿನ ಉಲ್ಲೇಖದಿಂದ ಸು .ಕ್ರಿ.ಪೂ. ೧ನೇ ಶತಮಾನಕ್ಕಿಂತ ಮುಂಚೆ ಇರಬೇಕೆಂದು ಹೇಳಲಾಗಿದೆ. ಯಾವುದೇ ಒಂದು ಪರಿಕಲ್ಪನೆಯೂ ಕೃತಿಯಲ್ಲಿ ಪ್ರಯೋಗ ಆಗಬೇಕಾದರೆ ಅದು ಪ್ರಚಲಿತದಲ್ಲಿ ಹೆಚ್ಚು ಪರಿಚಯವಿರುತ್ತದೆ. ಅದರ ಮೂಲಕ ಇತಿಹಾಸದ ಕಾಲವನ್ನು ಪ್ರಾಚೀನತೆಯನ್ನು ತಿಳಿಯುವುದು ಸಾಧ್ಯ. ಹಾಗೆಯೇ 'ಪುರಾಣ' ಎನ್ನುವುದನ್ನು ಹಲವು ಕಡೆ ಬಳಕೆ ಮಾಡಲಾಗಿದೆ. ಅದರ ವ್ಯಾಖ್ಯಾನ, ವಿಶ್ಲೇಷಣೆ, ಗುಣದೋಷವನ್ನು ಮೇಲಿಂದ ಮೇಲೆ ಚರ್ಚೆ ಮಾಡಿದ್ದಾರೆ. ಇದರ ಪ್ರಚಾರವು ಜನರ ಮನಸ್ಸಿನಲ್ಲಿ ಆಧ್ಯಾತ್ಮಿಕ ಮತ್ತು ಧಾರ್ಮಿಕ ಅಂಶಗಳನ್ನು ಪ್ರಸಾರ ಮಾಡಲು ಉದ್ಭವಿಸಿದಂತೆ ತೋರುವುದು. ಹದಿನೆಂಟು ಪುರಾಣಗಳ ಉಲ್ಲೇಖವನ್ನು ಭಾರತೀಯ ಸಾಹಿತ್ಯದಲ್ಲಿ ಓದುವುದು ಸೌಭಾಗ್ಯವೇ ಸರಿ. ಸರಳ ಶೈಲಿಯಲ್ಲಿ ಪುರಾಣದ ರಚನೆ ಮಾಡುವುದರ ಮೂಲಕ ಜನರಲ್ಲಿ ಅರಿವಿನ ಜ್ಞಾನ ತಿಳಿಯಪಡಿಸುವುದಾಗಿತ್ತು. ಅದಕ್ಕಾಗಿ ಹದಿನೆಂಟು

ಪುರಾಣಗಳು ಬ್ರಹ್ಮ, ವಿಷ್ಣು, ವರಾಹ, ಸ್ಕಂದ, ಪದ್ಮ, ಶಿವ, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮದೈವರ್ತ, ಲಿಂಗ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳನ್ನು ವ್ಯಾಪೋಕ್ತ ಪುರಾಣಗಳೆಂದು ಪ್ರಸಿದ್ಧಿಯಾಗಿವೆ. ಹೀಗೆ ಪುರಾಣ ಯಾವ ನಂಬಿಕೆಯನ್ನಾದರೂ ಇಟ್ಟುಕೊಂಡು ಕಥೆಯನ್ನು ಮಾರ್ಮಿಕವಾಗಿ ಹೇಳುವ ಕೌಶಲ್ಯವನ್ನು ಹೊಂದಿದೆ. "All Myths were of historical origin and the gods were men who had performed great expolits or confered benefits upon their follows"[೯] ಎಂಬುದು ಇತಿಹಾಸ ಛಾಯೆಯಲ್ಲಿ ಪುರಾಣದ ಉಗಮವನ್ನು ಕಂಡುಕೊಳ್ಳಲು ಎಹ್ಯೂಮರಸನ್ ಯತ್ನಿಸುತ್ತಾರೆ. ಎಫ್.ಇ.ಪರ್‌ಗೆಟರ್ ಎಂಬ ವಿದ್ವಾಂಸರು "It would be quite natural that ofter. The ancient seculare tales and love should have been collected in a purana"[೧೦] ಮಂತ್ರಗಳೆಲ್ಲವೂ ವೇದರೂಪವನ್ನು ಪಡೆದಂತೆ ಕಥಾ ಸಾಹಿತ್ಯವೆಲ್ಲವೂ ಪುರಾಣ ರೂಪವನ್ನು ಪಡೆಯಿತೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮೊದಲು ಪುರಾಣದ ಘಟಕ ಇತಿಹಾಸಾಂಶಗಳಿಂದ ಕೂಡಿದ್ದು, ಕಾಲಾಂತರದಲ್ಲಿ ಐತಿಹ್ಯ ಮತ್ತು ಪವಾಡಗಳಾಗಿ ಜನಮಾನಸದ ಕಲ್ಪನೆಗೆ ಬದುಕಿನ ರೀತಿ–ರಿವಾಜುಗಳಾಗಿ ಜನಾಂಗದ ಚಟುವಟಿಕೆಗಳನ್ನು ಅಳವಡಿಸಿಕೊಂಡಿತ್ತು. ಸೃಷ್ಟಿಯನ್ನು ಕಾಪಾಡಲು ಈ ರೀತಿ ಪುರಾಣಗಳು ಪ್ರಭಾವ ಬೀರಿವೆ. ಇದು ಪುರಾಣದ ಮುಖ್ಯ ಧ್ಯೇಯವಾಗಿತ್ತು ಎನ್ನಿಸುತ್ತದೆ.

ಪುರಾಣ ಕಥೆಗಳು, ಮನುಷ್ಯನ ಸೃಜನ ಶೀಲತೆಯ ಹಾಗೂ ಪ್ರತಿಭೆಯ ಫಲಿತಾಂಶಗಳು ಆಗಿವೆ. ಒಂದೊಂದು ಪುರಾಣ ಸಂಸ್ಕೃತಿಯ ಬೆಳವಣಿಗೆಯ ಘಟ್ಟವನ್ನು ತಮ್ಮೊಳಗೆ ಐಕ್ಯಗೊಳಿಸಿಕೊಂಡಿದೆ ಎಂದು ಇಟಲಿಯ ಸಿಯೋಂ ಬಾಟಿಸ್ಟಾಮಿ ಕೊ ಎಂಬ ಚಿಂತಕರು ಪ್ರತಿಪಾದಿಸಿದ ಇವರು ಪುರಾಣಗಳನ್ನು ಸಾಂಸ್ಕೃತಿಕ ಅಧ್ಯಯನದ ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಿದರು. ಇವರ The New Sign's ಪುಸ್ತಕವು ಸಂಪೂರ್ಣವಾಗಿ ವಿವರಿಸುತ್ತದೆ.

"ಪುರಾಣಗಳು ಧರ್ಮದ ತತ್ತ್ವ ಪ್ರತಿಪಾದಿಸುತ್ತಾ ಮನಃಶಾಸ್ತ್ರೀಯ ಅಧ್ಯಯನ ಮಾಡುತ್ತವೆ. ಒಂದು ಪುರಾಣದ ಬೆಳವಣಿಗೆಯಲ್ಲಿ ಜನಾಂಗದ ಮನಸ್ಸು ಸಹ ಪ್ರಮುಖವಾದುದು. ಈ ಹಿನ್ನೆಲೆಯಲ್ಲಿಯೇ ಮೈಕೇಲ್ ಗ್ರ್ಯಾಂಟ್ ವಿದ್ವಾಂಸರು ಪುರಾಣವನ್ನು Para History ಎಂದು ಕರೆದರು. Para History which record not what hapaned but that what people at different times said or belived had happaned"[೧೧] ಎಂದಿದ್ದಾನೆ. ವಾಸ್ತವವಾಗಿ ನಡೆದುದ್ದನ್ನು ದಾಖಲಿಸುವುದು ಪುರಾಣದಲ್ಲಿ ನಡೆದುದರ ಬಗ್ಗೆ ಬೇರೆ ಬೇರೆ ಕಾಲದಲ್ಲಿ ಜನರು ಏನನ್ನು ಹೇಳಿದರು. ಏನನ್ನು ನಂಬಿದರು ಎಂಬುದು ಮುಖ್ಯವಾಗಿರುತ್ತದೆ. ಇದು ಸತ್ಯಕ್ಕೆ ದೂರವಾಗಿದ್ದರೂ ನಂಬುಲೇಬೇಕಾಗುತ್ತದೆ. ಸೃಷ್ಟಿ ಮತ್ತು ವ್ಯಕ್ತಿಯ ಸಂಬಂಧ ಅರಿಯಲು ಪುರಾಣ ಮೂಲಾಧಾರವಾಗಿದೆ.

ಪುರಾಣಗಳು ಪ್ರಕೃತಿಯ ವಸ್ತುಗಳನ್ನು ಜನರು ನಿತ್ಯ ಜೀವನದಲ್ಲಿ ಹೇಗೆ ಬಳಸಿಕೊಂಡರು ಎಂದು ಹೇಳುತ್ತವೆ. ಆ ಜೀವನವನ್ನೇ ಪುರಾಣಗಳು ದಾಖಲಿಸಿ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗುವಂತೆ ಮಾಡಿವೆ. ಇಲ್ಲಿನ ವಸ್ತು, ದೇವರು, ಧರ್ಮ, ಸೃಷ್ಟಿಗೆ ಸಂಬಂಧಿಸಿದರು ಜನರ ಅನುಭವಗಳು ಕಥೆಯ ರೂಪಗಳಲ್ಲಿ ಅಡಕವಾಗಿವೆ. ಇದನ್ನೇ ಇಂದು ಅನೇಕ ಕ್ಷೇತ್ರಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಅಡಿಯಲ್ಲಿ ಕಾರ್ಯ ಕೈಗೊಂಡು ಪುರಾಣ ಮೂಲಕವೂ ಚರಿತ್ರೆಯನ್ನು ಕಟ್ಟಬಹುದು ಎಂದು ಇವು ಸಾಬೀತು ಪಡಿಸಿವೆ.

ಮೊದಮೊದಲು ಪುರಾಣವೆಂದರೆ ಅಷ್ಟದಶ ವರ್ಣನೆಯೇ ಆಗಿತ್ತು. ಆ ವರ್ಣನೆಯು ಅಂದಿನ ಪಂಡಿತಯುಗದ ಸಾಮರ್ಥ್ಯವನ್ನು ತಿಳಿಸಲು ಬಳಸುತ್ತಿದ್ದರು. ವಿಷಯವನ್ನು ನೇರವಾಗಿ ಸಮಾಜಕ್ಕೆ ತಿಳಿಸದೆ ಕಥೆಯಲ್ಲಿ ಕಥೆ, ಸನ್ನಿವೇಶಗಳಲ್ಲಿ ಸಾಹಸ, ಉಪಕಥೆಯಲ್ಲಿ ನಾಯಕರ ವರ್ಣನೆ, ಹೀಗೆ ಅನೇಕ ಕುತೂಹಲ, ವರ್ಣಮಯ ವಿಶ್ಲೇಷಣೆಯ ಮಾದರಿ. ಪುರಾಣವೇ ಅಮರಕೋಶದಲ್ಲಿ ಪುರಾಣದ ಲಕ್ಷಣ ಬಗ್ಗೆ ಈ ರೀತಿ ಹೇಳಲಾಗಿದೆ.

"ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ
ವಂಶಾನುಚರಿತಾನುಚೈವ ಪುರಾಣಂ ಪಂಚಲಕ್ಷಣಂ"[೮]

ವಿಶ್ವದ ನೈಸರ್ಗಿಕ ಕಾರಣದಿಂದಾಗುವ ಸೃಷ್ಟಿಯನ್ನು ಹೇಳುವ ಸ್ವರ್ಗ, ಜಗತ್ತಿನ ಮರುಸೃಷ್ಟಿ, ದೇವತೆ, ರಾಕ್ಷಸ, ಮುನಿ ಇವರುಗಳ ವಂಶಾವಳಿಯನ್ನು ನವೀಕರಿಸುವ ಅಂಶ, ವಿಶ್ವದ ಕಾಲಚಕ್ರಗಳನ್ನು ವಿವರಿಸುವ, ರಾಜರುಗಳ ಚರಿತ್ರೆಯನ್ನು ಹೇಳುವುದು ಪುರಾಣದಲ್ಲಿ ಕಡ್ಡಾಯವಾಗಿದೆ. ಜೊತೆಗೆ ಕರ್ಮ, ಸ್ಥಿತಿ, ಪ್ರಳಯ, ವರ್ಣನೆ, ಮೋಕ್ಷ, ಜೀವಿಗಳ ರಕ್ಷಣೆ, ಕರ್ತವ್ಯಗಳ ಮಂಡನೆಗಳನ್ನು ನಿರೂಪಿಸುತ್ತವೆಂದು ಭಾಗವತ ಪುರಾಣದಲ್ಲಿ ಹೇಳಲಾಗುತ್ತದೆ.

ಪುರಾಣದ ಬಗ್ಗೆ ಮತ್ಸ್ಯ ಪುರಾಣದಲ್ಲಿ ಹೀಗೆ ಹೇಳಲಾಗಿದೆ.

"ಅಷ್ಟಾದಶ ಪುರಾಣಾನಿ ಕರ್ತ್ವಾ ಸತ್ಯವರ್ತೀಸುತಃ ।
ಭಾರತಾಖ್ಯಾನ ಮೂಲಂ ಚಕ್ರೇತದುಪ ಬ್ರಹ್ಮಣಂ ॥"[೯]

ಜಗತ್ತಿನಲ್ಲಿ ಪುರಾಣ ಲಕ್ಷಣಗಳನ್ನು ವೈಭವಯುತವಾಗಿ ಹೇಳುವ, ವರ್ಣಿಸುವ, ಚಿತ್ರಿಸುವ, ಮನೋಧರ್ಮ ಅಷ್ಟದಶ ವರ್ಣನೆಯ ಪ್ರಭಾವವಾಗಿದೆ. ಪುರಾಣ ಪರಂಪರೆಯು ಚಲನಾತ್ಮಕ ಗುಣ ಮತ್ತು ಹಿಗ್ಗಿಸುವ ಗುಣವನ್ನು ಹೊಂದಿದೆ. ಪ್ರಪಂಚದ ಅನೇಕ ವಿಷಯಗಳನ್ನೊಳಗೊಂಡಂತೆ ಪುರಾಣ ಸೃಷ್ಟಿಯು ಅಷ್ಟೇ ವಿಶಾಲವಾದ ವ್ಯಾಪ್ತಿ ಹೊಂದಿತ್ತು. ಚಲಿಸುವ ಕೋಶಗಳಂತೆ ಯುಗ ಯುಗಕ್ಕೂ ವೈವಿಧ್ಯತೆಯನ್ನು ಪಡೆಯುವುದು ಪುರಾಣದ ಒಂದು ಲಕ್ಷಣ. ಅದರಲ್ಲಿ ವಿಕಾಸದಿಂದ

ದಾರ್ಶನಿಕರ ಚರಿತ್ರೆ, ವಿಚಾರಧಾರೆಯನ್ನು ಕಲ್ಪನೆಗಳ ಮೂಲಕ ಅಭಿವ್ಯಕ್ತ ಪಡಿಸಲಿಕ್ಕೆ ಪ್ರಕೃತಿಯ ಸಮೀಪಕ್ಕೆ ಹೋಯಿತು. ಈ ಗ್ರಂಥಗಳು ಜನರ ಮನಸ್ಸಿನಲ್ಲಿ ಪರಸ್ಪರ ಅರಿವನ್ನು ಸಾಮಾಜಿಕ ಬಂಧುತ್ವವನ್ನು ಉಂಟುಮಾಡುವಲ್ಲಿ ತುಂಬಾ ಮಹತ್ವ ಪಡೆದಿವೆ. ಅವತಾರ, ಭವವಾಳಿಗಳ ಸಮೇತ ಧರ್ಮ ತತ್ತ್ವದ ಪ್ರಸಾರವನ್ನು ಆಯಾ ದೇಶ ಭಾಷೆಗಳಲ್ಲಿ ಪ್ರಸಾರ ಮಾಡಲಾಯಿತು.

ನಮಗೆ ಗೊತ್ತಿರುವ ಹದಿನೆಂಟು ಕೃತಿಗಳನ್ನು ಮಾತ್ರ ಅಲ್ಲದೆ ಅನೇಕ ಬಗೆಯ ತಂತ್ರಗಳನ್ನು ತಿಳಿಸುವುದಕ್ಕೆ ಪುರಾಣವೆಂದು ಕರೆಯುತ್ತಾರೆ. ಪಂಪನಿಂದ ರಚಿತವಾದ ಆದಿಪುರಾಣವು ಮುಂದಿನ ಕವಿಗಳ ಬರವಣಿಗೆಗೆ ಪ್ರೇರಕ ಶಕ್ತಿ ಒದಗಿಸಿತು. ಇದು ರಾಜನ ಆಶ್ರಯದಲ್ಲಿ ಬೆಳೆದ ಹೂವೆಂದು ಹೇಳಿದರೆ ತಪ್ಪಾಗಲಾರದು. ಪ್ರಾರಂಭದ ಸಾಹಿತ್ಯ ಧರ್ಮ ಸಹಿಷ್ಣುತೆಯ ಪುರಾಣವನ್ನು ರಚನೆ ಮಾಡಿತು. ಇದನ್ನೆ ಇಂದು ಧರ್ಮ, ವ್ಯಕ್ತಿ, ವರ್ಗ, ಜನಾಂಗಕ್ಕೆ, ಅನುಸಾರವಾಗಿ ಅಧ್ಯಯನವೂ ಮಾಡಲು ಕೈಗೊಂಡಿರುವುದು ಸತ್ಯ. ಮೇಲಿನ ವರ್ಗೀಕರಣಗಳು ವಿಭಿನ್ನವಾಗಿದ್ದರೂ ಸಾಹಿತ್ಯದ ಉದ್ದೇಶವೂ ಸಮಾನವಾದುದು. ಇವು ಸಮಾಜಕ್ಕೆ ಕಲ್ಯಾಣಕಾರಕವಾಗಿರುವಂತಿರಬೇಕು. ಪ್ರತಿಯೊಂದು ಸಮುದಾಯದ ಜನರು ತಮ್ಮನ್ನು ಸುತ್ತುವರಿದ ನಿಸರ್ಗದೊಡನೆ ವಿಶಿಷ್ಟ ಸ್ನೇಹ ಸಂಬಂಧವನ್ನು ಬೆಳಸಿಕೊಂಡಿರುತ್ತದೆ. ಆ ಮೂಲಕ ಅದರ ರಕ್ಷಣೆಗಾಗಿ ಧರ್ಮದೇವರು ಎಂದು ರೂಪಿಸಿ ವಿಕೋಪಗಳನ್ನು ತಡೆಗಟ್ಟುವ ತಂತ್ರವನ್ನು ರಚಿಸಿಕೊಂಡಿರುತ್ತಾರೆ. ಆಗಾಗಿ ದೇವರು ಧರ್ಮವೂ ಸಹ ಸಮಾಜದ ಅವಿಭಾಜ್ಯ ಅಂಗವಾಯಿತು. ಸಮಾಜವನ್ನು ತನ್ನ ಅಂಕೆಯಲ್ಲಿರಿಸಿಕೊಳ್ಳಲು ಕಾನೂನನ್ನು ರಚಿಸಿಕೊಂಡಂತೆ, ಸಮಾಜದಲ್ಲಿ ಸಮೂಹ ಜೀವನ ಸುಗಮವಾಗಿ ನಡೆಯಲು ಕಟ್ಟುಪಾಡುಗಳನ್ನು ಮನುಷ್ಯ ತನ್ನ ಸುತ್ತ ಎಣೆದುಕೊಳ್ಳುವರು. ಇದು ಅವರಲ್ಲಿರುವ ಸೂಕ್ಷ್ಮ ಜ್ಞಾನವಾಗಿದೆ. ಪುರಾಣಗಳು ಕಾನೂನುಗಳಂತೆ ರಕ್ಷಣೆ ಮಾಡುವ, ಶಿಕ್ಷೆಕೊಡುವ, ಕ್ಷಮಿಸುವ ತಂತ್ರಗಾರಿಕೆ ರೂಪಿಸಿಕೊಂಡಿದ್ದವು. ಅದರಕ್ಕಾಗಿಯೇ ಪ್ರತಿಯೊಂದು ಜನಾಂಗವೂ ಸಮುದಾಯದ ಧಾರ್ಮಿಕ, ಸಾಮಾಜಿಕ, ಪೌರಾಣಿಕ, ಚಾರಿತ್ರಿಕ ಸಂಗತಿಗಳನ್ನು ಒಗ್ಗೂಡಿಸಿ ಒಂದು ವೇದಿಕೆಯನ್ನು ನಿರ್ಮಾಣ ಮಾಡಿತು. ಅದರ ಮುಖಾಂತರ ಸಮುದಾಯದ ಒಳಿತನ್ನು ಬಯಸಿತು.

ಕನ್ನಡದಲ್ಲಿ ಪುರಾಣ ಲಕ್ಷಣ ಹೇಳಿದ ಮೊದಲ ಕವಿಯೆಂದರೆ ಪಂಪ. ಆದಿಪುರಾಣದಲ್ಲಿ

> "ಆ ಪುರಾಣಕ್ಕಂ ಲೋಕಾಕಾರಕಥನಮುಂ, ದೇಶನಿವೇಶೋಪದೇಶಮುಂ,
> ನಗರ ಸಂಪತ್ವರಿಣಾವರ್ಣನಮುಂ, ರಾಜ್ಯ ರಾಮನೀಯಕಾಖ್ಯಾನಮುಂ,
> ತೀರ್ಥ ಮಾಹಿಮಸಮರ್ಥನೆಮುಂ, ಚತುರ್ಗತಿಸ್ವರೂಪ ನಿರೂಪಣಮುಂ,
> ತಪೋಗಾದ ವಿಧಾನ ವ್ಯಾವರ್ಣನಮುಂ, ತತ್ಫಲ ಪ್ರಾಪ್ತಿ
> ಪ್ರಕಟನಮು ಮೆಂದಿರಿತವಯವಂಗಳೆಂಟಕ್ಕುಂ"[೧೪]

ಕನ್ನಡ ಮಟ್ಟಿಗೆ ಪುರಾಣಕ್ಕೆ ಮೊದಲು ಲಕ್ಷಣ ನೀಡಿ ಅದರ ಸ್ವರೂಪ ನಿರ್ಧರಿಸಿದವನು ಪಂಪ. ಸಹಜವಾಗಿಯೇ ಮುಂದಿನ ಜೈನ ಕವಿಗಳನ್ನು ಗಾಢವಾಗಿ ಪ್ರಭಾವಿಸಿದನು. "ಸುಕವಿ ಪ್ರಮೋದವಾಗಿರುವ ತನ್ನ ಆದಿಪುರಾಣದಲ್ಲಿ ಕಾವ್ಯಧರ್ಮ ಮತ್ತು ಧರ್ಮವನ್ನು ಅರಿಯಲು ಹೇಳುವನು. ನಂತರ ಬಂದ ವಚನಕಾರರನ್ನು ಚರಿತ್ರೆಯಡಿಯಲ್ಲಿ ಪುರಾಣವಾಗಿಸುವ ಹಂತಕ್ಕೆ ಪುರಾಣ ಪ್ರಭಾವ ಬೀರುತ್ತದೆ. ಚರಿತೆಯ ಸಾಮಾನ್ಯ ವ್ಯಕ್ತಿಗಳನ್ನು ಸಾಂಸ್ಕೃತಿಕ ವೀರರನ್ನಾಗಿಸುವ ತಂತ್ರಗಾರಿಕೆಯನ್ನು ಪಂಪನ್ನೇ ಕಲಿಸಿದನೆಂದರೆ ತಪ್ಪಾಗಲಾರದು.

**೩. ಪುರಾಣ ಪ್ರಕಾರಗಳು**

ಪುರಾಣಗಳನ್ನು ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ಜೈನ, ವೀರಶೈವ ಹಾಗೂ ವೈದಿಕ ಎಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳ ಸಂಕ್ಷಿಪ್ತ ಪರಿಚಯ ಹೀಗಿದೆ.

**i. ಜೈನ ಪುರಾಣಗಳು**

ಜೈನ ಪುರಾಣಗಳು ಜೈನಧರ್ಮದ ಮಹಾಪುರುಷರ ಚರಿತ್ರೆಯನ್ನೇ ವಸ್ತುವಾಗಿಸಿಕೊಂಡಿವೆ. ೨೪ ತೀರ್ಥಂಕರರ ಜೀವನ ಚರಿತ್ರೆಯನ್ನು ಭವಾವಳಿಗಳಲ್ಲಿ ಹೇಳುವುದೇ ಈ ಪುರಾಣಗಳ ಲಕ್ಷಣ. ಜನಸಾಮಾನ್ಯರಲ್ಲಿ ಧರ್ಮಶ್ರದ್ಧೆ, ನೀತಿ, ನಿಷ್ಠೆ ಬೇರೂರುವಂತೆ ಮಾಡಿ ಜೀವನ ನಶ್ವರವೆಂದು ಸಾರಿದವು. ಅದಕ್ಕೆ ಮೋಕ್ಷವೇ ಅಂತಿಮ ಎನ್ನುವ ತತ್ತ್ವ ಸಂದೇಶವನ್ನು ಕೊಡಲಾಯಿತು. ಮೋಕ್ಷವನ್ನು ಪಡೆಯಲು ಸಾಧನೆ ಮುಖ್ಯ. ಅದು ಕಠಿಣ ವ್ರತಗಳಿಂದ ಬರುವಂತಹದ್ದು ಎಂದು ಬೋಧಿಸುವ ಕೇಂದ್ರವಾಗಿ ಕಾರ್ಯ ನಿರ್ವಹಿಸಿದವು. ಆಸೆಯನ್ನು ತೊರೆಯಬೇಕು. ಐಹಿಕ ಭೋಗಕ್ಕೆ ಆಸೆಯಿರಬೇಕೆ ಹೊರತು, ಮೋಕ್ಷ ಸಾಧನೆಗೆ ಅಲ್ಲ. ಮತ್ತೆ ಮೋಕ್ಷಕ್ಕೆ ಪುರಾಣ ಶ್ರವಣವೇ ಅಂತಿಮ ಎಂದು ಹೇಳಲಾಗಿದೆ. ಪಂಚಪರಮೇಷ್ಠಿಗಳ ನಾಮೋಚ್ಚಾರಣೆಯಿಂದಲೇ ಮನುಷ್ಯನು ಪವಿತ್ರನಾಗುವನು. ಅವರ ಪುಣ್ಯಕಥೆಯನ್ನು ಪುನಃ ಪುನಃ ಕೇಳಿ ತಲ್ಲಿನರಾಗಿ ಪಾಪಕರ್ಮಗಳು ಈ ಜನ್ಮದಲ್ಲಿಯೇ ಮುಗಿಯುತ್ತವೆ ಎಂದು ನಂಬಿದ್ದರು. ತ್ರಿಷಷ್ಟಿ ಶಲಾಕ ಪುರುಷರ ಸಾಧನೆಯನ್ನು ತಿಳಿಸಿಕೊಡುವುದೇ ಮುಖ್ಯ ಉದ್ದೇಶವಾಗಿತ್ತು. ಜೈನ ಪುರಾಣಗಳಲ್ಲಿ ಸೃಷ್ಟಿಯ ರಚನೆಯ ಬಗ್ಗೆ ಹೆಚ್ಚಾಗಿ ಹೇಳಿರುವುದಿಲ್ಲ. ನೇರವಾಗಿ ಜನ್ಮದ ಬಗ್ಗೆ. ಆ ಜನ್ಮವೂ ಹಿಂದಿನ ಕರ್ಮ ಕಳೆಯಲಿಕ್ಕೆ ಮತ್ತೊಂದು ಜನ್ಮವಾಗಿ ತಾಳುವುದು. ಜನನ, ಪ್ರೀತಿ-ಪ್ರೇಮ, ಭೋಗ-ವಿರಹದ ನಂತರ ಭೋಗದಲ್ಲಿ ವೈರಾಗ್ಯ ಹೊಂದುವುದು. ವೈರಾಗ್ಯವೇ ಮೋಕ್ಷಕ್ಕೆ ದಾರಿಮಾಡಿಕೊಡುತ್ತದೆಂದು ಜೈನ ಪುರಾಣಗಳು ಪ್ರತಿಪಾದಿಸುತ್ತವೆ. ಈ ಪುರಾಣಗಳಲ್ಲಿ ವ್ಯಕ್ತಿಯ ಜೀವನ ವೈಭವಯುಕ್ತವಾಗಿರುತ್ತದೆ. ಇದು ರಾಜ ಮಹಾರಾಜರಿಗೆ ಮಾತ್ರ ವ್ರತಗಳಿಂದ ನಿಷ್ಠೆ ಲಭಿಸಲು ಸಾಧ್ಯವೆಂದು ಪರೋಕ್ಷವಾಗಿ ವಿವರಿಸುತ್ತದೆ. ಅದಕ್ಕೆ ಜೈನಪುರಾಣಗಳು

ಯುಗಕ್ಕೆ ಮಾತ್ರ ಮೌಲ್ಯ ಮತ್ತು ಪ್ರಸಾರವನ್ನು ಪಡೆದವು. ಯೋಗಿಯು ಯೋಗಿಯಾಗಬೇಕು ಎಂಬ ಸಾರತ್ವವನ್ನು ತಿಳಿಸುತ್ತದೆ. ಹೆಚ್ಚಾಗಿ ಈ ಧರ್ಮವು ಪುರುಷ ಕೇಂದ್ರೀತವಾಗಿತ್ತು. ಸಮಾಜದ ಜನಸಾಮಾನ್ಯರು, ಹೆಂಗಸರು ಇದರ ಅನುಯಾಯಿಗಳಾಗಲೂ ಅನುವು ಮಾಡಿಕೊಟ್ಟಿರಲಿಲ್ಲ. ಜೈನ ಪುರಾಣಗಳು ಸೌಂದರ್ಯ, ಪ್ರೀತಿಗೆ ಮಹತ್ವ ಕೊಟ್ಟಷ್ಟು ಕೆಳವರ್ಗದ ಜನರ ಜೀವನ ಧ್ವನಿಗೆ ಮಹತ್ವ ಕೊಡಲಿಲ್ಲ. ಆ ಕಾರಣಕ್ಕೆ ಜೈನ ಪುರಾಣಗಳು ಒಂದು ಕಾಲದಲ್ಲಿ ಉತ್ತಂಗ ಶಿಖರಕ್ಕೇರಿ ದೀಢಿರನೆ ಕಳಚಿ ಬಿದ್ದವು. ಆಚರಣೆಗಳು ಕ್ಲಿಷ್ಟಕರವಾಗಿದ್ದರಿಂದ ಆ ಧರ್ಮದ ಸಂದೇಶಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳು ಕೆಲವರಿಗೆ ಮಾತ್ರ ಲಭಿಸುವ ಮತ್ತು ಸಾಧಿಸುವ ವಸ್ತುವಾಗಿದ್ದವು.

"ಶ್ರೀಮತೆ ಸಕಲಜ್ಞಾನ ಸಾಮ್ರಾಜ್ಯ ಪದಮಿಾಯುಷೇ ।

ಧರ್ಮ ಚಕ್ರಭೃತೇಭರ್ತ್ರೇ ನಮಃ ಸಂಸಾರಭೀಮುಷೇ । (ಮಹಾಪುರಾಣ)

ಧರ್ಮಧರರಾದ ತೀರ್ಥಂಕರರ, ಚಕ್ರಧರರಾದ ಚಕ್ರವರ್ತಿಗಳ, ಅವರವರ ಕಾಲಗಳಲ್ಲಿದ್ದ ನಾರಾಯಣ, ವಾಸುದೇವ, ಪ್ರತಿವಾಸುದೇವರುಗಳ ಚರಿತವೇ ಜೈನಪುರಾಣ. ಸಧ್ಯಃ ಕಾಲದ ಪುರಾಣಗಳಲ್ಲಿ ಕೀರ್ತಿತರಾಗಿರುವ ತೀರ್ಥಂಕರ ಸಂಖ್ಯೆ-೨೪; ಚಕ್ರವರ್ತಿಗಳದು-೧೨; ಬಲದೇವ, ವಾಸುದೇವ ಪ್ರತಿವಾಸುದೇವರದು-೯; ಈ ಅರವತ್ಮೂವರು ಜೈನರ ಮಹಾಪುರುಷರು 'ಶಲಾಕ ಪುರುಷರು. ಇವರೆಲ್ಲರ ಚರಿತೆಯನ್ನು ಒಳಗೊಂಡದ್ದೇ ಮಹಾಪುರಾಣ. ಪೂರ್ವಭಾಗವನ್ನು ಜಿನಸೇನಾಚಾರ್ಯರು ಉತ್ತರಭಾಗವನ್ನು ಗುಣಭದ್ರಚಾರ್ಯರೂ ರಚಿಸಿದರು. ನಮ್ಮ ಕನ್ನಡ ಜೈನ ಪುರಾಣಗಳಿಗೆ ಇದೇ ಬಹುಪಾಲು ಆಧಾರ"[೯] ಜೈನ ಪುರಾಣಗಳಲ್ಲಿ ಚಿತ್ರಿತವಾಗಿರುವ ಪ್ರತಿಯೊಂದು ಪಾತ್ರಗಳಿಗೂ ಅದರದೇ ಆದ ಮಹತ್ವ ಮತ್ತು ವಿಶಿಷ್ಟ ಗುಣಗಳಿಂದಲೇ ಪ್ರಮುಖವಾಗಿವೆ. ಕಾರಣ ತೀರ್ಥಂಕರರ ಧರ್ಮೋಪದೇಶಕ್ಕೆ ಈ ಪಾತ್ರಗಳೇ ಮುಖ್ಯ ಸ್ತಂಭಗಳು. ಎಷ್ಟೇ ಪಾತ್ರಗಳು ವಿವಿಧ ವಸ್ತುವನ್ನು ಆಧರಿಸಿಕೊಂಡು ನಿರೂಪಣೆಯಾದರೂ ಉದ್ದೇಶ ಮಾತ್ರ ಧರ್ಮ ಸಂದೇಶವಾಗಿತ್ತು. ಜೊತೆಗೆ ತಮ್ಮ ಧರ್ಮ ಪ್ರಬಲಗೊಳಿಸಲು ಜನರನ್ನು ತಮ್ಮ ಕಡೆ ಸೆಳೆಯುವ ತಂತ್ರಗಾರಿಕೆಯನ್ನು ಜೈನ ಪುರಾಣಗಳು ಅನುಸರಿಸುತ್ತವೆ ಎನ್ನುವುದು ಸತ್ಯ

**ii. ವೀರಶೈವ ಪುರಾಣಗಳು**

ವೀರಶೈವ ಪುರಾಣಗಳು ಹನ್ನೆರಡನೆಯ ಶತಮಾನದಿಂದ ರಚನೆಗೊಂಡು ಇವತ್ತಿನವರೆಗೂ ಅವ್ಯಾಹತವಾಗಿ ಬೆಳೆದು ಬಂದಿರುವುದನ್ನು ಅವಲೋಕಿಸಿದಾಗ ಅವುಗಳ ಸರಳತೆ, ಮಹತ್ವ ಪರಿಚಯವಾಗುತ್ತದೆ. ಇವು ಜನಪ್ರಿಯತೆ ಹೊಂದಲು ಮೊಟ್ಟಮೊದಲು ಕಾರಣವೆಂದರೆ ವಚನಕಾರರ ಜೀವನಾನುಭವದ ಸರಳ ನುಡಿಯಿಂದ ರಚನೆಯಾಗಿರುವುದರಿಂದ ಜನ ಮಾನಸದಲ್ಲಿ ಅಚ್ಚಾಗಿದೆ.

ವಚನಗಳು ಕಥೆಯ ಉಡುಗೆ ತೊಟ್ಟು ಬಂದಾಗ ಸಾಮಾನ್ಯವಾಗಿ ಜನರು ಆಧರದಿಂದ ಸ್ವಾಗತಿಸಿದರು. ಲಯ-ತಾಳಕ್ಕೆ ಅನುಗುಣವಾಗಿ ವಚನಕಾರರ ಚರಿತ್ರೆಯು ಮೂಡಿ ಬಂದುದಕ್ಕೆ ಮತ್ತಷ್ಟು ಪ್ರಿಯವಾದವು. ಹಾಗೂ ವೀರಶೈವ ಕವಿಗಳು ಪುರಾಣಕ್ಕೆ ವಸ್ತುವನ್ನಾಗಿಸಿಕೊಳ್ಳುವಲ್ಲಿ ಹೊಸದಾರಿಯನ್ನು ಕಂಡುಕೊಂಡರು. ಷಟ್ಪದಿ, ಸಾಂಗತ್ಯ, ರಗಳೆ ಕಥೆಯನ್ನು ಹೇಳಿದರೆ ಜನರು ಬೇಗ ಗ್ರಹಿಸುತ್ತಾರೆಂದು ಅದೇ ಮಾದರಿ ಅನುಸರಿಸಿದರು. ಕರ್ಣೋಪಕರ್ಣವಾಗಿ ಬಂದ ಆಧಾರಗಳೇ ಪುರಾಣಗಳ ನಿರ್ಮಾಣಕ್ಕೆ ಪ್ರೇರಣೆ ಎನ್ನಲಾಗಿದೆ.

ಇವುಗಳಲ್ಲಿ ಪವಾಡಗಳು ನಂಬುಗೆಯ ತಳಹದಿಯ ತಾತ್ವಿಕ ಚಿಂತನೆಯಾಗಿವೆ. ಮಾಟ-ಮಂತ್ರಕ್ಕಿಂತ ಈ ಶರಣರ ಪವಾಡಗಳು ಜನರ ಮನಸ್ಸನ್ನು ಆಧ್ಯಾತ್ಮಿಕತೆಯ ಕಡೆಗೆ ಕರೆದುಕೊಂಡು ಹೋಗುವಲ್ಲಿ ಸಹಕಾರಿಯಾದವು. ಈ ಕಾರಣದಿಂದ ಪುರಾಣಗಳನ್ನು ಸತ್ಯಕ್ಕೆ ದೂರವೆಂದರೂ, ವೈಜ್ಞಾನಿಕ ಕೃತಿಗಳಿಗಿಂತ ಇವುಗಳನ್ನು ಇಂದಿಗೂ ನಂಬುತ್ತಾರೆ. ಇದೇ ಪುರಾಣಗಳು ಹೊಂದಿರುವ ಮಹತ್ವ, ಐತಿಹಾಸಿಕ, ಧಾರ್ಮಿಕ ವ್ಯಕ್ತಿಗಳ ಚರಿತ್ರೆಯನ್ನು ನಿರೂಪಿಸುವಲ್ಲಿ ಪ್ರಮುಖ ಸ್ಥಾನವಹಿಸುತ್ತವೆ. ವೀರಶೈವ ಪುರಾಣಗಳು ಒಬ್ಬ ಶರಣನ ಚರಿತ್ರೆಯನ್ನು ಕೈಲಾಸದಿಂದ ಪ್ರಾರಂಭಿಸತೊಡಗಿದವು. ವೀರಶೈವ ಪುರಾಣಗಳು ಜೈನ ಪುರಾಣಗಳಂತೆ ಭವಾವಳಿಗೆ ಮಹತ್ವ ಕೊಡದೆ ವಾಸ್ತವ ಜೀವನಕ್ಕೆ ಆಧ್ಯತೆ ಕೊಟ್ಟಿತ್ತು. ಈ ಮೂಲಕವೇ ಜನರ ಸರಳ ಜೀವನವನ್ನು ಮೌಲ್ಯೀಕರಿಸುವ ಬೋಧನೆಯನ್ನು ಪ್ರಸರಣ ಮಾಡಿತು. ಹೀಗೆ ವೀರಶೈವದ ಪ್ರತಿಯೊಂದು ಪುರಾಣಗಳು ಶಿವೋಪಾಸಕವನ್ನು ಪ್ರತಿಬಿಂಬಿಸುವ ಕನ್ನಡಿಯಾಗಿವೆ.

### iii. ವೈದಿಕ ಪುರಾಣಗಳು

ಜೈನ ಪುರಾಣಗಳು ಜನರ ಮನಸ್ಸಿನಿಂದ ದೂರವಾಗುತ್ತಿರುವಾಗ ವೈದಿಕ ಪುರಾಣಗಳು ರಚನೆಯಾದವು. ಒಟ್ಟು ವೈದಿಕ ಪುರಾಣಗಳು ಹದಿನೆಂಟು ಎಂದು ಹೇಳಲಾಗಿದೆ. ಜೊತೆಗೆ ಉಪಪುರಾಣಗಳ ರಚನೆಯುಂಟು. ನಾರದೀಯ ಪುರಾಣ, ಶಿವಪುರಾಣ, ದೂರ್ವಾಸಪುರಾಣ, ಕಪಿಲಪುರಾಣ, ಮನುಪುರಾಣ, ಉಶನಪುರಾಣ, ವರುಣಪುರಾಣ, ಕಾಳಿಕಾಪುರಾಣ, ಸಾಂಬಪುರಾಣ, ನಂದಿಪುರಾಣ, ಸೌರಪುರಾಣ, ಪರಾಶರರಿಂದ ಉಕ್ತವಾದ ಆದಿತ್ಯಪುರಾಣ, ಮಾಹೇಶ್ವರ ಪುರಾಣ, ಭಾಗವತ ಪುರಾಣ, ವಸಿಷ್ಠ ಪುರಾಣ ಈ ರೀತಿ ಹದಿನೈದು ಉಪ ಪುರಾಣಗಳನ್ನು ಒಳಗೊಂಡಿವೆ.

"ವೈದಿಕ ಪುರಾಣಗಳಲ್ಲಿ ಐದು ಲಕ್ಷಣಗಳನ್ನು ಹೇಳಲಾಗಿದೆ. ಸ್ವರ್ಗ, ವಿಸರ್ಗ, ವೃತ್ತಿರಕ್ಷಾ, ಅಂತರ, ಅಂಶ, ವಂಶಾನುಚರಿತ, ಸಂಸ್ಥಾ, ಹೇತು ಮತ್ತು ಅಪುಶ್ರಾನು ಎಂದು ಹೆಸರಿಸುತ್ತದೆ. ಇನ್ನೊಂದಡೆಯಲ್ಲಿ ಸ್ವರ್ಗ, ಪ್ರತಿಸರ್ಗ, ಸ್ಥಾನ, ಪೋಷಣ, ಊತಿ, ಮನ್ವಂತರ, ಈಶಾನು ಕಥನ,

ವಿರೋಧ, ಮುಕ್ತಿ ಮತ್ತು ಆಶ್ರಯ ಎಂದು ದಶಲಕ್ಷಣಗಳನ್ನು ಹೇಳಲಾಗಿದೆ."[೯] ಈ ಪುರಾಣಗಳು ರಾಜಕೀಯ ಕ್ಷೇತ್ರದಿಂದ ಮನುಷ್ಯನ ಜೀವನವನ್ನು ಕಟ್ಟುವ ಕೆಲಸ ಮಾಡಿವೆ. ಹದಿನೆಂಟು ಪುರಾಣಗಳನ್ನು ಹೊಂದಿರುವ ಗ್ರಂಥ ಮಹಾಪುರಾಣವಾಗಿದೆ. ಇದರಲ್ಲಿ ಒಂದೊಂದು ಯುಗದ ಚರಿತ್ರೆಯನ್ನು ಒಬ್ಬ ವ್ಯಕ್ತಿಯ ಸಾಮರ್ಥ್ಯದಿಂದ ತಿಳಿಸುತ್ತವೆ. ಇವುಗಳು ಅಲ್ಲದೆ ವೈದಿಕ ಪುರಾಣಗಳು ಕಥೆಯ ಸಂದರ್ಭಕ್ಕೆ ಸರಿಯಾಗಿ ಹೊಸ ಲಕ್ಷಣಗಳನ್ನು ಉಪಯೋಗಿಸಿಕೊಂಡು ಸೃಷ್ಟಿ ರಚನೆಯನ್ನು ಹೇಳುತ್ತವೆ. ತಾಳ-ಲಯಗಳಿಂದ ಸೂಚಿಸುವುದು ಇದರ ಪ್ರಮುಖ ಆಶಯವೂ ಹೌದು. ವೈದಿಕ ಪುರಾಣಕ್ಕೆ ಮೊದಲ ವ್ಯಕ್ತಿ ವಿಷ್ಣು. ಹಾಗಾಗಿ ಅವನ ಅವತಾರಗಳೇ ಹದಿನೆಂಟು ಪುರಾಣಗಳಾಗಿ ಪರಿಚಯವಾಗುತ್ತವೆ.

**iv. ಹಾಲುಮತ ಪುರಾಣಗಳು**

ವೈದಿಕ, ಜೈನ ಮತ್ತು ವೀರಶೈವ ಪುರಾಣಗಳಂತೆ ಹಾಲುಮತ ಪುರಾಣಗಳು ಪವಾಡ ಕಥೆಯನ್ನು ಅವಶ್ಯವಿದ್ದಲ್ಲಿ ಬಳಸಿಕೊಂಡು ರಚನೆಯಾಗಿವೆ. ಜನಾಂಗದ ಸಂಸ್ಕೃತಿಯನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಪುರಾಣಗಳು ಲೀಲೆ, ಚರಿತ್ರೆ, ಪವಾಡ, ಮಹಿಮೆ ಎಂಬ ತಂತ್ರಗಾರಿಕೆಯನ್ನು ಲಕ್ಷಣವಾಗಿಸಿಕೊಂಡಿವೆ. "ವಾಸ್ತವವಾಗಿ ಪುರಾಣಗಳ ಮೂಲ ನೆಲೆ ಜನಪದ ಜಗತ್ತು. ಆದ್ದರಿಂದ ಜನಪದರು ಬೇರೆ ಬೇರೆ ಸ್ವರೂಪದಲ್ಲಿ ಕಥೆಯನ್ನು ಹೇಳತೊಡಗಿದರು. ಜನಪದ ಕಥೆಗಳೇ ಪುರಾಣಗಳಿಗೆ ಪ್ರೇರಕ"[೧೦] ಎಂಬುದು ಥಾಮ್ಸನ್ನನ ಅಭಿಪ್ರಾಯ.

ಜನಪದ ಪುರಾಣಗಳ ಬಗ್ಗೆ ಮರಿಯಾ ಲೀಚ್ ಈ ರೀತಿ ಅರ್ಥ ಹೇಳುತ್ತಾರೆ. "ಹಿಂದೆ ನಡೆದವುಗಳೆಂದೇ ಹೇಳಲಾಗುವ ಅತಿಮಾನುಷ ವ್ಯಕ್ತಿಗಳ, ದೈವ, ದೇವರುಗಳ, ಸಾಂಸ್ಕೃತಿಕ ವೀರಪುರುಷರ ಸಾಹಸ, ಮಹಿಮೆ, ಪವಾಡಗಳನ್ನು, ಪುರಾತನ ಸಂಪ್ರದಾಯ ಹಾಗೂ ಧಾರ್ಮಿಕ ನಂಬಿಕೆಗಳನ್ನು ವಿವರಿಸುವ ಕಥನ ರೂಪಗಳನ್ನು ಪುರಾಣ ಎಂದು ಕರೆಯಬಹುದು"[೧೧] ಬಹುತೇಕ ಕಥೆ ಮತ್ತು ಕಥನಗೀತೆ ಹಾಗೂ ಮಹಾಕಾವ್ಯದ ಮೂಲಕ ತಮ್ಮೆಲ್ಲಾ ಆಶಯ ಮತ್ತು ಅಭೀಪ್ಸೆಗಳನ್ನು ಜನಪದರು ಪುರಾಣಗಳಲಿ ಶಿಷ್ಟ ಸಾಹಿತ್ಯದಂತೆ ಸೃಷ್ಟಿಸಲು ಪ್ರಯತ್ನಿಸಿದ್ದಾರೆ. ಜನರು ಸಹ ಅವುಗಳನ್ನು ಹಾಗೆಯೇ ಸ್ವೀಕರಿಸಿದರು. ಯಾರೂ ಒತ್ತಾಯ ಪೂರ್ವಕವಾಗಿ ಪೂರ್ವಗ್ರಹ ಪೀಡೆಯಿಂದ ಅವುಗಳನ್ನು ರಚಿಸಿಲ್ಲ. ಅನುಭವಗಳು ಯಾವಾಗ ಬದ್ಧವಾದವೋ, ಸಿದ್ಧರೂಪ ಪಡೆದವೋ, ಸಾರ್ವಜನಿಕವಾಗಿ ಜನಪ್ರಿಯವಾಗತೊಡಗಿದವೊ ಅಂದಿನಿಂದಲೇ ಈ ಪುರಾಣಗಳ ರಚನೆ, ಲಕ್ಷಣಗಳು ಬಂದವು. ಪುರಾಣ ಶೈಲಿಯು ಅಲಂಕಾರಿಕ ಭಾಷೆಯನ್ನು ಉಪಯೋಗಿಸಿಕೊಂಡಿಲ್ಲ. ಇಲ್ಲಿ ನಿರೂಪಣೆ, ಕಥನ ಮತ್ತು ಅತಿಶಯೋಕ್ತಿಯೇ ಅಲಂಕಾರವಾಗಿದೆ. ಜನಪದ ಹಾಲುಮತದ ನಾಯಕರು

ಹುಟ್ಟುವಾಗಲೇ ದೊಡ್ಡವರಲ್ಲ. ವೈಭವೀಕರಣದಲ್ಲಿ ಬೆಳೆದ ಮಕ್ಕಳಲ್ಲ. ಇವರು ದೈವಸಂಭೂತರಂತೆ ಕಂಡರೂ ಜನಸಾಮಾನ್ಯರೇ ಆಗಿರುವುದು ಮತ್ತೊಂದು ಲಕ್ಷಣ.

ಡಾ.ಹಿ.ಚಿ.ಬೋರಲಿಂಗಯ್ಯನವರು ಜನಪದ ಪುರಾಣಗಳು ಹೇಗಿರುತ್ತವೆ, ಯಾವ ಅಂಶವನ್ನು ಹೊಂದಿರುತ್ತವೆ ಎಂದು ಹೇಳುವಲ್ಲಿ "ಒಬ್ಬ ಜನಸಾಮಾನ್ಯ ಸಾಂಸ್ಕೃತಿಕ ನಾಯಕನೋ ಅಥವಾ ಪವಾಡ ಪುರುಷನೋ ಆಗುವ ಪ್ರಕ್ರಿಯೆ ಒಂದು ಕಡೆಗಾದರೆ ಇದಕ್ಕೆ ತದ್ವಿರುದ್ಧವಾಗಿ, ರಾಜವಂಶದವರಾಗಿ ಅಥವಾ ದೈವಾಂಶ ಸಂಭೂತರಾಗಿ, ಹುಟ್ಟಿನಲ್ಲಿ ದೊಡ್ಡವರಾದ ನಾಯಕರು ಜನಸಾಮಾನ್ಯರಾಗುವ ಪ್ರಕ್ರಿಯೆ ನಮ್ಮ ಜನಪದ ಪುರಾಣಗಳಲ್ಲಿ ನಾವು ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವಾಗುತ್ತದೆ. ಯಾವುದೇ ಮೂಲದಿಂದ ಯಾವುದೇ ಸ್ವರೂಪದ ಸಾಮಾಗ್ರಿ ಸ್ವೀಕರಿಸಿದರೂ ಅದನ್ನು ತಮ್ಮಂತೆ ಮಾಡಿಕೊಳ್ಳುವ ಈ ಗುಣ ಜನಪದರಿಗೆ ಇರುವುದರಿಂದಲೇ ಯಜಮಾನ ಸಂಸ್ಕೃತಿಯ ಹಿತಾಶಕ್ತಿಗಳು ಸ್ವಹಿತಾಶಕ್ತಿಯಿಂದ ಹೇರಿದಾಕ್ಷಣ ಅದು ಸಂಪೂರ್ಣ ಬದಲಾಗಿ ಬಿಡುತ್ತದೆ ಎಂಬುದು ಸುಳ್ಳು. ನಮ್ಮ ವಿಸ್ಕೃತಿಕಾರರು ಮತ್ತು ಭ್ರಮಾತೀಕರಣವಾದಿಗಳು ಈ ಅಂಶವನ್ನು ಅರಿಯಬೇಕು"[೯] ಎಂಬ ಅಭಿಪ್ರಾಯದಲ್ಲಿ ಅಸತ್ಯಗಳು ಪುರಾಣದಲ್ಲಿರುವಂತೆ ಸರಿಸಮಾನಾಗಿ ಸತ್ಯವು ಮನೆಮಾಡಿದೆ ಎಂದು ಹೇಳುತ್ತಾರೆ. ಸಮಾಜದಲ್ಲಿ ನಿರ್ಲಕ್ಷಕ್ಕೆ ಒಳಗಾದ ಸಮುದಾಯವನ್ನು ಪವಾಡ ತಂತ್ರಗಳ ಮೂಲಕ ಹೇಳುವುದು ಅಂದಿನವರಿಗೆ ಅನಿವಾರ್ಯವಾಗಿತ್ತೆಂದು ವ್ಹಿ.ಜಿ.ಪೂಜಾರ ಅವರ ಮಾತು ಹಾಲುಮತ ಪುರಾಣಗಳಲ್ಲಿ ಸಾಭೀತಾಗಿದೆ. ಮಾನಸಿಕ ದುರ್ಬಲತೆಯಿಂದ ಜನರಿಗೆ ದೈವ ಬಡಿದುಕೊಂಡಾಗ ಅದನ್ನು ಬಿಡಿಸಲು ಯಾವುದೇ ವೈಜ್ಞಾನಿಕ ಮನೋವೈದ್ಯನಿಂದ ಸಾಧ್ಯವಿಲ್ಲ. ಆದರೆ ಮಂತ್ರ-ಯಂತ್ರವೆಂಬ ಪಂಡಿತನಿಂದ ಚಿಕಿತ್ಸೆಯನ್ನು ಮಾಡಬಹುದು. ಅದೇ ರೀತಿ ಪುರಾಣಗಳು ವೈಜ್ಞಾನಿಕ ಮನಸ್ಸನ್ನು ವೈಚಾರಿಕ ನೆಲೆಯಲ್ಲಿ ಆಲೋಚಿಸಲು ಸಹನೆ, ತಾಳ್ಮೆಯನ್ನು ರೂಪಿಸುತ್ತವೆ.

ಹಾಲುಮತ ಸಮುದಾಯದ ವ್ಯಕ್ತಿಯ ಚರಿತೆ, ಇತಿಹಾಸವನ್ನು ಪವಾಡ ತಂತ್ರ ಬಳಸಿ ಪುರಾಣವಾಗಿಸಲು ಕಾರಣವೆಂದರೆ ಈ ಸಮುದಾಯದ ಅಸ್ಮಿತೆ ಕಾಪಾಡುವುದು. ಯಾವ ವಿಷಯದಲ್ಲೂ ಅರ್ಥವಿಲ್ಲವೆಂದು ಹೇಳಲಾಗದು. ಜನರನ್ನು ಕೇಂದ್ರಿಕರಿಸುವುದು ಸಂಸ್ಕೃತಿಯ ವಿಕಾಸಕ್ಕೆ ಈ ಪುರಾಣಗಳ ಅವಶ್ಯಕತೆಯಿದೆ. ಮನುಷ್ಯನಿಂದ ಸಾಧಿಸಲಾಗದ ಗುರಿಯನ್ನು ದೈವದ ಮಧ್ಯಸ್ಥಿಕೆಯಲ್ಲಿ ನಿರ್ವಹಿಸುವ ತಂತ್ರವು ಪುರಾಣದಲ್ಲಿ ಪ್ರಮುಖ ಲಕ್ಷಣವಾಗಿ ಕಾಣುತ್ತದೆ. ಸಮುದಾಯದ ಒಳಮನಸ್ಸನ್ನು ಪುರಾಣಗಳು ಪ್ರತಿಬಿಂಬಿಸುತ್ತವೆ. ಮಾಟ-ಮಂತ್ರಗಳು ಜನರಲ್ಲಿ ಪ್ರಚಲಿತವಿದ್ದರೂ ಅವು ಪುರಾಣದ ವಸ್ತುವಾಗಲಿಲ್ಲ. ಆದರೆ ಪವಾಡಕ್ಕೆ ಹತ್ತಿರವಾದವು. ಮಾಟ-ಮಂತ್ರಗಳು ಸ್ವಾರ್ಥವನ್ನು ಹೇಳಿದರೆ, ಪವಾಡಗಳು ಮಾನವಕುಲದ ಒಳಿತಿಗೆ ದುಡಿಯುತ್ತವೆ. ಉದಾಹರಣೆಗೆ ವೈದಿಕ ಪುರಾಣಗಳು ದುಷ್ಟರನ್ನು ಶಿಕ್ಷಿಸಲು ಹುಟ್ಟಿಕೊಂಡವು. ಜೈನ ಪುರಾಣಗಳು ಹಿಂಸೆ, ಬಲಿ, ಆಸೆಯನ್ನು ಪ್ರಧಾನವಾಗಿರಿಸಿ, ಮುಕ್ತಿ ಪಡೆಯಲು

ಮಾರ್ಗ ತೋರಿಸಿದವು. ವೀರಶೈವ ಪುರಾಣಗಳು ಮತ್ತು ಹಾಲುಮತದ ಪುರಾಣಗಳು ಶೈವ ಸಂಪ್ರದಾಯ ನೆಲೆಯಲ್ಲಿ ರಚನೆಯಾದರೂ ಭಿನ್ನ ಉದ್ದೇಶವನ್ನು ಹೊಂದಿವೆ. ದಾನವರನ್ನು ಭೂಮಿ ಮೇಲೆ ನಾಶಮಾಡಲಿಕ್ಕಾಗಿಯೇ ಸಾಂಸ್ಕೃತಿಕ ವೀರನಾಯಕರ ಸೃಷ್ಟಿಯಾಗುತ್ತದೆ.

ಮಣಿ ಮಲ್ಲಾಸುರನನ್ನು ಕೊಲ್ಲಲು ಮೈಲಾರಲಿಂಗ ಜನಿಸಿದನು. ಮಾಳಿಂಗರಾಯನು ಭೂಮಿಯಲ್ಲಿನ ಜನರ ಉದ್ಧಾರಕ್ಕೆ ಧಾವಿಸಿದನು. ಪ್ರಬಲ ವರ್ಗದವರ ಸರಿಸಮಾನಾಗಿ ಅಲೆಮಾರಿ ಸಮುದಾಯಗಳು ನಿಲ್ಲಬಹುದೆಂದು ಈ ಪುರಾಣಗಳು ತೋರಿಸಿವೆ. ಕೃಷಿ, ಕುರಿಸಾಕಾಣಿಕೆ, ಎಲ್ಲ ವರ್ಗದವರ ಕಸುಬಾಗಿದ್ದರೂ ಮೂಲತಃ ಇವು ಹಾಲುಮತದಿಂದ ಬಂದವು ಎಂದು ತಿಳಿಸುವುದು.

ಪ್ರಪಂಚಕ್ಕೆ ಮೂಲಪುರುಷ ಶಿವ. ಅವನೇ ಹಾಲುಮತದ ಉದ್ಧಾರಕನು. ಪ್ರಬಲವರ್ಗ ದುರ್ಬಲ ವರ್ಗವನ್ನು ಹೇಗೆ ಅವನತಿಗೆ ತರುತ್ತದೆ ಮತ್ತು ದುರ್ಬಲ ವರ್ಗಗಳು ಯಾವ ರೀತಿ ಪ್ರತಿಕ್ರಿಯಿಸಿದವು ಎನ್ನುವ ಅಂಶವನ್ನು ಇಲ್ಲಿ ಮನಗಾಣಬಹುದು. ಈ ಲಕ್ಷಣಗಳನ್ನು ಜನರಲ್ಲಿ ಮೂಡಿಸಬೇಕಾದರೆ ಪುರಾಣವೇ ಪ್ರಮುಖ ಅಸ್ತ್ರವಾಗಿತ್ತು. ಜನರು ಇಂತಹದ್ದನ್ನು ನಂಬುವರು ಎಂದು ಪುರಾಣಕಾರರು ತಿಳಿದಿದ್ದರು. ಅದಕ್ಕಾಗಿ ಸ್ಥಳೀಯ ಪುರಾಣಗಳನ್ನು ಜಗಲಿಯ ಮೇಲೆ ಇಟ್ಟು ಪೂಜಿಸುವ ಸ್ಥಾನಕ್ಕೆ ಬಂದಿವೆ. ಕವಿಯ ದೃಷ್ಟಿ ಧ್ಯೇಯಗಳಿಗನುಗುಣವಾಗಿ ಒಂದೇ ಪಾತ್ರ ಬೇರೆ ಬೇರೆ ರೀತಿಯಲ್ಲಿ ನಿರೂಪಿತವಾಗುವುದು ಹಾಲುಮತದ ಪುರಾಣಗಳ ಲಕ್ಷಣ. ಮನುಷ್ಯನ ಭಾವ ಪ್ರಪಂಚದಲ್ಲಿಯೇ ಚಿಂತನ ಕ್ರಮಕ್ಕೆ ಅನುವು ಮಾಡಿಕೊಡುತ್ತವೆ. ಸಾಹಿತ್ಯಿಕ ನೆಲೆಯಿಂದ ಸೃಷ್ಟಿಯಾದ ಪುರಾಣ ಕಾವ್ಯಗಳು ಸಾಮಾಜಿಕ ಚರಿತ್ರೆಯನ್ನು ಚಿತ್ರಿಸುವ ಮಟ್ಟಕ್ಕೆ ಬೆಳೆದು ನಿಂತಿವೆ. ಇವು ಭಕ್ತಿಯನ್ನು ಮೂಲವಾಗಿಸಿಕೊಂಡು ಸತ್ವ ಸ್ವರೂಪಕ್ಕೆ ಧಕ್ಕೆಯಾಗದಂತೆ ಸಮಾಜ ಕಾರ್ಯವನ್ನು ಮಾಡುತ್ತವೆ. ಅಂದು ರಾಜಾಶ್ರಯದಲ್ಲಿ ಬೆಳೆದ ಸಾಹಿತ್ಯವೂ ಮುಕ್ತವಾಗಿ ಸಾಮಾಜಿಕ ವ್ಯಕ್ತಿಗಳನ್ನೇ ಕೇಂದ್ರವಾಗಿರಿಸಿಕೊಂಡು ಸಮುದಾಯಗಳ ಪ್ರಜ್ಞೆ ಮೂಡಿಸುವ ಮಹತ್ವದ ಕಾರ್ಯವನ್ನು ಕೈಗೊಂಡವು. ಅನೇಕ ರೀತಿಯ ರಾಚನಿಕ ಮೌಲ್ಯಗಳನ್ನು ನಂಬಿಕೆ ಸಂಬಂಧಗಳಲ್ಲಿ ನಿರ್ಮಿಸಿವೆ. ವ್ಯಕ್ತಿ, ಕುಟುಂಬ, ಸಮಾಜಗಳ ನಡುವಿನ ಸಂಬಂಧಗಳನ್ನು ಈ ಹಾಲುಮತ ಪುರಾಣಗಳು ಬೆಸೆಯುವ ಶಕ್ತಿಗಳಾಗಿ ಮಾರ್ಪಟ್ಟವು. ಹೀಗೆ ಸೂಕ್ಷ್ಮಾತಿ ಸೂಕ್ಷ್ಮ ಭಾವನೆಗಳನ್ನು ಶಾಬ್ದಿಕ ರೂಪದಲ್ಲಿ ಅಭಿವ್ಯಕ್ತ ಪಡಿಸುವುದು ಅಸಾಧ್ಯ. ಆದರೂ ನಂಬಿಕೆ-ಆಚಾರಗಳು ಇಂತಹ ರಚನೆಯ ಕೆಲಸವನ್ನು ಮಾಡಬಲ್ಲವೆಂದೂ ಆಯಾ ಸಮುದಾಯದ ಕುರಿತ ಪುರಾಣಗಳೇ ಸಾಕ್ಷಿ.

ಸಮಾಜದಲ್ಲಿ ಸಮುದಾಯಗಳ ಕುರಿತು ರಚನೆಯಾದ ಪುರಾಣ ಕೃತಿಗಳಿಗೆ ಲಕ್ಷಣಗಳು ಸಮುದಾಯಕ್ಕೆ ತಕ್ಕಂತೆ ರೂಪಿತವಾಗಿರುತ್ತವೆ. ಬುಡಕಟ್ಟು ಪುರಾಣವಾದರೆ ಅಲ್ಲಿ ಅಚ್ಚಗನ್ನಡ

ಅಥವಾ ಆಯಾ ಸಮುದಾಯಗಳ ಭಾಷೆ, ಆಚರಣೆಯನ್ನು ಸ್ಪಷ್ಟಪಡಿಸುತ್ತವೆ. ಅದೇ ನಗರಕ್ಕೂ ಮತ್ತು ಅಲೆಮಾರಿ ಜೀವನಕ್ಕೂ ಹೊಂದಿಕೊಂಡಿದ್ದರೆ ಅಂತಹ ಸಮುದಾಯಗಳ ಪುರಾಣಗಳು ಶಿಷ್ಟ ಸಾಹಿತ್ಯದ ಲಕ್ಷಣದಲ್ಲಿ ದೇಶೀಯತೆಯನ್ನು ಅಥವಾ ತಮ್ಮ ಸ್ವಂತ ಚಹರೆಯನ್ನು ಅಭಿವ್ಯಕ್ತಪಡಿಸಿರುತ್ತವೆ. ಈ ಲಕ್ಷಣವನ್ನು ಹಾಲುಮತ ಪುರಾಣಗಳ ರಚನೆಯಲ್ಲಿ ಕಾಣುತ್ತವೆ. ಇವು ತಮ್ಮ ಆಚರಣಾ ಪ್ರಧಾನವಾದಂತಹವು. ಅವು ಕೇಳುಗರ ಶ್ರದ್ಧೆ, ನಂಬಿಕೆ, ವರ್ಣನೆ, ಸಂಗೀತ ಲಯ, ವೇಷ-ಭೂಷಣ, ನೃತ್ಯಗಳಂತಹ ವಿವಿಧ ಕ್ರಿಯಾಶೀಲತೆಯನ್ನು ಹೊಂದಿರುತ್ತವೆ. ಆದಿಮ ಮನುಷ್ಯನ ಭೌತಿಕ ಮತ್ತು ಅಭೌತಿಕ ಅಂಶಗಳಾದ ಹಸಿವು, ತೃಷೆ, ಲೈಂಗಿಕತೆ, ಭಯ, ಸೃಷ್ಟಿ ರಹಸ್ಯ, ತತ್ವ, ಪ್ರಾಕೃತಿಕ ಶಕ್ತಿಗಳ ವ್ಯಾಖ್ಯಾನ, ಮನುಷ್ಯ-ಮನುಷ್ಯರ ಸಂಬಂಧಗಳ ಸ್ವರೂಪದ ಜಟಿಲತೆಯನ್ನು ನಿರರ್ಗಳತೆಯಿಂದ ವಿವರಿಸುತ್ತಾ ಹೋಗುತ್ತಾರೆ. ಇವೆಲ್ಲಾವನ್ನು ಬದುಕಿನ ಜೊತೆ ಪುರಾಣೀಕರಿಸುವ ಬೌದ್ಧಿಕ ಸಾಮಾರ್ಥ್ಯವನ್ನು ಹೊಂದಿರುತ್ತವೆ. ಸಮುದಾಯದ ವಿಸ್ತರಣೆ ಮತ್ತು ಅಭಿವ್ಯಕ್ತಿ ವಿಧಾನವನ್ನು ತಿಳಿಸುವ ಪ್ರಯತ್ನ ಕೈಗೊಂಡಿವೆ. ಒಟ್ಟಾರೆ ಮೌಖಿಕ ಸಂಸ್ಕೃತಿಯು ಯಜಮಾನ ಸಂಸ್ಕೃತಿಯಲ್ಲಿ ತನ್ನನ್ನು ಕಾಪಾಡಿಕೊಂಡು ಬೆಳೆಸುವ ಹಂತದಲ್ಲಿ ಸ್ಥಳೀಯ ಪುರಾಣಗಳನ್ನು ಅವಲಂಬಿಸಿವೆಂದು ಖಚಿತವಾಗುತ್ತದೆ.

ಪುರಾಣಗಳಲ್ಲಿ ಬರುವ ನಾಯಕರು ನಿಗೂಢವಾದ, ಪ್ರತಿಭಟನಾತ್ಮಕ ಆಚರಣೆ, ನಂಬಿಕೆ, ಶ್ರದ್ಧೆಗಳ ನೆಲೆಗಳಲ್ಲಿ ಅರಳಿದ್ದಾರೆ. ನಿಜವಾದ ಚರಿತ್ರೆಯನ್ನು ವಾಸ್ತವದ ಅತಿಮಾನುಷ ಶಕ್ತಿಯಿಂದ ರಕ್ಷಿಸಿ ಸಾಂಸ್ಕೃತಿಕ ಆವರಣವನ್ನು ಸೃಷ್ಟಿಸುವ ಕಾರ್ಯತಂತ್ರ ಪುರಾಣಗಳಲ್ಲಿ ಕಾಣುತ್ತೇವೆ. ಇದು ಪ್ರತಿ ಮಾನವ ಸಂಸ್ಕೃತಿಯ ಅಸ್ಮಿತೆಯ ಬಹುಮುಖ್ಯ ಪ್ರಶ್ನೆಯು ಕೂಡ ಆಗಿದೆ. ಒಂದು ಕಾಲದಲ್ಲಿ ಧಾರ್ಮಿಕ ನೆಲೆಗಟ್ಟನ್ನು ಪ್ರತಿಬಿಂಬಿಸುತ್ತಿದ್ದ ಪುರಾಣಗಳು ಮತ್ತೊಂದು ಕಡೆ ಸಮುದಾಯಗಳ ಜನಾಂಗೀಯ ಅಧ್ಯಯನಕ್ಕೆ ಪೂರಕವಾಗತೊಡಗಿದವು. ಸಂಘರ್ಷದಿಂದ ದೀವಾಳಿತನವನ್ನು ನಾಶಮಾಡಿ ನೆಲೆ ನಿಲ್ಲುವುದಕ್ಕೆ ಪ್ರಯತ್ನಿಸಿದವು.

ಸಮುದಾಯದ ಪುರಾಣವಾದ ಹಾಲುಮತ ಪುರಾಣಗಳು ಅರಿವಿನ ವಿಸ್ತರಣೆಯ ಜೊತೆಗೆ ಶಿಷ್ಟ ಪುರಾಣಗಳಿಗೆ ಪಠ್ಯಗಳಾಗುವ ಸಾಮರ್ಥ್ಯ ಪಡೆದಿವೆ. ಸೃಜನಶೀಲ ಜವಾಬ್ದಾರಿ ಮತ್ತು ಸಾಂಸ್ಕೃತಿಕ ರುವಾರಿಯಾಗಿ ಕುಲುಮೆಯಲ್ಲಿ ಕಬ್ಬಿಣ ಮರುಹುಟ್ಟು ಪಡೆಯುವಂತೆ ಹೊಸ ಹೊಸ ಚಿಂತನಾ ಲಹರಿಯನ್ನು ಮೂಡಿಸುತ್ತವೆ. ಸಮುದಾಯದ ಸಂಸ್ಕೃತಿಯ ಅಧ್ಯಯನಕ್ಕೆ ದಿಕ್ಸೂಚಿಗಳಾಗಿವೆ. ಕರ್ಮಸಿದ್ಧಾಂತವನ್ನು, ಭಕ್ತಿಸಿದ್ಧಾಂತದ ಜೊತೆಗೆ ಕ್ರೋಢೀಕರಿಸಿ ತಾತ್ತ್ವಿಕ ಸಿದ್ಧಾಂತವನ್ನು ತಿಳಿಸುತ್ತವೆ. ಅಷ್ಟದಶ ವರ್ಣನೆಯನ್ನು ತ್ಯಜಿಸಿ ಏಕರೂಪಾತ್ಮಕತೆಯ ನಿರೂಪಣೆಯಲ್ಲಿ ಜಗತ್ತು ಮತ್ತು ಮೌಲ್ಯಗಳೆರಡನ್ನು ಕೊಡು-ಕೊಳ್ಳುವ ಕಾರ್ಯವನ್ನು ಮಾಡಿವೆ.

### ಕೊನೆ ಟಿಪ್ಪಣಿಗಳು

೧. ಸಂಸ್ಕೃತ ಸಾಹಿತ್ಯದ ಇತಿಹಾಸ-(ಅನು) ಎಸ್.ರಾಮಚಂದ್ರಶಾಸ್ತ್ರೀ, ಪುಟ.೫೦

೨. Std Dictonary of Folk, Mythology Legend

೩. ವಿಸ್ಮೃತಿ ಮತ್ತು ಸಂಸ್ಕೃತಿ- ಹಿ.ಚಿ.ಬೋರಲಿಂಗಯ್ಯ ಪು.೪೩

೪. ವಿಸ್ಮೃತಿ ಮತ್ತು ಸಂಸ್ಕೃತಿ, ಹಿ.ಚಿ.ಬೋರಲಿಂಗಯ್ಯ ಪು.೪೪

೫. ಅದೇ ಪುಟ.೪೪

೬. ವಿಮರ್ಶೆ ಪರಿಭಾಷೆ, ಓ.ಎಲ್.ನಾಗಭೂಷಣಸ್ವಾಮಿ ಪು.೧೪೭

೭. ಪುರಾಣ ದರ್ಶನ, ಟಿ.ಎಸ್.ವೆಂಕಣ್ಣಯ್ಯ, ಪುಟ.೯

೮. ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ಬರಗೂರು ರಾಮಚಂದ್ರಪ್ಪ, ಪು.೧೨

೯. ಪುರಾಣ, ಕೆ.ಎಲ್.ಗೋಪಾಲ ಕೃಷ್ಣಯ್ಯ, ಪು.೬

೧೦. ಪುರಾಣ ಸಾಹಿತ್ಯ: ಒಂದು ಅಧ್ಯಯನ, ಡಾ.ವಿಜಯದೇವಿ, ಪು.೯

೧೧. ಸಾಹಿತ್ಯ ಮತ್ತು ಪುರಾಣ, ಮಲ್ಲೇಪುರಂ.ಜಿ.ವೆಂಕಟೇಶ್, ಪು.೧೬

೧೨. ಪುರಾಣ, ಕೆ.ಎಲ್.ಗೋಪಾಲ ಕೃಷ್ಣಯ್ಯ, ಪುಟ.೩೧

೧೩. ಅದೇ, ಪ್ರಸ್ತಾವನೆ, ಪುಟ.೧

೧೪. ಅದೇ, ಪ್ರಸ್ತಾವನೆ, ಪು.೨

೧೫. ವೀರಶೈವಾಮೃತ ಪುರಾಣ ವಿವೇಚನೆ, ಗುಬ್ಬಿ ಮಲ್ಲಣಾರ್ಯ, (ಸಂ)ಡಾ.ಗುರುಪಾದ ಮರಿಗುದ್ದಿ, ಪು.೪

೧೬. ಸಂಭಾವನೆ, ಬಿ.ಎಂ.ಶ್ರೀ ಅವರ ಅಭಿನಂದನಾ ಗ್ರಂಥ, ಪು.೨೩೦

೧೭. ವೀರಶೈವ ಪುರಾಣ: ಒಂದು ಅಧ್ಯಯನ, ಎಸ್.ವಿದ್ಯಾಶಂಕರ್, ಪು.೧೩-೧೪

೧೮. ವಿಸ್ಮೃತಿ ಮತ್ತು ಸಂಸ್ಕೃತಿ, ಹಿ.ಚಿ.ಬೋರಲಿಂಗಯ್ಯ, ಪು.೬೦

೧೯. ಅದೇ, ಪು.೬೬

ಅಧ್ಯಾಯ : ಮೂರು

# ಕನ್ನಡ ಹಾಲುಮತ ಪುರಾಣಗಳ ಉಗಮ-ವಿಕಾಸ

೧. ಪೌರಾಣಿಕ

೨. ಧಾರ್ಮಿಕ

೩. ಸಾಮಾಜಿಕ

೪. ಚಾರಿತ್ರಿಕ

# ಅಧ್ಯಾಯ : ಮೂರು

# ಕನ್ನಡ ಹಾಲುಮತ ಪುರಾಣಗಳ ಉಗಮ-ವಿಕಾಸ

## ೧. ಪೌರಾಣಿಕ

ಭಾರತೀಯ ಸಂಸ್ಕೃತಿಯ ಇತಿಹಾಸದುದ್ದಕ್ಕೂ ಧರ್ಮಯುದ್ಧಗಳು, ಧಾರ್ಮಿಕ ಪೀಡೆನೆಗಳು ಜರಗಿರುವುದು; ಅಧರ್ಮ ಅಧಿಕವಾಗಿ ಧರ್ಮಕ್ಕೆ ಕೊಡಿಲಿಪೆಟ್ಟಾದಾಗ ಪರಮಾತ್ಮ ನಾನಾ ಅವತಾರಗಳಲ್ಲಿ ಅವತರಿಸಿ, ಅಧರ್ಮದ ವಿರುದ್ಧ ಹೋರಾಡಿ ಧರ್ಮ ಸಂಸ್ಥಾಪನೆ ಮಾಡಿರುವ ಅನೇಕ ಕಥೆಗಳು ಮತ್ತು ಉಪಕತೆಗಳು ಕಂಡು ಬರುತ್ತವೆ. ರಾಮಾಯಣ, ಮಹಾಭಾರತ ಹಾಗೂ ದಶಾವತಾರದ ಕಲ್ಪನೆ ಒಂದು ವರ್ಗವಾದರೆ, ಪರಕೀಯರ ಹಾಗೂ ಪರಧರ್ಮಗಳ ಆಕ್ರಮಣ ಮತ್ತು ಶೋಷಣೆ ಮತ್ತೊಂದು ವರ್ಗವೇ ಇದಕ್ಕೆ ಸಾಕ್ಷಿ. ಇವತ್ತಿಗೂ ಭಾರತೀಯ ಮನಸ್ಸುಗಳು ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ವಿವೇಕಾನಂದ ಮುಂತಾದವರನ್ನು ಅವತಾರ ಪುರುಷರಾಗಿ ಸಮೀಕರಿಸುವುದನ್ನು ಕಾಣಬಹುದು. ಈ ಅವತಾರ ಪುರುಷರ ಸ್ಥಾನದಲ್ಲಿರುವವರು. ದೇವರನ್ನು ಧರ್ಮವನ್ನು ಪ್ರಾಚೀನರ ನಂಬಿಕೆ ಹಾಗೂ ದೃಷ್ಟಿಕೋನಕ್ಕಿಂತ ಭಿನ್ನವಾಗಿ ನಂಬಿದವರು. ಎಲ್ಲಾ ಜನರು ಸ್ವಭಾವತಹ ಸಮಾನವಾಗಿ ಮುಕ್ತರಾಗಿರುತ್ತಾರೆ. ಅವರವರ ಆತ್ಮಸಾಕ್ಷಿಯ ಪ್ರೇರಣೆಯಂತೆ ಧರ್ಮಾಚರಣೆಯಲ್ಲಿ ಸಮಾನವಾದ ಸ್ವತಂತ್ರ ಉಳ್ಳರಾಗಿರುತ್ತಾರೆ. ಯಾವುದನ್ನು ಬಲವಂತದಿಂದ ಒಪ್ಪಿಕೊಳ್ಳಬೇಕೆಂಬ ನಿಯಮವಿರಲಿಲ್ಲ. ಆದರೂ ಮುಕ್ತ ಸಮಾಜವನ್ನು ಹತೋಟಿಯಲ್ಲಿಟ್ಟು ಸುವ್ಯವಸ್ಥೆ ಕಾಪಾಡಲಿಕ್ಕೆ ನೆರಳು ಅಗತ್ಯ ಎನ್ನುವ ತೀರ್ಮಾನವನ್ನು ಧರ್ಮಬೋಧಿಸುತ್ತದೆ. "Style is Influenced both by the pursonality of the writer and also by the period of histroy in which he lives; (Theodore savory: The art of transtltion p.55)"[೧] ಎಂದು ಹೇಳುತ್ತಾರೆ. ಸಾಹಿತಿ ಪರಿಸರದ ಕೂಸು. ಪರಿಸರ ಆತನ ವ್ಯಕ್ತಿತ್ವದ ಮೇಲೆ ತನ್ಮೂಲಕ ಆತನ ಕೃತಿಯಲ್ಲಿ ಸಂಯೋಜನೆಗೊಂಡು ವ್ಯಕ್ತವಾಗುತ್ತದೆ. ಈ ಅಭಿಪ್ರಾಯವು

ಕರ್ತೃವಿನ ವ್ಯಕ್ತಿತ್ವ, ಅವನ ಅಭ್ಯಾಸ, ಜೀವನ ದೃಷ್ಟಿ, ಆಯ್ದುಕೊಂಡ ವಿಷಯ ಇವುಗಳ ಜೊತೆಗೆ ಆ ಕಾಲದ ಪರಿಣಾಮ ಶೋಷಣೆಯ ವಿರುದ್ಧವಾಗಿ ಅದನ್ನು ತಡೆಯುವ ಉದ್ದೇಶವನ್ನು ಹೊಂದಿರುತ್ತದೆ. ಒಂದು ಸಮುದಾಯದ ಆಶೋತ್ತರಗಳು ಕೃತಿಕಾರನಲ್ಲಿ ಆ ಸಮುದಾಯದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಇಂತಹ ಕೃತಿಕಾರರು ಹುಟ್ಟು ಪ್ರತಿಭೆಯನ್ನು ಹೊಂದಿರದಿದ್ದರು ಕುಲಮೂಲದ ಅಸ್ಮಿತೆಯನ್ನು ಕಾಪಾಡುವ ಸಾಮರ್ಥ್ಯ, ಲಕ್ಷಣವನ್ನು ಕೃತಿಕಾರರು ಹೊಂದಿರುತ್ತಾರೆ. ಈ ಹಿನ್ನೆಲೆಯಲ್ಲಿಯೆ ಹಾಲುಮತ ಪುರಾಣಗಳು ಕೆಲವು ಮೌಖಿಕವಾಗಿ, ಕೆಲವು ಹಸ್ತಪ್ರತಿಯಿಂದ ಮುದ್ರಣ ಪ್ರತಿಗೆ ಬರುವಲ್ಲಿ ತುಂಬಾ ಕಾಳಜಿಯನ್ನು ವಹಿಸಿವೆ. ಸಮುದಾಯವೂ ಬದುಕಿನಲ್ಲಿ ಅನುಭವಿಸಿದ ಕಷ್ಟ-ನಷ್ಟ ಸುತ್ತಲಿನ ಏಣಿ ಶ್ರೇಣಿಯ ದಬ್ಬಾಳಿಕೆ, ಲೋಪ-ದೋಷಗಳ ಖಂಡನೆ, ರೀತಿ-ನೀತಿಗಳ, ಕಟ್ಟುಪಾಡುಗಳ ಮುರಿಯುವಿಕೆಗೆ ಪುರಾಣಗಳು ಪ್ರೇರಕ ಶಕ್ತಿಗಳಾಗಿವೆ. ಸಮಾಜವೆಂಬ ಪಾಠಶಾಲೆಯಲ್ಲಿ ಸಿಹಿಕಹಿಗಳಿಂದ ಕಲಿತದ್ದೇ ಅಧಿಕ. ಆದ್ದರಿಂದ ಪಟ್ಟ ಪಾಡು ಪುರಾಣಗಳಲ್ಲಿ ವ್ಯಕ್ತಪಡಿಸಿರುತ್ತಾರೆ. ಜೊತೆಗೆ ಮನೋಬುದ್ಧಿಗಳಲ್ಲಿ ತಮ್ಮ ಸಂಸ್ಕೃತಿಯನ್ನು ಘೋಷಿಸುತ್ತ ಅದನ್ನು ಸೃಜನಶೀಲ ಶಕ್ತಿಯಾಗಿ ಬಳಸಿಕೊಂಡಿರುವುದು ಮಹತ್ವದಾಗಿದೆ. ಹೀಗೆ ಹಾಲುಮತ ಪುರಾಣಗಳ ಮೂಲಕ ಹಾಲುಮತದ ಉಗಮ ಮತ್ತು ವಿಕಾಸವು ಕುತೂಹಲಕಾರಿಯಾಗಿದೆ. ಈ ಪುರಾಣಗಳು ಹಾಲುಮತ ಸಮುದಾಯದ ವಿಶಿಷ್ಟತೆಯನ್ನು ಕಾಪಾಡುವುದಕ್ಕೆ ಹಾಗೂ ಅವರ ಉದ್ಧಾರಕ್ಕಾಗಿಯೇ ಗ್ರಂಥಗಳನ್ನು ಬರೆದಿರುವುದಾಗಿ ಕರ್ತೃಗಳು ವ್ಯಕ್ತಪಡಿಸಿದ್ದಾರೆ.

ಪ್ರಾಚೀನ ಕವಿಗಳು ಶಬ್ದಾರ್ಥವನ್ನು ಯೋಚಿಸಿ ಕವಿಯಾಗಲು ಹೊರಟಿಲ್ಲ, ರಸಿಕತೆಯನ್ನು ಹೇಳಲು ಕೃತಿ ರಚಿಸಿಲ್ಲ. ಬದಲಾಗಿ ಭೂಚಕ್ರವಲ್ಲಿ ಶುದ್ಧವಾದ ಆಲೋಚನೆಗಳನ್ನು ಎಲ್ಲರಿಗೂ ತಿಳಿಸುವುದಕ್ಕೆ ರಚಿಸುವೆನೆಂದು ಕವಿ ಹೇಳಿಕೊಳ್ಳುತ್ತಾನೆ.

"ಕಾಮಿತ ಫಲವಿತ್ತು ಸುರನಿಕರಕೆ ಮುನಿ
ಸ್ತೋಮಮಳ ಪಾದಭಕ್ತ
ಪ್ರೇಮಿ ಚಿನ್ಮಯ ಸರ್ವೇಶ(ನೆಈಶನೆ)
ಪ್ರೇಮದಿ ಮತಿಯ ರಕ್ಷಿಪುದು"[3]

ಅಷ್ಟಾದಶ ವರ್ಣನೆಯನ್ನು ಕವಿಯೂ ತ್ಯಜಿಸಿರುವುದನ್ನು ಹೇಳುತ್ತಾನೆ. ಕಡಲು, ಬೆಟ್ಟ, ಅಡವಿ, ಪುರ, ಪೊಡಪತಿಯ ವರ್ಣನೆ, ರವಿಶಶಿಗಳ ವೈಭವ, ವರ್ಣನೆ ಕೇಳಿ ಕೆಡಬೇಡಿ ನೆನೆವುದಾದರೇ ರೇವಣಸಿದ್ಧರೊಡೆಯನನ್ನು ಸ್ಮರಿಸಿ ಎಂದು ಹೇಳುವಲ್ಲಿ ಈಗಾಗಲೇ ರಚನೆಯಾಗಿರುವ ಶಿಷ್ಟ ಪುರಾಣಗಳ ಕಥೆಯನ್ನು ತೆಗಳುವರು. ಕೃತಿಗೆ ರಸಭಾವ ಲಕ್ಷಣಗಳನ್ನು ಹೇಳುವುದಕ್ಕೆ ಅಷ್ಟಾದಶವರ್ಣನೆಗಳೇ

ಆಗಬೇಕಾಗಿಲ್ಲ. ಭೂಮಿಗೆ ಸೂರ್ಯ-ಚಂದ್ರರು ಒಬ್ಬರೇ. ಅವರ ಇರುವಿಕೆಯ ಪ್ರಸ್ತಾಪವನ್ನು ರಾಮಾಯಣ, ಮಹಾಭಾರತಗಳೇ ಹೇಳಬೇಕಾಗಿಲ್ಲ. ಕೇವಲ ಮುಕ್ತಿಯನ್ನು ಸಾರುವ ಕೃತಿಗಳು ಮಾತ್ರ ಪ್ರಮುಖ ಎಂದಿದ್ದಾರೆ.

"ಆವ ಲಕ್ಷಣದಿಂದಲಿ ಪೇಳಿದರೇನು
ಸಾವ ಲಕ್ಷಣ ತಪ್ಪದಿಹುದೆ
ದೇವ ಲಕ್ಷಣವಹಿದಿದು ನಿಜವೆಂದು
ದೇವ ರೇವಣಸಿದ್ಧ ಪೇಳ್ದ"[೩]

ಎಂದು ಹೇಳುತ್ತಾ ವೇದ-ಉಪನಿಷತ್ತುಗಳು ಬಾಯಿಪಾಠದಿಂದ ಬಂದವುಗಳು. ಅಂತಹವುಗಳನ್ನು ಕೇಳಿ ಕೊಬ್ಬಿನಿಂದ ಉಬ್ಬಿ ಮೆರೆದರೆ ಸಿದ್ಧಿ ದೊರೆಯುವುದೆ, ಭಯ ಬಿಟ್ಟು ನಿರ್ಭಯದಲ್ಲಿ ಹೇಳುವ ಕತೆಗಳಿಂದ ಸಿದ್ಧಿ ದೊರೆಯುವುದೆಂದು ಹೇಳುತ್ತಾರೆ. ಇಲ್ಲಿ ಕವಿ ನೇರವಾಗಿ ಭವಾವಳಿಯನ್ನು ಖಂಡಿಸುವುದು ಕಂಡುಬರುತ್ತದೆ. ಸಿದ್ಧರಲ್ಲಿ ನಿರ್ಮಲದಿಂದ ಬೇಡಿದರೆ ಬೇಡಿದಿಷ್ಟಾರ್ಥ ಸಿದ್ಧಿಯನಿತ್ತು, ಮಾಡಿದ ಪಾಪ ಹರಿದು, ವೈರಿಗಳು ಕೆಟ್ಟೋಡುವರೆಂದು ಸಿದ್ಧಮಂಕ ಚರಿತ್ರೆಯಿಂದ ತಿಳಿದು ಬರುತ್ತದೆ. ಅಲ್ಲದೆ ಸಮುದಾಯಕ್ಕೆ ಕೊಡುವ ಕಿರುಕುಳವನ್ನು ಮೆಟ್ಟಿನಿಂತರೆ ವೈರಿಗಳು ದಿಕ್ಕೆಟ್ಟು ಓಡುವವರು ಎಂದು ಹೇಳುತ್ತದೆ.

"ಪಂಚಾಕ್ಷರಿಯ ಶಾಸನಸಿದ್ಧರು(ಘನ)
ಸಂಚಿತಾರ್ಥನವರಿದರಿಗೆ
ಪಂಚತೀರ್ಥಕ್ಕೈದಿಯೆ ಮಿಂದ ಫಲಗಳು
ವಂಚನೆಯಿಲ್ಲದೆ ಕೇಳಿ"[೪]

ವ್ರತ-ನೇಮಗಳು ಕೇವಲ ದೇಹವನ್ನು ದಂಡಿಸುವ ಕ್ರಮಗಳು. ಅವುಗಳ ಸಾರ್ಥಕತೆಯಾಗಬೇಕಾದರೆ ವಂಚನೆಯಿಲ್ಲದೆ ಶಾಸನ ಸಿದ್ಧರ ಸಂಚಿತಾರ್ಥವನ್ನು ಪ್ರಸಾರ ಮಾಡಬೇಕು. ಹೀಗಾಗಿ ಹಾಲುಮತ ಪುರಾಣಗಳು ಪಂಚಾಕ್ಷರಿಯ ಉದ್ಘೋಷರಾದ ಪುರುಷಮಾನ್ಯರ ಸಂಚಿತಾರ್ಥಗಳ ಈಡೇರಿಕೆಗೆ ಪುರಾಣಗಳನ್ನು ರಚಿಸಿದ್ದಾಗಿ ಇದೇ ಕೃತಿಯಲ್ಲಿ ಹೇಳಲಾಗಿದೆ.

ಹಾಲುಮತ ಪುರಾಣಗಳಲ್ಲಿ ಬರುವ ಆರಾಧ್ಯ ವ್ಯಕ್ತಿಗಳನ್ನು ೧೨ನೆ ಶತಮಾನದ ಶರಣರು ಹೆಚ್ಚು ಉಲ್ಲೇಖ ಮಾಡಿದ್ದಾರೆ. ಉದಾ: ಸೊನ್ನಲಿಗೆ ಸಿದ್ಧರಾಮ, ಗೊಲ್ಲಾಳೇಶ್ವರ ಹಾಗೂ ರೇವಣಸಿದ್ಧರನ್ನು ಸ್ಮರಿಸುತ್ತಾರೆ. ಹರಿಹರನು ಶರಣರ ಕಥೆಯನ್ನು ಪುರಾಣವನ್ನಾಗಿಸುವಾಗ ಕುರುಬ

ಸಮುದಾಯದ ವ್ಯಕ್ತಿಯ ಬಗ್ಗೆ ಪರಮ ಭಕ್ತಿಯನ್ನು ವ್ಯಕ್ತಪಡಿಸುತ್ತಾನೆ. ಆದ್ದರಿಂದ ವೀರಶೈವ ಪುರಾಣಗಳ ನಂತರ ಹಾಲುಮತ ಪುರಾಣಗಳು ಹುಟ್ಟಿಕೊಂಡವೆಂದು ಸಹಜವಾಗಿ ತಿಳಿದುಬರುತ್ತದೆ. ಸದಾ ಕಾರ್ಯೋನ್ಮುಖಿಯಾಗಿರುವ ಈ ಸಮುದಾಯವು ಕಾಯಕಕ್ಕೆ ಪ್ರಾಧಾನ್ಯತೆ ಕೊಟ್ಟ ಸಮುದಾಯದ ಚರಿತ್ರೆಯನ್ನು ದಾಖಲಿಸುವಲ್ಲಿ ಎಡವಿದೆ. ಆದರೂ ದೈವಭಕ್ತಿ, ಸದಾಚಾರಗಳನ್ನು ದಿನನಿತ್ಯದ ಬದುಕಿನಲ್ಲಿ ಬಲಗೊಳಿಸಲು ಪುರಾಣ ಮಾಧ್ಯಮ ಸಹಾಯವಾಯಿತು. ತಮ್ಮ ಮನೋ ಇಚ್ಛೆಯನ್ನು ತಿಳಿಸಲು, ಅರ್ಥೈಸಲು ಶಿವ–ಪಾರ್ವತಿಯರನ್ನು ಪ್ರತಿಮೆಗಳನ್ನಾಗಿಸಿ ತತ್ವ ಬೋಧನೆಯನ್ನು ಪ್ರಚಾರ ಪಡಿಸಿದ್ದಾರೆ. ಎಲ್ಲರೂ ಅವರವರ ರೀತಿ–ನೀತಿಗಳ ಆಚರಣೆಯಿಂದ ಸದ್ಗತಿಯನ್ನು ಪಡೆಯಬಹುದು ಎಂದು ಪುರಾಣಗಳು ಜನರ ಮನಸ್ಸನ್ನು ಸದೃಢಪಡಿಸಿದವು.

ವೈದಿಕ, ಜೈನ, ವೀರಶೈವ ಪುರಾಣಗಳಿಗಿಂತ ಹಾಲುಮತ ಪುರಾಣಗಳು ವಿರಳವಾಗಿದ್ದರೂ ವಿಚಾರ ವ್ಯಾಪ್ತಿಯನ್ನು ಸಮೃದ್ಧವಾಗಿ ಪಡೆದಿವೆ. ಇಲ್ಲಿ ಪುರಾಣಗಳ ಉದ್ದೇಶ ಏಕಪಕ್ಷೀಯವಾಗಿದೆ. ಸಮಾಜದ ಪ್ರಬಲ ಸಮುದಾಯಗಳ ಸಂಸ್ಕೃತಿಯ ಮಟ್ಟಕ್ಕೆ ತಮ್ಮ ಸಮುದಾಯದ ಬೆಳವಣಿಗೆ ಮುಖ್ಯವಾಗಿತ್ತು. ಆ ಸಮುದಾಯದ ಪರಂಪರೆಯ ಮಹತ್ವವನ್ನು ಸಮುದಾಯದ ವೀರಪುರುಷರ ಮಹಿಳೆಯರ ಚರಿತ್ರೆ ಮುಖಾಂತರ ಕಟ್ಟುವುದಾಗಿತ್ತು. ಈ ಮುಖ್ಯ ಉದ್ದೇಶಕ್ಕೆ ಭಾಷೆ ಮತ್ತು ಶೈಲಿಯನ್ನು ಮೌಖಿಕ ಪರಂಪರೆಯಿಂದ ಪಡೆದರು. ಪುರಾಣ ಕಥೆಗಳು ಸಾಂಗತ್ಯ, ಷಟ್ಪದಿ, ಗದ್ಯ ಪ್ರಕಾರದಲ್ಲಿ ದೊರೆತರೂ ಲಯದ ದೇವತೆಯ ತಾಯಿಯಾದ ಡೊಳ್ಳು ನಾದದ ಮುಖೇನಾ ಪ್ರಸರಣ ಕೈಗೊಂಡರು. ಆದ್ದರಿಂದ ಕಥೆಗಳಲ್ಲಿ ಉಪಕಥೆಗಳ ತೊಡಕು ಇಲ್ಲವಾಗಿದೆ.

ಪ್ರಾಚೀನ ಕವಿಗಳಿಗೆ ದೊರೆತ ರಾಜಾಶ್ರಯ, ಧರ್ಮದ ಬೆಂಬಲ ಲಭಿಸಿರಲಿಲ್ಲ. ಅಂದು ಮಠ ಮಾನ್ಯಗಳಲ್ಲಿ ಹೆಚ್ಚಾಗಿ ಜೈನ, ವೈದಿಕ ಮತ್ತು ವೀರಶೈವ ಧರ್ಮ ಕೃತಿಗಳೇ ಮಾನ್ಯವಾಗಿದ್ದವು. ಶೈವ ಸಂಸ್ಕೃತಿಯನ್ನು ಅನುಸರಿಸುವ ಇಂತಹ ಸಮುದಾಯಗಳು ತಮ್ಮ ಆರಾಧ್ಯ ದೈವನ ಚರಿತ್ರೆಯನ್ನು ದಾಖಲಿಸದೆ, ಈಗಾಗಲೇ ಸಿದ್ಧಪಥ್ಯವಾಗಿರುವ ವೀರಶೈವ ಪುರಾಣಗಳನ್ನೇ ತಮ್ಮದಾಗಿಸಿಕೊಂಡು ಆರಾಧಿಸುತ್ತಿದ್ದರು. ಇದನ್ನು ಅರಿತ ಆಯಾ ಸಮುದಾಯದವರು ತಮ್ಮ ಪರಮಗುರುಗಳ ಚರಿತ್ರೆಯನ್ನು ಲಿಖಿತ ರೂಪಕ್ಕೆ ತರುವ ಧೋರಣೆ ಹೊಂದಿದ್ದರಿಂದ ಇಂತಹ ಸಮುದಾಯಗಳು ಪುರಾಣಗಳಲ್ಲಿ ಬಹುಸಂಸ್ಕೃತಿಯನ್ನು ದಾಖಲಿಸಿವೆ. ಹಾಲುಮತ ಪುರಾಣಗಳ ಉದ್ದೇಶವೇ ಅವುಗಳ ಲಕ್ಷಣವಾಗಿಯೂ ಕಂಡುಬರುತ್ತದೆ. ಎಲ್ಲಿಯೂ ಪುರಾಣಗಳು ನಿರ್ದಿಷ್ಟ ಲಕ್ಷಣವನ್ನು ಹೇಳಿಲ್ಲ. ಆದರೆ ನಿರ್ದಿಷ್ಟ ಲಕ್ಷಣಗಳನ್ನು ಹೊಂದಿರುತ್ತವೆ.

ಈ ಪುರಾಣಗಳು ಸಾಹಿತ್ಯಕ್ಕಿಂತ ಸ್ಥಳಗಳಿಗೆ ತುಂಬ ಮಹತ್ವಕೊಟ್ಟಿರುವಂತೆ ಕಾಣುತ್ತವೆ. ಮೂಲದಲ್ಲಿ ಸಾಹಿತ್ಯ ರಚನೆಯ ಮುಂಚೆ ದೇವಾಲಯಗಳು, ಮಠಗಳು ಸಾಂಸ್ಕೃತೀಕರಣಗೊಂಡಿದ್ದವು.

ವೀರಶೈವ ಧರ್ಮದ ಛಾಯೆಯಲ್ಲಿ ಬೆಳೆಯುವ ಈ ಸಮುದಾಯವೂ ಗುರು, ಲಿಂಗ, ಜಂಗಮ ಎಂಬ ತ್ರಿವಿಧ ಆಚಾರ ಕಲ್ಪನೆಯನ್ನು ಆರೋಪಿಸಿಕೊಂಡಿವೆ. ವೀರಶೈವ ಸಂಪ್ರದಾಯ ಸಾಮೂಹಿಕ ಸಭೆಯಲ್ಲಿ ತತ್ತ್ವಬೋಧನೆಯನ್ನು ನಡೆಸಿದರೆ, ಹಾಲುಮತದ ತತ್ತ್ವಬೋಧನೆಯು ಸ್ಥಳಾಂತರಗಾಮಿಯಾದುದು. ಗುರುಶಿಷ್ಯರ ಸಂಬಂಧದಿಂದಲೇ ಹಾಲುಮತ ಪುರಾಣಗಳ ಪವಾಡಗಳು ಮನಸ್ಸನ್ನು ತಟ್ಟುವ ಕೆಲಸ ಮಾಡಿದವು. ಗುರುವಿಲ್ಲದೆ ಶಿಷ್ಯನಿಲ್ಲ, ಶಿಷ್ಯನಿಲ್ಲದೆ ಗುರುವಿನ ಸ್ಥಾನಕ್ಕೆ ಮೌಲ್ಯವಿಲ್ಲ ಎನ್ನುವುದನ್ನು ಬಿತ್ತರಿಸುತ್ತವೆ. ಉದಾ: ಬೀರಪ್ಪ ಮತ್ತು ಮಾಳಿಂಗರಾಯರ ಸಂಬಂಧ ಸಿದ್ಧರಾಮ- ಶಾಂತಮುತ್ತಯ್ಯರ ಸಂಬಂಧ, ಮಾಳಿಂಗರಾಯ-ಅಮೋಘಸಿದ್ಧರ ಸಂಬಂಧ ತನ್ನ ಪುರಾಣಗಳಲ್ಲಿ ನೋಡಬಹುದು.

ಹಾಲುಮತ ಪುರಾಣಗಳ ಸಂಪಾದನೆಯು ಆಧುನಿಕವಾಗಿದ್ದರೂ ಛಂದಸ್ಸು ಭಾಷೆಗಳು ಪ್ರಾಚೀನವಾಗಿವೆ. ಒಂದೊಂದು ಪುರಾಣಗಳ ರಚನೆಯನ್ನು ನೋಡಿದರೆ ಉಗಮ-ವಿಕಾಸ ಅರಿಯಬಹುದು.

ಸಿದ್ಧಮಂಕ ಮತ್ತು ತಗರ ಪವಾಡಗಳು ಸಮುದಾಯದ ವರ್ಗ ಸಂಘರ್ಷವನ್ನು ಹೇಳುತ್ತವೆ. ಇವುಗಳು ಸುಮಾರು ೧೨ನೇ ಶತಮಾನವೆಂದು ಊಹಿಸಬಹುದು. ಬಿಜ್ಜಳನು ಊರಿನ ಸೇವಕರ ದೂರಿನ ಮೇರೆಗೆ ಕುರುಬರನ್ನು ೧೨ ವರ್ಷಗಳ ಕಾಲ ಹೊರ ಹಾಕುವುದನ್ನು ಪ್ರತಿಭಟಿಸುವ ಅಂಶವನ್ನು ಹೊಂದಿವೆ. ಸಮಾಜದಲ್ಲಿ ಯಾವ ವರ್ಗದಿಂದ ಖಂಡನೆ ಮತ್ತು ನಿರ್ಲಕ್ಷ್ಯಕ್ಕೆ ಒಳಗಾಗಿರುತ್ತದೆಯೋ ಆ ವರ್ಗದ, ಆಚರಣೆಯ ಮೂಲಕ ತಮ್ಮ ಸಂಸ್ಕೃತಿಯನ್ನು ಕಾಪಾಡುವ ಮತ್ತು ಪ್ರಸಾರ ಮಾಡುವ ಉದ್ದೇಶವನ್ನು ಈ ಹಾಲುಮತ ಪುರಾಣಗಳು ಒಳಗೊಂಡಿವೆ. ಇಲ್ಲಿ ವೀರಶೈವ ಮತ್ತು ಹಾಲುಮತ ಸಮುದಾಯಗಳ ನಡುವಿನ ಸಂಘರ್ಷಾತ್ಮಕತೆಯನ್ನು ವಿಶ್ಲೇಷಣೆ ಮಾಡುತ್ತವೆ.

ಮಾಳಿಂಗರಾಯನ ಕಾವ್ಯವು ಹಾಲುಮತ ಸಮುದಾಯವು ಹೊಂದಿದ್ದ ವೃತ್ತಿಯನ್ನು ಸಾಂಸ್ಕೃತಿಕವಾಗಿ ಉಳಿಸಿಕೊಳ್ಳುವ ಉದ್ದೇಶದಿಂದ ರಚನೆಯಾಗಿದೆ. ಮಾಳಿಂಗರಾಯನು ಚಾರಿತ್ರಿಕ ವ್ಯಕ್ತಿ. ಈತನು ಬದುಕು ಸಮುದಾಯಕ್ಕೆ ಮೀಸಲು. ಈತನು ಗೋರಖನಾಥ ಮತ್ತು ಸೋನಾರಸಿದ್ಧರ ಜೊತೆ ಸೇರಿರುತ್ತಾನೆ. ಅವರಿಂದ ಪವಾಡ ವಿದ್ಯೆಯನ್ನು ಕಲಿಯುತ್ತಾನೆ. ಅಲ್ಲದೆ ಅಮೋಘಸಿದ್ಧನ ಜೊತೆ ಸಂಘರ್ಷ ಮಾಡಿದ್ದಾನೆ. ಈ ಎಲ್ಲಾ ಮಾಹಿತಿಗಳು ಮಾಳಿಂಗರಾಯನು ತನ್ನ ಸಂಸ್ಕೃತಿಯನ್ನು ಸ್ಥಾಪಿಸಿಲು ಹೋರಾಡಿದ ಕುರುಹು ದೊರೆಯುತ್ತದೆ. ಇದರ ಪೂರಕವಾಗಿ ಬರುವ ಮತ್ತೊಂದು ಕಾವ್ಯ ಜನಪದ ಹಾಲುಮತ ಮಹಾಕಾವ್ಯ. ಇದರಲ್ಲಿ ಅನೇಕ ಪವಾಡ ಪುರುಷರ ವ್ಯಕ್ತಿತ್ವ ಚರಿತ್ರೆಯನ್ನು

ಹೇಳುತ್ತಲೇ ಸಮುದಾಯ ಸಮಾಜದಲ್ಲಿ ನೆಲೆಗೊಂಡ ಬಗೆಯನ್ನು ತಿಳಿಸುವುದು. ಅನ್ಯ ಸಮುದಾಯಗಳ ಸಂಘರ್ಷವನ್ನು ಹೇಳುತ್ತವೆ. ಮಾಳಪ್ಪನು ತಂದೆಯ ಮರಣದ ಪ್ರತಿಯಾಗಿ ಬೇಡರನ್ನು ಕೊಲ್ಲುವುದು, ಸಮಾಜದಲ್ಲಿ ಅಧಿಕಾರ ಪಟ್ಟವೇರುವುದನ್ನು ತಿಳಿಸುತ್ತದೆ. ಹೀಗೆ ಮಾಳಿಂಗರಾಯನು ಬಂಡವಾಳಶಾಹಿ, ಅಧಿಕಾರಶಾಯಿ ವರ್ಗದವರ ವಿರುದ್ಧ ಹೋರಾಡಿದ ಕಲಿಯಾಗಿ ಪ್ರತಿನಿಧಿಸುತ್ತಾನೆ. ಈ ರೀತಿಯ ಪಟ್ಟಧಾರಣೆಗೆ ಪವಾಡಗಳೇ ಹೋರಾಟದ ಅಸ್ತ್ರಗಳಾಗಿರುವುದು ವಿಶಿಷ್ಟವಾಗಿದೆ.

ಬೇರೆ ಸಮುದಾಯಗಳು ಜಗತ್ತಿನ ಚಲನವಲನವನ್ನು ಬೆಡಗಿನ ವಚನಗಳಲ್ಲಿ ಹೇಳಿದ್ದರೆ, ಅಂತರಂಗದ ಆತ್ಮವಿದ್ಯೆಯನ್ನು ಈ ಸಮುದಾಯವೂ ಪವಾಡದಿಂದ ಪ್ರಯೋಗಿಸಿದೆ. ವ್ಯಕ್ತಿಯೊಬ್ಬನ ಸಾಧನೆಯೂ ಇಡೀ ಸಮುದಾಯದ ಸಾಧನೆ ಎಂದು ಹೇಳಲು ರಚನೆಯಾದವು. ಆದ್ದರಿಂದ ನೇರವಾಗಿ ಪ್ರತಿರೋಧವನ್ನು ಹೇಳದೆ ಜಲಸೃಷ್ಟಿ, ಲೋಕ ಸೃಷ್ಟಿಯ ಮೂಲಕ ಕಲ್ಪನೆ ಬೆರಿಸಿ ಜಾಣ್ಮೆಯನ್ನು ತೋರಿಸಿದ್ದಾರೆ.

"ನೀರೆ ನಿರಂಕಾರದೊಳಗೆ ಭೂಮಿ ಬೀಜ ಇಲ್ಲಿಯ್ಯ
ಆಕಾಶ ಇಲ್ಲೇಳಂದಾರೆ ಭೂಮಿ ನಿಲ್ಲೆಳಂದಾರ
ನೀರೆ ನಿರಂಕಾರದೊಳಗೆ ಗಾಳಿ ಮೊದಲ ಇಲ್ಲೇನ"[೫]

ಮುನ್ನೂರ ಅರವತ್ತು ನರಗೋಳದಿಂದ ಶಿವನ ದೇಹವಾಗಿರುತ್ತದೆ. ಈತನೇ ವಿಶ್ವಕ್ಕೆ ಗುರು, ನಾದ, ಅಷ್ಟವರ್ಣ, ಜ್ಯೋತಿರ್ಲಿಂಗವನ್ನು ಸೃಷ್ಟಿಸಿದನು. ಸೂಕ್ಷ್ಮತೆಯಿಂದ ಗಮನಿಸಿದರೆ ನವಜಾತ ಶಿಶುವು ತಾಯಿಯ ಗರ್ಭದಲ್ಲಿ ಹೇಗೆ ಒಂಬತ್ತು ತಿಂಗಳಲ್ಲಿ ಜೀವ ಪಡೆಯಲು ಆಶ್ರಯ ಪಡೆದಿರುತ್ತೋ, ಅದೇ ರೀತಿ ಇಲ್ಲಿ ಸೃಷ್ಟಿಯ ರಚನೆಯ ಕಲ್ಪನೆ ಮೂಡಿದೆ. ಕವಿಯೂ ಸಂಪೂರ್ಣವಾಗಿ ಅಕ್ಷರಮತಿಯ ಅಂಕೆಯನ್ನು ನಿರ್ದಿಷ್ಟವಾಗಿ ಹೇಳುವ ಕೌಶಲವನ್ನು ಹೊಂದಿರುವನು. ಐವತ್ತೆರಡು ಅಕ್ಷರಗಳು, ಐವತ್ತೆರಡು ನಾದಗಳ ಹೊರಡಿಸುವುದು. ಈ ಅಕ್ಷರಗಳೇ ಕೋಟ್ಯಾನುಕೋಟಿ ಜೀವಿಗಳಾದವು. ಶಿವನಾಮದಿಂದಲೇ ಜನಿಸಿದವೆಂದು ಹೇಳುತ್ತದೆ. ಹೀಗೆ ಪುರಾಣಗಳು ಕಲ್ಪನಾತೀತದಲ್ಲಿ ತೇಲುವಂತೆ ರಚನೆಯಾಗಿವೆ.

ಪಾರ್ವತಿಯು "ಮೂರು ಗಣಿಕಿ ಎಲವೇನಪ್ಪಲ್ಲಿ ಕಡಿಯಾಕ ತೆಗದು ಇಟ್ಟಾರ
ಕಡಿಯಾಕ ತೆಗದು ಇಟ್ಟಾನಪ್ಪಲ್ಲಿ ನೀರೆ ನಿರಂಕಾರದೊಳಗ
ಮಾತು ಮಂತರ ನಡೆದಾವಪ್ಪಲ್ಲಿ ಮಂತರ ಶಕ್ತಿ ನಡೆದಾವ
ಮಂತರ ಶಕ್ತಿ ನಡಾದವಪ್ಪಲ್ಲಿ ಆದಿಯ ಶಕ್ತಿ ಪುಟಿದಾಳ"[೬]

ಇದು ಮಾತೃಮೂಲದ ಸಂಸ್ಕೃತಿ. ನಂತರ ಶಿವ-ಪಾರ್ವತಿಯರ ಮೋಹದಿಂದ ಜನಿಸಿದವರು ರಾಕ್ಷಸರಾಗುತ್ತಾರೆ. ರಾಕ್ಷಸರು ಮೂರು ಯುಗವನ್ನು ದಾಟುವರು. ನಂತರ ಗಾಳಿಯ ಸಂಚಾರ ಆರಂಭವಾಯಿತು. ಗಾಳಿಯು ಸಾಗರದ ಅಲೆಗಳನ್ನುಂಟು ಮಾಡಿ ಶಂಕದಲ್ಲಿ ಬಸವಣ್ಣ ಹುಟ್ಟುವನು. ಕವಡಿಯಲ್ಲಿ ಎಲ್ಲಮ್ಮ ಹುಟ್ಟುವಳು, ಇವರ ನಂತರ ಸೂರ್ಯ, ಚಂದ್ರ, ಹಗಲು ರಾತ್ರಿ, ಹುಣ್ಣಿಮೆ, ಅಮವಾಸ್ಯೆಯನ್ನು ತರಲಾಯಿತು, ಹಾಲುಮತ ಪುರಾಣಗಳು ಮೂರು ಭಾಗಮಾಡಿಕೊಂಡು ಮೊದಲು ಕೈಲಾಸದ ಪ್ರಸ್ತಾಪ, ಸೃಷ್ಟಿ ರಚನೆ. ನಂತರ ಆ ಸಮುದಾಯದ ವೃತ್ತಾಂತ ಮತ್ತು ಶಿಷ್ಯ ಪರಂಪರೆ ಮಾಹಿತಿ ಹೀಗೆ ಕಥೆಯನ್ನು ರಚನೆ ಮಾಡಲಾಗಿದೆ.

ಕೈಲಾಸದ ಹಾಡಿಕೆಯಲ್ಲಿ ಕಥೆಯು ಮುಂದಿನ ಮುಖ್ಯ ಕಥೆಗೆ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳಲಾಗಿದೆ. ನಂತರ ಈ ಪುರಾಣಗಳನ್ನು ಯಾವ ರೀತಿ ಜನರಿಗೆ ತಲುಪಿಸಬೇಕು? ಎಂದು ಹೇಳುವರು. ಪುರಾಣಗಳ ಆಲಿಸುವಿಕೆಯಿಂದ ಜನರು ಪುಣ್ಯ, ಮಾನಸಿಕ ಸ್ಥೈರ್ಯವನ್ನು ಹೋರಾಡುವ ಮನೋಭಾವನೆಯನ್ನು ಬೆಳೆಸುವುದಕ್ಕೆ ರಚನೆಯಾಗಿವೆ.

ಹಾಲುಮತ ಪುರಾಣಗಳು ಮೊದಲು ಸೃಷ್ಟಿಯ ಉತ್ಪತ್ತಿ, ಕುರಿಯ ಪ್ರಸ್ತಾಪ ಮತ್ತು ಉದ್ಭವ ಕಥೆ, ಕಂಬಳಿಯ ಪ್ರಸ್ತಾಪ, ಹಾಲುಮತದ ಹುಟ್ಟು, ಭೂಲೋಕದಲ್ಲಿ ಹೆಣ್ಣು-ಗಂಡುಗಳ ಸ್ಥಾನ, ಇವರಿಬ್ಬರು ಸಮುದಾಯಕ್ಕೆ ಮಾಡುವ ತ್ಯಾಗ, ಭೂಲೋಕಕ್ಕೆ ಕುರಿಗಳ ಆಗಮನ, ಬೆಂಕಿ ಶೋಧ, ವಿವಾಹ ಪದ್ಧತಿ ಹೀಗೆ ಪೌರಾಣಿಕದಲ್ಲಿ ಸಂಸ್ಕೃತಿಯನ್ನು ಶೋಧಿಸುತ್ತವೆ. ಕಲ್ಪನೆಯ ಮೂಲಕ ಜೀವನದ ವಾಸ್ತವತೆಯನ್ನು ಸಾರುವುದಕ್ಕೆ ಸಾಹಿತ್ಯ ಕೌಶಲ್ಯಗಳನ್ನು ಬಳಸಿಕೊಂಡು ವಿಕಾಸ ಹೊಂದಿದೆ. ಗದ್ಯ, ಪದ್ಯ, ಹಾಡು ಈ ಮೂರು ಪ್ರಕಾರದಲ್ಲಿ ಹಾಲುಮತ ಪುರಾಣಗಳು ಬೆಳವಣಿಗೆಯನ್ನು ಪಡೆದಿವೆ. ಹಾಡಿನ ರೂಪದಲ್ಲಿದ್ದ ಜನಪದ ಹಾಲುಮತ ಮಹಾಕಾವ್ಯ, ಮಾಳಿಂಗರಾಯನಕಾವ್ಯ, ಮೈಲಾರಲಿಂಗನ ಕಾವ್ಯ ರಚನೆ ಮಾಡಿದರೆ, ಲಿಖಿತ ರೂಪದಲ್ಲಿ ಸಿದ್ಧಮಂಕ ಚರಿತೆ, ತಗರ ಪವಾಡ, ಗೊಲ್ಲಾಳಯ್ಯನ ಪುರಾಣ, ಹಳವಳ್ಳಿ ಅವರ "ಹಾಲುಮತದ ಪುರಾಣವು", ರಸ್ತಾಪೂರ ಭೀಮಕವಿ ಶಂಕರದಾಸರ ಹಾಲುಮತೋತ್ತೇಜಕ ಪುರಾಣ, ದಾವಣಗೆರೆ ಚನ್ನಬಸವ ಕವಿಯ ಹಾಲುಮತದ ಪುರಾಣ ದೊರೆಯುತ್ತವೆ. ಈ ಲಿಖಿತ ರೂಪದ ಕಾವ್ಯಗಳು ಸಂಪಾದನೆಯ ದೃಷ್ಟಿಯಿಂದ ೧೯ನೇ ಶತಮಾನದಲ್ಲಿ ಬಂದರೆ ಇನ್ನುಳಿದ ಮೌಖಿಕ ರೂಪದ ಕಾವ್ಯಗಳು ಕಾಲಾತೀತವಾಗಿವೆ.

ಪುರಾಣಗಳ ರಚನೆಯ ಕಾಲವನ್ನು ಆಧರಿಸಿದರೆ ಮೊದಲ ಚಾರಿತ್ರಿಕ ಸ್ಥಾನವೂ ತಗರ ಪವಾಡ, ಸಿದ್ಧಮಂಕ ಚರಿತೆ, ಗೊಲ್ಲಾಳಯ್ಯನ ಪುರಾಣಗಳಿಗೆ ದೊರೆಯುತ್ತದೆ. ಇವುಗಳ ಧೋರಣೆ ಮತ ಪ್ರಚಾರವಾಗಿತ್ತೆ; ವಿನಃ ಕಾಲವನ್ನು ದಾಖಲಿಸಿ ಚರಿತ್ರೆಯ ಪಟ್ಟಿಗೆ ಸೇರುವ ಬಯಕೆ ಇರಲಿಲ್ಲ.

ಈ ಮೂರು ಕೃತಿಗಳಿಗೆ ಪೂರಕವಾಗಿ ೧೨ನೇ ಶತಮಾನದ ಶಿವಶರಣರ ವಚನಗಳಲ್ಲಿ ಇವರ ಇರುವಿಕೆಯು ಕಂಡುಬರುತ್ತದೆ. ಬಿಜ್ಜಳ, ಕಲ್ಯಾಣ, ಮಂಗಳವೇಡೆ, ಬಸವಣ್ಣ ಇನ್ನೂ ಮುಂತಾದ ಶಿವಶರಣರ ಸ್ಮರಣೆ ಮತ್ತು ಅವರ ಜೊತೆಗಿನ ಸಂಭಾಷಣೆಯನ್ನು ಗಮನಿಸಿದರೆ ಈ ಕೃತಿಗಳು ೧೨ನೇ ಶತಮಾನದ ಹಾಸು ಪಾಸಿನಲ್ಲಿ ರಚನೆಯಾಗಿರಬೇಕು ಮತ್ತು ಆ ಗಳಿಗೆಯಲ್ಲಿ ನಡೆದ ಘಟನೆಯಾಗಿರಬೇಕು. ಹರಿಹರನ ಕಾಲದಲ್ಲಿ ಶಿವಶರಣರನ್ನು ಪುರಾಣೀಕರಿಸುವ ನಿಟ್ಟಿನಲ್ಲಿ ಹಾಲುಮತದ ಸಾಂಸ್ಕೃತಿಕ ಮತ್ತು ಚಾರಿತ್ರಿಕ ವ್ಯಕ್ತಿಗಳ ಪರಮಭಕ್ತಿಯನ್ನು ಪೌರಾಣಿಕರಿಸಲಾಗಿದೆ.

"ಕುರುಬ ಸಮಾಜಕ್ಕೆ ಸಂಬಂಧಿಸಿದಂತೆ ಉಣ್ಣೆ ಕತ್ತರಿಸುವ, ನೂಲುವ, ಕಂಬಳಿ ನೇಯುವ, ಹಾಲು ಮೊಸರಿನ ಹೈನುಗಾರಿಕೆ ಮಾಡುವ, ಕಂಬಳಿ ಗದ್ದುಗೆ, ಕಂಬಳಿ ಕಂಥೆ ಬಳಸುವ ವಿವರವು ಅಲ್ಲಲ್ಲಿ ಬರುತ್ತದೆ. ಈ ಕೃತಿಯಲ್ಲಿಯ

"ಲಿಂಗಾರ್ಪಿತ ಮಾಡಿಲ್ಲದೆ ಬೋನವ
ನಂಗಸುಖಕೆ ಸಲ್ಲಿಸಿದರೆ
ಹಿಂಗದು ಭವ" (೪–೨೩೧)
"ಗುರುವೆ ನೀ ಕರುಣಿಸು ಲಿಂಗನಿಷ್ಠೆಯ (೩–೧೩೯)
"ನಿಮ್ಮ ಮಠದೊಳು ಜಂಗಮರಿರುವುದು ಲೇಸು" (೩–೧೯)
"ಬಂದ ಜಂಗಮಕನ್ನ ಉದಕವನಿತ್ತು" (೩–೫೨)

ಇತ್ಯಾದಿ ಮಾತುಗಳು ಕುರುಬರ ಈ ಕಥೆಯಲ್ಲಿ ಲಿಂಗಾಯತದ ವಾತಾವರಣವನ್ನು ಪ್ರತಿನಿಧಿಸುತ್ತವೆ. ಇಲ್ಲಿಯ ಕೇಂದ್ರಪ್ರಶ್ನೆ ಕುಲಭೇದ ನಿರಾಕರಣೆ. ಹೀಗಾಗಿ "ಈಶ ಮುಟ್ಟಿದ ಕುಲ ಲೇಸಾಯಿತು" (೨–೫೦) "ಜಾತಿ ಸೂತಕವೆಂಬ ನೀತಿಯ ಚುನ್ನದ ರೀತಿಯ ನೀನಾಡಬೇಡ" (೨–೫೭) "ಜಾತಿರಹಿತನು ಅಜಾತನೊಲಿದವಗೆ ಜಾತಿನೀತಿಯನರಸುವರೆ" (೨–೭೦) ಭುವನದೊಳಗೆ ಹದಿನೆಂಟು ಕುಲಗಳೆಂದು ವಿವರವರಿಯದೆ ನುಡಿವರು ಸುವಿಚಾರದಿ ಪೇಳುವೆ ಭಕ್ತಕುಲವೊಂದು ಭವಿಗಳ ಕುಲವೆಲ್ಲವೊಂದು" (೨–೭೯) ಇತ್ಯಾದಿ ಹೇಳಿಕೆಗಳು ಶರಣರ ನಿಲುವನ್ನು ಬೆಂಬಲಿಸುತ್ತವೆ."[2]

ಈ ಹಿನ್ನೆಲೆಯಲ್ಲಿ ಸಿದ್ಧಮಂಕ ಚರಿತೆಯು ೧೨ನೇ ಶತಮಾನದಲ್ಲಿ ಆಗಿ ಹೋದ ಘಟನೆಯೆಂದು ತಿಳಿದುಬರುವುದು. ಹಾಗೂ ಲಿಂಗಾಯತ ಸಮಾಜದ ಜೊತೆಗೆ ಹಾಲುಮತ ಪುರಾಣಗಳು ಇಂತಹ ಕಾಳಜಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾಗಿರುವುದನ್ನು ಈ ಪುರಾಣಗಳ ರಚನೆ ಸ್ಪಷ್ಟಪಡಿಸುತ್ತವೆ. ಮತ್ತು ಹಾಲುಮತ ಸಮುದಾಯಕ್ಕೆ ಸಂಬಂಧಿಸಿದಂತೆ ಕಥೆಯನ್ನು ರಚನೆ ಮಾಡುವುದಕ್ಕೆ ಸಾಂಗತ್ಯ, ಕಂದ, ಷಟ್ಪದಿ, ಗದ್ಯ ಪ್ರಕಾರವನ್ನು ಬಳಸಿಕೊಳ್ಳಲಾಗಿದೆ. ಇಂತಹ ಪ್ರಕಾರಗಳ ರಚನೆಯ ಕಾಲವು

೧೨ನೇ ಶತಮಾನದ ನಂತರ ಹೆಚ್ಚು ಪ್ರಚಲಿತವಿತ್ತು. ಆದ್ದರಿಂದ ಈ ಪುರಾಣಗಳ ಕಾಲವು ೧೨ನೇ ಶತಮಾನದ ಹಾಸು ಪಾಸಿನಲ್ಲಿರಬಹುದೆಂದು ತಿಳಿದುಬರುವುದು.

ತಗರ ಪವಾಡದಲ್ಲಿ ಕಿನ್ನರಿ ಬ್ರಹ್ಮಯ್ಯ, ಚೆನ್ನಬಸವರಾಜು, ಸೊನ್ನಲಿಗೆಯ ಸಿದ್ಧರಾಮ. ಇನ್ನೂ ೨೪ ಶರಣರನ್ನು ಉಲ್ಲೇಖಿಸಲಾಗಿದೆ. ಅಲ್ಲದೆ ತಗರ ಪವಾಡವು ನಡೆಯುವುದು ಬಿಜ್ಜಳನ ಕಲ್ಯಾಣದಲ್ಲಿಯೇ ಆಗಿದೆ. ಜೊತೆಗೆ ಈ ಘಟನೆಗೆ ಶಾಸನ ಆಧಾರ ಒದಗಿಸುತ್ತದೆ. ತುರುವೇಕೆರೆ ತಾಮ್ರಶಾಸನ-೧,೨,೩ ಫಲಕಗಳು ತಗರನ್ನು ಶಾಂತಮುತ್ತಯ್ಯ ಬದುಕಿಸಿದ್ದು, ಶಾಂತಮುತ್ತಯ್ಯ ಕುರುಬರ ಗುರುವಾಗಿದ್ದು, ಶಾಂತಮುತ್ತೈಯನವರೂ, ಮಂಕಯ್ಯನವರೂ, ಮಠಾಧಿಪತಿಗಳಾಗಿದ್ದುದನ್ನೂ ತಿಳಿಸುತ್ತವೆ. ಸಿದ್ಧಮಂಕ ಚರಿತೆಯಲ್ಲಿ ಕುರುಬ ಸಮುದಾಯವು ಲಿಂಗಾಯತ ಸಮುದಾಯಕ್ಕೆ ಮತಾಂತರವಾಗುವ ಸೂಕ್ಷ್ಮತೆ ಕಂಡು ಬರುತ್ತದೆ. ವಿಭೂತಿ, ಪಾದಪೂಜೆಗಳು ಭಂಡಾರ ಸಂಸ್ಕೃತಿಯನ್ನು ಮರೆಮಾಡುವ ಪರದೆಯನ್ನು ತಿಳಿಸಿಕೊಡುತ್ತದೆ.

ರಸ್ತಾಪೂರ ಭೀಮಕವಿ ಶಂಕರದಾಸರ ಹಾಲುಮತೋತ್ತೇಜಕ ಪುರಾಣ ಇದರ ಕಾಲವನ್ನು ಕವಿಯು ಹೀಗೆ ಹೇಳುತ್ತಾನೆ.

"ಮುದವಿಟ್ಟು ಲಾಲಿಸಿರಿ ಶಾಲಿವಾಹನ ಶಕದ
ಪದಿನೆಂಟುನೂರ ಮೂವತ್ತು ನಾಲ್ಕನೆಯ ಸೇ
ರಿದ ಮಹಾಪರಿಧಾವಿ ನಾಮಸಂವತ್ಸರಾಶ್ವೀಜ ಶುಕ್ಲಪಕ್ಷದಶಮಿ
ಸದಮಲಾದಿತ್ಯ ವಾರಕ್ಕೆ ಬಹುಸಾಗದಿಂ
ದಿದು ಪೇಳಿ ಮುಗಿಸಿದಂ ಭೂಮಿಯೊಳು ರಸ್ತಾಪು
ರದ ಶರಭಲಿಂಗನ ಪಾದಾಬ್ಜಷಟ್ಪದಗೋಪಮನ ಕವಿಭೀಮಾಖ್ಯನು"[೧]

ಕ್ರಿ.ಶ. ೧೯೫೨ರಲ್ಲಿ ರಚನೆಯಾಗಿರುವುದನ್ನು ತಿಳಿಸುತ್ತದೆ. ಇದು ಷಟ್ಪದಿ ಪ್ರಕಾರದಲ್ಲಿ ಒಂಬತ್ತು ಸಂಧಿಯಲ್ಲಿ ಕಥೆಯನ್ನು ಅಭಿವ್ಯಕ್ತಪಡಿಲಾಗಿದೆ. ಕುರಿಯ ಹುಟ್ಟು, ಶಿವನೇ ಕುರುಬರ ಮೂಲ ಪುರುಷ. ಸಮಾಜದಲ್ಲಿ ಮುಗ್ಧತೆಯ ಜನರ ಮೂಲಕ ಶಿವಚರಿತೆಯನ್ನು ಹೇಳಿಸುವ ಕ್ರಿಯೆಯು ವಿಶಿಷ್ಟವಾಗಿದೆ. ಅದಕ್ಕೆ ಪೂರಕವಾಗಿ ಶಿವಪದ್ಮನ ಜನನ. ಶಿವಸಿದ್ದ ಬೀರೇಶನ ಜನನ, ಅಕ್ಕಮ್ಮ, ಕನ್ನಿಕಾದೇವಿ, ಹರಿದೇವ, ಶಿಷ್ಯ ಮಾಳಿಂಗರಾಯನ ಪವಾಡ ತಂತ್ರಗಳು ಕಥೆಯ ಮುಖ್ಯ ಅಂಶಗಳಾಗಿವೆ. ಜೊತೆಗೆ ಗೊಲ್ಲಾಳನ ಚರಿತ್ರೆಯನ್ನು ಒಳಗೊಂಡಿದೆ. ಈ ಪುರಾಣದ ಪ್ರಭಾವದಿಂದಲೇ ಉಳಿದ ಪುರಾಣಗಳು ಬೆಳವಣಿಗೆಯಾಗಿವೆ. ಏಕೆಂದರೆ ಕಥೆಯಲ್ಲಿನ ವ್ಯಕ್ತಿನಾಮ, ಸ್ಥಳನಾಮಗಳು ಸಾಮ್ಯತೆಯನ್ನು ಹೊಂದಿರದಿದ್ದರೂ ವಸ್ತು ಮಾತ್ರ ಒಂದೇ ಆಗಿದೆ. ಆದಾಗ್ಯೂ ಹಾಲುಮತ ಪುರಾಣಗಳನ್ನು

ಮೂರು ರೀತಿಯಾಗಿ ವಿಂಗಡಿಸಬಹುದು. ಸಿದ್ದಮಂಕ ಚರಿತೆ ಮತ್ತು ತಗರ ಪವಾಡ ಕೃತಿಗಳು ಪುರಾಣೀಕರಣದಿಂದ ಚಾರಿತ್ರಿಕ ವರ್ಗವನ್ನು ಹೇಳುವವು. ಅದಕ್ಕೆ ಚಾರಿತ್ರಿಕ ವ್ಯಕ್ತಿಗಳ ಕಾವ್ಯವೆಂದು ತಿಳಿದುಬರುತ್ತವೆ. ಮಾಳಿಂಗರಾಯನ ಕಾವ್ಯ, ಗೊಲ್ಲಾಳಯ್ಯನ ಪುರಾಣ ಹಾಗೂ ಹುಲಜಂತಿ ಮಹಿಮಾಂತರ ಮಹಾಲಿಂಗರಾಯರ ಹಾಲುಮತ ಪುರಾಣಗಳು ಹಾಲುಮತ ಸಮುದಾಯದ ಸಾಂಸ್ಕೃತಿಕ ವೀರರ ಚರಿತ್ರೆಯನ್ನು ಹೇಳುತ್ತವೆ.

ಭೀಮಕವಿ (ರಸ್ತಾಪುರ)ಯ ಹಾಲುತೋತ್ತೇಜಕ ಪುರಾಣ; ಪಂಡಿತ ಚನ್ನಬಸವಕವಿಯ ಹಾಲುಮತ ಪುರಾಣವು, ಬಸವಣ್ಣಪ್ಪ ನೀಲಪ್ಪ ಹಳವಳ್ಳಿ ಅವರ ಹಾಲುಮತ ಪುರಾಣವು, ಮತ್ತು ಸಿದ್ಧಪ್ಪ ಮೇಟಿ ಅವರ ಜನಪದ ಹಾಲುಮತ ಮಹಾಕಾವ್ಯ, ಈ ಪುರಾಣಗಳು ಹಾಲುಮತ ದೈವಗಳನ್ನು ಆಧರಿಸಿ ಬೀರಪ್ಪ, ಅಮೋಘಸಿದ್ಧ, ಸಿದ್ಧರಾಮೇಶ್ವರ, ಪದ್ಮಣ್ಣ ಹಾಗೂ ರೇವಣಸಿದ್ಧ ಸುತ್ತ ರಚನೆಯಾಗಿರುವ ಪೌರಾಣಿಕ ಚರಿತ್ರೆಗಳಾಗಿವೆ.

ಕೆಲವು ಪುರಾಣಗಳು ತಮ್ಮ ಸಮುದಾಯದ ಅಸಡ್ಡೆಯನ್ನು ದೂರಮಾಡಲು ರಚನೆಯಾದರೆ, ಮತ್ತೊಂದು ಕಡೆ ಆರಾಧ್ಯ ದೈವಗಳ ವ್ಯಕ್ತಿಗಳು ಚಾರಿತ್ರಿಕವಾಗಿ ಆಗಿಹೋದವರೆಂದು ತಿಳಿಸುತ್ತದೆ. ಮಗದೊಂದು ಕಡೆ ಕಥೆಯ ಪುರಾಣಗಳ ಮೂಲಕವೇ ಆಗಿವೆ ಎಂದು ಹೇಳುತ್ತವೆ. ನಂತರ ಲಿಂಗಾಯತ ಸಮುದಾಯಕ್ಕೂ ಹೊಂದಿಕೊಂಡು ತನ್ನತನವನ್ನು ಬದಲಾಯಿಸಿಕೊಳ್ಳದೆ ಆಚರಣೆಯಲ್ಲಿ ನೆಲೆಯೂರಿದ ಸಂಗತಿಯನ್ನು ತಿಳಿಸುವುದು ಮುಖ್ಯವಾಗಿದೆ. ನಂತರ ಸ್ಥಾನದಲ್ಲಿ ಹಳವಳ್ಳಿ ಅವರು ಸಂಪಾದಿಸಿದ ಕೃತಿಯು ಕ್ರಿ.ಶ ೧೯೧೦ರಲ್ಲಿ ಗದಗನಲ್ಲಿ ಹಾಲುಮತ ಮಹಾಸಭೆಯು ಜರುಗಿದಾಗ ತಾಳೆ ಓಲೆಯಿಂದ ಕಾಗದ ಪ್ರತಿಯಾಗಿಸಿದ್ದನ್ನು ತಿಳಿಸುತ್ತಾರೆ. ಆದರೆ ತಾಳೆ ಪ್ರತಿಯ ಕಾಲವನ್ನು ತಿಳಿಸಿಲ್ಲ. ತಾಳೆಗರಿಯಲ್ಲಿ ಸಂಪಾದನೆ ಮಾಡಿದ್ದರು, ಕಾಲವೇಕೆ ತಿಳಿಸಿಲ್ಲ? ಎಂಬುದು ಸಂದೇಹಾಸ್ಪದವಾಗಿ ಉಳಿದಿರುವುದು ವಿಷಾದದ ಸಂಗತಿ. ಒಂದು ಮಟ್ಟದಲ್ಲಿ ಈ ಜನಾಂಗವು ಪುರಾತನ ಕಾಲದಿಂದಲ್ಲೂ ಉನ್ನತಮಟ್ಟದಲ್ಲಿತ್ತು. ಕೆಲ ಕಾಲನಂತರ ಜಾತಿಯ ಸೂಚಕವಾಗಿ ಬದಲಾಗಿ ಹೀನಾವಸ್ಥೆಯಲ್ಲಿರಬಹುದು. ಆದ್ದರಿಂದ ಕೃತಿಯನ್ನು ಪ್ರತಿಮಾಡುವುದರಿಂದ ಉನ್ನತಮಟ್ಟಕ್ಕೇರಿಸಬಹುದು. ಹಾಲುಮತಸ್ಥರಿಗೆ ಈ ಪ್ರತಿದಾನದಿಂದ ಪ್ರಸಾರ ಮಾಡುವ ಪ್ರಕ್ರಿಯೆಯನ್ನು ಬಳಸಿದರು. ಬೀರಪ್ಪ ಐತಿಹಾಸಿಕ ವ್ಯಕ್ತಿ, ವಾಸ್ತವ ಪುರುಷ ಎಂದು ಹೇಳಲು ಕರ್ತೃ ಅನೇಕ ಕೃತಿಗಳನ್ನು ಆಧಾರವಾಗಿಸಿಕೊಂಡಿದ್ದಾನೆ. ಈ ನಿಟ್ಟಿನಲ್ಲಿ ಸ್ಕಂದಪುರಾಣ, ವಿಷ್ಣು ಪುರಾಣ, ಶಿವಪುರಾಣಗಳನ್ನು ಅವಲೋಕಿಸಿದ್ದನ್ನು ನೋಡಬಹುದು.

ಗೋಲ್ಲಾಳಯ್ಯನ ಪುರಾಣದಲ್ಲಿ ಕಾಲದ ಬಗ್ಗೆ ಖಚಿತವಿಲ್ಲವಾದರೂ ಕಾಲವನ್ನು ನಿರ್ಧರಿಸುವ ಅಂಶಗಳು ಗೋಚರಿಸುತ್ತವೆ. ಇದರಲ್ಲಿನ ವೀರನಾಯಕ ಗೊಲ್ಲಾಳನ ಬಗೆಗೆ ಅನೇಕ ಕೃತಿಗಳು

ಉಲ್ಲೇಖ ಮಾಡಿವೆ. ಹಾಗೂ ಇದೇ ಪುರಾಣದಲ್ಲಿ ಹರಿಹರನ ಪ್ರಸ್ತಾಪವೂ ವಿಶಿಷ್ಠ ನೆಲೆಯಲ್ಲಿ ವ್ಯಕ್ತವಾಗಿದೆ.

"ಹರೀಶ್ವರನಲ್ಲಿ ಬರಲು ನಿದಿಕೇಳುತ
ಶರಣುಗಳಾಸನವಿತ್ತು.
ಹಿರಿದಾರ್ಘ್ಯ ಪಾದ್ಯಾಚ ತೆರದಿ ಭಸಿತ ವೀಳ್ಯ
ವಿರದಿತ್ತು ಕೇಳ್ದನವರನು"

ಈ ಪದ್ಯವು ಗೋಲ್ಲಾಳಯ್ಯನ ಪುರಾಣದ ಕರ್ತೃ ಸ್ವತಃ ಹರೀಶ್ವರನ ಸನ್ನಿದಿಯಲ್ಲಿ ಚರ್ಚೆ ಮಾಡಿ ನಿನ್ನಂತೆಯೇ ನಾನು ಕೃತಿ ರಚಿಸುವೆನೆಂದು ಹೇಳಿದಂತೆ ಕಾಣುವುದು. ಇದ್ದರಿಂದ ಈ ಪುರಾಣವೂ ೧೨ನೇ ಶತಮಾನದ ಕೊನೆಯಲ್ಲಿ ರಚನೆಯಾಗಿರಬಹುದೆಂದು ತಿಳಿದುಬರುತ್ತದೆ. ಈ ಕಥೆಯು ಬಿಜಾಪುರದ ಗೋಲಗೇರಿಯಲ್ಲಿ ನಡೆದದ್ದನ್ನು ತಿಳಿಸುತ್ತದೆ. ಇದಕ್ಕೆ ಪೂರಕವಾಗಿ ಅನೇಕ ಕನ್ನಡ ಕೃತಿಗಳು ಮಾಹಿತಿಯನ್ನು ಒದಗಿಸುತ್ತವೆ. ಅವು ಈ ಕೆಳಗಿನಂತಿವೆ.

**೧. ಪ್ರೌಢರಾಯನ ಕಾವ್ಯ**

"ಈ ಕೃತಿಯ ಕರ್ತೃವಿನ ಹೆಸರು ಅದೃಶ್ಯ ಕವಿ. ಈತನಿಗೆ ಸಿದ್ಧಾದೃಶ್ಯ ಅದ್ರೀಶ ಇಲ್ಲವೆ ಅದ್ರೀಶಪ್ಪನೆಂದು ಕಂಡುಬರುತ್ತದೆ. ಈತನ ತಂದೆ ಅಗ್ನೇಂದ್ರ ಮತ್ತು ಅಜ್ಜ ಶಂಕರ. ಇವರು ವಿಜಾಪುರ ಪ್ರಾಂತದ ತೊರೆಸಾಲು ಎಂದರೆ ಹೊಳೆಸಾಲು ಭಾಗದ ಪರಗಣೆಯ ಕೊಲ್ಹಾರದ ದೇಸಾಯರಾಗಿದ್ದರು.

"ಆಲಿಸವನಿಪ ಕಾಟಕೋಟ ಸುತಗೊಲ್ಲಾಳ
ಬಾಲನಾಗಿರುತ ಕುರಿಹಿಕ್ಕೆ ಲಿಂಗವ ಮಾಡಿ
ಪಾಲೆರೆದು ಪೂಕಿಸಲ್ವೊಂದು ದಿನ ಪಿತ ಕಂಡು ಜರೆದು ಚರಣದಿ
ನೂಕಲು ಕಾಲಹರನೊದೆಬಹುದೇ ದ್ರೋಹಿ ಎಂದವನ
ಕಾಲ ಖಂಡಿಸಲು ದೃಡಕೊಲಿದು ಕೈಲಾಸಕ್ಕೆ
ನೀಲ ಕಂಧರನೊಯ್ದು ಗಣಪದವ ಕೊಟ್ಟ ದುಗ್ಧಾಭಿಷೇಕದ ಫಲಿದಲಿ"[೧೧]

**೨. ಶಿವತತ್ತ್ವ ಚಿಂತಾಮಣಿ**

ಲಕ್ಕಣ್ಣ ದಂಡೇಶನು ಶಿವತತ್ತ್ವ ಚಿಂತಾಮಣಿ ಕೃತಿಯಲ್ಲಿ ಮೂವತ್ತೇಳನೆಯ ಸಂಧಿ ಅಸಂಖ್ಯಾತರ ಕಥೆಗಳು ಎಂಬ ಭಾಗದಲ್ಲಿ ಗೊಲ್ಲಾಳ ಲಿಂಗಕ್ಕೆ ಪೂಜೆ ಮಾಡುತ್ತಿರುವುದು ತಂದೆ ಹಿಕ್ಕೆಯನ್ನು ಲಿಂಗವೆಂದು ಪೂಜಿಸಿದುದಕ್ಕೆ ಕಾಲಿನಿಂದ ಒದೆದ ಸಂಗತಿಯನ್ನು ತಿಳಿಸುತ್ತಾನೆ.

"ಗೊಲ್ಲ ಕಾಟಂಕೋಟನೆನಿಪೋರ್ವ ಭಕ್ತನತಿ
ಬಲಿದನು ಪೂಜಿಪಾಡಿನ ಹಿಕ್ಕೆ ಲಿಂಗಮಂ
ಖುಲ್ಲನವರಯ್ಯ ಹಲದಿವಸದ ಕಾಣುತಂ ಕೋಪದಿಂ ಕೋಪದಿಂ ಕಾಲಲೊದೆಯೆ
ಮಲ್ಲಿಕಾರ್ಜುನ ನೀಕರಿಸಿದವ ತಂದೆಯೇ
ಕೊಲ್ಲಬೇಕೆನುತಲಾತನ ವಧಿಸಲು ಲೋಕ
ವಲ್ಲಭಂ ಬಂದು ನಿಜರೂಪದೋಱುದನ ಮಲಚರಣಾಂಬುಜಕ್ಕೆ ಶರಣು"[೧೧]

ಹಾಲುಮತ ಪುರಾಣಗಳಲ್ಲಿ ಬರುವ ಎಲ್ಲಾ ನಾಯಕರಿಗಿಂತ ವೀರಗೊಲ್ಲಾಳನ ವ್ಯಕ್ತಿತ್ವ ವಿಶಿಷ್ಟವಾಗಿದೆ. ಏಕೆಂದರೆ ಹಿಕ್ಕೆಯನ್ನು ಲಿಂಗವೆಂದು ಪರಿಭಾವಿಸಿ ಪೂಜಿಸುವ ಪದ್ಧತಿಯು ದುಡಿಮೆಯ ಸಂಕೇತವಾಗಿದೆ. ಹೆತ್ತವರನ್ನು ಶಿರಚ್ಛೇದನ ಮಾಡುವ ಪರಮಭಕ್ತನಾಗಿ ಮೂಡಿ ಬಂದಿದ್ದಾನೆ. ಶಿವನ ಮೋಹದ ಭಕ್ತಿಯನ್ನು ತೋರಿಸಲು ಕೃತಿಕಾರನು ಒಂದು ಬೃಹತ್ ಗ್ರಂಥ ರಚಿಸಿರುವುದು ಆ ವ್ಯಕ್ತಿಯ ಮಹತ್ವವನ್ನು ಹೇಳುತ್ತದೆ. ಮತ್ತೆ ಮುಗ್ಧತೆಯಿಂದ ತಂದೆಯ ಜೀವನವನ್ನು ಪಡೆದದ್ದು ಜೀವನದಲ್ಲಿ ಆಧ್ಯಾತ್ಮಿಕ ಬಲವನ್ನು ಬಿತ್ತರಿಸುತ್ತದೆ.

**೩. ಸಿದ್ಧೇಶ್ವರ ಪುರಾಣ**

ಈ ಕೃತಿಯ ಕಾಲ ಕ್ರಿ.ಶ. ಸು.೧೫೫೦ ಎಂದು ತಿಳಿದುಬರುತ್ತದೆ. ಇದು ತುಮಕೂರಿನ ಎಡೆಯೂರು ಸಿದ್ಧಲಿಂಗ ಯತಿಗಳ ಚರಿತ್ರೆಯನ್ನು ತಿಳಿಸುತ್ತದೆ. ಇದು ವೀರಶೈವ ಕೃತಿ. ಕುರುಬರ ಗೊಲ್ಲಾಳನ ಪರಮ ಭಕ್ತಿಯನ್ನು ಧ್ವನಿಸುವುದು ವಿಶಿಷ್ಟವಾಗಿದೆ. ಗೊಲ್ಲಾಳ ಕುರಿ ಕಾಯುವ ಮೃಡನಾದರೂ ಭೂಮಿಯಲ್ಲಿ ಶ್ರೇಷ್ಠ ಭಕ್ತನೆಂದು ಕೀರ್ತಿವೆತ್ತ ಕಥೆಯನ್ನು ಈ ಪದ್ಯ ಸಾಕ್ಷೀತು ಪಡಿಸುತ್ತದೆ.

"ಅಲ್ಲಿರ್ದ ಭಕ್ತರದ ಕಂಡು ಚೋದ್ಯಂಬಡಂತೆ
ಮಲ್ಲಶೆಟ್ಟಿಗೆ ಬಳ್ಳಲಿಂಗವಾದುದು ವೀರ
ಗೊಲ್ಲಾಳಗೆ ಕುಱಿಯ ಹಿಕ್ಕೆಯು ಲಿಂಗವಾದುದು ಕಲ್ಯಾಣ ಪಟ್ಟಣದೊಳ್"[೧೨]

ಇವುಗಳಲ್ಲದೆ ಗೋಲ್ಲಾಳಯ್ಯನ ಪುರಾಣದ ಮುನ್ನುಡಿಯಲ್ಲಿ ಪಾಲ್ಕುರಿಕೆ ಸೋಮಶ್ವರ ಪುರಾಣ, ದ್ವಿಪದಿಯಲ್ಲಿ ಶರಣ ಲೀಲಾಮೃತ ಕೃತಿಯಲ್ಲಿ ಬಸವಪುರಾಣ ಮತ್ತು ಅಮರಗಣಾಧೀಶ್ವರ ಚರಿತ್ರೆಗಳು (ಪುಟ.೧೪೭) ಕೃತಿಗಳಲ್ಲಿ ಗೊಲ್ಲಾಳನ ಉಲ್ಲೇಖಗಳು ವಿಸ್ತಾರವಾಗಿ ಬರುತ್ತವೆ. ಅಲ್ಲದೆ ಹಾಲುಮತದ ಸಿದ್ಧಮಂಕನ ಗುರು ಸಿದ್ಧರಾಮನ ಬಗ್ಗೆಯೂ ಕೆಲವು ವಚನಗಳಲ್ಲಿ ಉಲ್ಲೇಖಿಸಲಾಗಿದೆ. ರಾಘವಾಂಕನು ಸಿದ್ಧರಾಮ ಚರಿತ್ರೆ ಎಂದು ಕೃತಿಯನ್ನು ರಚಿಸಿದ್ದಾನೆ. ಅಕ್ಕ ನಾಗಲಾಂಬಿಕೆ ಅಧ್ಯಯನ ವಚನದಲ್ಲಿ ಈ ರೀತಿಯಾಗಿ ಸಿದ್ಧರಾಮನ ಕುರಿತು ಪ್ರಸ್ತಾಪ ಬರುತ್ತದೆ.

"ಅಂಗದಿಂದುದಯವಾದಾತ ಮಡಿವಾಳಯ್ಯ
ಲಿಂಗದಿಂದುದಯವಾದಾತ ರೇವಣಸಿದ್ಧಯ್ಯ
ಭಸ್ಮದಿಂದುದಯವಾದಾತ ಸಿದ್ಧರಾಮಯ್ಯ
ಪಾದೋದಕದಿಂದ ಉದಯವಾದವಳು ಅಕ್ಕಮಹಾದೇವಿ
ಮಂತ್ರದಿಂದುದಯವಾದಾತ ನಿಮ್ಮ ಸೋದರ ಮಾವ ಬಸವಣ್ಣ
ಪ್ರಸಾದದಿಂದುದಯವಾದಾತ ನೀನಲ್ಲವೆ ಚೆನ್ನಬಸವಯ್ಯ
ಬಸವಣ್ಣ ಪ್ರಿಯ ಚೆನ್ನ ಸಂಗಯ್ಯ"

ಆದಯ್ಯನ ವಚನದಲ್ಲಿಯೂ ಸಿದ್ಧರಾಮನ ಪ್ರಸ್ತಾಪಮಾಡುವನು.

" ಬಸವಣ್ಣನವರ ಭಕ್ತಿಸ್ಥಳ ಮಡಿವಾಳ ಮಾಚಯ್ಯನ ಮಾಹೇಶ್ವರ ಸ್ಥಳ
- - - - - - - - - - - - - - - - - - - - - - - - - - - -
- - - - - - - - - - - - - - - - - - - - - - - - - - - -
ರೇವಣ ಸಿದ್ಧರ ನಿಷ್ಠೆ ಸಿದ್ಧರಾಮ ತಂದೆಗಳ ಮಹಿಮೆ
ಮರುಳ ಸಿದ್ಧಯ್ಯ ದೇವರ ಅದೃಷ್ಟ ಪ್ರಸಾದ ನಿಷ್ಠೆ
- - - - - - - - - - - - - - - - - - - - - - - - - - - -
- - - - - - - - - - - - - - - - - - - - - - - - - - - -
- - - - - - - - - - - - - - - - - - - - - - - - - - - -
ನಿಮ್ಮೊಳಿನಗೆಂದಪುದೊ ಸೌರಾಷ್ಟ ಸೋಮೇಶ್ವರ"

"ಬಸವಣ್ಣನೆನ್ನ ಅಂಗ. ಮಡಿವಾಸೆನ್ನ ಮನ
ಪ್ರಭುವೆನ್ನ ಪ್ರಾಣ- - - - - - - - - - - - - - -
- - - - - - - - - - - - - - - - - - - - - - - - - - - -
- - - - - - - - - - - - - - - - - - - - - - - - - - - -
ನಿಜಗುಣನೆನ್ನ ಕ್ಷೆಮ. ರೇವಣಸಿದ್ಧಯ್ಯ ದೇವರೆನ್ನ ನೇತ್ರ
ಸಿದ್ಧರಾಮ ತಂದೆಗಳೆನ್ನ ನೇತ್ರದ ದೃಕ್ಕು
ಮರುಳಸಿದ್ಧಯ್ಯ ದೇವರೆನ್ನ ಶ್ರೋತ್ರ
- - - - - - - - - - - - - - - - - - - - - - - - - - - -
- - - - - - - - - - - -ಈ ನಿಮ್ಮ ಶರಣರ ಪಡಿದೋತ್ತಯ್ಯ"[೧೩]

ರೇವಣಸಿದ್ಧರ ಮಾಹಿತಿಯನ್ನು ತಿಳಿಯುವುದರ ಜೊತೆಗೆ ಸಿದ್ಧರಾಮನ ಕಾರ್ಯವನ್ನು ತಿಳಿಯಬಹುದಾಗಿದೆ.

ಹೀಗೆ ಹಾಲುಮತದ ನಾಯಕರ ಪುರಾಣದ ಕಥಾವಸ್ತು ಇನ್ನಿತರ ಎಲ್ಲಾ ಪುರಾಣಗಳಲ್ಲಿ ಉದಾಹರಿಸುವ ತಾತ್ವಿಕ ಗುಣ ಹೊಂದಿವೆ. ಇದರಿಂದ ಹಾಲುಮತ ಪುರಾಣಗಳು ವಿಶಾಲವಾದ ಬೆಳವಣಿಗೆಯನ್ನು, ಜನಪ್ರೀಯತೆಯನ್ನು ಪಡೆದಿದ್ದವು ಎಂದು ಕಂಡು ಬರುತ್ತದೆ.

೨. ಧಾರ್ಮಿಕ

"ಮಾನವನ ಸಾಮಾಜಿಕ ಜೀವನದ ಸ್ಥಿರತೆ ಹಾಗೂ ಭದ್ರತೆಯನ್ನು ನೀಡುವಲ್ಲಿ ಮುಂಚೂಣಿಯಲ್ಲಿರುವುದು. ಧರ್ಮದ ಸಾರವಾದ ಪಾವಿತ್ರ್ಯತೆಯನ್ನು ಅಡಿಪಾಯದಲ್ಲಿ ಸಮಾಜವೇ ಮೂರ್ತಿವೆತ್ತ ಸ್ವರೂಪದಂತಿದೆ."[೮] ಎಂದು ಕ್ರಿಯಾತ್ಮಕವಾದಿ ಸಮಾಜಶಾಸ್ತ್ರಜ್ಞ ಡರ್ಖಿಮ್ ಅಭಿಪ್ರಾಯ ಪಡುತ್ತಾರೆ. ಎಂದರೆ ಧರ್ಮವೂ ವ್ಯಕ್ತಿನಿಷ್ಠ ಮತ್ತು ಸಾಮೂಹಿಕ ಕಾರ್ಯಗಳನ್ನು ನಿರ್ವಹಿಸುತ್ತದೆ. ಮನುಷ್ಯನ ಲೌಕಿಕ ಮತ್ತು ಅಲೌಕಿಕ ಅನುಭವಗಳ ವ್ಯತ್ಯಾಸವನ್ನು ಭೇದಿಸುವ ಮಂತ್ರವಾಗಿದೆ.

ಧರ್ಮ ಎನ್ನುವುದು ನಂಬಿಕೆ ಮತ್ತು ಆಚರಣೆಗಳಾಗಿ ಸಮುದಾಯ ಬದ್ಧವಾದಾಗ, ವ್ಯಕ್ತಿ ತನ್ನ ಸ್ವಂತ ಬದುಕನ್ನು ಹೇಗೆ ಕಟ್ಟುತ್ತಾನೆ. ಯಾವ ರೀತಿ ಉಳಿಸಿಕೊಂಡು ಹೋಗುವನು ಎನ್ನುವುದನ್ನು ತಿಳಿಸುವುದು. ಇದನ್ನೇ ಇವತ್ತಿನ ಚಿಂತನೆಯಲ್ಲಿ ಜೀವನ ವಿಧಾನವೆಂದು ಕರೆಯುತ್ತೇವೆ. 'ಮಾನವ ಕುಲಂ ತಾನೊಂದೆ ಒಲಂ' ಎಂಬ ಪಂಪನ ಮಾತು ಮನುಷ್ಯ ಎಲ್ಲಾ ಪ್ರಾಣಿ ಪಕ್ಷಿಗಳಿಗಿಂತ ಎಷ್ಟು ಭಿನ್ನ ಹೊಂದಿದ್ದಾನೆ, ಆತನ ಮಹತ್ವ ಎಂತಹದ್ದು ಎಂದು ಹೇಳುತ್ತಾ ಜಾತ್ಯಾತೀತ ಸಮಾಜವನ್ನು ನಿರ್ಮಿಸಲು ಪ್ರಯತ್ನ ಪಡುವನು. ಈ ಉಕ್ತಿಯ ಹಿಂದೆ ಸಮಾಜದಲ್ಲಿ ಅನೇಕ ಕುಲಗಳಿದ್ದವೂ ಅವುಗಳು ಒಂದಿಲ್ಲೊಂದು ವಿಷಯಕ್ಕೆ ಸಂಘರ್ಷವನ್ನು ಕಂಡಿರಬಹುದು. ಆ ಕಾರಣಕ್ಕೆ ಪಂಪ ಇಂತಹ ನೀತಿಯ ಉಕ್ತಿಯನ್ನು ಸಾಹಿತ್ಯದ ಮೂಲಕ ಸಮಾಜಕ್ಕೆ ವರ್ಗಾಯಿಸರಬಹುದಾಗಿದೆ. ಇಂತಹ ಕುಲಗಳನ್ನು, ಸಮುದಾಯಗಳನ್ನು, ಸಂಬಂಧಗಳನ್ನು ಮತ್ತು ಚಟುವಟಿಕೆಗಳನ್ನು ಧರ್ಮ ನಿಯಂತ್ರಿಸುತ್ತದೆ. ಸ್ವರ್ಗ-ನರಕ, ಭೂತ-ಪ್ರೇತ, ಆತ್ಮ ಪರಮಾತ್ಮ ಮುಂತಾದ ಕಲ್ಪನೆಗಳ ಮುಖಾಂತರ ಮಾನವನ ಚಟುವಟಿಕೆಗಳನ್ನು ಶಿಸ್ತಿನ ಮೂಲಕ ಮೌಲ್ಯಕರಿಸುವ ತಂತ್ರವೂ ಧರ್ಮಕ್ಕಿದೆ. ಇದು ಬಹುಸಂಸ್ಕೃತಿಗಳ ಐಕ್ಯತೆಗೆ ಕಾರಣ.

"ತ್ವರಿತಗತಿಯ ಸಾಮಾಜಿಕ ಪರಿವರ್ತನೆ ಹಾಗೂ ವ್ಯಾಪಕ ಸಾಮಾಜಿಕ ಚಲನಶೀಲತೆಯ ಸಂದರ್ಭಗಳಲ್ಲಿ ಜನರನ್ನು ಒಂದುಗೂಡಿಸುವಲ್ಲಿ ಧರ್ಮವು ನೀಡುವ ಕೊಡುಗೆಯು ಮಹತ್ವದೆನಿಸುತ್ತದೆ ಎಂದು ಥಾಮಸ್ ಎಫ್. ಓಡಿಯಾ ಅಭಿಪ್ರಾಯ ಪಡುತ್ತಾರೆ. ಆದಿವಾಸಿ ಸಮಾಜಗಳಲ್ಲಿ ತಮ್ಮ

ಸಮುದಾಯಗಳನ್ನು ರೋಗ-ರುಜಿನಗಳಿಂದ ಕ್ಷಾಮ ಡಾಮರುಗಳಿಂದ, ನೆರೆ-ಪ್ರವಾಹಗಳಿಂದ, ವಿಪತ್ತುಗಳಿಂದ, ಶತೃಗಳ ಕಾಟ ಮೊದಲಾದವುಗಳಿಂದ ರಕ್ಷಿಸಿಕೊಳ್ಳಲು ಜನ ಐಕ್ಯಮತದಿಂದ ಸಾಮೂಹಿಕವಾಗಿ ಧರ್ಮಾಚರಣೆಯಲ್ಲಿ ತೊಡಗುವುದನ್ನು ಹಾಗೂ ಇದು ಆಧುನಿಕ ಸಮಾಜದಲ್ಲಿ ಮುಂದುವರೆದಿರುವುದನ್ನು ಕಾಣಬಹುದು"[೧೫] ಎಂಬ ಅಭಿಪ್ರಾಯವು ಜನಸಮುದಾಯಗಳು ಧಾರ್ಮಿಕ ನಂಬಿಕೆ, ಆಚರಣೆಗಳಿಂದ ಪ್ರಬಲ ಸಮುದಾಯವನ್ನು ದೂರವಿಡುವ ತಂತ್ರ ಬಳಕೆ ಮಾಡುತ್ತಿತ್ತು. ಪ್ರಾಣಿಗಳ ಬಲಿ, ನರಬಲಿ, ವೇಶ್ಯಾವೃತ್ತಿ, ಗುಲಾಮಗಿರಿ, ಅಸ್ಪೃಶ್ಯತೆ, ದುರ್ಬಲರ ಶೋಷಣೆ ಮುಂತಾದ ಅನಿಷ್ಟ ಆಚಾರಣೆಗಳನ್ನು ವಿಧಿಸಿಕೊಳ್ಳುತ್ತಾ ಎಲ್ಲೋ ಒಂದು ಕಡೆ ಸಮಾಜಕ್ಕೆ ಕುತ್ತು ತಂದು ಕೊಳ್ಳುವುದು ಕಾಣುತ್ತದೆ. ಆದರೆ ಈ ವಿಧಿ-ಆಚರಣೆಗಳೇ ಅಂದಿನ ರಕ್ಷಣೆಯ ಆರಕ್ಷಕರಂತೆ ಕಾರ್ಯ ನಿರ್ವಹಿಸುತ್ತಿದ್ದವು.

"ಸಮಾಜದ ಜನರ ನಡತೆಯನ್ನು ನಿಯಂತ್ರಿಸುವ ನೈತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಸಂರಕ್ಷಿಸಿ ಪವಿತ್ರವನ್ನಾಗಿಸುವುದು ಧರ್ಮ"[೧೬] ಎಂದು ಓಡಿಯಾ ಅಭಿಪ್ರಾಯ ಪಡುತ್ತಾರೆ. ಅಂದರೆ ಜನರ ಮನೋಭಾವನೆಯಲ್ಲಿ ತ್ಯಾಗ, ಅನುಕಂಪ, ದಯೆ, ದಾಕ್ಷಿಣ್ಯ, ಸಹನಶೀಲತೆ, ಸೇವಾ ಮನೋಭಾವ, ಸಹಕಾರ, ಉಪಕಾರಗಳನ್ನು ಉಂಟುಮಾಡಲು ಧರ್ಮ ಮತ್ತು ದೇವರುವೆಂಬ ಅಸ್ತ್ರದಿಂದಲೇ ಸಾಧ್ಯವೆಂದು ತಿಳಿಸುತ್ತಾರೆ. ಈ ರೀತಿಯ ಲಕ್ಷಣ ಕೇವಲ ಶಿಷ್ಟ ಧರ್ಮಗಳಿಗೆ ಮಾತ್ರ ಅನ್ವಯಿಸದೆ ಸಮುದಾಯದ ಅನೇಕ ಕುಲ ಕಸಬುಗಳಿಗೂ ಅನ್ವಯಿಸಲಾಯಿತು. ಧರ್ಮ ಮೊದಲು ರೂಪಿತವಾಗಿದ್ದು ಲೋಕೋಪಕಾರಕ್ಕಾಗಿಯೇ ಹೊರತು ಅನ್ಯ ಉದ್ದೇಶಕ್ಕಲ್ಲ. ಮಾನವನ ಜೀವನ ವಿಸ್ತಾರತೆಯನ್ನು ಪಡೆದಂತೆಲ್ಲಾ ಧರ್ಮದ ಸ್ವರೂಪವೂ ಬದಲಾಗುತ್ತಾ ಬಂದಿತ್ತು. ಇದನ್ನು ನಾವುಗಳು ಆಯಾ ಧರ್ಮದ ಕಥೆ, ಪುರಾಣಗಳಿಂದ ಕಂಡುಕೊಳ್ಳಬಹುದು. ಮನುಷ್ಯನಿಗೆ ಪ್ರಕೃತಿಯಲ್ಲಿನ ನದಿಗಳು, ಮರಗಳು, ಏಕಪ್ರಕಾರವಾಗಿ ನಿಂತಿರುವ ಪರ್ವತಗಳು, ಬಂಡೆಗಳನ್ನು ಕಂಡು ವಿಸ್ಮಯನಾಗಿರಬೇಕು. ಆದರೆ ಇದರ ಜೊತೆಗೆ ಮನುಷ್ಯ ಹೇಗೆ ಜೀವಿಸಬೇಕೆಂದು ಆಲೋಚನೆಯಲ್ಲಿರುವಾಗ ಪುರಾಣ ಸೃಷ್ಟಿಗಳು ಮಾನಸಿಕ ಸ್ಥೈರ್ಯವನ್ನು ಒದಗಿಸಿದವು.

ಪ್ರೊ. ಗ್ಯಾಲೊವೆ ಸರ್ವಚೇತನವಾದದ ಧಾರ್ಮಿಕ ಮಹತ್ವವನ್ನು ಕುರಿತು "ಒಂದು ವಸ್ತುವಿಗೆ ತನ್ನ ಆತ್ಮಕ್ಕಿರುವ ಗುಣವನ್ನು ಆರೋಪಿಸಿ, ಅದನ್ನು ಧಾರ್ಮಿಕ ಕಾರ್ಯಕ್ಕೆ ಅನುರೂಪವಾದುದನ್ನಾಗಿಸುವುದು ಎಂದು ವಿವರಿಸುತ್ತಾನೆ."[೧೭] ಮನುಷ್ಯ ತನ್ನ ಆತ್ಮದ ಮೇಲೆ ಎಲ್ಲಿಯವರೆಗೆ ಹಿಡಿತವನ್ನು ಸಾಧಿಸುವನೋ ಅಲ್ಲಿಯ ತನಕ ವಿಶ್ವ ಮತ್ತು ಪ್ರಕೃತಿಯಲ್ಲಿ ಪರಸ್ಪರದಿಂದ ಬದುಕುವ ಜೀವಶಕ್ತಿಯನ್ನು ಪಡೆದಿರುತ್ತಾನೆ. ಇದರ ನಂಬಿಕೆಯೇ ಜೀವನಕ್ಕೆ ಆಧಾರ. ಮಾನವ ಧರ್ಮ ಸ್ವರೂಪದಲ್ಲಿ ದೈವದ ನಂಬಿಕೆಯೂ ಸಮುದಾಯದ ಬಹುಪಾಲು ಜನರನ್ನು ಒಲಿಸಿಕೊಂಡಿದೆ.

ಪ್ರಕೃತಿಯ ವಿಕೋಪಗಳಿಂದ, ಮನುಷ್ಯನ ಈರ್ಷೆಯಿಂದ ಪಾರಾಗುವ ಜ್ಞಾನವನ್ನು ಧರ್ಮ ಬೋಧಿಸುವುದು. ಇದರಲ್ಲಿನ ಸಮಸ್ಯೆ ವೈಯಕ್ತಿಕವಾಗಿರಬಹುದು. ಇಲ್ಲವೇ ಸಮುದಾಯದ್ದಾಗಿರಬಹುದು. ಒಟ್ಟಿನಲ್ಲಿ ಪರಿಹಾರವನ್ನು ಬೇಗ ಪಡೆಯುವುದು ಮುಖ್ಯ ಹಾಗಾಗಿ ಜನರಲ್ಲಿ ಆಕಸ್ಮಿಕವಾಗಿ ಘಟಿಸುವ ಸನ್ನಿವೇಶಗಳಿಗೆ ಅಗೋಚರ ಶಕ್ತಿಯೇ ಕಾರಣ. ಅದನ್ನು ನಾವು ಮೀರಿ ನಡೆದರೆ ಅವನತಿ ಖಂಡಿತವೆಂದು ಪರಿಭಾವಿಸಿ ಧರ್ಮ ಮತ್ತು ಪುರಾಣಗಳು ಬದುಕಿನ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟವು.

ಹೀಗೆ ಮನುಷ್ಯರು ಹುಟ್ಟು, ವಿಕಾಸವನ್ನು ಮತಧರ್ಮದ ತಳಹದಿಯ ಮೇಲೆ ನಿರ್ಮಿಸತೊಡಗಿದರು. ದೇವರೆ ಸಕಲ ಜೀವಿಗಳ ಸೃಷ್ಟಿಕರ್ತ, ಪಾಲನಕರ್ತ ಮತ್ತು ಲಯಕರ್ತನಾಗಿರುತ್ತಾನೆ. ಈ ಹಿನ್ನೆಲೆಯಲ್ಲಿ ಬ್ರಹ್ಮ, ವಿಷ್ಣು, ಶಿವ ದೇವರುಗಳ ಕಲ್ಪನೆಯೂ ಭಾರತದ ಪರಿಸರದಲ್ಲಿ ಮೂಡಿ ಬಂದಿದೆ. ಒಬ್ಬೊಬ್ಬರು ಒಂದೊಂದು ಕಾರ್ಯವನ್ನು ಹಂಚಿಕೊಂಡಿದ್ದಾರೆ. ಅದೇ ರೀತಿ ಲೌಕಿಕ ಸಮುದಾಯಗಳು ವೃತ್ತಿಯನ್ನು ವರ್ಗೀಕರಿಸಿಕೊಂಡಿರುವವು. ಇಲ್ಲಿಂದಲೇ ವೃತ್ತಿಯಲ್ಲಿ ಜಾತಿ-ಕುಲಗಳು ರಚನೆಯಾದವು. ಇದನ್ನೇ ಪುರಾಣಗಳೂ ಶೂನ್ಯದಿಂದ ಜಗತ್ತು ಆಯಿತು ಎಂದು ತಿಳಿಸಿಕೊಡುತ್ತವೆ. ಇಷ್ಟೆಲ್ಲಾ ಹೇಳುವ ನಮ್ಮ ಧರ್ಮಗಳಿಗೆ "ದೇವರು" ಯಾವಾಗ ಭೂಮಿಯಲ್ಲಿ ಹುಟ್ಟಿದ್ದು ಎಂದು ಖಚಿತ ಉತ್ತರ ಇನ್ನೂ ದೊರೆತಿಲ್ಲ. ಹೀಗೆ ಮಾನವನು ಗುಹೆಯಿಂದ ನಾಡಿಗೆ ಬಂದು ಅನೇಕ ರೀತಿಯಲ್ಲಿ ಜೀವನ ಶೈಲಿಯನ್ನು ಕಲಿತುಕೊಂಡರು. ಬೌದ್ಧಿಕ, ದೈಹಿಕ, ಸಾಮರ್ಥ್ಯಗಳಲ್ಲಿ ಮತ್ತು ಕೌಶಲ್ಯಗಳಲ್ಲಿ ಹೆಚ್ಚುಗಾರಿಕೆಯನ್ನು ತೋರಿಸಿ ನಾಗರಿಕತೆಯ ಹಾದಿಯನ್ನು ಕಂಡುಕೊಂಡನು. ಆದಿಮಾನವರು ಚಿಕ್ಕ ಸಾಮಾಜಿಕ ಗುಂಪುಗಳಾಗಿ ಒಟ್ಟಿಗೆ ಜೀವಿಸುವುದನ್ನು ಅರಿತನು; ವಸ್ತುಗಳು, ಜವಾಬ್ದಾರಿಗಳು, ಕರ್ತವ್ಯ, ಶ್ರಮ ಮತ್ತು ಹೊರಗಿನವರೊಂದಿಗೆ ಸಂಬಂಧ ಮುತಾಂದವುಗಳ ಹಂಚಿಕೆಗೆ ಧಾರ್ಮಿಕ ಸಮಾರಂಭಗಳನ್ನು ಆಚರಿಸಿಕೊಂಡನು. ನಂತರ ಆಚರಣೆಗಳೇ ಕಾನೂನು ಕಾಯಿದೆ ರೀತಿಯಲ್ಲಿ ಸಮುದಾಯಕ್ಕೆ ಕಟ್ಟು ಪಾಡುಗಳಾದವು. ಸಾಮಾಜಿಕ ಗುಂಪುಗಳಿಂದ ವಿಸ್ತಾರಗೊಂಡು ಕುಟುಂಬಗಳು ಕುಲ ಮತ್ತು ಬುಡಕಟ್ಟುಗಳಾಗಿ ರಚನೆಯಾದವು. ಈ ರೀತಿಯಾಗಿ ಉದ್ಭವಿಸಿದ ಪ್ರತಿಯೊಂದು ಕುಲಕ್ಕೂ ಒಂದೊಂದು ಜವಾಬ್ದಾರಿಯನ್ನು ವಹಿಸಲಾಯಿತು. ಇವೇ ಮುಂದೆ ಒಂದು ಸಮುದಾಯವಾಗಿ ಮಾರ್ಪಟ್ಟವು.



## ೨. ಸಾಮಾಜಿಕ

ನಮ್ಮ ಜನಪದವು ಸಮಾಜದ ಕನ್ನಡಿ. ಸಾಹಿತ್ಯ ಸಮಾಜದ ಪ್ರತಿಬಿಂಬವಾದರೆ ಜನಪದರಿಂದ ರಚಿತವಾದ ಕಥೆ, ಗಾದೆ, ಒಗಟು, ಲಾವಣಿ, ಪುರಾಣಗಳು ಸಮಾಜದ ದರ್ಪಣವಿದ್ದಂತೆ. ಯಾರು ಆ ದರ್ಪಣದ ಮುಂದೆ ನಿಲ್ಲುವರೊ ಅವರ ದೃಷ್ಟಿಕೋನದಂತೆ ಭಿನ್ನ ಭಿನ್ನವಾಗಿ ಕಾಣುತ್ತದೆ. ಜನಪದ ಸಾಹಿತ್ಯವನ್ನು ಅಧ್ಯಯನ ಮಾಡಿದಂತೆ ಹೊಸತನವನ್ನು ಕೊಡುತ್ತದೆ. ಜನಪದರಿಂದ

ರೂಪಿತವಾದ ಸಾಹಿತ್ಯ ಸಮಾಜದಲ್ಲಿನ ಜನರ (ಪ್ರತಿಯೊಬ್ಬ) ಅನುಭವವೇ ಸರಿ. ಮನರಂಜನೆಯ ಸಾಧನವಾಗಿ ಜ್ಞಾನಾರ್ಜನೆಯ ವಾಹಕವಾಗಿ, ಸಮಾಜದ ಕಟ್ಟು ಪಾಡುಗಳ ಸಂವಹನದ ಮಾಧ್ಯಮವಾಗಿ ಸಂಸ್ಕೃತಿಯ ಸೆಲೆಯಾಗಿ ಇದು ರಚನೆಯಾಗಿರುತ್ತದೆ. ಅನುಭವವೆಂಬ ರಾಜಮುದ್ರೆಯನ್ನು ಪಡೆದಿರುತ್ತದೆ. ಇದರಲ್ಲಿನ ವಸ್ತು ಭಾಷೆಯಿಂದ ಭಾಷೆಗೆ, ದೇಶದಿಂದ ದೇಶಕ್ಕೆ ಸಂಕ್ರಮಣ ಹೊಂದಿದ್ದರು ಗುಣವೂ ಮಾತ್ರ ಏಕಪಕ್ಷಿಯವಾದುದು. ಇವುಗಳಲ್ಲಿನ ತುಣುಕು ಕಥೆಗಳನ್ನೇ ಪ್ರೌಢಕವಿಗಳೂ ಕಾವ್ಯಗಳಾಗಿ ರಚಿಸಿದ್ದಾರೆ. ಉದಾ: ರಾಮಾಯಣ ಮಹಾಭಾರತ ನಂತರ ಇಂತಹ ಕಥೆಗಳನ್ನು ಧರ್ಮ ಪ್ರಸಾರಕರು ಧರ್ಮದ ಚೌಕಟ್ಟಿನಲ್ಲಿ ಪ್ರಸಾರ ಮಾಡತೊಡಗಿದರು. ಪಂಪನು ಆದಿಪುರಾಣವನ್ನು, ಪಂಪಭಾರತವನ್ನು ರಚಿಸಿದ ಮಾದರಿಯಲ್ಲಿಯೇ ಮುಂದಿನ ಕನ್ನಡ ಕವಿಗಳು ಸಾಹಿತ್ಯ ರಚನೆ ಮಾಡಿದರು. ಜೊತೆಗೆ ಭಾಷೆಯೆಂಬ ಅಸ್ತ್ರ ಬಳಕೆ ಮಾಡಿ ಪ್ರೌಢಿಮೆಯನ್ನು ಕಾಯ್ದುಕೊಂಡರು. ಇದು ರಾಜಕೀಯ ಹುನ್ನಾರವೆಂದರು ತಪ್ಪಾಗಲಾರದು. ಏಕೆಂದರೆ ಜನಪದ ನೀತಿ ಕಥೆಯನ್ನೇ ಭಾಷೆಯಿಂದ ಕ್ಲಿಷ್ಟಗೊಳಿಸಿ ಜನಪದ ಸಾಹಿತ್ಯವನ್ನು ತುಳಿಯುವ ಕಾರ್ಯ ಗಮನಾರ್ಹವಾಗಿದೆ.

ಆದರೆ ಭಾರತದ ಜನಪದ ಕಥೆಯಲ್ಲಿನ ತಾತ್ವಿಕ ಅಂಶವನ್ನು ಮನಗಂಡ ಬ್ರಿಟಿಷ್ ವಿದ್ವಾಂಸರು ಸ್ಥಳೀಯ ಜನರಿಂದ ಸಂಗ್ರಹಿಸುವ ಕಾರ್ಯವನ್ನು ಯೋಜನೆಯಾಗಿ ರೂಪಿಸಿದರು. ಈ ಹಿನ್ನೆಲೆಯಲ್ಲಿ ಅಳಿದು ಹೋಗುತ್ತಿರುವ ಅಷ್ಟೋ ಕಥೆ, ಪುರಾಣಗಳು ಮತ್ತೆ ಜನರಿಂದ ಸಂಗ್ರಹದಲ್ಲಿ ಉಳಿಯುವಂತೆ ಆಯಿತು. "ಪುರಾಣ ಮೂಲ ಸಿದ್ಧಾಂತ, ಭಾರತ ಮೂಲ ಸಿದ್ಧಾಂತ, ಮಾನವ ಶಾಸ್ತ್ರೀಯ ಸಿದ್ಧಾಂತಗಳು ಹುಟ್ಟಿಕೊಳ್ಳಲು ಜಾನಪದ ಇತರ ಪ್ರಕಾರಗಳಿಗಿಂತ ಜನಪದ ಕಥೆಗಳೇ ಪ್ರಮುಖ ಸಾಮಾಗ್ರಿಯಾಗಿ ಬಳಕೆಗೊಂಡವು. ಮುಂದೆ ಜನಪದ ಕಥೆಗಳ ಅಧ್ಯಯನ ತೀವ್ರಗೊಂಡು ಮನಶಾಸ್ತ್ರೀಯ ಹಿನ್ನೆಲೆಯಲ್ಲಿ ಅವುಗಳ ವಿಶ್ಲೇಷಣೆ ನಡೆಯಿತು. ನೈಸರ್ಗಿಕ ಘಟನೆಗಳಿಗೂ ಜನಪದ ಕಥೆಗಳಿಗೂ ಸಂಬಂಧವನ್ನು ಕಲ್ಪಿಸಲಾಯಿತು. ಕನಸುಗಳಿಗೂ ಜನಪದ ಕಥೆಗಳಿಗೂ ನಂಟನ್ನು ಗುರುತಿಸಲಾಯಿತು. ಧಾರ್ಮಿಕ ವಿಧಿಗಳಲ್ಲಿ ಸಾಮಾಜಿಕ ನಡಾವಳಿಗಳಲ್ಲಿ ಅವುಗಳ ಮೂಲವನ್ನು ಶೋಧಿಸಲಾಯಿತು"[೧೭] ಈ ರೀತಿ ಅಧ್ಯಯನಗಳು ಜನಪದ ಪುರಾಣಗಳ ಸಂಗ್ರಹಕ್ಕೆ ಪ್ರೋತ್ಸಾಹಿಸಿದವು. ಅಲ್ಲದೆ ಪುರಾಣಗಳ ರಚನೆಯನ್ನು ಆಯಾ ಸಮುದಾಯದ ಮುಖ್ಯಸ್ಥರು ಅಂದರೆ 'ಪಂಚರು' ಅವರ ನೇತೃತ್ವದಲ್ಲಿ ನಡೆದಿವೆ. ಇಂತಹ ಕಾಳಜಿಯ ಸಭೆ ಸಮಾರಂಭಗಳಲ್ಲಿ ಉಪನ್ಯಾಸದ ಜೊತೆಗೆ ಚರಿತ್ರೆಯನ್ನು ಮೌಖಿಕದಿಂದ ಲಿಖಿತಕ್ಕೆ ತರುವ ಐತಿಹಾಸಿಕ ಪ್ರಜ್ಞೆಯನ್ನು ತಿಳಿಸಿಕೊಡುತ್ತಿದ್ದರು. ಆಗ ಧರ್ಮದ ಅಭಿಮಾನದಿಂದ ಜನಪದರು ತಮಗೆ ತಿಳಿದ ತಮ್ಮ ಸಮುದಾಯದ ನೆಲೆಯ ಕಥೆಗಳನ್ನು ಹೇಳುತ್ತಾ ದಾಖಲಿಸುತ್ತಾ ಬಂದರು. ಹಾಗಾಗಿ ಮೌಖಿಕ ಪಠ್ಯ ರಚನೆಯಲ್ಲಿ ಪುನರ್ಮನವು ಅಧಿಕವಾಗಿ

ಮೂಡಿಬಂದಿದೆ. ಇದು ಪುರಾಣದ ತಂತ್ರವೂ ಹೌದು. ಮುಂದಿನ ಕಥೆಯನ್ನು ಯಾವ ರೀತಿ ಹೆಣೆಯಬೇಕೆಂದು ಬೌದ್ಧಿಕವಾಗಿ ಮೆದುಳು ಆಲೋಚಿಸುವುದಕ್ಕೆ ಸಹಾಯ ಮಾಡುತ್ತಿತ್ತು. ಹೀಗೆ ಅಲ್ಲಿ ಮೌಖಿಕ ಪುರಾಣಗಳು ಪುನರಚನೆಯ ಸಂಯೋಜನೆಯನ್ನು ಹೊಂದಿರುತ್ತವೆ. ಆದರೂ ಕಥೆಯ ಹಂದರಕ್ಕೆ ಧಕ್ಕೆ ಬರಲಾರದು.

ಪುರಾಣದಲ್ಲಿ ಬರುವ ಪ್ರತಿಮೆಗಳು ವಿಶಿಷ್ಟಾರ್ಥವನ್ನು ತಿಳಿಸುತ್ತವೆ. ಹಾಲುಮತ ಪುರಾಣಗಳಲ್ಲಿ ಬರುವ ಹುಲಿ, ಕುರಿ, ಕುದುರೆಗಳು ಅವರ ಜೀವನ ಪರಿಸರವನ್ನು ಹೇಳುತ್ತವೆ. ಮಾಳಿಂಗರಾಯನು ಗುರು ಲಿಂಗ ಬೀರಣ್ಣನಿಗೆ ಹುಲಿಯಹಾಲಿನ ಗಿಣ್ಣನ್ನು ತಂದು ಹಸಿವನ್ನು ನೀಗಿಸುವನು. ಹುಲಿಯೂ ಕ್ರೂರ ಪ್ರಾಣಿಯಾಗಿದ್ದರೂ, ಮಾಳಿಂಗರಾಯ ಅದನ್ನು ಪಳಗಿಸುವ ಚಾತುರ್ಯವನ್ನು ಹೊಂದಿದ ತತ್ವಜ್ಞಾನಿಯಾಗಿದ್ದನು. ಅಲ್ಲದೆ ಹುಲಿಯೂ ಮೇಲ್ವರ್ಗದ ಸಂಕೇತ. ಇಂತಹ ಮೇಲ್ವರ್ಗದ ಸೂಚಕವಾದ ಹುಲಿಯೂ ಸಮಾಜದಲ್ಲಿ ಮೇಲಿಸ್ತರದಲ್ಲಿಯೂ, ಕೆಳಸ್ತರಕ್ಕೂ ಸೇರದ ಹಾಲುಮತದಲ್ಲಿ ಮಾರ್ಬಲವನ್ನು ಪ್ರದರ್ಶಿಸಿದೆ. ಇಲ್ಲಿ ಹುಲಿಯೂ ಬಲಿಷ್ಠ, ಸದೃಡತೆ ಮತ್ತು ರಾಜತ್ವದ ಪ್ರತೀಕವಾಗಿದೆ. ಅಂದರೆ ಹುಲಿಯನ್ನು ಹಿಡಿದು ತಂದು ತಮ್ಮ ಜೊತೆಯಲ್ಲಿಯೇ ಇಟ್ಟುಕೊಳ್ಳುವ ಎದೆಗಾರಿಕೆಯ ಜೊತೆಗೆ ಮೇಲ್ವರ್ಗವನ್ನು ಮೆಟ್ಟಿ ನಿಲ್ಲುವ ಅಂಶವನ್ನು ತಿಳಿಸುತ್ತದೆ. ಹುಲಿಯ ಜೊತೆ ಊಟ, ಆಟ, ಪಾಠವಿರಿಸಿಕೊಂಡು ದೇವಾಲಯದ ಬಾಗಿಲಿನ ತೋಳದ ಚಿತ್ರವಾಗಬೇಕಾದರೆ ಸಮಾಜದಲ್ಲಿ ಇದು ತುಂಬಾ ಸಂಘರ್ಷಕ್ಕೆ ಒಳಗಾಗಿರಬಹುದು.

ಸಮುದಾಯದ ಪುರಾಣಗಳು ತಮ್ಮ ತಮ್ಮಲ್ಲೇ ಅಥವಾ ಮನುಷ್ಯರೊಂದಿಗೆ ನಡೆಸಿದ ನಡವಳಿಕೆಗಳ ಕತೆಗಳನ್ನು ಕಟ್ಟುಕತೆಗಳು ಎನ್ನಲಾಗುತ್ತಿದೆ. ಕೆಲವು ಕಟ್ಟುಕಥೆಗಳು ಪ್ರಪಂಚ ಸೃಷ್ಟಿ ಮತ್ತು ನಿವಾಸಿಗಳ ಬಗ್ಗೆ ಹೇಳಿದರೆ, ಮತ್ತೆ ಕೆಲವು ದೇವತೆಗಳ ಕುಟುಂಬಗಳಿಗೆ ಸಂಬಂಧಿಸಿದ ಮಾನಸಿಕ ತುಮುಲಗಳು ಮತ್ತು ಮನುಷ್ಯರ ಮೇಲೆ ಅವುಗಳ ಪರಿಣಾಮಗಳನ್ನು ತಿಳಿಸುತ್ತವೆ.

ಸಂಸ್ಕೃತ ಭಾಷೆಯಲ್ಲಿ ರಚಿಸಿದ ಗ್ರಂಥಗಳು ಅನ್ಯ ಸಮಾಜ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಧಿಕೃತವಾಗಿ ಮಾನ್ಯವಾದವು. ಅಲ್ಲದೆ ಅವು ಪ್ರಮಾಣ ಗ್ರಂಥಗಳಾದವು. ಸಮುದಾಯದ ಪುರಾಣಗಳು ಸಂಸ್ಕೃತ ಪುರಾಣಗಳ ಐಡಿಯಾಲಜಿಯನ್ನು ಬಳಸಿಕೊಂಡು ತಮ್ಮ ತಮ್ಮ ಧಾರ್ಮಿಕ ಅನ್ಯಶ್ರೇಣಿ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಸಾರ್ವಜನಿಕವಾಗಿ ಸಾಬೀತು ಪಡಿಸಲು ಗ್ರಂಥ ರಚನೆಗೆ ತೊಡಗಿದವು. ಅಂತಹ ಸಂದರ್ಭದಲ್ಲಿ ಜೈನ, ವೈದಿಕ ಮತ್ತು ಶೈವ ಧರ್ಮಗಳಿಂದ ನೆರವು ಪಡೆಯುವುದು ಅನಿವಾರ್ಯ ಅಗತ್ಯವಾಯಿತು. ಹೀಗೆ ಜಾತಿ ಪುರಾಣಗಳು ಮೇಲ್ವರ್ಗದ ಶೋಷಣೆಯಿಂದ ಸಂಪೂರ್ಣವಾಗಿ ಬೇರ್ಪಡದಿದ್ದರೂ ಪ್ರಯತ್ನವನ್ನು ಮಾಡಿದ ಪಳೆಯುಳಿಕೆ ಪುರಾಣಗಳಲ್ಲಿ ದೊರೆಯುತ್ತದೆ.

"ಈ ಭಾರತೀಯರಲ್ಲಿ ರೂಢವಾಗಿ ಬಂದಿರುವ ವರ್ಣಾಶ್ರಮಗಳಲ್ಲಿ ಪ್ರಾಕೃತ ವರ್ಣಾಶ್ರಮವೆಂದೂ, ಅಪ್ರಾಕೃತ ವರ್ಣಾಶ್ರಮವೆಂದೂ ಎರಡು ವಿಧ ಒಂದು ಬ್ರಹ್ಮನಿಂದಲೂ ಮತ್ತೊಂದು ಶಿವನಿಂದಲೂ ಪ್ರತಿಪಾದಿಸಲ್ಪಟ್ಟಿವೆ. ಬ್ರಹ್ಮನಿಂದ ಹೇಳಲ್ಪಟ್ಟುದೇ ಪ್ರಾಕೃತ ವರ್ಣಾಶ್ರಮ, ಶ್ರೀ ಶಿವನಿಂದ ಹೇಳಲ್ಪಟ್ಟುದೇ ಆ ಪ್ರಾಕೃತ ವರ್ಣಾಶ್ರಮವೆನಿಸಲ್ಪಡುವುದು. ಪ್ರಾಕೃತ ವರ್ಣಾಶ್ರಮಿಗಳಿಗೆ ಉಪನಯನ ಪೂರ್ವಕವಾದ ತಂತ್ರಮಯ ಯಜ್ಞೋಪವಿತ್ರ ಧಾರಣ, ದೇವಯಜ್ಞ, ಋಷಿಯಜ್ಞಾದಿ, ಪಂಚಯಜ್ಞಗಳೂ, ವೈಷ್ಣವದೇವ ಪೂಜೆ, ಸಪಿಂಡೀಕರಣ ಗರ್ಭಾದಾನಾದಿ ಕರ್ಮಗಳು ಮುಂತಾದ ಪ್ರಾಕೃತ ಕರ್ಮಗಳು ಅನುಷ್ಠೇಯಗಳು ಅಪ್ರಾಕೃತ ವರ್ಣಶ್ರಮಿಗಳಿಗೆ: ಶಿವದೀಕ್ಷಾಪೂರ್ವಕ ಶಿವಲಿಂಗರೂಪ, ಯಜ್ಞೋಪಧಾರಣ, ತಪಸ್ಸು, ಕರ್ಮ ಜಪ, ಧ್ಯಾನ, ಜ್ಞಾನವೆಂಬ ಪಂಚಯಜ್ಞಗಳು, ಗರ್ಭದಾನಾದಿ ಕರ್ಮಗಳು, ಅನುಷ್ಠೆಯಗಳಾಗಿವೆ"* ಸಮುದಾಯದ ಪುರಾಣಗಳ ಉಗಮ ಮತ್ತು ವಿಕಾಸಕ್ಕೆ ಮೇಲ್ವರ್ಗಗಳ ಏಕ ಸಂಸ್ಕೃತಿಯೇ ಕಾರಣ. ಇವತ್ತಿನವರೆಗೂ ಹಿಂದುಳಿದ ವರ್ಗಗಳಿಗೆ, ಅವರ ಜಾತಿ ಸಂಸ್ಕೃತಿಯನ್ನು ಕ್ಷುದ್ರ, ಕ್ಷುಲ್ಲಕ ಎಂದು ಗಿಳಿಪಾಠ ಕಲಿಸುತ್ತ ಬರುತ್ತಿರುವ ಮೇಲ್ವರ್ಗದವರಿಗೆ, ಹಿಂದುಳಿದ ಜಾತಿ ವರ್ಗಗಳ ಜಾಗ್ರತಿ ಮತ್ತು ಅವರ ಸಂಸ್ಕೃತಿಯ ವಸ್ತುನಿಷ್ಠ ಅಧ್ಯಯನ ಒಂದು ಸವಾಲಾಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯು ತಮ್ಮ ಸಂಸ್ಕೃತಿ ಅಪಚಾರಗಳ ಮುಖವಾಡಗಳು ಕಳಚಿ ಬೀಳುತ್ತಿರುವುದನ್ನು ಹೇಗೆ ತಾನೆ ಸಹಿಸುತ್ತವೆ. ತಮ್ಮ ಧಾರ್ಮಿಕ ತತ್ತ್ವಗಳ ವಿರುದ್ಧ ಅನ್ಯರು ಪ್ರತಿಭಟಿಸುವುದನ್ನು ಸಹಿಸಿದ ಆಯಾ ಸಮುದಾಯದ ಚಿಂತಕರು ರಾಜಕೀಯ ಬೆಂಬಲದಿಂದ ಶೋಷಣೆಯನ್ನು ಮಾಡುವ ತಮ್ಮ ಚಿಂತನೆಗಳಿಂದ ಸಂಸ್ಕೃತಿಯಲ್ಲಿನ ಮೇಲ್ವರ್ಗದವರನ್ನು ಹೇಗಾದರೂ ಮಾಡಿ ಹೆದರಿಸುವುದಕ್ಕೆ, ನಿರ್ಲಕ್ಷಗೆ ಒಳಗಾದ ಸಮುದಾಯಗಳು ತಮ್ಮ ಕುಲಮೂಲವನ್ನು ಪ್ರಾಚೀನದಿಂದ ಹುಡುಕಲು ಮುಂದಾದವು. ಏಕ ಸಂಸ್ಕೃತಿಯ ಧಾರ್ಮಿಕ ಸ್ವಾಮ್ಯದ ಸರ್ವಾಧಿಕಾರ ಕುಸಿದು, ಬಹು ಸಂಸ್ಕೃತಿಗಳ ಸರ್ವಸಮ್ಮತ ಮತ್ತು ಸಮಾನತೆಯನ್ನು ಪಡೆಯಲು ತಳಮಳಗೊಂಡವು. ಮೇಲ್ವರ್ಗದವರಿಗೆ ಸಂಬಂಧಿಸಿದಂತೆ ಶಾಸನ, ಸಾಹಿತ್ಯ ಮತ್ತು ಹಸ್ತಪ್ರತಿಗಳು ದೊರೆಯುತ್ತವೆ. ಆದರೆ ಕೆಳಸಮುದಾಯಗಳ ಬಗೆಗೆ ಪೂರ್ಣ ಮಾಹಿತಿಯು ದೊರೆಯುವುದಿಲ್ಲ. ಇದು ಮೇಲ್ವರ್ಗದವರು ಕೆಳವರ್ಗದವರನ್ನು ಶೋಷಣೆ ಮಾಡುವ ತಂತ್ರವಾಗಿದೆ. ಕಾರಣ ಇವರು ದಾಖಲೆ ನಾಶಗೊಳಿಸಿ ತಮ್ಮ ಅಸ್ತಿತ್ವ ಸ್ಥಾಪಿಸುವ ಉದ್ದೇಶವನ್ನು ಹೊಂದಿದ್ದರು.

ಹೀಗೆ ಹದಿನೆಂಟು ಪುರಾಣಗಳು ಮತ್ತು ಉಪಪುರಾಣಗಳಿದ್ದರೂ ಕುಲಮೂಲ ಪುರಾಣಗಳು ಏಕೆ ರಚನೆಯಾದವು? ಎಂಬ ಪ್ರಶ್ನೆಗೆ ಸಮುದಾಯದ ಅಧ್ಯಯನದಿಂದ ಮಾತ್ರ ಸಾಧ್ಯ. ಜಾತಿ ಪುರಾಣಗಳು ಮೊದಲು ವರ್ಣ ವ್ಯವಸ್ಥೆಯನ್ನು ಒಪ್ಪಿ, ಅನಂತರ ಜಾತಿಯ ಸಾಮಾಜಿಕ ರಚನೆಯಲ್ಲಿ ತಮ್ಮ ಸ್ಥಾನಮಾನಗಳನ್ನು ಕಂಡುಕೊಳ್ಳಲು ಪುರಾಣಗಳು ರಚನೆಯಾದವು. ಪ್ರತಿಯೊಂದು ಕುಲ–

ಜಾತಿಗಳು ತಮ್ಮ ತತ್ತ್ವ ಚಿಂತನೆ ಶ್ರೇಷ್ಠವೆಂದು ಹೇಳಿದ್ದವೇ ಹೊರತು, ಜೈನ ಮತ್ತು ವೈದಿಕ ಪುರಾಣಗಳಂತೆ ತಾವೇ ಸರ್ವಶ್ರೇಷ್ಠವೆಂದು ಹೇಳಿಕೊಂಡಿಲ್ಲ. ಕುಲಮೂಲ ಪುರಾಣಗಳು ಅನೇಕ ರೀತಿಯಾಗಿ ವಿವಿಧ ಪ್ರದೇಶಗಳಲ್ಲಿ ಸೃಷ್ಟಿಯಾದರೂ ಅವು ಸಾರ್ವತ್ರಿಕ ಧರ್ಮ ಬೋಧನೆಯನ್ನು ಮಾಡುತ್ತವೆ. ಜೊತೆಗೆ ಬೇರೆ ಬೇರೆ ಸಮುದಾಯಗಳು ಕೂಡಿಕೊಂಡು ಆಚರಿಸುವ ಪದ್ಧತಿಯನ್ನು ತನ್ನದನ್ನಾಗಿಸಿಕೊಂಡಿವೆ. ಉದಾ: ಕರ್ನಾಟಕದಲ್ಲಿ ಮೈಲಾರಲಿಂಗನ ಜಾತ್ರೆ, ಮಹಾರಾಷ್ಟ್ರದಲ್ಲಿನ ಹುಲಿಜಂತಿ ಮಾಳಿಂಗರಾಯನ ಜಾತ್ರೆಗಳು ಕುರುಬ ಸಮುದಾಯದ ಜೊತೆಗೆ ಎಲ್ಲಾ ವರ್ಗದವರನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಮಾನವಾಗಿ ಕಾಣುವ ಮನೋಧರ್ಮ ಇಲ್ಲಿದೆ.

ದೈವತ್ವದ ಹೆಸರಿನಲ್ಲಿ ಸಮಾಜದಲ್ಲಿನ ಜನರು ದೇವತೆಗಳ ಗುಂಪನ್ನು ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ರಚಿಸಿಕೊಂಡರು. ದೇವರು ಅಥವಾ ದೇವತೆಗಳು ಮನುಷ್ಯ ರೂಪದ ಜೊತೆಗೆ ಪ್ರಾಣಿಗಳ, ಪಕ್ಷಿಗಳ, ಕೀಟಗಳ ರೂಪವನ್ನು ಪಡೆದವು. ಇಂತಹ ದೇವತೆಗಳು ಬೇರೆಯವನ್ನು ಪ್ರತಿರೋಧಿಸದೆ ಎಲ್ಲವನ್ನು ಒಪ್ಪಿಕೊಂಡವು. ಸಮುದಾಯದ ದೈವಗಳು ಆ ವ್ಯಕ್ತಿಯ ಮರಣಾನಂತರ ಪುರಾಣೀಕರಿಸುವುದು ನಮ್ಮ ಸಂಸ್ಕೃತಿಯ ಲಕ್ಷಣ. ಇದು ಹರಿಹರ, ರಾಘವಾಂಕರು ಶಿವಶರಣರ ಚರಿತ್ರೆಯನ್ನು ಪುರಾಣೀಕರಿಸಿ ಅವರನ್ನು ದೈವಗಣಗಳಾಗಿ ಮಾಡಿದರು. ಇದೇ ರೀತಿ ಅನೇಕ ಕೆಳ ಸಮುದಾಯಗಳು ತಮ್ಮ ತಮ್ಮ ವೀರನಾಯಕರನ್ನು ಕಲ್ಪನೆಯ ಹಂದರದಲ್ಲಿ ಕೈಲಾಸದಿಂದ ಭೂಮಿಯ ಪ್ರವೇಶವನ್ನು ಮಾಡಿಸಿದರು. ಈ ಪುರಾಣವೂ ಒಂದು ಕಾಲಕ್ಕೆ ರಾಜ ಮಹಾರಾಜರುಗಳಿಗೆ ಸೀಮಿತವಾಗಿತ್ತು. ನಂತರ ಅಧಿಕಾರದ ಬೆಂಬಲದಿಂದ ಕಳಚಿಕೊಂಡು ಅನೇಕ ಧರ್ಮಗಳಾಗಿ ಮಾರ್ಪಟ್ಟಿತ್ತು. ತದನಂತರ ಅಧಿಕಾರ ಶಾಹಿಗಳಿಂದ, ಪುರೋಹಿತ ಶಾಹಿಗಳಿಂದ ತತ್ತರಿಸಿ ಹೋಗಿದ್ದ ಸಮುದಾಯಗಳು ಸಂಸ್ಕೃತ ಮತ್ತು ಜೈನ ವೈದಿಕ ಪುರಾಣಗಳ ಹಿನ್ನೆಲೆಯಲ್ಲಿ ಸಮುದಾಯದ ಪುರಾಣಗಳನ್ನು ಸೃಷ್ಟಿಸಲು ಮುಂದಾದವು.

"ದೇವತೆಗಳೆಂದರೆ ಅದ್ಭುತಗಳ ವ್ಯಕ್ತೀಕರಣ' ಎಂದು ಮ್ಯಾಕ್ ಗ್ರೇಗರ್ ಒಂದು ಕಡೆ ಅಭಿಪ್ರಾಯ ಪಡುತ್ತಾನೆ. ಪ್ರಕೃತಿಯಲ್ಲಿನ ಅದ್ಭುತಗಳನ್ನು ಅದೇ ಚರ್ಯೆಯ ಶಕ್ತಿಯುತ ಮಾಧವರಿಗೆ ಸಮೀಕರಿಸುವುದು ದೇವತೆಗಳ ಮತ್ತು ರಾಕ್ಷಸರ ಉಗಮಕ್ಕೆ ಕಾರಣವಾಗಿರುತ್ತದೆ. ಇದನ್ನು ಪ್ರತಿಯೊಂದು ಜನಸಮುದಾಯದ ಸಾಂಸ್ಕೃತಿಕ ಇತಿಹಾಸದಿಂದ ಕಂಡುಕೊಳ್ಳಬಹುದು. ಹಿಂದೂ ಧರ್ಮದಲ್ಲಿ ಆಗಿರುವುದೂ ಅದೇ. ದ್ರಾವಿಡ ಜನ ಸಮುದಾಯದ ನಂಬಿಕೆಗಳಲ್ಲಿ ಅತ್ಯಂತ ಶಕ್ತಿಯುತ, ಸಕಲ ಕಲಾವಲ್ಲಭನೂ, ದಯಾಪರನೂ, ಜನಪರನೂ ಆದಂತ ಶಿವ ಅಥವಾ ರುದ್ರ ಒಬ್ಬ ದೇವತೆ ಆಗಿದ್ದು, ಆರ್ಯರಲ್ಲಿ ಇಷ್ಟೇ ಶಕ್ತಿಯ ವಿಷ್ಣುವೂ ಒಬ್ಬ ದೇವತೆ, ಎರಡೂ ಜನಾಂಗದ ದೇವತೆಗಳು ಸಮಶಕ್ತಿಯರು. ಆಗಿದ್ದಾಗ; ಎರಡು ಜನಾಂಗ ಸಂಕರವಾಗುವ ಸಮಯದ ಪ್ರಾರಂಭದಲ್ಲಿ ದ್ವಿಮೂರ್ತಿ ಆರಾಧನಾ ವಿಧಾನವು, ಆನಂತರ ಎರಡೂ ಜನಾಂಗದಲ್ಲಿ ಜ್ಞಾನದ ಒಡೆತನ ಹೊಂದಿದ ಪುರೋಹಿತ ಶಾಹಿಯಿಂದ

ತ್ರಿಮೂರ್ತಿ ಕಲ್ಪನೆಯೂ ಉಂಟಾಗಿರಲು ಸಾಧ್ಯವಿದೆ. ದ್ವಿಮೂರ್ತಿ ಕಲ್ಪನೆ ದೈಹಿಕ ಮತ್ತು ಮಾನಸಿಕ ಶಕ್ತಿ ಸಾಮರ್ಥ್ಯಗಳೆರಡನ್ನು ಆಧರಿಸಿದ್ದರೆ, ತ್ರಿಮೂರ್ತಿ ಕಲ್ಪನೆಯಲ್ಲಿನ ಬ್ರಹ್ಮನ ಸೃಷ್ಟಿ ಬರೀ ಮಾನಸಿಕ ಶಕ್ತಿ-ಸಾಮರ್ಥ್ಯಗಳನ್ನಷ್ಟೆ ಪ್ರತಿನಿಧಿಸುತ್ತಿರುವುದರಿಂದ, ಈ ದೇವತೆಗೆ ಎಲ್ಲೂ ಸಾಮಾಜಿಕ ಮಾನ್ಯತೆ ಕಂಡು ಬರುತ್ತಿಲ್ಲ."[೨೦] ಇನ್ನೂ ದ್ವಿಮೂರ್ತಿಯ ಕಲ್ಪನೆಯಲ್ಲಿ ಶಿವನ ಆರಾಧಕರು ಅನೇಕ . ಅವರು ಅಲೆಮಾರಿ ಸಮುದಾಯದಲ್ಲಿ ಬಹುತೇಕ ಜೀವಿಸುವವರು. ಹಾಗಾಗಿ ಶಿವನ ನೆಲೆಯು ಸಮುದಾಯದಿಂದ ಸಮುದಾಯಕ್ಕೆ ವೈಶಿಷ್ಟ್ಯ ಹೊಂದಿ, ಆಚರಣೆಯಲ್ಲಿಯೂ ವೈವಿದ್ಯತೆಯನ್ನು ಪಡೆದಿದೆ.

"ದ್ರಾವಿಡರ 'ಶಿವ' ಮತ್ತು 'ಆರ್ಯ'ರ ವಿಷ್ಣು ಸಮಶಕ್ತಿಯ ದೇವತೆಗಳಾಗಿದ್ದರು. ಎರಡು ಜನಾಂಗದ ಸಂಕರದ ಪ್ರಾರಂಭದಲ್ಲಿ ಈರ್ವರಿಗೂ ಸಮಾನ ಮಾನ್ಯತೆ ಇದ್ದರೂ, ಬರುಬರುತ್ತಾ ದ್ರಾವಿಡರ ಶಿವನಿಗೆ "ಲಯಕರ್ತ" ಕೋಳಕ; ಬೂದಿ ಬುಡಕ; ದಡ್ಡ; ಮುಂತಾಗಿಯೂ ಗುಣ ವಿಶೇಷಗಳನ್ನು ಆರೋಪಿಸಲು ಕಥೆಗಳನ್ನು ಕಟ್ಟಿರುವುದು. ಹಿಂದೂ ಸಾಂಸ್ಕೃತಿಕ ಇತಿಹಾಸದಿಂದ ಕಂಡುಕೊಳ್ಳಬಹುದು."[೨೧] ಈ ಹಿನ್ನೆಲೆಯಲ್ಲಿಯೇ ಅನೇಕ ಶೂರರೂ ಶಿವನ ಸ್ವರೂಪರಾಗಿಯೂ ಮತ್ತು ಶಿವನ ಸೇವಕ(ರಾಕ್ಷಸ)ರಾಗಿ ಪಟ್ಟ ಪಡೆಯಲು ಕಾರಣವಾಗಿದೆ. ಇದು ಜಗತ್ತಿನ ಅಸ್ತಿತ್ವಕ್ಕೆ ಕಾರಣವಾಗುತ್ತಾ ಸಮುದಾಯಗಳ ಅಸ್ತಿತ್ವವನ್ನು ಮಾಡತೊಡಗಿತು. ಪುರೋಹಿತರಾದ ಬ್ರಾಹ್ಮಣರು, ರಾಜಮಾನ್ಯರಾದ ಕ್ಷತ್ರಿಯರು, ಸಾಮಾನ್ಯರಾದ ವ್ಯವಸಾಯಗಾರರು, ವರ್ತಕರು, ಗುಲಾಮರಾದ ಶೂದ್ರರೂ ಶ್ರೇಣಿಕೃತ ಜಾತಿ ಪದ್ಧತಿಯಿಂದ ಮತ್ತಷ್ಟು ಅಧೋಗತಿ ಹೊಂದಿದರು. ಆದ್ದರಿಂದ ಇವರು ಅಶುದ್ಧರಲ್ಲಿ ಮತ್ತು ಸಾಮಾಜಿಕ ಸ್ಥಾನಮಾನದ ಮಟ್ಟಕ್ಕೆ ಏರುವ ಸಾಮರ್ಥ್ಯ ನಮ್ಮಲ್ಲಿದೆ ಎಂದು ತೋರಿಸಲು ದೈವಶಕ್ತಿಯನ್ನು ಸಾಮಾನ್ಯರಿಗೆ ಆರೋಪಿಸಿ ಪುರಾಣ ಸೃಷ್ಟಿಕರ್ತರಾದರೂ. ಇಲ್ಲಿ ಪುನರ್ಜನ್ಮ, ಅವತಾರ, ಪುನರ್‌ಸ್ಥಾನಗಳಿಂದ ಜನ್ಮ ಜನ್ಮಗಳ ಮಹತ್ವ ತಿಳಿಸಲು ಪ್ರಯತ್ನಿಸಿದ್ದಾರೆ. ಆರ್ಯರಿಂದ ಬಂದ ಪುನರ್ಜನ್ಮ ಕಲ್ಪನೆಯೂ ನಮ್ಮಲ್ಲಿ ಪಾವಿತ್ರತೆಯನ್ನು ಪಡೆಯಿತು. "ಪುನರ್ಜನ್ಮ ಎಂದರೆ ದೇಹದ ಮರಣಾನಂತರ ಆತ್ಮವು ಬೇರೆ ದೇಹವನ್ನು ಪಡೆದು ಜನ್ಮ ತಾಳುವುದು ಎಂದು ಅರ್ಥ. ಮರಣ ಎನ್ನುವುದು ದೇಹಕ್ಕೆ ಮಾತ್ರ ಇದೆ. ಆತ್ಮಕ್ಕೆ ಸಾವಿಲ್ಲ ಎನ್ನುವ ವಿಚಾರ ಪುನರ್ಜನ್ಮಕ್ಕೆ ಆಧಾರವಾಗಿದೆ. ಪುನರ್ಜನ್ಮ, ಅವತಾರ ಅಥವಾ ಪುನರವತಾರ ಮತ್ತು ಪುನರುಸ್ಥಾನ ಇವುಗಳಿಗೆ ವ್ಯತ್ಯಾಸಗಳಿವೆ. ಪುನರ್ಜನ್ಮದಲ್ಲಿ ಸಸ್ಯಗಳ, ಪ್ರಾಣಿಗಳ, ಮನುಷ್ಯರ ಹೀಗೆ ಯಾವುದರ ದೇಹವನ್ನಾದರೂ ಪಡೆದು ಆತ್ಮ ಮರು ಹುಟ್ಟುವುದು ಎಂದಾದರೆ; ಅವತಾರದಲ್ಲಿ ಆತ್ಮಕ್ಕೆ ಬದಲಾಗಿ ಮನುಷ್ಯನ ದೇಹವನ್ನೋ ಅಥವಾ ಇನ್ನಾವುದೋ ಜೀವಿಯ ದೇಹವನ್ನೋ ಪಡೆದು ಜನ್ಮ ತಾಳುತ್ತದೆ ಎನ್ನುವುದು. ಆದರೆ ಪುನರುಸ್ಥಾನದಲ್ಲಿ ಆತ್ಮವು ಅದೇ ದೇಹದಲ್ಲೇ ತೇಜಸ್ಸು ಸೂಕ್ಷ್ಮತೆ ಪಡೆಯುವುದು. ಮೂರರಲ್ಲೂ

ದೇಹಕ್ಕೆ ಸಾವಿದೆ."[೨೨] ಇದನ್ನು ಅರ್ಥಮಾಡಿಕೊಂಡಿದ್ದ ಹಿಂದೂ ಧರ್ಮದ ಜನರು ಪುರಾಣಗಳನ್ನು ಸುಖ-ದುಃಖಗಳು, ಹಿಂದಿನ ಜನ್ಮದ ಸತ್ಕಾರ್ಯ ಮತ್ತು ದುಷ್ಕಾರ್ಯಗಳನ್ನು ಅವಲಂಬಿಸಿ ಜನ್ಮವನ್ನು ಪಡೆಯುವುದು ಕಂಡುಬರುತ್ತದೆ. ಉದಾಹರಣೆಗೆ ಜೈನ ಧರ್ಮದಲ್ಲಿ ಒಂದು ತಪ್ಪಿಗೆ ೧೨ ಜನ್ಮಗಳ ಕಷ್ಟವನ್ನು ಅನುಭವಿಸಬೇಕು. ಹಿಂದೂ ಧರ್ಮದಲ್ಲಿ ಮಾಡಿದ ಪಾಪಕ್ಕೆ ಶಿಕ್ಷೆಯೂ ಯಾವ ರೂಪದಲ್ಲಿಯಾದರೂ ಬರಬಹುದಾಗಿತು. ಈ ಜನ್ಮಾಂತರಗಳಿಂದ ಬಿಡುಗಡೆಯನ್ನು ಹೊಂದಲು ಮೋಕ್ಷವೇ ಕೊನೆಯ ಹಂತ ಎಂದು ಎಲ್ಲಾ ಪುರಾಣಗಳು ತಿಳಿಸುತ್ತವೆ. ಜೊತೆಗೆ ಸಮುದಾಯದ ಅಸ್ಮಿತೆಯನ್ನು ಉಳಿಸಿಕೊಳ್ಳುವಲ್ಲಿ ಹಿಂದೆ ಬಿದ್ದಿಲ್ಲ.

ಹೀಗೆ ಪಾರಂಪರಿಕ ಅವತಾರವು ದೇವಮಾನವರ ಕಲ್ಪನೆಯನ್ನು ಗಟ್ಟಿಗೊಳಿಸಿದರೆ; ಪುನರ್ಜನ್ಮದ ಕಲ್ಪನೆ ಆಧುನಿಕ ದೇವಮಾನವರ ಕಲ್ಪನೆಯನ್ನು ಹುಟ್ಟಿ ಹಾಕಿದೆ. ಈ ಹಿನ್ನೆಲೆಯಲ್ಲಿಯೇ ಸಮುದಾಯಗಳ ಪುರಾಣಗಳು ಸೃಷ್ಟಿಯಾದವು.

**೩. ಚಾರಿತ್ರಿಕ**

ಹಾಲುಮತ ಸಮುದಾಯವು ಭಾರತದಾದ್ಯಂತ ವ್ಯಾಪಿಸಿದೆ. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಲ್ಲಿ ಈ ಜನಾಂಗದವರು ಅಧಿಕ ಸಂಖ್ಯೆಯಲ್ಲಿರುವುದಕ್ಕೆ ಕಾರಣ ಅಲ್ಲಿಯ ನೀರಾವರಿ, ಬಯಲು ಪ್ರದೇಶ, ಬೆಟ್ಟಗುಡ್ಡಗಳು ಸಮುದಾಯದ ಉಭಯ ವೃತ್ತಿಗಳಿಗೆ ಅನುಕೂಲವಾಗಿತ್ತು. ಕರ್ನಾಟಕದಲ್ಲಿ ಸಾಂಸ್ಕೃತಿಕವಾಗಿ ಈ ಸಮುದಾಯ ಬೆಳದಷ್ಟು ಯಾವ ಅನ್ಯ ರಾಜ್ಯಗಳಲ್ಲಿಯೂ ಬೆಳೆದಿಲ್ಲ ಎನ್ನಬಹುದು. ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳು ಕರ್ನಾಟಕದ ಗಡಿಭಾಗದಲ್ಲಿರುವುದರಿಂದ ಅಲ್ಲಿ ಈ ಸಮುದಾಯದ ಬೆಳವಣಿಗೆಯನ್ನು ನೋಡುತ್ತೇವೆ. ಸದಾ ತಮ್ಮ ಜೀವನ ವೃತ್ತಿಯಲ್ಲಿಯೇ ತೊಡಗಿದ ಹಾಲುಮತ ಸಮುದಾಯವೂ ತನ್ನ ದಾಖಲೆಯನ್ನು ಮಾಡುವಲ್ಲಿ ಎಡವಿದೆ. ಈ ಕಾರಣದಿಂದ ಹಾಲುಮತದ ಅಧ್ಯಯನಗಳು ಅಲ್ಲಲ್ಲಿ ವಿರಳವಾಗಿ ನಡೆದಿವೆ. ಆಗಾಗಿ ಹಾಲುಮತ ಪುರಾಣಗಳ ಮೂಲಕ ಈ ಸಮುದಾಯದ ಸಾಂಸ್ಕೃತಿಕ ಜೀವನ ಮಹತ್ವವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಒಂದು ಸಮುದಾಯದ ಸಾಂಸ್ಕೃತಿಕ ಮೂಲ ಹುಡುಕುವುದು ಒಂದೇ, ನದಿಮೂಲ ಹುಡುಕುವುದು ಒಂದೇ. ಹಾಲುಮತ ಸಮುದಾಯ ಪೂರ್ವದಲ್ಲಿ 'ಕುರುಬ' ಎಂಬ ಹೆಸರಿನಿಂದ ಪ್ರಚಲಿತದಲ್ಲಿತ್ತು. ಅದಕ್ಕಾಗಿ ಸಮುದಾಯದ ಪುರಾಣಗಳ ಉಗಮ ಮತ್ತು ವಿಕಾಸವನ್ನು ಅರಿಯಲು ಮುಖ್ಯವಾಗಿ ಜನಾಂಗದ ಚಾರಿತ್ರಿಕ ಅಧ್ಯಯನ ಮಾಡುವುದು ಸೂಕ್ತ. ಈ ಜನಾಂಗ ಅಲೆಮಾರಿ ಜನಾಂಗವಾಗಿತ್ತು ಎಂದು ಕರ್ನಾಟಕ ಬುಡಕಟ್ಟುಗಳನ್ನು ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ. ಆದ್ದರಿಂದ ಅವರು ಹಲವಾರು ಪ್ರದೇಶಗಳಲ್ಲಿ ತಮ್ಮ ಜೀವನದ ಕುರುಹಾಗಿ ದೇವಾಲಯ ಮತ್ತು ಆಚರಣೆಯ ಮೂಲಕ ಸ್ಥಾಪಿಸಿದ್ದನ್ನು ಕಾಣಬಹುದು.

ಜೊತೆಗೆ ಮೌಖಿಕತೆಯಲ್ಲಿ ತನ್ನ ಪ್ರತಿಬಿಂಬವನ್ನು ದಾಖಲಿಸಿರುವುದರಿಂದ ಈ ಸಮುದಾಯದ ಪ್ರಾಚೀನತಮ, ನಿಷ್ಪತ್ತಿ ಅರ್ಥ, ಅನ್ಯ ಕೃತಿಗಳಲ್ಲಿನ ಉಲ್ಲೇಖದಿಂದ ಮತ್ತು ಪುರಾಣಗಳ ಮಾಹಿತಿಯಿಂದ ಕುರುಬರ ಚರಿತ್ರೆಯನ್ನು ನಿರ್ಧರಿಸುವುದು ಸಾಧ್ಯವಾಗುತ್ತದೆ.

ಮೊದಲು ಹಾಲುಮತ ಪುರಾಣಗಳನ್ನು ಅನುಲಕ್ಷಿಸಿ ಮಾಹಿತಿಯನ್ನು ಪಡೆಯಬಹುದು. ರಸ್ತಾಪೂರ ಭೀಮಕವಿಯೂ ರಚಿಸಿದ "ಹಾಲುಮತೋತ್ತೇಜಕ ಪುರಾಣ"ದಲ್ಲಿ ಕುರುಬ ಸಮುದಾಯದ ಉಗಮ, ಕುರಿಯ ವೃತ್ತಿ, ವಂಶಾವಳಿ ಇನ್ನಿತರ ವಿವರವನ್ನು ತಿಳಿಸುವುದರ ಜೊತೆಗೆ ಸಂಸ್ಕೃತದ ಶ್ಲೋಕ ಮತ್ತು ಪುರಾಣಗಳಲ್ಲಿ ಉಲ್ಲೇಖಿಸಿರುವ ಮಾಹಿತಿಯನ್ನು ಭೀಮಕವಿಯೂ ದಾಖಲಿಸಿದ್ದಾನೆ. ಆಗ್ನೇಯ ಪುರಾಣದಲ್ಲಿ

"ಕುರರೀಮೃಗವಸ್ತ್ರಾಣಿ-ಕೃತ್ವಾವೈಕೌರಭೋರುಷಿಃ
ತನ್ನಾಮಸಾರ್ಥಕಂಚಕ್ರೇ-ದೇವಾನಾಂ ಹಿತಕಾಮ್ಯಯಾ
ಆಗಲಾ ಮುನಿಸುಪರ್ವಾಣ ದಿಕ್ಪತಿಗಳೊಂದಾಗಿ
ಕೌರಬ ಮಹಾಮುನಿವರೇಣ್ಯಂಗೆ ಶಿರ"

ಭವಿಷ್ಯೋತ್ತರ ಈಶಾನ್ಯ ಸಂಹಿತಾದಲ್ಲಿ

ಮರಳಿ ಮೃಡಕೌರಬ ಮಹಾಮುನಿಪನಂ ನೋಡ್ದು
ಸರಸದಿಂದೊರೆದ ನಿನ್ನಿಂದ ಮುನಿಗಣ
ಸುರನಿಕರವ ಪೊರೆವುದಕಾಗಿ ಶೀತಬಾಧಾನಿವರ್ತಕಮಾದ ವಸ್ತ್ರಗಳನು
ವಿರಚಿಸುತ್ತ ಭವಿಷ್ಯಕಾಲದೊಳಗೀವುದೆನೆ
ಕುರರೀಮೃಗದ ರೋಮಗಳ ತಂದು ವಿಲಸಿತಾಂ
ಬರಗೈದು ಸುಮನಸರ್ಗೊಲಿದಿತ್ತು ರಕ್ಷಿಸಿದ ಯೋಗದ ಸುಮಹಿಮೆಯಿಂದೆ[೨೩]

ಹೀಗೆ ಸಂಸ್ಕೃತ ಶ್ಲೋಕಗಳಲ್ಲಿ ಕುರಿಗಳ ತುಪ್ಪಟದಿಂದ ವಸ್ತ್ರಧರಿಸುವುದರ ಯೋಗ್ಯತೆಯನ್ನು ಸೂಚಿಸುವುದು. ಕುರಿಯ ಉಣ್ಣೆಯಕಾಯಕ ಒಂದು ಉದ್ಯಮವಾಗಿತ್ತು ಎಂದು ತಿಳಿದುಬರುತ್ತದೆ. ಇವುಗಳಲ್ಲದೆ ಸ್ಕಂದಪುರಾಣ, ಲಿಂಗಪುರಾಣ, ತ್ರಿಪುರ ಸಿದ್ಧಾಂತ (ವಿಷ್ಣು ಪುರಾಣ), ಇತಿಹಾಸ ಮಂಜರಿಯಲ್ಲಿನ ಅಧ್ಯಾಯಗಳಲ್ಲಿ, ರೈವತಖಂಡ ಅನ್ವಯಖಂಡ ಸ್ಕಾಂದದಲ್ಲಿ, ರುದ್ರಸಂಹಿತೆ ಭವಿಷ್ಯೋತ್ತರ ಮೂರನೆಯ ಅಧ್ಯಾಯ ಕೌಮದಿ ಸಿದ್ಧಾಂತ ಪಂಚಾಸ್ತಿಕಾಯಾದ ಸೌರಪುರಾಣ, ಮೌನಾಧಿಕರಣ ಇತಿಹಾಸ ದೀಪಿಕಾ (ವರಹ ಪುರಾಣ) ಗರುಡ ಮಹಾತ್ಮೆ, ಶ್ಲೋಕಗಳಲ್ಲಿ ಕುರುಬರ ಗೋತ್ರಗಳು ಹೇಗೆ ರಚನೆಯಾದವು ಎಂದು ತಿಳಿಸುತ್ತವೆ. ಇದರಿಂದ ಸಮಾಜದಲ್ಲಿನ ಅನೇಕ ಸಮುದಾಯಗಳಿಗಿಂತ ಕುರುಬರ ಸಮುದಾಯ ತುಂಬಾ ಹಳೆಯದು ಎಂದು ತಿಳಿಯುತ್ತದೆ. ಈ

ಕಾರಣಕ್ಕೆ ಪುರಾಣಗಳ ಉಗಮವನ್ನು ಜನಾಂಗ ವಾಚಿಕ ಶಬ್ದದ ಮೂಲಕ ಶೋಧಿಸುವುದು ಉತ್ತಮ.

ಕುರುಬರ ಸಮುದಾಯ ಕುರಿತು ಡಾ.ಶಂಬಾ ಜೋಶಿ ಅವರು "ಕುರ್ಬರು ಕುರಿದನಗಳನ್ನು ಸಾಕಿಕೊಂಡು ಬದುಕಿದವರು. ಗ್ರಿಯರ್‌ಸನ್ನರು ಮುಂದೆ ಹೇಳಿದಾಗೆ ಕುರುಬರು ಮೊದಲಾದ ಮಧ್ಯ ಪ್ರಾಂತ್ಯದಲ್ಲಿ ಇನ್ನೂ ಗುಂಪು ಕಟ್ಟಿಕೊಂಡು ಹೇಗೋ ಜೀವನವನ್ನು ಸಾಗಿಸುತ್ತಿರುವ ಕನ್ನಡ ತಂಡಗಳ ವರ್ಣನೆಯ ಮೇಲಿಂದಲೂ ಈ ತಂಡದವರ ನಿಜವಾದ ಹೆಸರು ಕುರುಬರೆಂತಲೆ ಇರಬೇಕೆಂದು ಹೇಳುತ್ತಾರೆ."[೨೪] ಈ ಮಾಹಿತಿಯ ಪ್ರಕಾರ ಕುರುಬರು ತಂಡೋಪ ತಂಡಗಳಲ್ಲಿ ಜೀವನ ನಡೆಸುತ್ತಿದ್ದರು. ಇಂತಹ ತಂಡಗಳ ಸಂಸ್ಕೃತಿಯನ್ನು ಉಳಿಸಿಕೊಳ್ಳುವಲ್ಲಿ ಇವರು ಪುರಾಣವನ್ನು ಮಾಧ್ಯಮವಾಗಿಸಿ ಕೊಂಡಿರಬಹುದು. ಕರ್ನಾಟಕದ ಕುರುಬರು ವೃತ್ತಿಯಿಂದ ಬೇರೆ ಬೇರೆ ರಾಜ್ಯಗಳಲ್ಲಿ ಭಿನ್ನ ಭಿನ್ನ ನಾಮಗಳಿಂದ ಕರೆಯಲ್ಪಟ್ಟಿದ್ದಾರೆ. ಅದೇ ರೀತಿ ಅವರ ಆರಾಧ್ಯ ದೈವಗಳ ಹೆಸರಿನಲ್ಲಿಯೂ ವೈವಿಧ್ಯತೆಯನ್ನು ಕಾಣಬಹುದು. ಕರ್ನಾಟಕದಲ್ಲಿ ಮೈಲಾರಲಿಂಗ, ಬೀರಪ್ಪ, ಮಾಳಿಂಗರಾಯ ಎಂದು ಪರಿಚಯವಾದರೆ, ಆಂಧ್ರಪ್ರದೇಶದಲ್ಲಿ ಖಂಡೋಬಾ, ವಿಠ್ಠಲ ಎಂದು ಪ್ರಸರಣವಾಯಿತು. ಈ ರೀತಿಯ ಬದಲಾವಣೆಗಳು ಪ್ರಾದೇಶಿಕ ಹಿನ್ನೆಲೆಯು ಪ್ರಭಾವವನ್ನು ಪಡೆದಿರುತ್ತವೆ.

ಭಾರತದ ವಿವಿಧ ಪ್ರದೇಶಗಳಲ್ಲಿ ನೆಲೆಸಿರುವ ಹಾಲುಮತ ಜನಾಂಗವೂ ಅನೇಕ ಹೆಸರುಗಳಿಂದ ಕರೆಸಿಕೊಂಡಿದೆ. "ಮಹಾರಾಷ್ಟ್ರದಲ್ಲಿ ಧನಗಾರ್, ಕುರಿಗಾರರು, ವೀರರು, ವಂಟಿಕಾರರು, ಮರಪತಿಗಳು, ಅರೆಗೌಳಿಗರು, ಅರೆಕುರುಬರು, ಚಟ್ನೇರು ಮುಂತಾದವುಗಳು ಹಾಗೂ ಆಂಧ್ರ ಪ್ರದೇಶದಲ್ಲಿ ಗೊಲ್ಲವಡು, ಕುರುಪ, ಯಾದವಲು, ಕುರುವ್ರು, ಕುರುಮಾವರು, ಗೋಪಾಲರು, ಗೊಲ್ಲಡು, ಗೋಲ್ಲರು, ಇದೈಯರು ಇತ್ಯಾದಿಯಾಗಿ ಕರೆಯುವರು. ಕರ್ನಾಟಕದಲ್ಲಿ ಕುರುಬ, ಹಟ್ಟಿಕಾರರು, ಧನಗರಾರು, ಹಳಬರು ಇತ್ಯಾದಿ. ಹೀಗೆ ಶಿವಾನಂದ ಗುಬ್ಬಣ್ಣವರು ದಾಖಲಿಸುತ್ತಾರೆ."[೨೫]

"ಗಡಾರಿಯಾ' ಎಂಬ ಹಿಂದಿ ಪದ 'ಗಡಾರ್' ಮತ್ತು 'ಯಾ' ಸೇರಿಕೊಂಡು ಆಗಿದೆ. ಗಡ್ಡಾರ್ ಅನ್ನುವುದು ಪ್ರಾಕೃತದ ಪದವಾಗಿದ್ದು ಅದರ ಅರ್ಥ ಕುರಿ ಇದರೊಂದಿಗೆ ಸೇರುವ 'ಯಾ' ಯಿಂದಾಗಿ ಇದು ಕುರುಬರ ಸಮುದಾಯ ಎನ್ನುವ ಅರ್ಥಬರುತ್ತದೆ. ಕೆಲವು ವಿದ್ವಾಂಸರು 'ಗಡಾರ್' ಮತ್ತು 'ಆರ್ಯ' ಎಂಬ ಪದಗಳಿಂದಾಗಿ 'ಗಡಾರಾರ್ಯ' ಅಥವಾ ಗಡಾರ್ಯ ಬಳಕೆಗೆ ಬಂದಿದೆ. 'ಗಡ್' ಅಂದರೆ ಕೋಟೆ; ಇವರು ಕೋಟೆಯ ರಕ್ಷಕರಾಗಿದ್ದರು. ಇದರಿಂದಾಗಿ ಅವರಿಗೆ 'ಗಡಾರಿಯಾ'ಗಳು ಎನ್ನುವ ಹೆಸರು ಬಂದಿದೆ. ಕನ್ನಡದ ಪದ 'ಕುರಿ' ಯಿಂದಾಗಿ ಕುರುಬ ಎಂಬ ಪದ ಬಳಕೆಯಾಗಿದೆ.[೨೬] ಈ ಮಾಹಿತಿಯಿಂದ ಕುರುಬರು ಕೋಟೆಯನ್ನು ಕಾಯುವ ಧೀರರು,

ಕುರಿಗಳನ್ನು ಕಾಯುವ ಕೃಷಿಕನಾಗಿದ್ದನೆಂದು ತಿಳಿಸುತ್ತದೆ. ಅಲ್ಲದೆ ಪುರಾಣಗಳಲ್ಲಿ ಬರುವ ಕುರಿ ಕಾಯುವವರು ಮತ್ತು ವ್ಯವಸಾಯಗಾರರು ಕುರುಬರೆಂದು ಖಚಿತ ಪಡಿಸುತ್ತದೆ. ಇವರು ತಮ್ಮ ನಾಡಿನ ಬಗೆಗೆ ಕ್ಷೇತ್ರದ ಬಗೆಗೆ ಪುರಾಣಗಳಲ್ಲಿ ಸ್ಥಳಗಳ ಉಲ್ಲೇಖ ಮಾಡಿದ್ದಾರೆ.

ಕುರುಬರು ರಾಜಕೀಯ ಚರಿತ್ರೆಯನ್ನು ಹೊಂದಿದ್ದರು. ಕರ್ನಾಟಕದ ರಾಜ್ಯ ಮನೆತನ ಕುರುಬರಿಂದಲೇ ಎಂದು ಹೇಳಲಾಗುತ್ತದೆ. ಕದಂಬ ರಾಜರು ಕುರುಬರೆಂದು ಇತಿಹಾಸದಿಂದ ತಿಳಿದುಬರುತ್ತದೆ. "ಕ್ರಿ.ಪೂ. ೧ನೆಯ ಶತಮಾನದಲ್ಲಿದ್ದ ಶಾತವಾಹನರು ಕುರುಬರು ಆಗಿರಬಹುದೇ ಎಂಬ ಸಂಶಯವು ಉಂಟಾಗುವುದು, 'ಶಾಂತ' ಎಂಬುದು 'ಶಾಂತ' ಎಂದಾಗಿರಬಹುದೆ. ಶಾಂತ ಎನ್ನುವುದು ಕುರುಬ ಸಮುದಾಯದ ಶಾಂತಮುತ್ತಾಯ್ಯನ ಹೆಸರು ಆಗಿತ್ತೆ ಎಂದು ಎಲ್. ಹನುಮಂತಯ್ಯ ಅವರು ಅಭಿಪ್ರಾಯ ಪಡುತ್ತಾರೆ."[೨೭] ಇವರ ಅಭಿಪ್ರಾಯ ಸ್ವಾಗತರ್ಹವಾಗಿದೆ. ಏಕೆಂದರೆ ಕನ್ನಡ ಭಾಷೆಯ ಲಕ್ಷಣಗಳಲ್ಲಿ ಬಿಂದು ಲೋಪವು ಒಂದು. ಹಾಗಾಗಿ ತೋಂಟ- ತೋಟ, ದಾಂಟು-ದಾಟುವಾದಂತೆ ಶಾಂತ-ಶಾತ ಎಂದು ಆಗಿರುವುದಕ್ಕೆ ಸಾಧ್ಯವಿದೆ. ಮತ್ತೊಂದು ಕಡೆ ಕೇಶಿರಾಜನು ಶಬ್ದಮಣಿ ದರ್ಪಣದಲ್ಲಿ ನಿತ್ಯ ಬಿಂದುಗಳು-ಅನಿತ್ಯ ಬಿಂದುಗಳ ಪ್ರಯೋಗದಲ್ಲಿ 'ಕುರುಬ' ಪದವನ್ನು ನಿತ್ಯ ಬಿಂದುವಿನಲ್ಲಿ ಸೇರಿಸಿದ್ದಾನೆ. ಈ ಗ್ರಂಥವು ೧೩ನೆಯ ಶತಮಾನದಲ್ಲಿ ರಚನೆಯಾಗಿದೆ. ಈ ಕೃತಿಯಲ್ಲಿ ಕುರುಂಬ ಪದದ ಬಳಕೆಯಿಂದ ಕುರುಬ ಸಮುದಾಯವು ಸಮಾಜದಲ್ಲಿ ಉನ್ನತಸ್ಥಾನ ಹೊಂದಿತು ಎಂದು ತಿಳಿಸುತ್ತದೆ. ಈ ರೀತಿಯ ಸಮುದಾಯವೂ ಕಾಲಾಂತರದಲ್ಲಿ ಮೌಖಿಕ ರೂಪದಲ್ಲಿ ತನ್ನ ಚರಿತ್ರೆಯನ್ನು ಕಟ್ಟುವುದಕ್ಕೆ ಮುನ್ನುಗ್ಗಿರಬಹುದು. ಕುರುಬ ಸಮುದಾಯವೂ ಎಲ್ಲಾ ಧರ್ಮಕ್ಕಿಂತ ಪೂರ್ವದ್ದು ಎನ್ನುವುದಕ್ಕೆ ಕನ್ನಡ ಸಾಹಿತ್ಯದಲ್ಲಿ ಅನೇಕ ಕೃತಿಗಳು ಅವರ ಆಚರಣೆಯನ್ನು ವಿಡಂಬಣೆ ಮಾಡುತ್ತವೆ. ಈ ರೀತಿಯ ವಿಡಂಬನೆ ಪ್ರಬಲ ಧರ್ಮಗಳು ಜನಪ್ರಿಯ ಧರ್ಮಗಳಿಂದ ತನ್ನ ಧರ್ಮಕ್ಕೆ ಜನರನ್ನು ಕಸಿದುಕೊಳ್ಳುವ ತಂತ್ರ ವ್ಯಕ್ತವಾಗಿದೆ. ಪ್ರಬಲ ಧರ್ಮಗಳು ಕೆಳಸಮುದಾಯದ ಸಂಸ್ಕೃತಿ ಆಚರಣೆಗಳನ್ನು ಯಾವ ರೀತಿ ಮಾನಸಿಕವಾಗಿ ಕಳಂಕಯುಕ್ತ ಮಾಡುತ್ತಿದ್ದವೆಂದು ಇಂತಹ ನಿದರ್ಶನಗಳಿಂದ ತಿಳಿದು ಬರುತ್ತದೆ. ೧೨ನೇ ಶತಮಾನದಲ್ಲಿ ನಯಸೇನನು ಧರ್ಮಾಮೃತದಲ್ಲಿ ಜೈನ ಧರ್ಮವನ್ನು ಹೊಗಳುತ್ತಾ, ಶ್ರೇಷ್ಠೀಕರಿಸುವಾಗ ಮೈಲಾರಲಿಂಗನ ಆಚರಣೆಯಲ್ಲಿನ ಗೊರವರ ಸಂಪ್ರದಾಯವನ್ನು ಅಲ್ಲಗಳೆಯುತ್ತಾನೆ. ಮೈಲಾರಲಿಂಗನು ಕುರುಬ ಸಮುದಾಯದ ದೈವ. ಈತನಲ್ಲಿ ಜೈನರು ವಿಡಂಬನೆ ಮಾಡುತ್ತಾರೆ. ಇದರಿಂದ ಮೈಲಾರನು ಪ್ರಬಲ ಧರ್ಮಗಳಿಗೆ ಸವಾಲಾಗಿದ್ದನೆಂದು ತಿಳಿದು ಬರುತ್ತದೆ.

"ಕುರುಬರು ಕೂಡಾ ಹಂಪಿಯ ಜೊತೆಗೆ ಜೈವಿಕ ಸಂಬಂಧ ಇರಿಸಿಕೊಂಡಿದ್ದಾರೆ. ಬೇಡರು ಹೇಗೆ ಹಂಪಿ ತಮ್ಮದು ಎನ್ನುತ್ತಾರೋ ಹಾಗೆ ಕುರುಬರು ಕೂಡಾ ಹಂಪಿಯನ್ನು ತಮ್ಮದೆಂದು

ವಾದಿಸುತ್ತಾರೆ. ಇದಕ್ಕೆ ಎರಡು ಕಾರಣಗಳನ್ನು ಕೊಡುತ್ತಾರೆ. ಈಗಿನ ವಿರೂಪಾಕ್ಷ ದೇವಸ್ಥಾನ ಪಕ್ಕದಲ್ಲಿರುವ ಮೂಲ ವಿರೂಪಾಕ್ಷನು ಮೂಲತಃ ಬೀರಪ್ಪ ಅಥವಾ ಬೀರದೇವರು. ಈ ಬೀರದೇವರು ಕುರುಬರ ದೇವತೆ. ಹಾಗಾಗಿ ದೇವಸ್ಥಾನದ ಒಡೆತನ ಮೂಲತಃ ಕುರಬರಿಗೆ ಸೇರಿದೆ. ವಿಜಯನಗರ ಸಂಸ್ಥಾನದ ಸಂಸ್ಥಾಪಕರಾದ ಹಕ್ಕ-ಬುಕ್ಕರು ಕುರುಬರಾಗಿದ್ದರು ಎಂದು ಹೇಳುತ್ತಾರೆ. ಆನೆಗುಂದಿ ಸಂಸ್ಥಾನವು ಕುರುಬರಿಗೆ ಸೇರಿದ್ದು ಹೌದಾದರೂ ಕಂಪಿಲ ಮತ್ತು ಕುಮಾರರಾಮರು ಕುರುಬರಲ್ಲ ಎಂದು ಅವರ ಭಾವನೆ. ಒಂದು ವೇಳೆ ಕಂಪಿಲ-ಕುಮಾರರಾಮರು ಕುರಬರಾಗಿದ್ದು ಹೌದಾಗಿದ್ದರೆ, ವಿರೂಪಾಕ್ಷ ಅವರಿಗೆ ಶಾಪ ನೀಡುತ್ತಿರಲಿಲ್ಲ ಎಂದು ಹೇಳುವ ಕುರುಬರು ಈ ಕೆಳಗಿನ ಹಾಡನ್ನು ಹೇಳುತ್ತಾರೆ.

ಕಂಪಿಲರಾಯಗ ಹಂಪಿ ವಿರೂಪಾಕ್ಷನ ಶಾಪ

ದಂಪತಿಗೆ ಬಂತೋ ವನವಾಸ: ಕಂಪ್ಲಿಯು

ಸಿಂಪಗಿ ಸಿಡಿದು ಹಾಳಾತೋ::

ಮತ್ತೊಂದು ಕಾರಣವೆಂದರೆ ಹಂಪಿ ಸಂಸ್ಥಾನ ಕುರುಬರದ್ದು. ವಿಜಯನಗರ ವಾಸ್ತುವಿನಲ್ಲಿರುವ ಕುರುಬನ ಚಿತ್ರ ಕಂಬಳಿ ಹೊದ್ದುಕೊಂಡು ಕೈಯಲ್ಲಿ ದೊಣ್ಣೆ ಹಿಡಿದುಕೊಂಡು ಕುರಿ ಕಾಯುವ ಕುರಬನ ಚಿತ್ರ ವಿಜಯನಗರದ ಅನೇಕ ದೇವಾಲಯದ ಕಂಬಗಳಲ್ಲಿ ಕಾಣಸಿಗುತ್ತವೆ.[೨೮] ಆದ್ದರಿಂದ ಕುರಬರೇ ವಿಜಯನಗರದ ಸ್ಥಾಪಕರು ಎಂದು ತಿಳಿಸುತ್ತದೆ.

ಏಸುಕ್ರಿಸ್ತನು ತನ್ನನ್ನು ಕುರಿ ಕಾಯುವನಿಗೆ ಹೋಲಿಸಿಕೊಳ್ಳುತ್ತಿದ್ದನೆಂದು ಹಿರಿಯರಿಂದ ತಿಳಿದ ವಿಷಯ. ಕುರಿಕಾಯುವ ಕುರುಬರು ಶತ ಶತಮಾನಗಳಿಂದ ಜೀವಿಸಿಕೊಂಡು ಬಂದಿದ್ದಾರೆ. ಕರ್ನಾಟಕದಲ್ಲಿ ಕುರುಬರ ಬಗ್ಗೆ ನಾಣ್ಣುಡಿಯಿಂದಲೂ ಪ್ರಾಚೀನ ಚರಿತ್ರೆ ತಿಳಿಯಬಹುದು. ಕುರುಬ ಕುಲಕ್ಕಿಂತ ಮತ್ತೊಂದು ಕುಲವಿಲ್ಲ. ಕುರುಬರು ಹುಟ್ಟುಲಿಂಗದವರು, ಲಿಂಗಾಯತರು ಕಟ್ಟು ಲಿಂಗದವರು ಮತ್ತು ಕುರುಬ ಕೂತು ಕೆಟ್ಟ, ಕುಂಬಾರ ಅಲೆದು ಕೆಟ್ಟ ಹಾಗೂ ಕುರುಬರ ಗೋತ್ರದಿಂದ ಈ ಸಮಾಜದಲ್ಲಿ ಅನೇಕ ಗೋತ್ರಗಳು ಸೃಷ್ಟಿಯಾದವು ಎಂದು ರಸ್ತಾಪೂರ ಭೀಮ ಕವಿಯ ಹಾಲುಮತೋತ್ತೆಜಕ ಪುರಾಣ ತಿಳಿಸಿಕೊಡುತ್ತದೆ.

ದ್ವಾದಶಿ ರಾಶಿಗಳಲ್ಲಿ ಮೇಷ-ರಾಶಿಯೂ ಮೊದಲನೆಯದು. "ಬೈಬಲ್‌ನಲ್ಲಿ ಹಾಗೂ ಕುರಾನ್ ಗ್ರಂಥಗಳಲ್ಲಿಯೂ ಇದನ್ನು ಕಾಣಬಹುದು. ಏಸುಕ್ರಿಸ್ತ ಹಾಗೂ ಪ್ರವಾದಿ ಮಹಮ್ಮದರಿಗೆ ಕುರಿಯ ಮೇಲೆ ನಿಜವಾದ ಪ್ರೀತಿಯಿತ್ತು. ಅವರ ಬೋಧನೆ, ಪ್ರವಚನಗಳಲ್ಲಿ ಕುರಿಯು ಚಿತ್ರಿತವಾಗಿದೆ. ಬುದ್ಧನೂ ಕುರಿಯನ್ನು ಪ್ರೀತಿಸುತ್ತಿದ್ದನು"[೨೯] ಎಂದು ತಿಳಿದುಬರುತ್ತದೆ. ಕುರುಬರು ಅನ್ಯ ಧರ್ಮಗಳ

ಜೊತೆ ಸಾಮರಸ್ಯದಿಂದ ಬದುಕುವ ಮುಗ್ಧತೆಯ ಜನರಾಗಿದ್ದರು. ಈ ಮುಗ್ಧತೆಯೇ ಕುರುಬ ಸಮುದಾಯವು ವ್ಯಾಪ್ತಿ ಹೊಂದಲು ಸಹಕಾರಿಯಾಗಿರಬಹುದು.

"ಸಾಂಸ್ಕೃತಿಕ ಏಕಾತ್ಮತೆಯ ಕಡೆಗಿನ ಐತಿಹಾಸಿಕ ಘಟನೆಗಳ ಓಘವು, ತತ್ಕಾಲೀನ ಅನೇಕ ಕಾರಣಗಳಿಂದಾಗಿ ಆಗಾಗ ದಿಕ್ಕು ಬದಲಿಸುತ್ತ ಬಂದುದುಂಟು. ಇದೆಲ್ಲವೂ ಸರಿಯಾಗಿ ಕಣ್ಣಳತೆಯಲ್ಲಿ ಬರಲು ನಾಡಿನ ಸಾಂಸ್ಕೃತಿಕ ಪೂರ್ವೋತ್ತರಗಳ ಸಮೀಕ್ಷೆಯು ಆಗಾಗ ನಡೆಯಬೇಕಾಗುತ್ತದೆ. 'ಕುಱುಂಬ' ನಮ್ಮ ಗುಡ್ಡದ ನಾಡಿನವನು ಅಥವಾ ಮತಿಯವನು ಎಂದರೆ ದ್ವಿರುಕ್ತಿದೋಷ ಬರುತ್ತದೆ. ಆದರೆ ಮರವನು ಎಂಬಲ್ಲಿ ಉಳಿದಿರುವ ಮೂಲಾರ್ಥವು ಕುಱುಂಬ-ಕುರುಬ ಎಂಬಲ್ಲಿ ಉಳಿದಿಲ್ಲ. 'ಕಳಿ' (ಮರಡಿಗಳ್ಲಿರುವ ಪ್ರಾಣಿ)ಗಳನ್ನು ತಾನಿದ್ದ ಕುಱು-ಬೆಟ್ಟಗಳಲ್ಲಿ ಕಂಡು ಅವನ್ನು ದಿನಾಲು ಬೇಟೆಮಾಡಿ ತರುವ ಬದಲು ಅವನ್ನು ಸಾಕಿ ತಳಿ ಬೆಳೆಸುವ ಹಂಚಿಕೆಯನ್ನು ಹುಡುಕಿದ ಬುದ್ಧಿವಂತಿಕೆಯ ಶ್ರೇಯ ಈ ಜನಕ್ಕಿದೆ. ಪ್ರಾಣಿಗಳನ್ನು ಸಾಕಿ ಬದುಕುವ ಈ ಹೊಸ ಹಂಚಿಕೆ ತಿಳಿದ ಈ ಜನ. ಮರುವ-ಕಳವರಗಿಂತಲೂ ಸಾಂಸ್ಕೃತಿಕ ರೀತಿಯಲ್ಲಿ ಮುಂದುವರಿದವರಾಗಿರುತ್ತಾರೆ. ಇವರು ಕೋಟೆ ಕಟ್ಟಿಕೊಂಡು ಒಂದೊಂದು ಭಾಗದ ಒಡೆಯರಾಗುತ್ತಾರೆ"[೬೦] ಎಂದು ಶಂಬಾ ಜೋಶಿಯವರು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯದಂತೆ ಕುರುಬರು ಹಾಲುಮತ ಎಂಬ ಅಭಿದಾನದಿಂದ ಅನೇಕ ಪುರಾಣಗಳನ್ನು ರಚಿಸಿರುವುದು ಕಂಡುಬರುತ್ತದೆ.

ಈ ಮಾತುಗಳನ್ನು ಅವಲೋಕಿಸಿದಾಗ ಭಾರತದ ಮೂಲ ನಿವಾಸಿಗಳಲ್ಲಿ ಕುರುಬರು ಪ್ರಮುಖರಾಗಿದ್ದರೆಂದು ತಿಳಿಯುತ್ತದೆ. ಅನೇಕ ಶಾಸನಗಳಲ್ಲಿ ಕುರುಬರಿಗೆ ಸಂಬಂಧಿಸಿದಂತೆ ವಿಷಯಗಳು ಉಲ್ಲೇಖಗೊಂಡಿವೆ. ಕುರುಬಸೇಣಿ, ಕುರಿದೆಱುಗೆ, ಕಂಬಳಿ ಮತ್ತು ಕುರುಬರ ಸಾಂಸ್ಕೃತಿಕ ವೀರರ ಹೆಸರು. ಪುಣ್ಯ ಸ್ಥಳಗಳ ಉಲ್ಲೇಖವಿದೆ. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಲ್ಲಿ 'ಕುಱುಮ್ಬಡಿ'[೬೧] ಎಂದು ಉಲ್ಲೇಖ ಬರುತ್ತದೆ. ಹಾಗೆಂದರೆ ಕುರಿಯ ತೆರಿಗೆ ಎಂದರ್ಥ. ಕ್ರಿ.ಶ. ೪೫೦ರಲ್ಲಿ ಕುರಿದೆರಿಗೆಯನ್ನು ಈ ಸಮುದಾಯ ಕೊಡುವುದರ ಬಗ್ಗೆ ತಿಳಿಸುತ್ತದೆ. "ಕುರುಬರ ಪ್ರಧಾನ ಉದ್ಯೋಗ ಕುರಿ ಸಾಕಾಣಿಕೆ. ಇದರ ಬಗೆಗೆ ಕ್ರಿ.ಶ. ೧೧೫೬ರ ಶಾಸನವೊಂದರಲ್ಲಿ ಪ್ರಸ್ತಾಪಿಸುತ್ತ ಕುರಿಗಳು ತೋಳಗಳಿಗೆ ಬಲಿಯಾಗುತ್ತಿದ್ದ ಸಂಗತಿಯನ್ನು ಉಲ್ಲೇಖಿಸಲಾಗಿದೆ. ಉದ್ಯೋಗದ ನಂತರ ಉತ್ಪಾದಿಸಿದ ಉತ್ಪನ್ನವನ್ನು ಮಾರಾಟ ಮಾಡಲು ಈ ಸಮುದಾಯ ಸಂಘ ಸ್ಥಾಪನೆ ಮಾಡಿತು. ಪ್ರತಿಯೊಂದು ಸಮುದಾಯವು ಉತ್ಪಾದಿಸುತ್ತಿದ್ದ ವಸ್ತುಗಳ ಮಾರಟಕ್ಕಾಗಿ ಸಮಾನ ವೃತ್ತಿಯವರು ಕೂಡಿಕೊಂಡು ಸಹಕಾರ ಸಂಘವನ್ನು ಕಟ್ಟುವುದು ಸಹಜ. ಅದು ವ್ಯಾಪಾರವನ್ನು ಸರಿಯಾಗಿ ನಿರ್ವಹಿಸಲು ಅನುಕೂಲ ಮಾಡಿಕೊಡುತ್ತಿತ್ತು. ಇದೇ ರೀತಿ ಕುರುಬರು ಸಂಘವನ್ನು ಸ್ಥಾಪಿಸಿಕೊಂಡಿದ್ದರೆಂದು ಶಾಸನಗಳಲ್ಲಿನ ಉಲ್ಲೇಖನೀಯ ಪದಗಳು ತಿಳಿಸುತ್ತವೆ. ಶಾಸನಗಳಲ್ಲಿ ಸಂಘ, ಶ್ರೇಣಿ, ಒಕ್ಕಲು, ಸಮಯ ಮೊದಲಾದ ಪದಗಳ

ಪ್ರಯೋಗಗೊಂಡಿವೆ. ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ಸಾಲಿಗ ಸಮುದಾಯದವರು ಇತ್ಯಾದಿ ಹೆಸರಿನ ಸಂಘಗಳಲ್ಲಿ ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಬಗ್ಗೆ ಶಾಸನಗಳು ತಿಳಿಸುತ್ತವೆ. ಸ್ವಹಿತ ರಕ್ಷಣೆ, ವೃತ್ತಿ ಸೌಕರ್ಯ, ಸಾಮಾಜಿಕ ಸ್ಥಾನಮಾನಗಳಿಗಾಗಿ ಉತ್ಪಾದಕ ವಿನಿಮಯ ವೃತ್ತಿಯವರು ರಚಿಸಿಕೊಂಡ ಸಂಘಟನೆಯೇ ಉತ್ಪಾದಕ ವಿನಿಮಯ ಸಂಘ. ಕುರುಬಸೇಣಿಯು ಕುರುಬರ ವೃತ್ತಿಗೆ ಸಂಬಂಧಿಸಿದುದು ಕುರಿಯ ಉಣ್ಣೆಯಿಂದ ಕಂಬಳಿಯನ್ನು ತಯಾರಿಸಿ ಮಾರಾಟ ಮಾಡಲು ಕುರುಬಸೇಣಿಯು ಸಹಾಯಕ್ಕೆ ಬರುತ್ತಿತ್ತೆಂದು ತೋರುತ್ತದೆ. ನೂಲಪರ್ವಕ್ಕೆ ವರ್ಷಂಪ್ರತಿ ಕುರುಬಸೇಣಿಗರೊಕ್ಕಲೊಕ್ಕಲು, ವೀಸವಯ್ದುಂ ಕೊಟ್ಟರ್ ಎಂದು ೧೧೬೧ರ ಶಾಸನದಲ್ಲಿ ಕುರುಬಸೇಣಿಯ ಉಲ್ಲೇಖ ಬರುತ್ತದೆ. ಕುರಿಗಳ ಪಾಲನೆ–ಪೋಷಣೆ ಮಾಡುತ್ತಿದ್ದ ಕುರುಬರಿಗೆ ಹಾಕುತ್ತಿದ್ದ ತೆರಿಗೆಗೆ ಶಾಸನಗಳಲ್ಲಿ ಕುರಿ ತೆರಿಗೆ ಎಂದು ಕರೆದಿದ್ದಾರೆ. ಕುರಿದೆರಿಗೆಯನ್ನು ಪ್ರಮುಖವಾಗಿ ತಿಳಿಸುವ ಎರಡು ಶಾಸನಗಳಿವೆ. ಮೊದಲನೆಯದು ಕ್ರಿ.ಶ. ೧೫೫೧ರ ಬಾಗುಳಿಯ ಶಾಸನ. "ಬಾಗುಳಿಯ ಕುಮಕರ ಬಸವಿಗೌಂಡನ ಮಗ ಲಿಂಗನಗೌಡ ಕುರುಬಗೌಡಗೆ ಕುರಿದೆಜೆಗೆ ಇಲ್ಲಾ ಎಂದು ಬಿಟ್ಟುಕೊಟ್ಟ ಶಾಸನ. ಹಸ್ತಿನಾವತಿಯ ವಳಿತದ ಪಾಂಡ್ಯನಾಡ ಒಳಗಣ ಕೋಗಳಿಯ ವೇಂಠಯಕೆ ಸಲುವ ಕಾಲುವಳಿಗಳು ಮುಂತಾದ ಗ್ರಾಮೋಪಗ್ರಾಮ(೦)ಗಳು ಇಹಂಥಾ ಕುರಿಗಳಿಗೆ ಕುರಿದೆಜುಗೆ ಇಲ್ಲ ಎಂದು ಹೇಳಿದ ಧರ್ಮ ಶಾಸನ."[೩೨] ಮಹತ್ವದ ಸಂಗತಿಯನ್ನು ತಿಳಿಸುತ್ತದೆ. ಕುರಿಗಳ ಹಿಕ್ಕೆ ಬೆಳೆಗಳಿಗೆ ಒಳ್ಳೆಯ ಗೊಬ್ಬರವಾಗುತ್ತದೆ. ಆ ಕಾರಣದಿಂದ ಕುರಿದೆಜೆಗೆಯನ್ನು ನಿಲ್ಲಿಸಿರಬಹುದು. ಅಲ್ಲದೇ ಕುರಿಗಳ ಹಿಂಡಿಗೆ ಇಂತಿಷ್ಟು ಎಂದು ರೈತರು ಹಣಕೊಟ್ಟು ಅವುಗಳನ್ನು ತಮ್ಮ ಹೊಲಗದ್ದೆಗಳಲ್ಲಿ ಗೊಬ್ಬರಕ್ಕಾಗಿ ಇಂದಿಗೂ ಕುರಿಗಳನ್ನು ರೈತರು ತಮ್ಮ ಭೂಮಿಗೆ ಫಲವತತ್ತೆಯನ್ನು ಹಿಕ್ಕೆಯಿಂದ ಪಡೆಯುವುದನ್ನು ತಿಳಿಸುತ್ತದೆ. "ಇನ್ನೊಂದು ಶಾಸನ ಕ್ರಿ.ಶ. ೧೫೮೦ರ ಕೊಟ್ಟೂರು ಶಾಸನ. ಇದು ಕುರಿತೆರಿಗೆಯ ಬಗೆಗೆ ಸುದೀರ್ಘವಾಗಿ ತಿಳಿಸುತ್ತದೆ. ಅಲ್ಲದೇ ಕುರುಬರಲ್ಲಿ 'ಒಡೆಯರು' ಎಂಬ ಪಂಗಡವಿರುವುದನ್ನು ಇವರಿಗೆ ಗುರುಸ್ಥಾನ ಲಭಿಸಿತ್ತೆಂದು ತಿಳಿಸುತ್ತದೆ."[೩೩] ನಂತರ "ಕೃಷ್ಣದೇವರಾಯನ ೧೫೨೧ರ ಶಾಸನವು ಕಮ್ಮಾರ ತೆರಿಗೆ, ಮಾದರ ತೆರಿಗೆಯ ಜೊತೆಗೆ ಕುರಿದೆಜೆಗೆಯನ್ನು ತ್ರಿಯಂಬಕಪುರದ ತ್ರಿಯಂಬಕ ದೇವರಿಗೆ ಮಾನ್ಯ ಮಾಡಿದುದುನ್ನು ವಿವರಿಸುತ್ತದೆ." ಅಂಚವಾಡಿ ಗ್ರಾಮದ ಶಾಸನವು, ತಿರುಮಲಕೂಡಲು ನರಸಿಪುರ ಗ್ರಾಮದ ಶಾಸನವೊಂದು ವಿವಿಧ ತೆರಿಗೆಯನ್ನು ಉಲ್ಲೇಖಿಸುತ್ತಾ ಕುರಿದೆಜೆಗೆಯನ್ನು ಸುಖದಿಂದ ಅನುಭವಿಸಬೇಕೆಂದು ಹೇಳುತ್ತದೆ."[೩೪] ಹೀಗೆ ಶಾಸನಗಳಲ್ಲಿ ಕುರುಬರಿಗೆ ಸಂಬಂಧಿಸಿದಂತೆ ಕುರಿದರಿಗೆ, ಅವರು ಸೇನೆಯನ್ನು ಹೊಂದಿರುವುದನ್ನು ಸಂಘಟನೆಯ ಹರಿಕಾರರಾಗಿ ಜೀವಿಸಿದ್ದರು ಎಂದು ಪುರಾಣಗಳಲ್ಲಿ ಆಧಾರ ದೊರೆಯುತ್ತದೆ. ವೃತ್ತಿಯ ತೆರಿಗೆ, ಕುರುಬರ ವ್ಯಕ್ತಿನಾಮಗಳ ಬಗೆಗೆ, ದೇವಸ್ಥಾನಕ್ಕೆ ಉಂಬಳಿಯನ್ನು ದಾನವಾಗಿ

ಬಿಟ್ಟಿದ್ದನ್ನು ವಿವರಿಸುತ್ತವೆ. ಒಟ್ಟಿನಲ್ಲಿ ಶಾಸನಗಳು ಸಹ ಪುರಾಣಗಳಲ್ಲಿ ಬರುವ ವ್ಯಕ್ತಿನಾಮ, ಸ್ಥಳನಾಮಗಳನ್ನು ಖಚಿತವಾಗಿ ಹೇಳುವುದರಿಂದ ಶಾಸನಗಳು ಹಾಲುಮತ ಪುರಾಣಗಳ ವಿಕಾಸವನ್ನು ತಿಳಿಸಿಕೊಡುತ್ತವೆ.

ಹಾಲುಮತ ಪುರಾಣಗಳು ಅಭಿವ್ಯಕ್ತಿಸುವ ಸಾಹಿತ್ಯ ಮಾಧ್ಯಮ, ಕಾವ್ಯದ ವಸ್ತು ಅವರ ಸಮುದಾಯವನ್ನು ಹೊರತುಪಡಿಸಿ ರಚನೆಯಾಗಿಲ್ಲ. ಆದ್ದರಿಂದ ಪುರಾಣಗಳು ಸಮುದಾಯದ ಆಶೋತ್ತರಗಳಿದ್ದಂತೆ.

ಗೊಲ್ಲಾಳಯ್ಯನ ಕುರಿತು ಆರ್. ನರಸಿಂಹಾಚಾರ್ಯರು ಕರ್ನಾಟಕ ಕವಿ ಚರಿತ್ರೆಯಲ್ಲಿ ವೀರಗೊಲ್ಲಾಳಯ್ಯ ಎಂದು ಉಲ್ಲೇಖಿಸುತ್ತಾರೆ. "ಈತನ ಕಾಲ ಸು. ಕ್ರಿ.ಶ. ೧೧೬೦. ಇವನ ಅಂಕಿತ ವೀರಬೀರೇಶ್ವರಲಿಂಗ ಎಂದು ಹೇಳುತ್ತಾರೆ."[೫] ಕಲ್ಲು ಲಿಂಗವಲ್ಲ, ಮರದೇವರಲ್ಲ, ಇವುಗಳೆಲ್ಲ ಕ್ರಮವಾಗಿ ಉಳಿಯಲ್ಲಿ, ಉರಿಯಲ್ಲಿ, ನೀರಿನಲ್ಲಿ ಕೊನೆಯಾಗುತ್ತವೆ. ಆದರೆ ಕಂಡವರಲ್ಲಿ ಕೈಚಾಚದೆ ಸ್ವಂತ ವ್ರತ ಮಾಡಿದರೆ ಅವನು ಸರ್ವಾಂಗಲಿಂಗಿಯಾಗುವನೆಂದು ಗೊಲ್ಲಾಳನ ವಚನದಲ್ಲಿ ನಿದರ್ಶನ ನೀಡುತ್ತಾರೆ. ಗೊಲ್ಲಾಳನಿಗೆ ಮೂರ್ತಿ ಪೂಜೆಗಿಂತ ಕಾಯಕತ್ವದ ನಿರಂತರತೆಯಲ್ಲಿ ವಿಶ್ವಾಸವಿತ್ತು. ಹಾಗಾಗಿ ಆತನು ಕುರಿಯನ್ನು ಕಾಯ್ದುಕೊಂಡು ಕುರಿಗಳನ್ನೇ ಲಿಂಗವಾಗಿಸಿಕೊಂಡಿದ್ದನೆಂದು ಕಂಡುಬರುತ್ತದೆ. ಹೀಗೆ ಹಾಲುಮತ ಪುರಾಣಗಳು ಪೌರಾಣಿಕ ನೆಲೆಯಲ್ಲಿ ಕಲ್ಪನೆಯ ಜೊತೆ ಜೊತೆಗೆ ಚಾರಿತ್ರಿಕ ಅಂಶಗಳನ್ನು ಅಡಗಿಸಿಕೊಂಡಿವೆ. ಹಾಲುಮತ ಚರಿತ್ರೆಯು ಇತಿಹಾಸದ ಪುಟದಲ್ಲಿ ಸೇರದಿದ್ದರೂ ಸ್ಥಳೀಯ ಸಮುದಾಯದ ಕಾವ್ಯ ಪುರಾಣಗಳಲ್ಲಿ ಬೇರು ಬಿಟ್ಟಿರುವುದು ಕಂಡುಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಮಹದೇವ ಬಣಕಾರರ ಕೃತಿಗಳು, ಡಾ. ನೀಲಮ್ಮ ಕತ್ನಳ್ಳಿ, ಪು-೨೯

೨. ಸಿದ್ಧಮಂಕ ಚರಿತೆ, ಎಂ.ಎಂ. ಕಲಬುರ್ಗಿ, ವೈಸಿ.ಭಾನುಮತಿ, ಸಂ-೧, ಪು-೮

೩. ಅದೇ ಸಂ-೧, ಪು-೧೩

೪. ಅದೇ ಸಂ-೧, ಪು-೧೯

೫. ಜನಪದ ಹಾಲುಮತ ಮಹಾಕಾವ್ಯ, ಡಾ. ವೀರಣ್ಣ ದಂಡೆ, ಪು-೨

೬. ಅದೇ ಪು-೪

೭. ಸಿದ್ಧಮಂಕ ಚರಿತೆ ಪ್ರಸ್ತಾವನೆ, ಪುಟ-XX

೮. ಹಾಲುಮತೊತ್ತೇಜಕ ಪುರಾಣ ಸಂ-೬, ಪು-೧೬೨

೯. ಗೊಲ್ಲಾಳಯ್ಯನ ಕಾವ್ಯ, ಸಂ-೧, ಪು-೩೧

೧೦. ಪ್ರೌಢರಾಯನ ಕಾವ್ಯ, ಸಂ-೧೦, ಪು-೭೨

೧೧. ಶಿವತತ್ತ್ವ ಚಿಂತಾಮಣಿ, ಲಕ್ಕಣ್ಣ ದಂಡೇಶ, ಸಂ-೩೭, ಪು-೫

೧೨. ಸಿದ್ಧೇಶ್ವರ ಪುರಾಣ ವಿರಕ್ತ ತೋಂಟದಾರ್ಯ ವಿರಚಿತ, (ಸಂ) ಡಾ.ಮೈಲಹಳ್ಳಿ ರೇವಣ್ಣ, ಸಂ-೧೫ ಪು-೬

೧೩. ರೇವಣಸಿದ್ಧ : ಒಂದು ಅಧ್ಯಯನ, ಡಾ.ಶಕುಂತಲಾ ಗೋಪಶೆಟ್ಟಿ, ಪುಟ-೧೯

೧೪. ಧರ್ಮ ಮತ್ತು ಮುಕ್ತ ವಿಚಾರ, ಯಳನಾಡು ಅಂಜನಪ್ಪ, ಪುಟ-೧೫

೧೫. 'ಅದೇ ಪುಟ-೧೮

೧೬. ಅದೇ ಪುಟ-೧೮

೧೭. ಅದೇ ಪುಟ-೧೯ .

೧೮. ದಕ್ಷಿಣ ಕರ್ನಾಟಕದ ಜನಪದ ಕಥೆಗಳು, ಜೀ.ಶಂ. ಪರಮಶಿವಯ್ಯ, ಪುಟ-೭

೧೯. ಸನಾತನ ವೀರಶೈವ ಬ್ರಾಹ್ಮಣ ಧರ್ಮ, ಟಿ.ಎ. ದಕ್ಷಿಣಾ ಮೂರ್ತಿ, ಪುಟ-೭

೨೦. ಧರ್ಮ ಮತ್ತು ಮುಕ್ತ ವಿಚಾರ, ಯಳನಾಡು ಅಂಜನಪ್ಪ, ಪುಟ-೬೭

೨೧. ಅದೇ ಪುಟ-೬೮

೨೨. ಅದೇ ಪುಟ-೬೯

೨೩. ಹಾಲುಮತೋತ್ತೇಜಕ ಪುರಾಣ, ಸಂ-೯, ಪ-೪೩, ೪೪

೨೪. ಶಂಬಾ ಸಂಪುಟ-೧, ಕುರುಬರೂ-ಮಲೆಯರೂ ಲೇಖನ, ಪುಟ-೨೦

೨೫. ಭಾರತದ ಕುರುಬರು, ಬಿ.ಕೆ. ರವಿ, ಪುಟ-೨೭

೨೬. ಅದೇ, ಬಿ.ಕೆ. ರವಿ, ಪುಟ-೨೭

೨೭. ಕುರಬರ ಚರಿತ್ರೆ, ಎಲ್. ಹನುಮಂತಯ್ಯ, ಪುಟ-೨

೨೮. ಹಂಪಿ ಜಾನಪದ, ಪುರುಷೋತ್ತಮ ಬಿಳಿಮಲೆ, ಪುಟ-೧೦೭

೨೯. ಭಾರತದ ಕುರುಬರು, ಬಿ.ಕೆ. ರವಿ, ಪುಟ-೩೯

೩೦. ಶಂಬಾ ಕೃತಿ ಸಂಪುಟ-೩, (ಸಂ) ಮಲ್ಲೇಪುರಂ ಜಿ. ವೆಂಕಟೇಶ, ಪುಟ-೨೫೨

೩೧. ಶಾಸನ ಸಂಗ್ರಹ (ಸಂ) ಎ.ಎಂ. ಅಣ್ಣಿಗೇರಿ, ಡಾ. ಆರ್.ಶೇಷಶಾಸ್ತ್ರಿ, ಪುಟ-೧

೩೨. ಹಾಲಕೆನೆ (ಸಂ) ಶ್ರೀರಾಮ ಇಟ್ಟಣವರು, ಪುಟ-೨೬

೩೩. ಅದೇ ಪುಟ-೨೭

೩೪. ಅದೇ ಪುಟ-೨೭

೩೫. ಕರ್ನಾಟಕ ಕವಿ ಚರಿತ್ರೆ, ಸಂಪುಟ-೧, ಆರ್. ನರಸಿಂಹಚಾರ್ಯರ, ಪುಟ-೨೪೩

ಅಧ್ಯಾಯ : ನಾಲ್ಕು

# ಹಾಲುಮತ ಪುರಾಣಗಳ ವಸ್ತು ವೈವಿಧ್ಯತೆ

೧. ಕಥಾ ಸಮೀಕ್ಷೆ

೨. ಅವತಾರಗಳು

- i. ರೇವಣಸಿದ್ಧ
- ii. ಪದ್ಮಗೊಂಡ
- iii. ಸಿದ್ಧರಾಮ
- iv. ಬೀರಪ್ಪ

೩. ಸಾಂಸ್ಕೃತಿಕ ವೀರರು

- i. ಶಾಂತಮುತ್ತಯ್ಯ
- ii. ಸಿದ್ಧಮಂಕ
- iii. ಮಾಳಿಂಗರಾಯ
- iv. ಗೊಲ್ಲಾಳೇಶ್ವರ
- v. ಅಮೋಘ ಸಿದ್ಧ

೪. ಸಾಂಸ್ಕೃತಿಕ ಸಂಘರ್ಷ

೫. ಪ್ರಾಣಿ ಜಗತ್ತು

೬. ಸ್ತ್ರೀ ಪಾತ್ರಗಳು

ಅಧ್ಯಾಯ : ನಾಲ್ಕು

## ಹಾಲುಮತ ಪುರಾಣಗಳ ವಸ್ತು ವೈವಿಧ್ಯತೆ

ಸಂಸ್ಕೃತಿಯು ಸಮಾಜದ ವಸ್ತು. ಮನುಷ್ಯ ಸಮಾಜ ಪ್ರಕೃತಿಯ ಜೊತೆಯಲ್ಲಿ ಸಂಸ್ಕೃತಿಯನ್ನು ರೂಪಿಸಿಕೊಂಡಿರುತ್ತದೆ. ತನಗೆ ಯಾವ ಪ್ರದೇಶ, ಯಾವ ವಸ್ತು, ಯಾವ ಜನರು ನೆಮ್ಮದಿಯನ್ನು ತರುತ್ತಾರೋ ಆ ಮೂಲಕ ತಾನು ಬೆಳೆಯಲು ಪ್ರಯತ್ನಿಸುತ್ತಿರುತ್ತಾನೆ. ಭೂ ಭಾಗದಲ್ಲಿ ಎಲ್ಲೆಲ್ಲಿ ಜೀವಸೃಷ್ಟಿಗೆ ಅವಕಾಶವಿತ್ತೋ ಅಲ್ಲೆಲ್ಲ ಬಹುಶಃ ಏಕ ಕಾಲದಲ್ಲಿ ಮಾನವನ ಸೃಷ್ಟಿಯಾಗಿದೆ. ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಸಮುದಾಯ ಸ್ಥಳವೂರಿದ್ದೇ ಜನಪದವಾಯಿತು. ಈ ಜನಪದವು ಜೀವಕೋಟಿಯ ಉಳಿವಿಗೆ, ಸಂಸಾರಕ್ಕೆ, ಸಮಾಜಕ್ಕೆ, ಬದುಕಿಗೆ, ಸಾವಿಗೆ, ಹುಟ್ಟಿನಿಂದ ಅಂತ್ಯದವರೆಗೆ ಕೆಲವು ಸಂಪ್ರದಾಯ ಆಚಾರ-ವಿಚಾರ, ಆಚರಣೆ, ಆಲೋಚನೆಗಳನ್ನು ರೂಢಿ ಮಾಡಿಕೊಂಡಿದೆ. ಇದೆಲ್ಲ ಬರುವುದು ಜನಪದರ ಸಮಾಜದಲ್ಲಿಯೇ ಬದುಕಿನ ಪರವಾಗಿತ್ತು. ಈ ರೀತಿಯಾಗಿ ನೆಲೆಯೂರಿದ ಜನಪದರು ತಮ್ಮ ಬಯಕೆಗಳನ್ನು ವಸ್ತುಗಳ ರೂಪದಲ್ಲಿ ಕೇಂದ್ರೀಕರಿಸುವ ಮಾರ್ಗವನ್ನು ಅನುಸರಿಸಿದರು. ಅದೇ ಮೌಖಿಕ ಸಾಹಿತ್ಯ ಮಾರ್ಗ. ಈ ಮಾರ್ಗದ ಮೂಲಕ ಜನಪದ ಬದುಕಿನ ವಸ್ತು ವಿಷಯಗಳನ್ನು ಕಾವ್ಯದಲ್ಲಿ ಗೇಯತೆಯ ಮೂಲಕ ಅಭಿವ್ಯಕ್ತಪಡಿಸತೊಡಗಿದರು. ಈ ಅಭಿವ್ಯಕ್ತಿಯ ಮಾಧ್ಯಮಕ್ಕೆ, ಮನಸ್ಸಿನ ಭಾವನೆಯನ್ನು ರಚನೆ ರೂಪಕ್ಕೆ ತರಲು ವಾದ್ಯಗಳನ್ನು ಸಹ ಬಳಸಿಕೊಂಡರು. ಹಾಗಾಗಿ ಮನಸ್ಸಿನ ಬಯಕೆಯು ನೇರವಾಗಿ ಅಭಿವ್ಯಕ್ತಗೊಳ್ಳದೆ ಪರಿಚಯದ ಅನೇಕ ವಸ್ತು ವಿಷಯಗಳನ್ನು ಆಧರಿಸಿ ಹೊರಹಾಕತೊಡಗಿದರು. ಈ ರೀತಿಯ ಅಭಿವ್ಯಕ್ತಿ ಮಾಧ್ಯಮದ ಉದ್ದೇಶ ಒಂದೇ ಆಗಿದ್ದರೂ, ಪ್ರಾದೇಶಿಕ ವೈವಿಧ್ಯತೆಯಿಂದ ಅಭಿವ್ಯಕ್ತಿಯ ಮಾರ್ಗ ವಿಶಿಷ್ಟತೆಯನ್ನು ಪಡೆಯಿತು. ಅಂದರೆ ಒಂದೇ ಸಮುದಾಯದ ಸಂಸ್ಕೃತಿ, ಚರಿತ್ರೆ ಕುರಿತ ಕಾವ್ಯ ಪುರಾಣಗಳು ವೈವಿಧ್ಯತೆಯಿಂದ ರಚನೆಯಾದವು. ಆದಿಕವಿ ಪಂಪನು ಆದಿಪುರಾಣ ಮತ್ತು ಪಂಪಭಾರತ ಕೃತಿಗಳನ್ನು ರಚಿಸಿದ್ದಾನೆ. ಈತನ ಕಾವ್ಯದ ವಸ್ತುವೇ ಮುಂದಿನ ಕವಿಗಳು ಆಯ್ದುಕೊಂಡಿದ್ದರೂ ಸ್ವತಃ ಪ್ರತಿಭೆಯಿಂದ ರಚನೆಯಾಗಿವೆ. ಉದಾ:

ಪಂಪಭಾರತದ ಪ್ರೇರಣೆಯಿಂದ ರನ್ನನ ಗದಾಯುದ್ಧ, ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿ, ಲಕ್ಷ್ಮೀಶನ ಜೈಮಿನಿ ಭಾರತ ಇನ್ನು ಮುಂತಾದ ಕೃತಿಗಳ ವಸ್ತು ಒಂದೇ ಆದರೂ ಕಾಲದ ಅಂತರದಿಂದ ನಿರೂಪಣಾ ವೈವಿಧ್ಯತೆಯನ್ನು ಪಡೆದು ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧಿಯಾಗಿವೆ. ಅದೇ ರೀತಿ ಹಾಲುಮತ ಪುರಾಣಗಳು ಸಮುದಾಯದ ಆಶೋತ್ತರಗಳಿಗೆ ರಚನೆಯಾದರೂ ವಸ್ತುವಿನಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ. ಏಕೆಂದರೆ ಅಧ್ಯಯನಕ್ಕೆ ಒಳಪಟ್ಟ ಎಲ್ಲಾ ಹಾಲುಮತ ಕಾವ್ಯಪುರಾಣಗಳು ಏಕಪ್ರದೇಶ, ಏಕವ್ಯಕ್ತಿಯಿಂದ, ಏಕಕಾಲದಲ್ಲಿ ರಚನೆಯಾಗಿಲ್ಲ.

ಹಾಲುಮತ ಪುರಾಣಗಳಲ್ಲಿ ಒಂದು ಪ್ರದೇಶಕ್ಕೆ ಒಬ್ಬ ವ್ಯಕ್ತಿ ಸಾಂಸ್ಕೃತಿಕ ವೀರನಾಗಿದ್ದರೆ, ಮತ್ತೊಂದು ಕಡೆ ಅದೇವ್ಯಕ್ತಿ ಬೇರೊಂದು ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುತ್ತಾನೆ. ಮಹಾರಾಷ್ಟ್ರದ ಹುಲಜಂತಿಯಲ್ಲಿ ಮಾಳಿಂಗರಾಯನಿದ್ದಂತೆ, ಬಿಜಾಪುರದ ಸರೂರಿನಲ್ಲಿ ಶಾಂತ ಮುತ್ತಯ್ಯ ಎಂದು ಪ್ರಖ್ಯಾತಿ ಪಡೆದಿರುತ್ತಾನೆ. ಇವರಿಗೆ ಕುರುಬರು ಎಂದು ಕರೆದರೆ ಮತ್ತೊಂದು ಕಡೆ ಹಾಲುಮತದವರು, ಹಂಡೇ ಕುರುಬರು, ವಜೀರರು ಮುಂತಾದ ಹೆಸರುಗಳಿಂದ ಕರೆಯುವರು. ನಂತರ ಹಾಲುಮತಕ್ಕೆ ಸಂಬಂಧಿಸಿದಂತೆ ಕೆಲವು ಪಾರಿಭಾಷಿಕ ಪದಗಳು ತುಂಬ ವಿಶಿಷ್ಟತೆಯನ್ನು ಪಡೆದಿವೆ. ಕರಿಯಕಂತೆ, ಕೋಲಕಾರರು, ಒಡೆಯರು ಮುಂತಾದವು. ಈ ಎಲ್ಲಾ ಸಂಪ್ರದಾಯಗಳು ಹುಟ್ಟುವುದಕ್ಕೆ ಕಾರಣವೇನು ಎಂದು ತಿಳಿಯಲು ಎಲ್ಲಾ ಹಾಲುಮತ ಪುರಾಣಗಳ ವಸ್ತುವನ್ನು ಅಧ್ಯಯನ ಮಾಡುವುದು ಸೂಕ್ತ. ಆ ಕಾರಣಕ್ಕೆ ಹಾಲುಮತ ಪುರಾಣಗಳ ವಸ್ತು ವೈವಿಧ್ಯತೆಯನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

ಕುರುಬ ಸಮುದಾಯಕ್ಕೆ ಸಂಬಂಧಿಸಿದಂತೆ ಹಾಲುಮತ ಪುರಾಣಗಳು ವಿವಿಧ ಮಾದರಿಯಲ್ಲಿ ತಮ್ಮ ಆಶೋತ್ತರಗಳನ್ನು ಪ್ರಸಾರ ಮಾಡಿವೆ. ಅನೇಕ ಪ್ರದೇಶಗಳಲ್ಲಿ ರಚನೆಯಾದ್ದರಿಂದ ಪ್ರಾದೇಶಿಕ ಭಿನ್ನತೆಯ ಸಂಸ್ಕೃತಿಯನ್ನು ಅರಿಯಲು, ಸಂಪ್ರದಾಯಗಳನ್ನು ತಿಳಿಯಲು ಸುಲಭವಾಗಿದೆ. ಆಯಾ ಕಾವ್ಯದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ವ್ಯಕ್ತಿಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಒಬ್ಬ ನಾಯಕ ಸಾಂಸ್ಕೃತಿಕ ವೀರನಾಗಿ ಚಿತ್ರಣಗೊಂಡರೆ, ಮತ್ತೊಬ್ಬ ಚಾರಿತ್ರಿಕ ವ್ಯಕ್ತಿಯಾಗಿ, ಪೌರಾಣಿಕ ವ್ಯಕ್ತಿಯಾಗಿ ಚಿತ್ರಣಗೊಂಡಿದ್ದಾನೆ. ಆದ್ದರಿಂದ ಅವರ ಸಾಹಸ, ಸಾಧನೆಗಳು ವಿಭಿನ್ನತೆಯನ್ನು ಹೊಂದಿವೆ. ಕೆಲವರು ಭಂಡಾರದಿಂದ ಪವಾಡ ಮಾಡಿದರೆ, ಕೆಲವರು ಕಂಬಳಿಯಿಂದ ಮಾಡುತ್ತಾರೆ. ಮತ್ತೆ ಕೆಲವರು ಸತ್ತ ಟಗರನ್ನು ಬದುಕಿಸಿ ತಮ್ಮ ವ್ಯಕ್ತಿತ್ವವನ್ನು ಪ್ರತಿಬಿಂಬಿಸಿದ್ದಾರೆ. ಹೀಗೆ ಒಬ್ಬೊಬ್ಬರು ಒಂದೊಂದು ಮಾರ್ಗದ ಮೂಲಕ ತಮ್ಮ ಪವಾಡ ಶಕ್ತಿಯನ್ನು ತೋರಿಸಿದ್ದಾರೆ. ಆದ್ದರಿಂದ ಪುರಾಣವೂ ಚರಿತ್ರೆಯನ್ನು, ಚರಿತ್ರೆಯೂ ಪುರಾಣವಾಗುವಲ್ಲಿ ಸಂಸ್ಕೃತಿಕಾರನ ಪ್ರಯತ್ನವಿದೆ. ಇಲ್ಲಿ ಸಂಸ್ಕೃತಿಕಾರರು ಎಂದರೆ ಆಯಾ ಸಮುದಾಯದ ಅಸ್ಮಿತೆಯನ್ನು ಕಾಪಾಡುವ ವರ್ಗ. "ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ

ಪುರಾಣ ವಿಪುಲ, ಚರಿತ್ರೆ ವಿರಳ. ಈ ಚರಿತ್ರೆ ವಲಯದಲ್ಲಿಯೇ ಪುರಾಣದ ಚರಿತ್ರೀಕರಣ (ಪಂಪ ಭಾರತ), ಚರಿತ್ರೆಯ ಪುರಾಣೀಕರಣ (ಸಿದ್ಧರಾಮ ಚಾರಿತ್ರ) ಎಂಬ ಇನ್ನೆರಡು ಪ್ರಕಾರಗಳು ನಮ್ಮಲ್ಲಿ ಹುಟ್ಟಿಕೊಂಡಿವೆ."[೨] ಆದ್ದರಿಂದ ಚರಿತ್ರೆಯ ಘಟನೆಯು ಸಮಾಜದಲ್ಲಿ ತುಂಬಾ ಪರಿಣಾಮಕಾರಿಯಾಗಿ ಪ್ರಭಾವ ಬೀರಿರುತ್ತದೆ. ನಂತರ ಇದು ಜನರ ನಡುವೆ ಆಗಾಗ ಪ್ರಸ್ತುತಕ್ಕೆ ಬರುತ್ತಲೂ ಇರುತ್ತದೆ. ಕೊನೆಗೆ ಈ ಚರಿತ್ರೆಯ ಘಟನೆ, ವಿಸ್ಮೃತಿ ಹೊಂದಿದಂತೆ ಆಗಿ ತದನಂತರ ಜನಪದರ ಜ್ಞಾನದಲ್ಲಿ ಕಾಲ್ಪನಿಕ ಹಂದರದಲ್ಲಿ ಪುರಾಣ ವಸ್ತುವಾಗುವುದು ಕಂಡುಬರುತ್ತದೆ. ಈ ರೀತಿಯಲ್ಲಿ ಪುರಾಣದ ನಾಯಕರು ಪೌರಾಣಿಕ ಕವಚವನ್ನು ಧರಿಸಿದ್ದಾರೆ ಎನ್ನಬಹುದು. ಹೇಳುವ ವಿಷಯವನ್ನು ನೇರ ಹಾಗೂ ಸ್ಪಷ್ಟವಾಗಿ ಹೇಳದೆ, ಕಲ್ಪನೆ, ರಮ್ಯತೆ, ಕಲಾತ್ಮಕತೆಯನ್ನು ಸೇರಿಸಿ ಹೇಳುವುದರಿಂದ ವಾಸ್ತವತೆಗೆ ದೂರವಾಯಿತು. ಇನ್ನೂ ದಾಖಲೆಯನ್ನು ಪಡೆಯದ ಪುರಾಣ (ಮೌಖಿಕ)ಗಳು ವಾಸ್ತವತೆಯ ಸತ್ಯಕ್ಕೆ ದೂರವೆಂದೆನಿಸುವುದು ಸಹಜ.

ಕನ್ನಡ ಸಾಹಿತ್ಯದಲ್ಲಿ ಆದಿಕವಿಯಿಂದ ಇಂದಿನವರೆಗೂ ಪುರಾಣಗಳ ಸೃಷ್ಟಿ ನಿಂತಿಲ್ಲ. ಆದರೆ ಎಲ್ಲಾ ಪುರಾಣಗಳು ಶ್ರೇಷ್ಠತೆಯ ಸ್ಥಾನವನ್ನು ಸಹ ಹೊಂದಿಲ್ಲ. ಏಕೆಂದರೆ ಪಂಡಿತ ವರ್ಗ ರಚನೆ ಮಾಡಿದವುಗಳು ಕಾವ್ಯ ಮಾತ್ರ ಮಾನ್ಯತೆಯನ್ನು ಪಡೆಯಿತು. ಸಮುದಾಯಗಳಾಗಲಿ, ಜಾತಿ ಆಧರಿಸಿ ರಚನೆಯಾದ ಕುಲಮೂಲದ ಮಾಹಿತಿಯಿರುವ ಪುರಾಣಗಳು ಅಮಾನ್ಯತೆ ಹೊಂದಿದವು. ಕಾರಣ ಅಸಾಮಾನ್ಯ ವ್ಯಕ್ತಿತ್ವದ ಚಿತ್ರಣ, ಪವಾಡ ತಂತ್ರಗಳಿಂದ ತಮ್ಮ ಅಭಿಲಾಷೆಯನ್ನು ಮುಟ್ಟುವುದು ಮತ್ತು ವೈರಿಗಳನ್ನು ಹತೋಟಿಯಲ್ಲಿಡುವುದು, ಜೊತೆಗೆ ತಮ್ಮ ಸಮುದಾಯದವರನ್ನು ಬೇರೆ ಸಮುದಾಯಕ್ಕೆ ಸ್ಥಳಾಂತರಿಸುವುದನ್ನು ತಡೆಯಲು ಕಟ್ಟುನಿಟ್ಟಿನ ವಿಧಾನಗಳನ್ನು ವಿಧಿಸಲು ಒಂದು ವಸ್ತುವನ್ನು ಪಾವಿತ್ರತೆಯ ಹಿನ್ನೆಲೆಯಲ್ಲಿ ಬೋಧಿಸುವ ಕ್ರಮ ಉಂಟಾಯಿತು. ಇಂತಹ ಅಂಶಗಳನ್ನು ವೈಭವೀಕರಿಸಲು ಪವಾಡಗಳು, ಅವತಾರಗಳು, ಬೇಟೆಯ ಪ್ರಸಂಗ, ಪ್ರಾಣಿಗಳ ಜೊತೆ ಸಾಮರಸ್ಯ ಹೀಗೆ ಅನೇಕ ವಸ್ತುಗಳನ್ನು ಕೇಂದ್ರವಾಗಿಟ್ಟು ತಮ್ಮ ಕೃತಿಯ ಮೌಲ್ಯವನ್ನು ಹೆಚ್ಚಿಸಿಕೊಳ್ಳುವ ಪ್ರಕ್ರಿಯೆ ಅಂದಿನಿಂದಲೂ ನಡೆದಿರುವುದು ಕಂಡುಬರುತ್ತದೆ.

ಯಾವುದೇ ಕೃತಿಗೆ ಒಂದು ವಸ್ತು ಇದ್ದೇ ಇರುತ್ತದೆ. ವಸ್ತುವಿಲ್ಲದೆ ಕಲಾಕೃತಿಯೇ ರಚನೆಯಾಗದು. ಸಾಹಿತ್ಯದ ಪ್ರಕಾರಗಳಲ್ಲಿ ಕವಿತೆ, ಕಥೆಗಳಿಗೂ ವಸ್ತುವೊಂದಿರುತ್ತದೆ. ಕಲಾಕಾರನಿಗೆ ವಿವಿಧ ವರ್ಣಗಳು ವಸ್ತುವಾದರೆ, ಶಿಲ್ಪಿಗೆ ಶಿಲೆಯು ವಸ್ತುವಾಗುತ್ತದೆ. ನಟರಿಗೆ ಅಭಿನಯ ವಸ್ತುವಾಗುವಂತೆ ಹಾಲುಮತ ಪುರಾಣಗಳಿಗೆ ಪಾತ್ರಗಳ ವೈಶಿಷ್ಟ್ಯತೆಯೇ ವಸ್ತುವಾಗಿದೆ. 'ಕಥೆ ತಾಂ ನಿಮಿತ್ತ ಮಾತ್ರಂ ಆತ್ಮಕ್ಕೆ ಶರೀರದೋಲಂತೆ' ಎಂಬುದು ಕುವೆಂಪು ಅವರ ಅಭಿಮತ ಅಂದರೆ ಕಥೆಯು ಕೇವಲ

ನೆಪಮಾತ್ರವಾಗಿದ್ದು ಅದರ ನಿರೂಪಣೆಯ ಮಾದರಿಯೂ ಆತ್ಮದ ಇರುವಿಕೆಯನ್ನು ಪ್ರತಿನಿಧಿಸುತ್ತದೆಂದು ಗ್ರಹಿಸಬಹುದು.

"ವಸ್ತು ಪ್ರಾಚೀನವಾದುದಾದರೆ ಅದನ್ನು ಸಮಗ್ರವಾಗಿ, ಸರ್ವತೋಮುಖ ದೃಷ್ಟಿಯಿಂದ ನೋಡಲು ಸಾಧ್ಯವಾಗುವುದರ ಜೊತೆಗೆ ಒಂದು ದೇಶದ ಸಮಷ್ಟಿ ಮನಸ್ಸು ಶತಮಾನಗಳ ಉದ್ದಕ್ಕೂ ಅದನ್ನು ರೂಪಿಸುತ್ತಾ ಬಂದಿರುತ್ತದೆ"[೨] ಎಂದು ಜಿ.ಎಸ್.ಶಿವರುದ್ರಪ್ಪ ಅವರು ಹೇಳುತ್ತಾರೆ. ಜೊತೆಗೆ "ಪುರಾಣ ಪ್ರಸಿದ್ಧವಾದ ವಸ್ತುವನ್ನೆತ್ತಿಕೊಂಡು ಬರೆಯುವ ಕವಿ ತನ್ನ ಕೃತಿ ವರ್ತಮಾನಕ್ಕೆ ಏನೇನೂ ಸಂಬಂಧಿಸದೆ ಕೇವಲ ಹಳೆಯ ಪುರಾಣವಾಗದ ಹಾಗೆ ಅಥವಾ ತೀರಾ ವರ್ತಮಾನದ ಹಸಿತನದಿಂದ ಕುಲಗೆಟ್ಟು ಹೋಗದಂತೆ ನಿರ್ವಹಿಸಬೇಕಾಗುತ್ತದೆ."[೩] ಈ ಹಿನ್ನೆಲೆಯಲ್ಲಿ ಕಾವ್ಯಪುರಾಣಗಳ ವಸ್ತು ಹಳೆಯದಾದ್ದರೂ ವರ್ತಮಾನದ ಬಗೆಗೆ ಕಾಳಜಿಯನ್ನು, ಅರಿವನ್ನು ಮೂಡಿಸುವಂತಿರಬೇಕೆಂದು ತಿಳಿದುಬರುತ್ತದೆ. ಅದು ಪುರಾಣವಾಗಿರಲೂಬಹುದು ಅಥವಾ ಕಾವ್ಯ ಕೃತಿಗಳಾಗಿರಲೂಬಹುದು. ಒಟ್ಟಾರೆ ಸಾಹಿತ್ಯವು ಒಳಿತನ್ನು ಸದಾ ಸಮಾಜಕ್ಕೆ ಕೊಡುವ ಮಾಧ್ಯಮವಾಗಬೇಕು.

**೧. ಕಥಾ ಸಮೀಕ್ಷೆ**

ಹಾಲುಮತ ಪುರಾಣಗಳು ವಸ್ತು-ವೈವಿಧ್ಯತೆಯನ್ನು ಪಡೆದುಕೊಂಡಿವೆ ಎಂಬುದನ್ನು ಅಲ್ಲಿನ ಪಾತ್ರಗಳು ಸಾಬೀತು ಪಡಿಸುತ್ತವೆ. ಹಾಲುಮತ ಪುರಾಣಗಳ ಒಟ್ಟು ೧೦ ಪಠ್ಯಗಳು ದೊರೆತಿವೆ. ಆದಕಾರಣ ಮೊದಲಿಗೆ ಪ್ರತಿಯೊಂದು ಪುರಾಣದ ಸಾರಾಂಶ ಮತ್ತು ವಸ್ತುವನ್ನು ತಿಳಿಯುವುದು ಸೂಕ್ತ.

**ಸಿದ್ದಮಂಕ ಚರಿತೆ**

ಸಿದ್ಧಮಂಕ ಚರಿತೆಯಲ್ಲಿ ಕವಿಯ ಹೆಸರಾಗಲಿ, ಕಾಲದ ವಿಷಯವಾಗಲಿ ಹೇಳಿಲ್ಲ. ಸಿದ್ಧಮಂಕ ಚರಿತೆಯನ್ನು ಹಸ್ತಪ್ರತಿಯಿಂದ ಮುದ್ರಣ ರೂಪಕ್ಕೆ ಡಾ.ಎಂ.ಎಂ.ಕಲಬುರ್ಗಿ ಮತ್ತು ವೈ.ಸಿ. ಭಾನುಮತಿ ಅವರು ೨೦೦೪ರಲ್ಲಿ ತಂದಿದ್ದಾರೆ. ಇದರಲ್ಲಿ "ಗುರುಶಾಂತಗೆ ಇಷ್ಟಾರ್ಥವನಿತ್ತ ಶ್ರೀಗುರು ಸಿದ್ಧರಾಮೇಶ್ವರ ಸ್ವಾಮಿ' ಎಂಬ ವಾಕ್ಯವಿದೆ. ಆದ್ದರಿಂದ ಅವರು 'ಗುರುಶಾಂತನೇ ಇದರ ಕವಿಯೋ, ಲಿಪಿಕಾರನೋ ಎಂದು ಸಂದೇಹಪಡುತ್ತಾರೆ. ಅದೇ ರೀತಿ ಡಿ.ಎಲ್.ನರಸಿಂಹಾಚಾರ್ಯರರು ಸಿದ್ಧಯ್ಯನಿರಬಹುದೆಂದು ಊಹಿಸುತ್ತಾರೆ. ನಂತರ 'ಕಾದೋಡಿ ಒಡೆಯ ಸಿದ್ಧ ಬರೆದರ್ಥವ ಗಾಥದಿ ಬರೆದಡಗಿಸಿದ"[೪] ಎಂಬ ವಾಕ್ಯದಿಂದ ಕುರುಬ ಜಾತಿಯ ಗುರುವಾಗಿ ಬರುವ ಒಡೆಯ ಸಿದ್ಧನೆ ಇದರ ಕರ್ತೃ ಇರಬೇಕೆಂದು ಅಭಿಪ್ರಾಯ ಪಡುತ್ತಾರೆ. ಮತ್ತು ಇದರ ಕಾಲವನ್ನು ೧೭ನೇ ಶತಮಾನವೆಂದು ಹೇಳುತ್ತಾ ಇದೇ ಹಾಲುಮತ ಪುರಾಣಗಳಲ್ಲಿ ಮೊದಲ ಕೃತಿಯೆಂದು ಹೇಳುತ್ತಾರೆ.

ಈ ಕೃತಿಯು ನಾಲ್ಕು ಸಂಧಿಗಳು ಹಾಗೂ ೬೨೬ ಪದ್ಯಗಳನ್ನು ಒಳಗೊಂಡಿದ್ದು ಸಾಂಗತ್ಯದಲ್ಲಿ ರಚನೆಯಾಗಿದೆ. ಸಿದ್ಧಮಂಕ ಚರಿತೆಯಲ್ಲಿ ಸಿದ್ಧರಾಮ ಮತ್ತು ಮರುಳಮಂಕಯ್ಯನ ಸುತ್ತ ಹೆಣೆದ ಕುರುಬರ ಚರಿತ್ರೆಯಿದೆ. ಇಲ್ಲಿ ಸಿದ್ಧರಾಮ ಗುರುವಾಗಿ ಮರುಳಮಂಕಯ್ಯ ಕುಲಗುರುವಾಗಿ ಚಿತ್ರಿತವಾಗಿದ್ದಾರೆ. ನಂತರ ಕುರುಬರು ಸಿದ್ಧ ಸಂಪ್ರದಾಯದಿಂದ ಶರಣ ಸಂಪ್ರದಾಯಕ್ಕೆ ಹೊರಳುವ ಸನ್ನಿವೇಶವನ್ನು ಕಥೆಯ ವಸ್ತುವಾಗಿಸಿಕೊಂಡು ಮರುಳಮಂಕಯ್ಯನ ಮಹಿಮೆಯನ್ನು, ಕುರುಬ ಸಮುದಾಯದ ಕುಲ ವೃತ್ತಿಯ ಶ್ರೇಷ್ಠತೆಯನ್ನು ತಿಳಿಸಿಕೊಡುವ ಮೊದಲ ಪ್ರಮುಖ ಕೃತಿಯಾಗಿ ಕಾಣಿಸಿಕೊಳ್ಳುತ್ತದೆ.

ಸಿದ್ಧರಾಮನಿಗೆ ಶಿವನು ಕಪಿಲಸಿದ್ಧ ಮಲ್ಲಯ್ಯನಾಗಿ ಕಾಣಿಸಿಕೊಳ್ಳುತ್ತಾನೆ. ನಂತರ ರೇವಣಸಿದ್ಧರ ಬಗ್ಗೆ, ಕೃತಿಯಿಂದ ರಸಭಾವಗಳ ಆಪೇಕ್ಷೆಯನ್ನು ಮಾಡದಿರುವುದರ ಬಗ್ಗೆ, ಸರವೂರಿನಲ್ಲಿ ಸಿದ್ಧಮಂಕನು ತಪಸ್ಸು ಮಾಡುವುದು ಸಿದ್ಧಮಂಕ ಚರಿತೆಯಲ್ಲಿ ಕಂಡುಬರುತ್ತದೆ. ಸೊನ್ನಲಪುರವನ್ನು ಕೈಲಾಸವಾಗಿ ಸಿದ್ಧರಾಮನು ಮಾಡಿದನು. ಭೃಂಗೀಶನನ್ನು ಕಂಡು ಗಂಧರ್ವರು ನಕ್ಕರು. ಆದ್ದರಿಂದ ಭೃಂಗಿಯ ಶಾಪಕ್ಕೆ ಗಂಧರ್ವರು ನರದಂಪತಿಗಳಾಗಿ ಜನಿಸುತ್ತಾರೆ. ಅವರೆ ಮುದ್ದಯ್ಯ ಹಾಗೂ ಸುಗ್ಗವ್ವೆ ಇವರ ಮಗನೇ ಸಿದ್ಧರಾಮನೆಂದು ರೇವಣಸಿದ್ಧರಿಂದ ಹೇಳಿಸಲಾಗಿದೆ. ಆದಕ್ಕಾಗಿ ಸೊನ್ನೆಲಿಗೆಯು ತೀರ್ಥಕ್ಷೇತ್ರವಾಗಿ, ಲಿಂಗದ ಬೀಡಾಗಿ, ಮುಕ್ತಿಯ ಸ್ಥಳವಾಗಿ ಪ್ರಸಿದ್ಧಿ ಹೊಂದುವುದು. ತದನಂತರ ದನಕಾಯುವ ಕಾಯಕದಿಂದ ಲಿಂಗ ಪ್ರತಿಷ್ಠಾಪನೆಯನ್ನು ಮಾಡುತ್ತಾನೆ. ಶ್ರೀಶೈಲಕ್ಕೆ ಸಿದ್ಧರಾಮನು ಹೋಗಿ ಮಲ್ಲಯ್ಯನಿಂದ ವಚನ ಪಡೆದು ನಾಡಿನ ಕಲ್ಯಾಣಕ್ಕೆ ಹಿಂತಿರುಗುವನು.

'ಮಲ್ಲಯ್ಯ ಬಂದಪನಲ್ಲಿ ಮಂಟಪಗಳ  
ನೆಲ್ಲವ ರಚಿಸಬೇಕೆಂದು  
ಕಲ್ಲ ಕಡಿಸಲು ತಮ್ಮಣ್ಣ ಬೊಮ್ಮಣಗಳ  
ಗೆಲ್ಲವ ಹೇಳಿ ಕಳುಹಿದ'[7]

ಸಿದ್ಧರಾಮನು ಸೋನ್ನಲಪುರಕ್ಕೆ ಬಂದು ಕೆರೆಕಟ್ಟೆ ಬಾವಿಗಳನ್ನು, ಶಿವದೇವಾಲಯಗಳನ್ನು ನಿರ್ಮಿಸುತ್ತಾನೆ. ನಂತರ ರೇವಣಸಿದ್ದರು ಕೊಲ್ಲಿಪಾಕಿಯಲ್ಲಿ ಹುಟ್ಟುವರು. ಮಂಕಯ್ಯನು ಸರೂರಿನ ಕೋಡುಗಲ್ಲಿನಲ್ಲಿ ಉಗ್ರತಪಸ್ಸು ಮಾಡುವನು. ನಂತರ ಸಿದ್ಧರಾಮರು ಬಂದು ಕುರುಬರನ್ನು ಕಲ್ಯಾಣಕ್ಕೆ ಕರೆದೊಯ್ಯುತ್ತಾರೆ.

ಎರಡನೇಯ ಸಂಧಿಯಲ್ಲಿ ಕುರಿಗಳ ಉಗಮದ ಬಗ್ಗೆ ಹೇಳಲಾಗಿದೆ. ಕೈಲಾಸದಲ್ಲಿ ಭೃಂಗೀಶನ ಶಾಪದಿಂದ ಕಿನ್ನರರು ಕುರಿಗಳಾಗಿ ಭೂಮಿಯಲ್ಲಿ ಮೂರು ಕಣ್ಣಿನ ಹುತ್ತದಲ್ಲಿ ಸೇರುತ್ತಾರೆ. ಇವುಗಳನ್ನು

ಕುಡುವೊಕ್ಕಲಿಗ ಮಗ ಹೆಗ್ಗಗೌಡನು ಕಾಯುತ್ತಿರುತ್ತಾನೆ. ಹೀಗಿರುವಾಗ ಹೆಗ್ಗಗೌಡನಲ್ಲಿಗೆ ಶಿವನು ವೇಷ ಧರಿಸಿ ಬಂದು ಕಪಿಲೆಯೆಂಬ ಆಕಳನ್ನು ಬೇಡುವನು. ಆದರೆ ಗೌಡನು ಇದು ನನ್ನ ಸಂಪತ್ತು ಅಲ್ಲ ಎಂದು ಹೇಳುತ್ತಾನೆ. ಶಿವನು ಕುರಿಗಳು ನಿನ್ನ ಸಂಪತ್ತು ಎಂದು ಹೇಳುವನು. ನಂತರ ಹೆಗ್ಗಗೌಡನಿಗೆ ಕುರಿಗಳ ತುಪ್ಪಟ ಕತ್ತರಿಸುವ, ಕಂಬಳಿ ನೇಯುವುದನ್ನು ಶಿವನೇ ಹೇಳಿಕೊಡುತ್ತಾನೆ.

"ತೊಡೆಗದಿರಿಂ ನೂತು ಹಿಡಿದಾಬು ಮೊಳನಿಕ್ಕಿ
ಒಡನೆ ತೋಱಿದ ಮಗ್ಗದನುವ
ಕಡುವೇಗದಿ ಪೇಳಿ ಕಲಿಸಿ ಕರಿದ ನೇಯ್ದು
ಮೃಡಸಿದ್ಧ ಮಲ್ಲಗೀಯೆನಲು"[೬]

ಈ ಪದ್ಯದಲ್ಲಿ ಕಂಬಳಿಯು ಎಷ್ಟು ಉದ್ದವಿರಬೇಕೆಂದು ಹೇಳಲಾಗುತ್ತದೆ. ನಂತರ ನೇಯ್ದ ಕಂಬಳಿಯನ್ನು ಗದ್ದುಗೆಯ ಮೇಲೆ ಇಟ್ಟು ಸುರಹೊನ್ನೆ ಸಂಪಿಗೆಯಿಂದ ಪೂಜಿಸಿ ಮಲ್ಲಿಕಾರ್ಜುನನಿಗೆ ಕುಲದೇವನೆಂದು ಅರ್ಪಿಸುತ್ತಾರೆ. ಆಗ ಕಂಬಳಿಯ ಅರ್ಪಣೆಯಿಂದ ತೃಪ್ತನಾಗಿ ಶಿವನು ರಾತ್ರಿಯಲ್ಲಿ ಕುರಿಗಳ ರಕ್ಷಣೆಗೆ ತಳವಾರನನ್ನು ನೇಮಿಸುವನು. ಮತ್ತು ಕುರಿಗಳ ಹಾಲು, ಬೆಣ್ಣೆಗಳ ನಿರ್ವಹಣೆಗೆ ಒಬ್ಬ ಊಳಿಗದವಳನ್ನು ನೇಮಿಸುವನು. ಹೀಗೆ ಹೆಗ್ಗೊಂಡನು ಕಾಳರಕ್ಕಸಿಯ ಮಗಳ ಜೊತೆಗೂಡಿ ಕುರಿಬೆಟ್ಟದೂರಿನಲ್ಲಿ ನೆಲೆಸುವರು. ಇಲ್ಲಿ ಸರೂರಿನ ತೂಗುಡ್ಡವನ್ನು ಈ ಕೃತಿಯಲ್ಲಿ ಕುರಿಗಳ ಹಟ್ಟಿಯಾಗಿಸಿಕೊಂಡಿರುವುದು ಕಂಡುಬರುತ್ತದೆ. ಅದಕ್ಕೆ ಕುರಿಬೆಟ್ಟದೂರೆಂದು ನಾಮಕರಣ ಮಾಡಲಾಯಿತು. ಹೆಗ್ಗೊಂಡ ಕಾಳರಕ್ಕಸಿಯ ಮಗಳನ್ನು ಮದುವೆಯಾದ್ದರಿಂದ ಕುಲದಲ್ಲಿ ಹುಟ್ಟಿ ಕುಲಹೀನನಾದೆ ಎಂದು ಗಾಸಿಗೊಳ್ಳುತ್ತಾನೆ. ಆಗ ಊರಿನ ಪ್ರಮುಖರು ಈಶನ ಕರುಣೆಯಿಂದ ಈ ವಿವಾಹ ನಡೆದಿದೆ. ಹಾಗಾಗಿ

"ಜಾತಿಸೂತಕವೆಂಬ ನೀತಿಯ ಬೊಮ್ಮದ
ರೀತಿಯ ನೀನಾಡಬೇಡ
ಜಾತರಹಿತನು ಅಜಾತ ನೀನೊಲಿದವಗೆ
ಜಾತಿಯನೊಲಿದಜಿಸುವರೆ"[೭]

ಹೀಗೆ ಈ ಕೃತಿಯೂ ಜಾತಿಯನ್ನು ಮೀರಿ ಬೆಳೆದದ್ದನ್ನು ಕುರಿತು ಹೇಳುತ್ತದೆ. ಹೆಗ್ಗೊಂಡ ಸಿದ್ಧಮ್ಮ ಮತ್ತು ಕಿರಿಯ ಹೆಂಡತಿ ಸೇರಿ ಸರವೂರಿನಿಂದಲೇ ಸೊನ್ನಲಪುರದ ಸಿದ್ಧರಾಮನಿಗೆ ಹಾಲು ಬೆಣ್ಣೆಯನ್ನು ಕಳುಹಿಸಿಕೊಡುತ್ತಾರೆ. ಹಾಗೂ ಸಿದ್ಧರಾಮ ಸಿದ್ಧಮಂಕನು ತಪಸ್ಸು ಮಾಡುವಲ್ಲಿಗೆ ಹೋಗಿ ರಕ್ಷಣೆಗೆ ಮಾಡಲು ಹೆಗ್ಗೊಂಡನಿಗೆ ಹೇಳುವನು.

ಸಿದ್ಧಮಂಕನು ವೈರಾಗ್ಯ ಮೂರ್ತಿಯಾಗಿ ಕುಲವನ್ನು ಬೆಳಗಿದರೆ ಹೆಗ್ಗೊಂಡನು ಸಂಸಾರದಲ್ಲಿದ್ದು ಕುಲದ ಪೋಷಣೆಯನ್ನು ಮಾಡುತ್ತಾನೆ. ಅನೇಕ ಶಿವಶರಣರನ್ನು ಇಲ್ಲಿ ಸ್ಮರಿಸಲಾಗಿದೆ. ಶಂಕರದಾಸಿಮಯ್ಯ, ಬೇಡರ ಕಣ್ಣಪ್ಪ ಮುಂತಾದವರು ಕಾಣಿಸಿಕೊಳ್ಳುವರು. ಮಂಕ ತಂದೆಯು ಕೋಡುಗಲ್ಲಿನ ಮೇಲೆ ಸೂಜಿಯೂರಿ, ಅದಕ್ಕೆ ತಲೆ ಹಚ್ಚಿ, ತಪಸ್ಸನ್ನು ಕೈಗೊಳ್ಳುವನು. ಅಲ್ಲಿಗೆ ಸಿದ್ಧರಾಮರು ಬಂದು ತಪಸ್ಸಿಗೆ ಕಾರಣವನ್ನು ಕೇಳುತ್ತಾರೆ. ಆಗ ಮಂಕತಂದೆಯು ಬಿಜ್ಜಳನು ಕಲ್ಯಾಣದಿಂದ ಕುರುಬ ಗೌಡರನ್ನು ಹೊರಹಾಕಿರುವನು.

"ಅರಸು ಪ್ರಧಾನರು ಪ್ರಜೆ ಸಮಸ್ತವು ಕೂಡಿ
ಹರಿತಂದು ಕುರುಬಗೌಡಗಳ
ಕರೆದು ನೆರಹಿ ಕಲ್ಯಾಣವ ಹೊರಡಿಸಿ
ಬರೆದು ಬಂದರು ಏಳುಗೇರಿಯ"[6]

ಒಂದು ದಿವಸ ಹಾಲಕಂಬಿಯ ಮೇಲೆ ಸತ್ತ ಕುರಿಗಳನ್ನು ಕಟ್ಟಿಕೊಂಡು ಬರುವ ಕುರುಬಗೌಡರಿಂದ ಇಡೀ ಕಲ್ಯಾಣವೇ ಹಾಳಾಯಿತೆಂದು ಪಟ್ಟಣದಿಂದ ಏಳುಗೆರೆ ಹೊರಗೆ ಕುರುಬರನ್ನು ಹಾಕುತ್ತಾರೆ. ಇಲ್ಲಿ ಏಳುಗೆರೆ ಅಪವಿತ್ರದ ಸಂಕೇತವೆಂದು ಸೂಚಿಸುತ್ತದೆ. ಊರಿನಲ್ಲಿ ಯಾರಾದರೂ ಸತ್ತರೆ ಊರ ಹೊರಗಡೆ ಅದನ್ನು ಸಂಸ್ಕಾರ ಮಾಡುತ್ತೇವೆ. ಆದರೆ ಈ ಕುರುಬರು ಸತ್ತ ಕುರಿಯ ಮಾಂಸಮಾರಿ ಮೈಲಿಗೆ ಮಾಡಿರುವರು. ಈ ಕಳಂಕದಿಂದ ಮುಕ್ತರನ್ನಾಗಿ ಮಾಡೆಂದು ಮಂಕ ತಂದೆಯು ಸಿದ್ಧರಾಮನಿಗೆ ಕೇಳಿಕೊಳ್ಳುತ್ತಾನೆ. ತೋಪಿನ ಹೆಗ್ಗೆಗೌಡನು ಬಿಜ್ಜಳನಿಗೆ ಈ ರೀತಿ ಕುಲದ ಬಗ್ಗೆ ಹೇಳುತ್ತಾನೆ.

"ಕುಲದೊಳು ಕಿಜುದಾದರೆ ಆಚಾರದ
ನೆಲೆಮಾರ್ಗವು ಕಿಜಿದಲ್ಲ"[7]

ಈ ಪದ್ಯವು ಜನರು ಕುರುಬರ ವೃತ್ತಿಯನ್ನು ಆಧರಿಸಿ ಕುಲ ಕೀಳು ಎಂದು ಭಾವಿಸಿದರೆ, ಅದರ ಆಚರಣೆಯ ಮಾರ್ಗವು ತುಂಬಾ ಶುದ್ಧವಾಗಿದೆಂದು ಹೇಳಿಕೊಳ್ಳುತ್ತಾನೆ. ಅಂದರೆ ಕುರುಬರು ಜಡ್ಡಿನ ಕುರಿಗಳನ್ನು ಸಾಕುವುದರಿಂದ ಬಾಹ್ಯವಾಗಿ ಸ್ವಚ್ಛವಾಗಿರದ್ದಿದ್ದರೂ, ಅವರ ಅಂತರಂಗ ಶುದ್ಧವಿದೆ. ಆದಕಾರಣ ಅವರ ಗುರುಗಳು ಸಿದ್ಧರಾಮ, ರೇವಣಸಿದ್ಧ ಉದ್ಭವಿಸಲು ಸಾಧ್ಯವಾಯಿತೆಂದು ತಿಳಿದುಬರುತ್ತದೆ.

ಇಲ್ಲಿ ಬಿಜ್ಜಳನಿಗೂ ಮತ್ತು ಹೆಗ್ಗಗೌಡನಿಗೂ ವರ್ಗ ಸಂಘರ್ಷ ಏರ್ಪಡುವುದನ್ನು ಸೂಚಿಸುತ್ತದೆ. ವರ್ಗ ಸಂಘರ್ಷಕ್ಕೆ ರಾಜಕೀಯ, ಸಾಮಾಜಿಕ ಕಾರಣಗಳ ಜೊತೆಗೆ ಏಣಿಶ್ರೇಣೀಕರಣವು ಪ್ರಮುಖ

ಸ್ಥಾನ ಪಡೆಯುತ್ತದೆ. ಕುಲಕೀಳು ಎಂದರೆ ಸಹಿಸಬಹುದು. ಆಚಾರ ಕೀಳಾದರೆ ಸಹಿಸುವುದಕ್ಕೆ ಆಗಲ್ಲ ಎಂದು ಗೌಡನು ಬಿಜ್ಜಳನಿಗೆ ತಿಳಿಸುವನು. ಅಂದರೆ ಮನುಷ್ಯರು ಯಾವ ವೃತ್ತಿಯನ್ನು ಮಾಡಿದರು ಅವರ ಆತ್ಮಶಕ್ತಿಯೂ ನಿರ್ಮಲವಾಗಿ, ಕಲ್ಮಶರಹಿತವಾಗಿರಬೇಕೆಂದು ತಿಳಿಸಿಕೊಡುತ್ತದೆ. ಬಿಜ್ಜಳನ ಪರಿವಾರಕ್ಕೆ ಧಾರ್ಮಿಕ ಭಯವಿತ್ತೆಂದು ತೋರುತ್ತದೆ. ಕುರುಬರು ಆಚಾರದಲ್ಲಿ ಶುದ್ಧಾಂಗಿಗಳಾಗಿದ್ದರು. ಮುಂದೆ ಈ ಶುದ್ಧತನವೇ ನಮ್ಮಗಳ ತುಳಿತಕ್ಕೆ ಕಾರಣವಿರಬಹುದೆಂದು ಬಿಜ್ಜಳನಿಗೆ ಈ ರೀತಿಯ ಸುಳ್ಳು ಹೇಳಿರಬಹುದು. ಏನಾದರೂ ಮಾಡಿ ಕಲ್ಯಾಣದಿಂದ ಹೊರಹಾಕಲು ಬಿಜ್ಜಳನ ಸಹಚರರು ಈ ರೀತಿ ತಂತ್ರ ಊಡಿದ್ದಾರೆಂದು ಊಹಿಸಬಹುದು. ಇವರುಗಳು ಇಲ್ಲಿರುವುದರಿಂದ ಹಾಲು, ಮೊಸರು ಮಾರಿ ಆರ್ಥಿಕವಾಗಿ ಮುಂದೆ ಬರುವುದರ ಮೂಲಕ ಸಮಾಜದಲ್ಲಿ ಬೇರೆಯವರನ್ನು ತುಳಿಯಬಹುದೆಂದು ಕುರುಬರನ್ನು ಹೊರಹಾಕಲು ಸಂಚು ಮಾಡಿರುವಂತೆ ಕಾಣುತ್ತದೆ.

ಈ ಕುಲದೋಷವನ್ನು ಕಳೆದುಕೊಳ್ಳಲು ಕುರುಬಗೌಡರು ಗುರುವಿನ ಸಮೀಪ ಹೋಗುತ್ತಾರೆ. ಆಗ ಸಿದ್ಧರಾಮನು ಮಂಕಯ್ಯನಿಗೆ ಕಲ್ಯಾಣದಲ್ಲಿ ಸಮ್ಮಂತೆ ಮಾಡುತ್ತೇನೆಂದು ವರನೀಡುತ್ತಾನೆ. ಹೀಗೆ ಹೇಳುವಲ್ಲಿ ಸಿದ್ಧರಾಮನು ಕಲ್ಯಾಣದಲ್ಲಿ ಶಿವಶರಣರು, ಲಿಂಗವಂತರು ಇರುವುದನ್ನು ಹೇಳುತ್ತಾರೆ. ಇಲ್ಲಿ ಲಿಂಗವಂತರೇ ಹೆಚ್ಚು, ಲಿಂಗವಿಲ್ಲದ ಕುರುಬರೆಂದು ಕಲ್ಯಾಣದಿಂದ ಹೊರಹಾಕಿರಬಹುದೆಂದು ತಿಳಿದು ಬರುತ್ತದೆ. ಕಲ್ಯಾಣಕ್ಕೆ ಸಿದ್ಧರಾಮರ ಆಗಮನದಿಂದ ಭಕ್ತರೆಲ್ಲರು ಸಂತಸಪಟ್ಟರು. ಇಲ್ಲಿ ಕಲ್ಯಾಣವು ನ್ಯಾಯ ತೀರ್ಮಾನದ ಮುಖ್ಯ ಸ್ಥಳವಾಗಿ ಕಂಡುಬರುವುದು. ಈ ನ್ಯಾಯಾಲಯಕ್ಕೆ ಬಸವಣ್ಣನವರ ಎದುರಿಗೆ ಸಿದ್ಧರಾಮನು ಬಿಜ್ಜಳನ ತಪ್ಪನ್ನು ಎತ್ತಿಹಿಡಿಯುತ್ತಾನೆ. ಅನ್ಯರ ಹಿತಕ್ಕಾಗಿ ಮಂಕಯ್ಯನು ಮಾಡುವ ತಪ್ಪಸ್ಸಿನಿಂದಲೇ ಈ ಕುರುಬರು ಎಷ್ಟು ಶ್ರೇಷ್ಠವೆಂದು ತಿಳಿಸುತ್ತದೆ. ಭೂಮಿಯಲ್ಲಿ ಪಾಪವ ಮಾಡಿದವರಿಗೆ ಕೊರಳ ಪಾಶ ಎಂದಿಗೂ ಬಿಡುವುದಿಲ್ಲವೆಂದು ಹೇಳುತ್ತದೆ. ಹರನನು ಮಚಿವೊಕ್ಕರೆ ಕೂಡೆ ಕಾಲನು(ಯಮ) ಬಿಡೆನೆಂದ ಹೀಗಿರುವಾಗ ಮಾನವರು ಬೇರೆಯವರಿಗೆ ಶಿಕ್ಷೆ ಕೊಡಲು ಎಷ್ಟು ಅರ್ಹರೆಂದು ತಿಳಿಸುತ್ತದೆ.

ನಂತರ ಕುರುಬರು ಕುಲಕ್ಕೆ ಮಾಡಿದ ಈ ಚಿಕ್ಕ ಅಪರಾಧದಿಂದ ಗುರುವಿಗೆ ಶಿಕ್ಷೆಯಾಯಿತೆಂದು ತೋಹಿನ ಮುತ್ತ್ಯ, ಚೀನಿಮುತ್ತ್ಯ, ಕಾಳಮಾದ ಮುತ್ತ್ಯ, ರಾಮಮುತ್ತ, ಏಕಜಡೆಯ ಮುತ್ತ, ಮಲ್ಲಮುತ್ತ, ಸೋಯಿಮುತ್ತ ಗುರು ಮಂಕಯ್ಯನಿಗೆ ಶರಣೆಂದು ಖಡ್ಗದಿಂದ ಶಿರವನ್ನು ತೆಗೆದುಕೊಳ್ಳುವರು. ಹಾಗೂ ಅನೇಕ ಕುರುಬರು ಕಣ್ಣು ಕಾಲು ಕಡಿದುಕೊಂಡರೆ, ಸ್ತ್ರೀಯರು ನಾಲಿಗೆ, ಕಣ್ಣು, ಮೊಲೆ, ಮೂಗು ಕಡಿದುಕೊಂಡರು. ಈ ರೀತಿಯ ಭಕ್ತಿಗೆ ಶಿವ ಮೆಚ್ಚಿದನು. ನಂತರ ಅವರ ತಲೆಗಳು ಮತ್ತೆ

ಜೀವ ಪಡೆದವು. ಸಿದ್ಧರಾಮನು, ಬಸವಣ್ಣರು ಕುರುಬರಿಗೆ ಕಲ್ಯಾಣಕ್ಕೆ ಪ್ರವೇಶ ದೊರಕಿಸಿಕೊಟ್ಟರು. ಈ ಮೂಲಕ ಕುರುಬರು ಲಿಂಗವಂತರು ಆಗುವ ಪರಿಯನ್ನು ಸಿದ್ಧಮಂಕ ಚರಿತೆಯು ಹೇಳುತ್ತದೆ. ಹೀಗೆ ಸಮಾಜದ ಹದಿನೆಂಟು ಕುಲಗಳಲ್ಲಿ ಕುರುಬ ಜಾತಿಯು ಮಾನ್ಯತೆಯನ್ನು ಪಡೆಯಿತೆಂದು ತಿಳಿಸುತ್ತದೆ.

ರೇವಣಸಿದ್ಧರ ಮೇರೆಗೆ ಸಿದ್ಧರಾಮನು ಮಂಕತಂದೆಯಿಂದ ಕುರುಬಗೌಡರಿಗೆ "ವಿಭೂತಿ ವೀಳೆಯ ತಂದು ಕಂತೆಗಳನು ಮಂಕತಂದು"[೭೦] ಹಾಗೂ ರೇವಣಾರಿಗೆ ಕುಲವನ್ನುದ್ಧರಿಸಿದಕ್ಕೆ ಕಂಬಳಿ ಗದ್ದುಗೆಯನ್ನು ನೀಡಿದರು. ನಂತರ ನಿನ್ನ ಜನರೆಲ್ಲಾ ನನ್ನಲ್ಲಿ ಮಗ್ನವಾಗಿರಿ ಎಂದು ಸಿದ್ಧಮಂಕನಿಗೆ ಸಿದ್ಧರಾಮನು ತಿಳಿಸುತ್ತಾನೆ. ಹಿಂದೆ ಸೋತು ಬಂದ ರಾಕ್ಷಸಿಯಿಂದ ನೀತಿಯು ಇಂದು ಮುಕ್ತಿ ಹೊಂದಿತ್ತೆಂದು ಹೇಳುವರು. ಹಾಗೂ ಹಾಲುಮತದ ಗೌಡರಲ್ಲಿ ಈಕೆಯು ಹೆಣ್ಣು ಕೊಡುಕೊಳ್ಳುವುದಕ್ಕೆ ಸಮ್ಮತಿಯನ್ನು ನೀಡಿದರು.

"ಐದು ಹೊನ್ನಿನೊಳಗಿಪ್ಪ ಪಣವನು ತೆಗೆ
ದೈದೆ ಸಿದ್ಧಮಂಕಗೆಂದು
ಆಲಿಸಿ ಕಲ್ಯಾಣ ಮಾಡಿದವನ ಮಿಗೆ
ದೇವ ಮಂಕ ಸಲಹುವನು"[೭೧]

ಹೆಣ್ಣು ಕೊಡುಕೊಳ್ಳುವಲ್ಲಿ ಹೊನ್ನತೆರಿಗೆಯನ್ನು ಸಿದ್ಧಮಂಕನ ಪರಂಪರೆಯಲ್ಲಿ ಇರುವುದೆಂದು ಈ ಮೂಲಕ ತಿಳಿದು ಬರುವುದು. ಐದು ಹೊನ್ನು ತೆರದಲ್ಲಿ, ಎರಡು ಹೊನ್ನು ಮಂಕತಂದೆಗೆ ಅರ್ಪಿಸಿರಿ ಎಂದು ಸಿದ್ಧರಾಮರು ಕಟ್ಟಳೆ ಮಾಡಿದರು. ಹಿಂಡಿನಲ್ಲೊಂದು ಕಪಿಲೆಯನ್ನು ತಂದುಕೊಡಲು ಒಳ್ಳೆಯದು ಆಗುತ್ತದೆ. ಇದನ್ನೇ ಕುಳದೆಜಗೆ ಎಂದು ಕರೆಯುತ್ತಾರೆ. ನಂತರ ಹಾಲುಮತದ ಗೌಡರಿಗೆ ವಿಭೂತಿಯ ನೀಡಿ ಬದುಕು ಆಚಾರಪರವಾಗಿರಲೆಂದು ಮಂಕತಂದೆಯು ಹೇಳುವನು. ಜೊತೆಗೆ ಲಿಂಗವಿತ್ತು ಮುದ್ರೆಯೊತ್ತಿದ್ದನು. ಕಂಬಳಿ ಕಂಥೆಯು ಭಿನ್ನಹವಾಗದಂತೆ ನೋಡಿಕೊಂಡರೆ ಕುಲವು ಬೆಳೆಯುತ್ತದೆ. ಕಂಬಳಿಗೆ ಅಪಚಾರ ಮಾಡಿದರೆ ಕೆಟ್ಟವರಿಗೆ ತೊನ್ನು ಭಾದೆಯು ಉಂಟಾಗುತ್ತದೆ. ನಂತರ ಕಂಬಳಿಯನ್ನು ಹೊಯ್ದುಕೊಂಡರೆ ಮುನ್ನೂರು ಅರವತ್ತು ವ್ಯಾಧಿಗಳು ಗುಣವಾಗುತ್ತವೆಂದು ಕಂಬಳಿಯ ಬಹುಪಯೋಗತನವನ್ನು ತಿಳಿಸುತ್ತದೆ. ದಿನನಿತ್ಯ ಶಿವನನ್ನು ನೆನೆದು ವಿಭೂತಿಯನ್ನು ಧರಿಸಲು ಸಿದ್ಧಿಯು ದೊರೆಯುವುದು. ಹೀಗೆಲ್ಲಾ ಸಿದ್ಧರಾಮರು, ಸಿದ್ಧಮಂಕರು ಹೆಗ್ಗೌಡನಿಗೆ ಹೇಳುತ್ತಾರೆ. ಇಲ್ಲಿ ಸಿದ್ಧರಾಮ ಮಂಕತಂದೆಗೆ "ಗೋತ್ರದ ಮುಂದುಜುವ ಜೀರ್ಣದ ಕಂಥೆಯಿತ್ತು."[೭೨] ನಂತರ ಹೆಗ್ಗಗೌಡನು ಸಿದ್ಧರಾಮ ಪರಮಗುರುವಾದರೆ, ಮಂಕತಂದೆ ಕುಲಗುರು ಎಂದು ಹೇಳುವನು.

ಹೀಗೆ ಸಿದ್ಧರಾಮನು ಸರೂರಿನಲ್ಲಿ ಮಂಕತಂದೆಗೆ ಪಟ್ಟಗಟ್ಟುವನು. ಒಬ್ಬ ವ್ಯಕ್ತಿ ಒಡ್ಡಿಯ ದೇಶದಿಂದ ಸಾಲ ತೀರಿಸಲಾಗದೆ ಸೊನ್ನಲಪುರಕೆ ಓಡಿಬಂದನು. ಆತನು ಸಿದ್ಧರಾಮನ ಪಾದಕ್ಕೆ ಶರಣಾಗಿ ಬೇಡಲು ಉದ್ಧರಿಸಿದನು. ಹಾಗೂ ಸರವೂರಿನಲ್ಲಿ ಮಠಕ್ಕೆ ಮಾರಿಯ ಕಾವಲಿರಿಸಿದನು. ಬೇಡಿದವರಿಗೆ ಇಷ್ಟಾರ್ಥವನ್ನು ಕೊಡುವ ಸಿದ್ಧಿಯು ದೊರೆಯುತ್ತದೆ. ಹಾಗೂ ಹಾಲುಮತದವರಿಂದ ಕುಲತೆರಿಗೆಯನ್ನು ಪಡೆದು ಪ್ರತಿವರ್ಷ ಪರ್ವ ಮಾಡುವಂತೆ ಹೇಳುವನು. ಹೀಗೆ ಗುರುಸೇವೆಯನ್ನು ಮಾಡುವ ಪರಿಯನ್ನು ತಿಳಿಸಿಕೊಟ್ಟನು. ಮತ್ತು ಸರೂರಿನಲ್ಲಿ ಮಂಕತಂದೆಯು ಐಕ್ಯನಾಗುವನು. ಮತ್ತೆ ಹೆಗ್ಗಗೌಡನು ಗುರು ಕಳೆದುಕೊಂಡು ನಂತರ ರಾಜವಂಶದಲ್ಲಿ ಜನಿಸುವನು. ಅದೇ ರೀತಿಯಾಗಿ ಹೆಗ್ಗಗೌಡನು ಮಾದಗೌಡನ ಬಸಿರಲ್ಲಿ ಬುಕ್ಕಗೌಡನಾಗಿ ಜನ್ಮ ಪಡೆಯುವನು. ಕೆಲ ದಿನಗಳ ನಂತರ ಅಲ್ಲಿಗೆ ಶಾಂತಯ್ಯನು ಬರುತ್ತಾನೆ. ಅಲ್ಲಿಗೆ ಬಂದ ರೇವಣಸಿದ್ಧರಿಗೆ ಕರಿಯ ಕಂಬಳಿ ಗದ್ದುಗೆಯ ಮೇಲೆ ಕೂಡಿಸಿ ಪೂಜೆ ಸಲ್ಲಿಸುವರು. ಕೊನೆಗೆ ಲಿಂಗಕ್ಕೆ ಅರ್ಪಿಸಿದ ನಂತರವೇ ಆಹಾರ ಸೇವಿಸಬೇಕೆಂದು ಹೇಳುತ್ತಾನೆ.

ಸಿದ್ಧಮಂಕ ಚರಿತೆಯಲ್ಲಿ ಬರುವ ಚಿಕ್ಕಶಾಂತಯ್ಯನ ಪಟ್ಟಧಾರಣೆಯು ತಗರ ಪವಾಡಕ್ಕೆ ಅವಕಾಶ ಮಾಡಿಕೊಟ್ಟ ಸೂಕ್ಷ್ಮ ಎಳೆಯನ್ನು ತಿಳಿಸುತ್ತದೆ. ಈ ಕೃತಿಯಲ್ಲಿ ಮರಳಮಂಕನೆ ವೀರನಾಯಕನಾಗಿ ಕಂಡುಬರುತ್ತಾನೆ. ಬಿಜ್ಜಳ ಮತ್ತು ಆತನ ಪರಿವಾರವು ಕುರುಬರನ್ನು ಹೊರ ಹಾಕಿದ ಕಾರಣ ಸಿದ್ಧಮಂಕ ಚರಿತೆಯು ರಚನೆಗೊಂಡಿದೆ.

**ತಗರ ಪವಾಡ**

'ತಗರ ಪವಾಡ' ಕೃತಿಯ ಕರ್ತೃ ಯಾರೆಂದು ತಿಳಿದು ಬರುವುದಿಲ್ಲ. ಆದರೆ ಕೃತಿಯಲ್ಲಿನ ಕೆಲವೊಂದು ಉಲ್ಲೇಖ ಪದ್ಯಗಳನ್ನು ಗಮನಿಸಿದರೆ ಇದು ಮೊದಲು ಕೃತಿಕಾರನಿಂದ ರಚನೆಗೊಂಡು, ನಂತರ ಜನಪದ ಹಾಡಿನ ಲಯದಲ್ಲಿ ಇದನ್ನು ಬಿಟ್ಟುಹೋಗಿರಬಹುದು ಎಂದೆನಿಸುತ್ತದೆ.

> "ಶಿವಭೂಷ ಶಿವ ತನು ಶಿವಪಂಚಮುಖವುಳ್ಳ
>
> ಶಿವನ ಪಾದಾಂಬುಜವ
>
> ಭವಭವದಲಿ ಹೊಂದೆ ಕರ್ಮಹಿಂಗುವುದೆಂದು
>
> ವಿವರಿಸಿ ಪೇಳ್ದ ಸಿದ್ದೇಶ"[೧೩]

ಎನ್ನುವಲ್ಲಿ ಲಿಖಿತ ರೂಪದ ಕೃತಿಯು ಮೌಖಿಕ ರೂಪದಲ್ಲಿ ವಿವರಣೆಯನ್ನು ಪಡೆಯುತ್ತ ಹೇಳಿದವರ ಹೆಸರನ್ನು ಬಿಡುವಷ್ಟರ ಮಟ್ಟಿಗೆ ಕಥೆ ರಚನೆಯಾಗಿದೆ. ಅಂದರೆ ಕೃತಿಕಾರನಿಗಿಂತ ಕೃತಿಯೊಳಗಿನ ವಸ್ತು ಜನರನ್ನು ಸೆಳೆದಿತ್ತು. ಇದು ಕುರುಬರ ಸಮುದಾಯದಲ್ಲಿನ ಪ್ರಮುಖ ಸಂಪ್ರದಾಯವನ್ನು

ವಿವರಿಸುವ ಕೃತಿ. ಕುರುಬರು ಕಲ್ಯಾಣದಿಂದ ೧೨ ವರ್ಷಗಳ ಕಾಲ ಕುಲಹೀನರಾಗಿ ಹೊರಗೆ ಉಳಿಯುತ್ತಾರೆ. ಅದರ ಪ್ರತಿಭಟನೆಯನ್ನು ಹೇಳುವುದೇ ಈ ಕೃತಿಯ ಮುಖ್ಯ ಉದ್ದೇಶವಾಗಿದೆ.

ಈ ಕೃತಿಯು ಒಂಬತ್ತು ಸಂಧಿಗಳನ್ನು ಹೊಂದಿದೆ. ಪ್ರತಿಯೊಂದು ಸಂಧಿಗಳಲ್ಲಿ ಸಾಂಗತ್ಯದಿಂದ ಕಥೆಯ ಹಂದರ ವ್ಯಕ್ತವಾಗಿದೆ. ತಗರ ಪವಾಡವು ಕುರುಬರು ಕಲ್ಯಾಣದಲ್ಲಿದುದ್ದನ್ನು, ನಂತರ ಸತ್ತ ಕುರಿಯನ್ನು ಹಾಲಕಂಬಿಯ ಮೇಲೆ ಹೊತ್ತು ತಂದು, ಸಮಾಜದಿಂದ/ರಾಜ್ಯದಿಂದ ಬಹಿಷ್ಕಾರಕ್ಕೆ ಒಳಗಾದ ಕಥೆಯನ್ನು, ಮತ್ತೆ ಪವಾಡ ಮೆರೆದು ಕಲ್ಯಾಣ ಪ್ರವೇಶಿಸಿದ್ದನ್ನು ಸಂಘರ್ಷದ ನೆಲೆಯಲ್ಲಿ ತಿಳಿಸಿಕೊಡುತ್ತದೆ.

ಮೊದಲನೆ ಸಂಧಿಯು ವೃತ್ತ, ಕಂದದಿಂದ ಆರಂಭಗೊಳ್ಳುವುದು. ಕವಿಯು ಹೃದಯದಿಂದ ಹಿರಿಯರನ್ನು ನೆನೆಯುತ್ತಾ, ರೇವಣಸಿದ್ಧ ಮಹಾತ್ಮೆಯನ್ನು ಹೇಳುವೆನೆಂದು ಹೇಳುತ್ತಾನೆ. ಸಂಗನಬಸವರಾಜ ಅಲ್ಲಮ, ಸಿದ್ಧರಾಮ, ರುದ್ರಮುನಿ, ಚೆನ್ನಬಸವ ವೀರಮಡಿವಾಳರಿಗೆ, ಗಿರಿಜಾರಮಣನಾದ ರೇವಣಸಿದ್ಧನನ್ನು ಸ್ಮರಿಸುತ್ತಾ, ಶಿವ, ಗಣಪತಿ, ಸರಸ್ವತಿಯರನ್ನು ನೆನೆಯುವನು. ಮುಖ್ಯವಾಗಿ ಕಥೆಯು ಕೈಲಾಸದ ಒಡ್ಡೋಲಗದಿಂದ ಶುರುವಾಗುತ್ತದೆ. ಕೈಲಾಸಪುರದಲ್ಲಿ ನಂದಿಭೃಂಗೀಶ ಇರುವಲ್ಲಿಗೆ ನಾರದನು ಆಗಮಿಸುವನು. ನಾರದನು ಕೈಲಾಸಕ್ಕೂ ಭೂಮಿಗೂ ನಡುವೆ ನಡೆಯುವ ಘಟನೆಗಳ ಸುದ್ದಿ ಪ್ರಚಾರಕ. ಹೀಗೆ ಕೈಲಾಸಕ್ಕೆ ಬಂದ ನಾರದನನ್ನು ಮರ್ತ್ಯದ ವಿಷಯವನ್ನು ತಿಳಿಸಲು ಹೇಳುವನು. ಆಗ ನಾರದನು ಒಬ್ಬ ಹೆಂಗಸು ರೂಪಿನಲ್ಲಿ ಬರುವನು. ಸುಂದರಿಯು ದಾನವ ಮಾನವರೆನ್ನದೆ ಸೌಂದರ್ಯಕ್ಕೆ ಸೋತವರನ್ನು ವಿಷಹಾಕಿ ಕೊಲ್ಲುವಳು. ವಿಷ ಕುಡಿದು ಸಾಯದ ಸಿದ್ಧರನ್ನು ಗುಲಾಮರನ್ನಾಗಿ ತನ್ನ ಸೇವೆಗೆ ಇಟ್ಟುಕೊಂಡಿರುವಳು ಎಂದು ಹೇಳುತ್ತಾನೆ. ಆಗ ಶಿವನು ಚರ್ಮಧಾರಣೆಯ ರೇವಣಸಿದ್ಧರಾಗಿ ನರಲೋಕಕ್ಕೆ ಆಗಮಿಸುತ್ತಾನೆ. ಅಲ್ಲದೆ ಮಾಯೆ ಕೊಟ್ಟ ವಿಷಕೊಡಗಳನ್ನು ಸೇವಿಸಿ ಆಕೆಯ ನಾಸಿಕವನ್ನು ಕೊಯ್ದು ವಿಕಾರ ಮಾಡುತ್ತಾನೆ. ಜೊತೆಗೆ ಆಕೆಯನ್ನು ಮೆಚ್ಚಿ ಬಂದವರನ್ನು ಕುರಿಯಾಗಿ ಪರಿವರ್ತಿಸುವನು. ಈ ರೀತಿಯ ಕಥೆಯು ಪ್ರತಿಯೊಬ್ಬ ವ್ಯಕ್ತಿಗೆ ಗುರುವಿನ ಮಾರ್ಗದರ್ಶನದ ಅವಶ್ಯಕತೆಯನ್ನು ತಿಳಿಸುತ್ತದೆ. "ಗುರುಗಳನರಿಯದ ಗುರುದ್ರೋಹಿಗಳನೆಲ್ಲ ಹರಕೆಯ ಕುರಿಯಾಗಿರೆಂದು ಪರದೈವಕೆಯಾಹುತಿಯಾಗಬೇಕೆಂದು ಸದ್ಗುರುವು ರೇವಣ್ಣ ಬಾಯೆಂದ"[೧೪] ಅಂದರೆ ಕುರುಬರು ಸಸ್ಯಹಾರಿಗಳು ಆದರೆ ಇವರು ಸಾಕಿದ ಕುರಿಗಳನ್ನು ಪರದೈವಗಳಿಗೆ ಬಲಿಯನ್ನು ಕೊಡಲು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ನವಕೋಟಿ ಸಿದ್ಧರು ನಾನಾ ರೀತಿಯ ವರ್ಣಗಳಿಂದ ಶಿವನ ಶಾಪಕ್ಕೆ ಕುರಿಯಾಗಿ ಭುವನದಲ್ಲಿ ಜನಿಸುವರು. ಕೊಲ್ಲಾಪುರದಿಂದ ಕುರಿಗಳನ್ನು ತೊಗರಸಿಗೆ ಕರೆತರುವುದು, ಎಲ್ಲಾ ದೇವತೆಗಳಿಗೆ ಸರ್ತಿಯಲ್ಲಿ ಕುರಿಗಳ ಕಾಯುವಿಕೆಯ ಕೆಲಸ ವಹಿಸುವನು. ಇದಕ್ಕೆ ರೋಸಿಹೋದ ದೇವತೆಗಳು ಕಾಯಲಾರದೆ

ಕುರಿಗಳನ್ನು ಹಿಂದಿರುಗಿಸುವರು. ನಂತರ ಶಿವ-ಪಾರ್ವತಿಯರು ಕುರಿಗಳನ್ನು ತುಂಗಭದ್ರೆಯ ತಡಿಯೊಳು ಮೇಯಿಸಲು ಬರುತ್ತಾರೆ. ಅದಕ್ಕೆ ಭೂಮಿಯು ಶಿವನ ಆಗಮನಕ್ಕೆ ತಳಿರುಗಳಿಂದ ಗದ್ದುಗೆ ಮಾಡುತ್ತದೆ.

ಮತ್ತೆ ಕುರಿಗಳನ್ನು ಕಾಯಲು ಒಕ್ಕಲಿಗ ಆದಿಗೊಂಡನ ಮಕ್ಕಳು ಏಳುಮಂದಿಲ್ಲಿ ಒಕ್ಕಲಿಗನು ಒಕ್ಕಲಿಕ್ಕಬೇಕೆಂದು ಯೋಚಿಸುತ್ತಾನೆ. ಕುರಿಯ ಕಾಯುವುದರ ಜೊತೆಗೆ ಒಕ್ಕಲುತನ (ಬೇಸಾಯ)ವನ್ನು ಹೊಂದಿದವರು ಕುರುಬರು. ಶಿವನು ಸೃಷ್ಟಿಸಿದ ಕುರಿಗಳನ್ನು ದಿಗ್ದೇವತೆಗಳು ಕಾಯಿದ ನಂತರ ಶಿವಪಾರ್ವತಿಯರು ವಹಿಸಿಕೊಳ್ಳುತ್ತಾರೆ. ಅಲ್ಲದೆ ಭೂಲೋಕಕ್ಕೆ ಬಂದು ಆದಿಗೊಂಡನ ಕೊಡಗಿಯ ಹೊಲಮೂಲೆಯಲ್ಲಿರುವ ಹುತ್ತದಲ್ಲಿ ಹೊಗ್ಗಿಸಿ, ಮುತ್ತುಗದ ಮರವನ್ನು ಸೃಷ್ಟಿಸುತ್ತಾರೆ. ಆದಿಗೊಂಡನ ಮಗ ಪದ್ಮಣ್ಣನಲ್ಲದೆ ಬೇರೆ ಯಾರು ಬಂದು ಮುಟ್ಟಿದರೆ ಭೂತವು ಹೆದರಿಸುತ್ತೆಂದು ಕಟ್ಟನ್ನು ಮಾಡಿ ಊರ್ವಿಗೋಡೆಯ ವೀರೇಶನ ಕಾವಲಿಡುವರು.

ಈ ಸಂಧಿಯಲ್ಲಿ ಮೂಲತಃ ವ್ಯವಸಾಯಗಾರನಾದ ಆದಿಗೊಂಡನ ಮಕ್ಕಳು ಕುರಿಯ ಸಂಪತ್ತನ್ನು ಮುಂದೆ ಹೊಂದುವರೆಂದು, ಪದ್ಮಣ್ಣನೇ ಅದರ ಮೂಲವ್ಯಕ್ತಿಯೆಂದು ತಿಳಿಯುತ್ತದೆ. ಜೊತೆಗೆ ವೀರೇಶನೆಂಬ ಕಾವಲುಗಾರ ಮತ್ತು ಮುತ್ತುಗದ ಮರವು ವಿಶಿಷ್ಟವಾಗಿ ಮೂಡಿಬಂದಿವೆ. ಎರಡನೆಯ ಸಂಧಿಯಲ್ಲಿ ಆದಿಗೊಂಡ, ಈತನ ಸತಿ ಮಲ್ಲಮ್ಮ, ಏಳುಮಂದಿ ಮಕ್ಕಳಲ್ಲಿ ಕಿರಿಯವನು ಪದ್ಮಗೊಂಡ. ಈತನು ಅಣ್ಣಂದಿರಂತೆ ವ್ಯವಸಾಯದಲ್ಲಿ ಪಾಲ್ಗೊಳ್ಳದೆ, ಉಂಡಾಡಿ ಕೊಂಡಿರುತ್ತಾನೆ. ಅದಕ್ಕೆ ನೆರೆಹೊರೆಯವರು ಉಂಡಾಡಿ ಪದ್ಮಣ್ಣನೆಂದು ಕರೆಯುತ್ತಾರೆ. ಇದನ್ನು ಸಹಿಸದ ತಾಯಿ ಮಲ್ಲಮ್ಮ ಮಗನಿಗೆ ಬುದ್ಧಿ ಮಾತು ಹೇಳಿ ಹೊಲಕ್ಕೆ ಕಳಿಸುವಳು. ಆಗ ತಂದೆ ಆದಿಗೊಂಡನು

"ಮುತ್ತುಕ ಕಡಿಬ್ಯಾಡ ಹುತ್ತವೊಡೆಯಬ್ಯಾಡ
ಮತ್ತೀರ್ವ ಗಿಡದ ನೀ ತರಿಯೊ"[೧೮]

ಎಂದು ಹೇಳುತ್ತಾನೆ. ಆದರೆ ಪದ್ಮಣ್ಣನು ತಂದೆಯ ಮಾತನ್ನು ಆಲಿಸದೆ ಮುತ್ತುಕ ಕಡಿದು, ಹುತ್ತವನ್ನು ಒಡೆದ. ಆಗ ಅದರಲ್ಲಿನ ಕುರಿಗಳನ್ನು ಕಂಡು ಮೂಕವಿಸ್ಮಿತನಾಗುವನು. ಶಿವನು ದರ್ಶನ ನೀಡಿ ಈ ಕುರಿಗಳ ಹಿಂಡಿಗೆ ನೀನೇ ಒಡೆಯ. ಇವುಗಳ ಪೋಷಣೆಯ ಜವಬ್ದಾರಿ ನಿನ್ನದು ಎಂದು ಕರ್ತವ್ಯವನ್ನ ಹೊರೆಸುವನು. ಪದ್ಮಣ್ಣ ಇದು ನನ್ನಿಂದ ಆಗದೆಂದು ಹೇಳಿದಾಗ ಮತ್ತೋರ್ವನ ಸಹಾಯದಿಂದ ರಕ್ಷಿಸುತ್ತೆನೆಂದು ಹೇಳುತ್ತಾನೆ. ಶಿವನು ಕುರಿಗಳನ್ನು ಕಾಯಲು ವೀರಬೀರಯ್ಯನನ್ನು ನೇಮಿಸುವನು. ಹೀಗೆ ಈ ಇಬ್ಬರು ಕಾಡುಮೇಡುಗಳಲ್ಲಿ ಕುರಿಗಳನ್ನು ಕಾಯುತ್ತಾ, ಮೇಯಿಸುತ್ತಾ ಹೋಗುತ್ತಿರುವಾಗ "ರಕ್ಕಸ ಬಕನುಯೆಂಬುವ ಕಂಡು ತುರುಗಳ ಕುಕ್ಕಿ ತಿನ್ನುವೆನೆಂದು"[೧೯] ಆತುರದಿಂದ ಮುನ್ನುಗ್ಗುವನು. ಆಗ ಬೀರಯ್ಯನು ಧೈರ್ಯದಿಂದ ಹೋರಾಡಿ ದೈತ್ಯನನ್ನು ಕೊಂದುಹಾಕುತ್ತಾನೆ.

ಆ ಕ್ಷಣದಲ್ಲಿಯೇ ರಾಕ್ಷಸನ ಮಗಳು ಅನಾಥೆಯಾದೆನೆಂದು ಗೋಳಿಡುತ್ತಾ ಬೀರಯ್ಯನ ಪಾದಕ್ಕೆರುಗುವಳು. ಕನ್ಯೆಯನ್ನು ಬೀರಯ್ಯ ಪದ್ಮಣ್ಣನಿಗೆ ವಿವಾಹ ಮಾಡುತ್ತಾನೆ.

ಪದ್ಮಣ್ಣನು ಸಂಪ್ರದಾಯದಂತೆ ಲಿಂಗಮ್ಮಳನ್ನು ಮೊದಲನೆಯ ಹೆಂಡತಿಯಾಗಿ ಸ್ವೀಕರಿಸುವನು. ರಾಕ್ಷಸನನ್ನು ಕೊಂದುದ್ದಕ್ಕೆ ಸಿರಿವಂತೆಯನ್ನು ಮದುವೆಯಾಗಿ ಕಿರಿಯ ಹೆಂಡತಿಯನ್ನಾಗಿ ಸ್ವೀಕರಿಸುತ್ತಾನೆ. ಹಿರಿಯ ಹೆಂಡತಿಯ ಮಕ್ಕಳು ಹದಿಮೂರು ಮಂದಿ ಅವರು ಹತ್ತಿಕಂಕಣದವರು. ಕಿರಿಯ ಹೆಂಡತಿ ಸಿರಿವಂತೆ ಮಕ್ಕಳು ಮೂರು ಮಂದಿ ಇವರು ಉಣ್ಣೆ ಕಂಕಣದವರು. ವೈವಾಹಿಕ ಸಂಬಂಧವು ಸಮುದಾಯವನ್ನು ಹೇಗೆ ಉಪಪಂಗಡಗಳಾಗಿ ನಿರ್ಮಿಸುತ್ತದೆಂದು ಪದ್ಮಣ್ಣನ ವಿವಾಹದಿಂದ ತಿಳಿದುಬರುತ್ತದೆ. ಸಮಾಜದಲ್ಲಿ ಅನ್ಯಜಾತಿ ವಿವಾಹವೇ ಜಾತಿಯ ನಿರ್ಮೂಲನೆಗೆ ಸಹಕಾರವೆಂದು ತಿಳಿದುಬರುತ್ತದೆ. ಆದರೆ ಇಲ್ಲಿ ಪದ್ಮಣ್ಣನು ಸಿರಿವಂತೆಯನ್ನು ಮದುವೆಯಾದ್ದರಿಂದ ಉಣ್ಣೆಕಂಕಣ ಮತ್ತು ಹತ್ತಿಕಂಕಣ ಎರಡು ಉಪಪಂಗಡಗಳು ಆಗುವುದಕ್ಕೆ ಅನುವು ಮಾಡಿಕೊಟ್ಟಿದೆ. ನಂತರ ಈ ಉಣ್ಣೆಕಂಕಣದವರನ್ನು ಗುರುವಿನ ಹೆಸರಿನಲ್ಲಿ ಹತ್ತಿಕಂಕಣದ ಶಾಂತಮುತ್ತಯ್ಯನು ನಿರ್ವಹಿಸುತ್ತಾನೆ. ಹತ್ತಿಕಂಕಣದವರು ಬಹುಸಂಖ್ಯಾತರಾದ್ದರಿಂದ ಅಲ್ಪ ಸಂಖ್ಯಾತರಾದ ಉಣ್ಣೆಕಂಕಣದವರನ್ನು ಹತೋಟಿಯಲ್ಲಿಡುವುದು ಕಂಡುಬರುತ್ತದೆ. ಈ ತಾರತಮ್ಯವು ವೈವಾಹಿಕ ಸಂಬಂಧದಿಂದಲೇ ಹುಟ್ಟಿವೆಂದು ಖಚಿತವಾಗಿ ಹೇಳಲಾಗುತ್ತದೆ.

ಅಲ್ಲದೇ ಹತ್ತಿಕಂಕಣದವರು ಒಕ್ಕಲುತನ ಮಾಡುವವರು. ಉಣ್ಣೆಕಂಕಣದವರು ಕುರಿಗಳನ್ನು ಕಾಯುವ ವೃತ್ತಿ ಕೈಗೊಂಡವರೆಂದು ತಿಳಿಯಬಹುದು. ಉಣ್ಣೆಕಂಕಣದವರು ಅಲೆಯುವ ಜನಾಂಗವಾದ್ದರಿಂದ ಅವರು ಹತ್ತಿಕಂಕಣದವರ ಜೊತೆಗೆ ವೈವಾಹಿಕ ಸಂಬಂಧವನ್ನು ಹೊಂದದೆ ಇರಬಹುದು. ಇದನ್ನು ಅಲೆಯುವ ಮತ್ತು ನೆಲೆನಿಂತ ಸ್ವಗೋತ್ರದಲ್ಲಿನ ಸಂಘರ್ಷವೆನ್ನಬಹುದು. ಉಣ್ಣೆಕಂಕಣದವರಿಗೆ ಬೀರಯ್ಯ ಕುಲದೈವನಾಗುವನು. ಹತ್ತಿಕಂಕಣಕ್ಕೆ ಶಾಂತಮುತ್ತಯ್ಯ ಕುಲದೈವನಾಗುತ್ತಾನೆ. ಬೀರಯ್ಯ ಕುಲದೈವವಾಗಿ ಕಲ್ಲಿನ ರೂಪದಲ್ಲಿರುವುದು. ಇದು ಕುರುಬರು ಎಲ್ಲೆಲ್ಲಿ ಕುರಿಗಳ ಜೊತೆ ತಂಗುತ್ತಿದ್ದರೋ ಅಲ್ಲಲ್ಲಿ ಬೀರದೈವವನ್ನು ತಾತ್ಕಾಲಿಕವಾಗಿಟ್ಟು ತಮ್ಮ ರಕ್ಷಣೆ ಮಾಡೆಂದು ಬೇಡಿಕೊಳ್ಳುವ ಪದ್ಧತಿಯಾಗಿತ್ತು ಎಂದು ತಿಳಿದು ಬರುವುದು.

ಸಿರಿವಂತೆಯನ್ನು ಮದುವೆಯಾದ ಪದ್ಮಣ್ಣನು ತೊಗರಸಿ ಗ್ರಾಮಕ್ಕೆ ಕುರಿಗಳ ಜೊತೆ ಬರುವನು. ಪದ್ಮಣ್ಣನು ಬರುವುದಾಗಿ ಮೊದಲೇ ತಿಳಿದಿದ್ದ ತಾಯಿ ಮಲ್ಲಮ್ಮ ಮೊಮ್ಮಗ ಶಾಂತಮುತ್ತಯ್ಯನಿಗೆ ಪರಿವಿಗೊಂಡನ ಮೊಮ್ಮಗಳು ದೇವಮ್ಮನ ಜೊತೆ ಮದುವೆ ಮಾಡುತ್ತಾಳೆ. ಪದ್ಮಣ್ಣ ಸಿರಿವಂತೆಯರು ಕುರಿಗಳನ್ನು ಮೇಯಿಸಲು ಬಿಡುವುದನ್ನು ಕಂಡು ಊರಿನವರು ತಂದೆ-ತಾಯಿ-ಅಣ್ಣಂದಿರು ಧಾವಿಸಿ ಬರುತ್ತಾರೆ. ತಾಯಿ ಮಲ್ಲಮ್ಮ ಮಗನನ್ನು ಗುರುತಿಸಿ ಮನೆಗೆ ಕರೆದುಕೊಂಡು ಹೋಗುವಳು.

ಜೊತೆಗೆ ಲಿಂಗಮ್ಮ, ಮಗ ಶಾಂತಮುತ್ತಯ್ಯನನ್ನು ತನ್ನ ಜೊತೆ ಕರೆದುಕೊಂಡು ಹೋಗಲು ಹೇಳುತ್ತಾಳೆ.

ಸಿರಿವಂತೆಯನ್ನು ಪದ್ಮಣ್ಣನು ತೊಗರಸಿ ಗ್ರಾಮದಲ್ಲಿನ ತನ್ನ ಮನೆಗೆ ಕರೆದುಕೊಂಡು ಹೋಗದೆ ಹೊರಗಿನ ಕರುವುಗಲ್ಲಿನ ಬಳಿ ನಿಲ್ಲಿಸಿ ಬರುವುದು ಕಂಡುಬರುತ್ತದೆ. ಪದ್ಮಣ್ಣನು ಇಷ್ಟಪಟ್ಟು ಸಿರಿವಂತೆಯನ್ನು ಮದುವೆಯಾಗಿದ್ದರೂ ಕುಲದ ಕಟ್ಟಳೆಗೆ ಬದ್ಧನಾಗಿ ಆಕೆಯನ್ನು ಹೊರಗಿಡುತ್ತಾನೆ. ಇದು ಕುರುಬ ಸಮುದಾಯವೂ ಅನ್ಯಜಾತಿಯವರನ್ನು ಒಂದು ವೇಳೆ ಮದುವೆಯಾದರೂ ಅವರು ಕುರುಬರಲ್ಲಿನ ಸಮಾರಂಭದಲ್ಲಿ ಪಾಲ್ಗೊಳ್ಳಬಾರದೆಂದು ವಿಧಿಸಿದ ನಿಷೇಧವನ್ನು ತಿಳಿಸುತ್ತದೆ. ಮದುವೆಯಾದ ಹೆಣ್ಣಿಗೆ ಮಾತ್ರವಲ್ಲದೆ ಅವಳ ಮಕ್ಕಳಿಗೂ ಈ ರೀತಿಯಾಗಿ ನಿಷೇಧವನ್ನು ಹೇರಿದೆ. ಹತ್ತಿಕಂಕಣದವರು ಕುಲಗುರುವಿನ ಪದವಿ/ಸ್ಥಾನ ಪಡೆಯಬಹುದೇ ಹೊರತು ಉಣ್ಣೆಕಂಕಣದವರು ಅಲ್ಲ. ಹತ್ತಿಕಂಕಣದವರ ಆಜ್ಞೆಯಂತೆ ಉಣ್ಣೆಕಂಕಣದವರು.

ಮೂರನೆಯ ಸಂಧಿಯಲ್ಲಿ ಪದ್ಮಣ್ಣನು ಲಿಂಗಮ್ಮ, ಸಿರಿವಂತೆಯರ ಜೊತೆಯಲ್ಲಿ ಕುರಿಗಳನ್ನು ಕಾಯುವುದು ನಂತರ ಸಿರಿವಂತೆಯ ಜೊತೆ ಪದ್ಮಣ್ಣ ಊಟ ಮಾಡಿದ್ದಕ್ಕೆ ಶಾಂತಮುತ್ತಯ್ಯನು ಕುಟುಂಬದಿಂದ ಬೇರೆಯಾಗುವುದನ್ನು ಒಳಗೊಂಡಿದೆ. ಈ ಕಾರಣದಿಂದಲೇ ಶಾಂತಯ್ಯ ದೇವಮ್ಮನನ್ನು ಕರೆದುಕೊಂಡು, ಕುರಿಗಳ ಹಿಂಡನ್ನು ಎರಡು ಭಾಗ ಮಾಡಿಕೊಳ್ಳುತ್ತಾರೆ. ಈ ಸಂಧಿಯಲ್ಲಿ ಪದ್ಮಣ್ಣ ಸಿರಿವಂತೆ, ಲಿಂಗಮ್ಮರ ಪ್ರಸ್ತಾಪ ನಿಲ್ಲುವುದು. ಮುಂದೆ ಶಾಂತಯ್ಯನೆ ಮುಖ್ಯವ್ಯಕ್ತಿಯಾಗಿ ಕುಲವನ್ನು ಉದ್ಧಾರ ಮಾಡುತ್ತಾನೆ.

ಶಾಂತಯ್ಯನಿಂದ ಶಾಂತಮುತ್ತಯ್ಯನ ಸಂಪ್ರದಾಯವು ಶಾಕಹಾರಿಯಾಗುತ್ತದೆ. ಶಿವನ ಭಕ್ತನಾದ್ದರಿಂದಲೇ ಈತನು ಪಂಕ್ತಿಯ ದಾಸೋಹ ಮಾಡಿಸುವನು. ಅಂಜದೇ ಲಕ್ಷ ಸಂಖ್ಯೆಯ ವಿರಕ್ತ ಜಂಗಮರಿಗೆ ಪಂಚಭಕ್ಷ್ಯವು, ಪರಮಾನ್ನವನ್ನು ಬಡಿಸುವನು. ಚಕೋರಿ ಹೊಳೆಯಲ್ಲಿ ಶಾಂತಮುತ್ತಯ್ಯನು ಸ್ನಾನಕ್ಕೆ ಇಳಿದಾಗ ಬಂಡಿಯು ಬರಲು ಕೋಪಗೊಂಡನು. ಕೋಪದಿಂದ ನೋಡಿದ ತಕ್ಷಣ ಬಂಡಿ ತುಂಡು ತುಂಡಾಗುತ್ತದೆ. ಮತ್ತೆ ಬಂಡಿಕಾರರು ಕ್ಷಮೆಯಾಚಿದಾಗ ಶಿವಸಿದ್ಧಯ್ಯನ ದೇಗಲು ಕಟ್ಟಲು ಹೇಳುವನು. ನಂತರ ಶಾಂತಿಯಿಂದ ಬಂಡಿಯನ್ನು ನೋಡಲು ಮುರಿದ ಬಂಡಿಗಳು ಸರಿಯಾಗುತ್ತವೆ. ಹೀಗೆ ಶಾಂತಯ್ಯನ ಭಕ್ತಿಗೆ ಮೆಚ್ಚಿ ಕಟ್ಟಿದ ದೇಗುಲವೇ ರೇವಣಸಿದ್ಧರ ಮಠವಾಗುತ್ತದೆ. ಆಗ ಶಿವನು ಶಾಂತಯ್ಯನಿಗೆ ಬೇಕಾದ್ದನ್ನು ಕೇಳು ಎಂದಾಕ್ಷಣ ಕರುಣಾಳು ರೇವಣ್ಣ ದೀಕ್ಷೆಮೋಕ್ಷವಿತ್ತು ಗುರುವಾಗಬೇಕೆಂದು ಶಾಂತಯ್ಯ ಬೇಡುವನು. ಅಂತೆಯೇ ಶಿವನು ಸರ್ವಸಂಪತ್ತಿನಿಂದ

"ಗುಡಿತೋರಣಗಟ್ಟಿ ಹಸೆಯು ಹಂದರವಿಕ್ಕಿ

ಒಡೆಯರು ಭಕ್ತರುಪ್ಪಡಿಸೆ

ನಡೆ ಮಡಿ ವಾಧ್ಯ ಶೋಭನದಿಂದ ದೀಕ್ಷೆಯ

ಮೃಡನೊಲಿದಿತ್ತ ಶಾಂತನಿಗೆ"[೧೭]

ಅಂದು ಮನೆಯನ್ನು ಹೊರಣ ಮಾಡಿ ಹಸಿರು ತೋರಣಗಳಿಂದ ಅಲಂಕರಿಸಿ ಹಸೆಯನ್ನು ಮಾಡುತ್ತಾರೆ. ಒಡೆಯರು, ಭಕ್ತರು ಕೂಡಿ ಮಡಿಯಿಂದ ವಾಧ್ಯಗಳನ್ನು ತರಿಸುತ್ತಾರೆ. ನಾಲ್ಕು ಕಲಶದ ಕೊಡ, ಕಡಲೆ ಕಬ್ಬುಗಳು, ಗಂಧಾಕ್ಷತೆ, ಭಸಿತ, ವೀಳ್ಯದೆಲೆ, ಎಳೆಯ ಎಲೆಗಳು, ಮಧ್ಯದಲ್ಲಿ ಕಲಶವಿಡುತ್ತಾರೆ. ಈ ಮಂಗಳಕಾರ್ಯಕ್ಕೆ ಪಂಡಿತಾರಾಧ್ಯ, ರೇವಣಾಧ್ಯ, ಏಕೋರಾಮ ದಂಡಾಗ್ರ ಮರುಳಸಿದ್ಧಯ್ಯ ಸನ್ನಿಧಿಯಲ್ಲಿ ಈ ಕಾರ್ಯ ನೆರವೇರುತ್ತದೆ. ಶಾಂತಯ್ಯ ಆಗ ಕರಿಯ ಮಲ್ಲಿಗೆ ಪುಷ್ಪವನ್ನು ಶಿವನ ಪುರದಿಂದ ತಂದರೆ ಈ ದೀಕ್ಷೆ ಪೂರ್ಣಗೊಳ್ಳುವುದೆಂದು ಹೇಳುತ್ತಾರೆ. ಕರಿಮಲ್ಲಿಗೆ ಪುಷ್ಪವನ್ನು ಪಡೆಯಲು ಶಿವನಲ್ಲಿ ಕೇಳುತ್ತಾನೆ. ಶಾಂತಯ್ಯ ಕೊಡದಿದ್ದರೆ ಶಿರಚ್ಛೇದನ ಮಾಡಿಕೊಳ್ಳುವುದಾಗಿ ಕೊರಳಿಗೆ ಖಡ್ಗವನ್ನೊತ್ತಿ ಇರಿಸಿದಾಗ ಕರಿಯ ಮಲ್ಲಿಗೆಯು ಸರಸರಗಳು ಸಾಲುಸಾಲಾಗಿ ಸುರಿದವು. ರೇವಣಸಿದ್ಧರ ಕೃಪೆಯಿಂದ ಶಾಂತನು ದೀಕ್ಷೆ ಪಡೆದು ಸಾಕ್ಷಾತ ಶಿವನ ಸನ್ನಿಧಿಯಿಂದ ಉದುರಿದ ಕರಿಯಮಲ್ಲಿಗೆಯ ಸರಮಾಲೆಯ ಸ್ಥಳವೇ ಸರವೂರು ಆಯಿತು. ಈ ರೀತಿಯಾಗಿ ಶರಣರು ದೀಕ್ಷೆಯಿಂದ ಮತ್ತಷ್ಟು ನಿಷ್ಠೆ ನೇಮದ ಶರಣನಾಗುವ ಅರ್ಹತೆಯನ್ನು ಹೊಂದುವರು. ಲಿಂಗದೀಕ್ಷೆಯನ್ನು ಶಾಂತಯ್ಯನು ಪಡೆಯುವುದರಿಂದ ಇವರು ವೀರಶೈವ ಧರ್ಮಕ್ಕೆ ಸ್ಥಳಾಂತರಿಸುವುದು ಕಂಡುಬರುತ್ತದೆ. ಭಂಡಾರದಿಂದ ವಿಭೂತಿಯ ಆರಾಧಕರಾಗುವುದು ತಿಳಿಯುತ್ತದೆ. ಅಲ್ಲದೆ ಪದ್ಮಣ್ಣನು ರಕ್ಕಸನ ಮಗಳಿಂದ ಪಡೆದ ಮಕ್ಕಳ ಕರ್ಮವನ್ನು ಕಳೆದು ಅವರನ್ನು ರಕ್ಷಿಸು ಎಂದು ಹೇಳುತ್ತಾನೆ.

ನಿನ್ನ ಸಂತತಿಯವರುಗಳೆಲ್ಲರು ಚೊಕ್ಕ

ಚಿನ್ನ ಹತ್ತಿಯ ಕಂಕಣದ

ಬಿನ್ನಾಣಕಾರರೆನಿಸಿ ಬಾಳುವರು ಚೊಕ್ಕ

ಚಿನ್ನಕ್ಕೆ ಸಮನಾಗಿ ಮಗನೆ"[೧೮]

ಶಾಂತಯ್ಯನು ಪದ್ಮಣ್ಣನಿಂದ ದೂರವಾಗಿ ಬಂದು ನೆಲೆಸಿದರು. ಅವನ ಕಿರಿಯ ಹೆಂಡತಿ ಮಕ್ಕಳನ್ನು ಕಾಪಾಡುವ ಹೊಣೆಗಾರಿಕೆಯು ಶಾಂತಮುತ್ತಯ್ಯನ ಮೇಲೆ ಇರುತ್ತದೆ. ತಂದೆಯಿಂದ ಬೇರ್ಪಟ್ಟು ಬಂದು ಮತ್ತೆ ತಾನೆ ಅವರ ಜೊತೆ ಒಂದುಗೂಡುವುದಕ್ಕೆ ಪರಿತಪಿಸುವುದು ಜಾತಿಯ ಉಪಪಂಗಡಗಳು ಬೇರೆಯಾದರೂ, ಅದನ್ನೂ ಮತ್ತೊಂದು ಜಾತಿಯಲ್ಲಿ ಸೇರಲು ಬಿಡುವುದಿಲ್ಲ ಎನ್ನುವುದಕ್ಕೆ ಈ ಹತ್ತಿಕಂಕಣದ ಶಾಂತಯ್ಯ ಉಣ್ಣೆಕಂಕಣದವರನ್ನು ಮತ್ತೆ ಸೇರಿಸುವುದು ಕಂಡುಬರುತ್ತದೆ.

ನಾಲ್ಕನೆಯ ಸಂಧಿಯಲ್ಲಿ ಶಾಂತಮುತ್ತಯ್ಯನು ತನ್ನ ಪವಾಡದಿಂದ ಕುಲದ ಶ್ರೇಷ್ಠತೆಯನ್ನು ಹೆಚ್ಚಿಸುವುದನ್ನು ಒಳಗೊಂಡಿದೆ. ಅದಕ್ಕೆ ಪೂರಕವಾಗಿ ಕಿನ್ನರಯ್ಯ, ವಿಟ ಬೊಪ್ಪಯ್ಯನ ಕಥೆಗಳು ಪುಷ್ಠಿಕೊಡುತ್ತವೆ. ಕಿನ್ನರಿ ಬ್ರಹ್ಮಯ್ಯ ಪಂಚಾಳ ಕುಲರತ್ನದವನು. ಇವನು ಶಿವನ ದೇಗುಲದಲ್ಲಿ ಕಿನ್ನರಿ ನುಡಿಸುತ್ತಾ ಜೀವಿಸುವ ಶರಣ. ಒಂದು ದಿನ ವಿಟಗಾರ ಬೊಪ್ಪಯ್ಯನು ಲೇಸಿ ಚೆನ್ನಿಯ ಬಯಕೆಯಂತೆ ಒಂದು ಟಗರನ್ನು ಹೊನ್ನಿಗೆ ತರುತ್ತಿರುವಾಗ ಆ ಟಗರು ಬ್ರಹ್ಮಯ್ಯನಿರುವ ಶಿವಾಲಯಕ್ಕೆ ಹೊಕ್ಕು ಲಿಂಗದ ಬಳಿ ಜೀವದಾನ ಮಾಡೆಂದು ಬೇಡಿಕೊಳ್ಳುತ್ತದೆ. ಈ ಕರುಣಾರಸದಿಂದ ಸೋತ ಕಿನ್ನರಿ ಬ್ರಹ್ಮಯ್ಯ ಅದನ್ನು ವಿಟಗಾರನಿಂದ ಕ್ರಯಮಾಡಿಕೊಂಡು ಲಿಂಗಮುದ್ರೆ ಹಾಕುವನು. ಇತ್ತ ಬೊಪ್ಪಯ್ಯನಿಗೆ ಹೊನ್ನಿಗೆ ಹೊನ್ನು ಕೊಟ್ಟು ಆ ಟಗರನ್ನು ಕೊಳ್ಳುವನು. ಇದರಿಂದ ಘಾಸಿಗೊಂಡ ಚೆನ್ನಿಯು ಅಣ್ಣಂದಿರನ್ನು ಕಳುಹಿಸುತ್ತಾಳೆ. ಆಗ ಕಿನ್ನರಿ ಬ್ರಹ್ಮಯ್ಯ ಅವರನ್ನು ಹೊಡೆದುಹಾಕುತ್ತಾನೆ. ಇದರ ನ್ಯಾಯಕ್ಕಾಗಿ ಚೆನ್ನಿಯು ಬಿಜ್ಜಳನಲ್ಲಿಗೆ ಬಂದು ದೂರು ಕೊಡುವಳು.

ಐದನೇ ಸಂಧಿಯಲ್ಲಿ ಕಿನ್ನರಿ ಬ್ರಹ್ಮಯ್ಯನು ಶರಣತ್ವದ ಜೊತೆಗೆ ಕಲಿತನವನ್ನು ಹೊಂದಿದ್ದನೆಂದು ಕಾಣುತ್ತದೆ. ಬಿಜ್ಜಳ ಸೈನ್ಯವು ಒಬ್ಬ ಶರಣನ ಮೇಲೆ ಅಧಿಕಾರ ಚಲಾಯಿಸುವುದನ್ನು ತಿಳಿಸುತ್ತದೆ. ಬಿಜ್ಜಳ, ಬಸವಣ್ಣರು ನೇರವಾಗಿ ಬಂದು ಟಗರನ್ನು ಕೊಂಡುದುದರ ಬಗ್ಗೆ ಕೇಳುತ್ತಾರೆ. ಆಗ ಕಿನ್ನರಿ ಬ್ರಹ್ಮಯ್ಯ ಜೀವಭಿಕ್ಷೆಯನ್ನು ಬೇಡಿ ಬಂದವರನ್ನು ಕೊಲ್ಲುವುದು ಉಚಿತವೇ ಎಂದು ಕೇಳುವನು. ಅದಕ್ಕಾಗಿ ನಾನು ಬೊಪ್ಪಯ್ಯನಿಂದ ಕೊಂಡು "ಸರ್ಪಭೂಷಣನ ಸಾಕ್ಷಿಯ ಮಾಡಿ ಮುದ್ರೆಯಿತ್ತೊಪ್ಪಿಸಿದೆ ತ್ರಿಯಬಂಕಗೆ"[೧೯] ಎಂದು ಹೇಳುತ್ತಾನೆ. ಅಂತೆಯೇ ಲಿಂಗವೇ ಇದಕ್ಕೆ ಸಾಕ್ಷಿ ಎಂದಾಗ ದೇವಾಲಯದ ಲಿಂಗವು ಒಡನೆ "ಶರಣನ ಸ್ತುತಿಗೇ ಶೇಷಭೂಷಣ ಮೆಚ್ಚಿ ಕರುಣದಿ ಮಾತನಾಡಿದನು, ನಿರುತವಹುದು ಮೇಷನ ಕೊಂಡದ್ದುಂಟೆಂದು ಹೇಳಿದನೆಂಬು ವಾಕ್ಯವನು"[೨೦] ಹೀಗೆ ಶರಣರು ಸತ್ಯವಾಚಕರೆಂದು ಕಿನ್ನರಿ ಬ್ರಹ್ಮಯ್ಯನು ತಗರನ್ನು ಕಟುಕನಿಂದ ರಕ್ಷಿಸಿ ಕೀರ್ತಿಯನ್ನು ಪಡೆದನು. ಮುಂದೆ ಈ ಟಗರು ತಿಂದು ಕೊಬ್ಬಿ ಶಿವನ ಪೂಜೆಗೆ ಅಡ್ಡಿಮಾಡುತ್ತದೆ. ಇದಕ್ಕೆ ಶಂಬು ಎಂದು ಸಹ ಕರೆಯಲಾಗುತ್ತಿತ್ತು. ಇದರ ಉಪಟಳ ತಾಳಲಾರದೆ ಬ್ರಹ್ಮಯ್ಯ ತೊಗರಸಿ ಗ್ರಾಮದಲ್ಲಿನ ಶಾಂತಮುತ್ತಯ್ಯನಿಗೆ ಕುರಿಮಂದೆಯಲ್ಲಿ ಬಿಟ್ಟುಬರುತ್ತಾನೆ.

ಆರನೆಯ ಸಂಧಿಯಲ್ಲಿ ಕಲ್ಯಾಣ ಪಟ್ಟಣದಲ್ಲಿ ಕುರುಬರು ಹಾಲು, ಮೊಸರು, ತುಪ್ಪವನ್ನು ಮಾರುವ ಹೈನುಗಾರಿಕೆ ಕಸುಬು ಕೈಗೊಂಡಿದ್ದರು. ತೊಗರಸಿಯಲ್ಲಿದ್ದ ಶಾಂತಯ್ಯನು ಕಲ್ಯಾಣಕ್ಕೆ ಬಂದು ತಗರ ಪವಾಡ ಮಾಡುತ್ತಾನೆ. ಇದು ಕುರುಬರು ಕುಲವಂತರಾಗುವುದನ್ನು ಹೇಳುತ್ತದೆ. ಕುರುಬರು ಕಲ್ಯಾಣ ಪಟ್ಟಣದ ಪೇಟೆಯಲ್ಲಿ ಹಾಲುಮೊಸರು ಮಾರುತ್ತಿರುತ್ತಾರೆ. ಅಲ್ಲಿಗೆ ಶಿವನು ಮಲ್ಲಶೆಟ್ಟಿ, ಸಿದ್ಧಶೆಟ್ಟಿ ಎಂಬಿರ್ವರ ವೇಷಧರಿಸಿ ವ್ಯಾಪಾರ ಮಾಡುತ್ತಿರುತ್ತಾನೆ.

"ಹಟ್ಟಿಕಾರರು ಹಳ್ಳಿಕಾರರು ಅರಿವಿನ
ಹುಟ್ಟು ಅರಿಯದ ಕುರುಬರು
ರಟ್ಟಮತವ ಮಾಡಿದ ಕುಲದವರು ಕಂಬಿ
ಕಟ್ಟಿ ಮಾರಿದರು ಪಾಲ್ಗೊಸರ"[೨೧]

ಕುರುಬನಿಗೆ ಕುಲಕ್ಕಿಂತ ವೃತ್ತಿಯೇ ಮುಖ್ಯ. ಅದಕ್ಕೆ ಅವರು ಕುಲಮೂಲವನ್ನು ಅರಿಯದವರಾಗಿದ್ದರು. ಮಡಿ-ಮೈಲಿಗೆ ಎಂಬ ತಾರತಮ್ಯದಿಂದ ಬಹುದೂರವಿದ್ದಂತಹ ಜನ ಇವರು. ಆದರೆ ಸಮಾಜವೇ ಇವರನ್ನು ಬಹಿಷ್ಕಾರ ಮಾಡಿದಾಗ ಹೋರಾಡುವ ಚೈತನ್ಯವನ್ನು ಆಚರಣೆಯಿಂದ ಪಡೆಯುತ್ತಾರೆ. ಹಾಲು, ಮೊಸರು ಮಾರುವ ಬುಟ್ಟಿಯಲ್ಲಿ ಸತ್ತಕುರಿಯನ್ನು ತಂದರು ಎಂಬ ಕಾರಣಕ್ಕೆ ಕಲ್ಯಾಣದಿಂದ "ಕುರುಬರು ಮೂರು ಲೋಕಕ್ಕೆ ಹೊರಗುಯೆಂದು ಸಾರಿದರು."[೨೨] ಹೀಗೆ ಹೊರಹೋಗಿ ಹನ್ನೆರಡು ವರ್ಷ ಕಳೆದರು. ಕಲ್ಯಾಣಕ್ಕೆ ಒಂದು ಯೋಜನ ದೂರದ ಅಡವಿಯಲ್ಲಿ ಕುರುಬರು ಬದುಕುವರು. ಮನೆಮಠಗಳನ್ನು ಮಾಡಿಕೊಂಡಿರುವರೆಂದು ಕುರುಬಗೌಡನು ಮಲ್ಲಶೆಟ್ಟಿ, ಸಿದ್ಧಶೆಟ್ಟಿಗಳ ವೇಷ ಧರಿಸಿ ಬಂದ ಶಿವನಿಗೆ ಹೇಳುತ್ತಾರೆ. ಗುರುವಿನ ಪಾದವಿಲ್ಲದೆ ಕಷ್ಟದಿಂದ ಜೀವಿಸುತ್ತಿದ್ದೇವೆ. ಈ ಸಮಸ್ಯೆಯ ಪರಿಹಾರಕ್ಕೆ ಕಲ್ಯಾಣಪುರದ ಹನ್ನೆರಡು ಯೋಜನೆಯ ದೂರದಲ್ಲಿ ಸರವೂರಿನ ಶಾಂತಯ್ಯನಿದ್ದಾನೆ. ಅವನೇ ನಿಮಗೆಲ್ಲ ಒಡೆಯ ಎಂದು ಹೇಳುತ್ತಾರೆ. ಇದನ್ನು ಕೇಳಿದ ತಕ್ಷಣ ಗೌಡಪ್ರಜೆಗಳು, ಹೆಗ್ಗೊಂಡಗೌಡ, ಉದಯಗಿರಿಯ ಕೇತಗೌಡ, ಸೊನ್ನಲಿಗೆಯ ಕೆಂಪೆಗೌಡ, ಮಳೆಯಬೇಡದ ಸಿದ್ದೇಗೌಡ, ಹೇಮಾವತಿಯಲ್ಲಿನ ಜಿಗದೇವಗೌಡ, ಸೊನ್ನಲಪುರದ ಸಿರಿಗೌಡ, ಕಾಮನಹಳ್ಳಿಯ ಕರಿಯ ತಿಮ್ಮೇಗೌಡ, ರಾಮೇಗೌಡ, ಲಕ್ಕೇಗೌಡ, ಅಂಕನಹಳ್ಳಿಯ ಆದಿಗೊಂಡ, ರೇವಣ್ಣರು, ಬಂಕಾಪುರದ ಭದ್ರಗೌಡ, ಶಂಕರಪುರದ ರಾಮಣ್ಣಗೌಡರಿಗೆ ಸುದ್ದಿ ತಿಳಿಸಿ ಸರವೂರಿಗೆ ಬಂದರು. ಕೆಟ್ಟ ಕುಲವನ್ನು ಒಳಗೂಡಿಸು ಗುರುವೇ ಎಂದು ಎಲ್ಲರೂ ಬೇಡುವರು. ಏನು ಬೇಡಿದರೂ ಕೊಡುತ್ತೇವೆ. ಮಾನವನನ್ನು ಕಾಯಬೇಕು ಗುರುವೆಂದು ಕೇಳಿಕೊಳ್ಳುವರು. ಅಷ್ಟರಲ್ಲಿ ಶರಣ ಬ್ರಹ್ಮಯ್ಯ ಕುರಿ ಮಂದಿಯಲ್ಲಿ ಬಿಟ್ಟ ಮೇಷ ಸತ್ತಿತೆಂದು ಸುದ್ದಿಬರುತ್ತದೆ. ಸತ್ತ ಕುರಿಯನ್ನು ಪುಷ್ಪದಿಂದ ಅಲಂಕರಿಸಿ ಕಾಳೆವಾದ್ಯಗಳು, ವಿವಿಧ ಹೂಗಳಿಂದ ಸರಗಳನ್ನು ಮಾಡಿ ಹಾಕುವರು. ಅದನ್ನು ಸರ್ಪಭೂಷಣ ಕಲ್ಯಾಣಕ್ಕೆ ಸಂಭ್ರಮದಿಂದ ತರುತ್ತಾರೆ. ಇದನ್ನು ಕಂಡ ಶರಣರು ಕಲ್ಯಾಣದ ಹೊರಗಡೆಯೆ ನಿಲ್ಲಿಸುತ್ತಾರೆ. ನಿರ್ಜೀವಿಯಾದ ತಗರನ್ನು ತಂದು ಅಪಕೀರ್ತಿ ತರಬೇಡಿ, ಸತ್ತದನ್ನು ಹೊತ್ತುಕೊಂಡು ಊರ ಹೊರಗೆ ಒಯ್ಯದೆ ಪೇಟೆಯೊಳಗೆ ತರುವುದು ಉಚಿತವೆಂದು ಕುರುಬರನ್ನು ನಿಂದಿಸುವರು. ಕೋಪಗೊಂಡ ಶಾಂತಯ್ಯನು ಎಚ್ಚರಿಕೆಯಿಂದ ಮಾತಾಡಿ, ರೇವಣಸಿದ್ಧರ ಹರಿಕೆಯಂತೆ ಸತ್ತ ತಗರನ್ನು ಬದುಕಿಸದೆ ಹೋದರೆ, ನಿಮ್ಮ ಚರಣಕ್ಕೆ ಶಿರವನ್ನೊಪ್ಪಿಸುವೆನೆಂದು ಪ್ರತಿಜ್ಞೆ ಮಾಡುವನು.

ಇದನ್ನು ಕಂಡ ಬಸವೇಶ್ವರರು ಭೂಮಿಯಲ್ಲಿಯೇ ಈ ಪವಾಡ ಹೊಸದು ಆಶ್ಚರ್ಯಕರವಾಗಿದೆ. ಬಿಜ್ಜಳ, ಬಸವೇಶ್ವರರಾದಿಯಾಗಿ ಸಮಸ್ತ ಪುರುಜನರು ಸೇರಿದರು. ಹಾಗೂ ಬಸವಣ್ಣರ ಅನುಯಾಯಿಗಳಾದ ಅನೇಕ ಶರಣರು ಬರುತ್ತಾರೆ. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರು, ಮಿಕ್ಕ ಗಣಂಗಳನ್ನು ಎಣಿಸಲಿಕ್ಕೆ ಆಗುವುದಿಲ್ಲ ಎಂದು ಪವಾಡಕ್ಕೆ ನೋಡಲು ಬಂದವರ ಸಂಖ್ಯೆಯನ್ನು ಹೇಳುತ್ತದೆ.

ಈ ಸಂಧಿಯಲ್ಲಿ ಕುರುಬರು ಬಿಜ್ಜಳನನ್ನು, ಜೊತೆಗೆ ಕಲ್ಯಾಣದ ಕುರುಬರ ನಿಂದಿಸಿದವರನ್ನು ಹೇಗೆ ಅವಮಾನಿಸುತ್ತಾರೆಂದು ತಿಳಿಸಿಕೊಡುತ್ತದೆ. ಇದಕ್ಕೆ ಸಾಕ್ಷಿಯಾಗಿ ಊರಿನ ಜನರು, ಶರಣರು, ಗಣಗಳು ನೆರೆದಿದ್ದರೆಂದು ನ್ಯಾಯ ತೀರ್ಮಾನವೂ ಸರ್ವರ ಸನ್ನಿಧಿಯಲ್ಲಿಯೇ ಆಯಿತೆಂದು ತಿಳಿಸುತ್ತದೆ.

ಏಳನೆಯ ಸಂಧಿಯಲ್ಲಿ ಶಾಂತಯ್ಯನ ಕುಲದ ದೃಢತೆ, ನಿಷ್ಠೆ, ಶ್ರೇಷ್ಠತೆಯನ್ನು ತಿಳಿಸುತ್ತದೆ. ಶಿವನಿಗೆ ಶಾಂತಯ್ಯ ಈ ರೀತಿಯಾಗಿ ಕೇಳುತ್ತಾನೆ. ಹಿಂದಿನ ಶರಣರು ನಾಲ್ಕೈದು ಪವಾಡ ಮಾಡಿ ಮೆರೆದಿದ್ದಾರೆ. ಆದರೆ ನನಗೆ ಒಂದೇ ಪವಾಡದಿಂದ ಮಹಾತ್ಮೆಯನ್ನು ದಯಪಾಲಿಸೆಂದು ಕೇಳುವನು. ಅಲ್ಲಿ ನೆರೆದಿದ್ದ ಶರಣರೆಲ್ಲರೂ ಆಶ್ಚರ್ಯದಿಂದ ಮುಖ ನೋಡಿಕೊಳ್ಳುತ್ತಾರೆ. ಶಾಂತಯ್ಯ ಬಸವಾದಿ ಶರಣರಿಗೆ ವಂದಿಸಿ, ಬಸವಣ್ಣ ಕೊಟ್ಟ ವಿಭೂತಿಯಿಂದ

"ಸೃಷ್ಟಿಗೆ ಕೈಲಾಸ ಕಲ್ಯಾಣಪುರದಲ್ಲಿ
ಕೆಟ್ಟ ಜನರು ಕೆಲರಿಹರು
ಬಿಟ್ಟಾಡುವುದೇನು ಕೊಟ್ಟು ವರವ ದಯ
ವಿಟ್ಟು ತಗರನೆಬ್ಬಿಸೆಂದ"[೨೩]

ವಿಭೂತಿ, ತೀರ್ಥದಿಂದ ತಗರನ್ನು ಎಬ್ಬಿಸುತ್ತಾನೆ. ಟಗರು ಶಿವಾಲಯದ ಕಂಬಕ್ಕೆ ಗುದ್ದುತ್ತದೆ. ಹೀಗೆ ಶಾಂತಯ್ಯ ಕುರುಬರ ದೃಢ ನಿರ್ಧಾರ, ಅಚಲ ಭಕ್ತಿ, ನಿಷ್ಠೆ, ಶ್ರದ್ಧೆಯನ್ನು ಎಲ್ಲರೂ ಹೊಗಳುವಂತೆ ಮಾಡುತ್ತಾನೆ. ಈ ಶಾಂತಯ್ಯನೆ ರಟ್ಟುಮತದ ಕುಲದವನುದ್ಧರಿಸಿದಾತ, ಕುಲಗುರು, ಗುರು ಒಡೆಯನೆಂದು ಹೆಸರು ಪಡೆಯುತ್ತಾನೆ.

"ಕುಲಕೆ ದೊಡ್ಡವನಲ್ಲ ಕುಲಕೆ ಮಿದೊನಲ್ಲ
ಕುಲಕ್ಕಿಂತ ಅಧಿಕ ತಾನಲ್ಲ
ಕುಲವುಯೆಂಬುದು ತನ್ನ ಛಲ ಬಿರಿದೆನುತ ಲಿ
ಕುಲವನೆತ್ತಿದನು ಶಾಂತಯ್ಯ"[೨೪]

ಎಂದು ಉದ್ಗರಿಸುತ್ತಾರೆ. ಕುರುಬರಿಗೆಲ್ಲಾ ಶಾಲುಡುಗೊರೆಯನ್ನು ಬಿಜ್ಜಳನು ಕೊಡುವನು. ಹೀಗೆ ಕುಲಕ್ಕೆ ಒಡೆಯನಾಗಿ ಮಾಡಿದ ಕುರುಹುಗಾಗಿ "ಮೂರುಲೋಕಕೆ ಪ್ರಜ್ವಲಿತಹ ಕುಲವೆಂದು ಮೂರೇಣಿನ ಕಂಥೆಯನಿತ್ತ."[೨೫] ಇತ್ತ ಕಲ್ಲಿನಲ್ಲಿ ಅಡಗಿದ ಲಿಂಗದಂತಿರಬೇಕು ಭಕ್ತಿ, ಜಲದೊಳ ತಾವರೆ ಹುಟ್ಟಿದಾಗೆ ಪೂಜ್ಯತೆಯನ್ನು ಹೊಂದಬೇಕೆಂದು ವರ್ಣಿಸುತ್ತಾರೆ. ಈ ರೀತಿಯಾಗಿ ಸರವೂರಿಗೆ ಶಾಂತಯ್ಯನನ್ನು ಉತ್ಸವದಲ್ಲಿ ಮೆರೆಸುವರು. ಜೊತೆಗೆ ಬಸವಣ್ಣನೇ ಸರವೂರಿಗೆ ಹೋಗಿ ಅಲ್ಲಿನ ಅತಿಥಿ ಸತ್ಕಾರಕ್ಕೆ ಮಾರುಹೋಗುವನು. ಇದೆಲ್ಲಾ ಕಥೆಯನ್ನು ಕೇತಾರ ಕಾಶಿ ಎಂಬುವನು ಕಲ್ಯಾಣದ ಕೀರ್ತಿಯನ್ನು ಕಥೆಯಾಗಿ ಹೇಳುತ್ತಾನೆಂದು ತಿಳಿದುಬರುತ್ತದೆ. ಈ ಪವಾಡ ಸತ್ಯವೆಂಬುದಕ್ಕೆ ಈಗಲೂ ಟಗರಿನ ಕೊಂಬುಗಳಿಗೆ ಶಾಂತಯ್ಯ ಹಿಡಿದ ಕೈಬೆರಳಿನ ಗುರುತುಗಳಿವೆಂದು ನಂಬಿಕೆಯಿದೆ. ಜೊತೆಗೆ ಮೂರೇಣಿ ಕಂತೆ ಸೇವೆಯು ಇಂದಿಗೂ ಮುದ್ದೇಬಿಹಾಳನ ಸರವೂರಿನಲ್ಲಿ ಪ್ರತಿವರ್ಷವು ರೇವಣಸಿದ್ಧರಿಗೆ ಸಲ್ಲಿಸುವ ಸೇವೆಯಾಗಿದೆ. ಇದರಿಂದ ಹಾಲುಮತದವರ ಐತಿಹಾಸಿಕ ಚರಿತ್ರೆಯು ಕಂಡುಬರುತ್ತದೆ.

ಬಸವಣ್ಣನವರೇ ಕುರುಬರಿಗೆ ಉಡುಗೊರೆ ನೀಡಿ, ಭಸಿತವಿಟ್ಟು, ಸುಖದಿಂದ ಹಾಲುಮತದವರೆನಿಸಿ ಎಂದು ಹರಸುತ್ತಾ, ಹಾಲುಮತದ ಕುಲದವರಿಗೆ ಶಾಂತಯ್ಯಲೋಲನೆ ಗುರುವಾಗು, ಕ್ಷೀರಕುಲಕ್ಕೆ ಒಡೆಯನಾಗು ಎಂದು ಹರುಸುವುದನ್ನು ನೋಡಿದರೆ ಕುರುಬರು ಕಲ್ಯಾಣಪುರದಲ್ಲಿ ತುಂಬಾ ಅವಮಾನಕ್ಕೆ ಗುರಿಯಾಗಿದ್ದರು. ಕಾರಣವೆಂದರೆ ಕಟ್ಟುಲಿಂಗದವರ ಸಂಗಡ ಹುಟ್ಟುಲಿಂಗದವರು ಸರಿಸಮಾನಾಗಿ ಬದುಕಲು ಅಸಾಧ್ಯ ಹಾಗಾಗಿಯೇ ಕಲ್ಯಾಣದಿಂದ ಕುರುಬರನ್ನು ಹೊರಹಾಕಲಾಗಿರಬಹುದು. ಇದರ ಪ್ರತಿರೋಧವಾಗಿ ಮೂಡಿದ ಕಥೆಯೇ ಈ ತಗರ ಪವಾಡ. ವರ್ಗ ಸಂಘರ್ಷವನ್ನುಂಟು ಮಾಡುವವರನ್ನು ಪವಾಡದ ಮೂಲಕ ಸೋಲಿಸುವ ವ್ಯಕ್ತಿತ್ವ ಶಾಂತಯ್ಯನಿಂದ ನೆರವೇರಿದೆ. ಶಾಂತಮುತ್ತಯ್ಯ ಕೇವಲ ಪವಾಡ ಪುರುಷನಾಗಿರದೆ ಇಡೀ ಕುರುಬ ಕುಲದ ಉದ್ಧಾರಕನಾಗಿದ್ದು, ಆ ಕುಲಕ್ಕೆ ಬೆಳಕು ತಂದ ಸೂರ್ಯ, ಕ್ರಾಂತಿ ಪುರುಷ, ಚಳುವಳಿಗಾರನೆಂದರೆ ಅತಿಶಯವಲ್ಲ.

**ಹಾಲುಮತ ಪುರಾಣ**

'ಹಾಲುಮತ ಪುರಾಣ' ಈ ಕೃತಿಯನ್ನು ೧೯೧೦ರಲ್ಲಿ ಶ್ರೀ ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಎಂಬುವರು ಓಲೆಪ್ರತಿಯಿಂದ ಮುದ್ರಣ ಮಾಡಿಕೊಟ್ಟಿದ್ದಾರೆ. ಈ ಪುಸ್ತಕವನ್ನು ೧೯೧೦ನೇ ಇಸ್ವಿಯಲ್ಲಿ ಲಕ್ಷ್ಮೇಶ್ವರ ಧಾರ್ಮಿಕ ಹಾಲುಮತ ಮಹಾಸಭೆಯಲ್ಲಿ ಪುಕ್ಕಟೆಯಾಗಿ ಜಾಹಿರಮಾಡಿ ಕೊಟ್ಟಿರುವುದಾಗಿ ಪುರಾಣದ ಸಂಗ್ರಹಕಾರರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಇದರಿಂದ ಈ "ಹಾಲುಮತ ಪುರಾಣ" ಕೃತಿಯ ಕರ್ತೃ ಯಾರೆಂದು? ಯಾವ ಕಾಲಮಾನದಲ್ಲಿ ರಚನೆಯಾಗಿತೆಂದು ತಿಳಿಯುವುದು ಕಷ್ಟಕರವಾಗಿದೆ.

ಈ ಪುರಾಣವು ಒಟ್ಟು ಐದು ಸಂಧಿಯನ್ನು ಒಳಗೊಂಡಿದೆ. ಮೊದಲಿನ ಸಂಧಿಯಲ್ಲಿ ಹಾಲುಮತದ ಗುರುವಿಗೆ ನಮಸ್ಕರಿಸಿ ಈ ಕೃತಿಯನ್ನು ರಚಿಸುತ್ತಿರುವೆನು ಎಂದು ಆರಂಭಿಸಲಾಗಿದೆ.

ಕರಿಯ ಕಂಬಳಿ ಕಂಥೆ ಕರದಲ್ಲಿ ಕಪ್ಪರ ।
ವರನಾಗ ಬೆತ್ತವ ಪಿಡಿದು ॥
ಧರಿಯ ಬ್ರಹ್ಮಾಂಡವ ಚರಿಸಿ ಭಿಕ್ಷವ ಕೇಳ್ವೆ ।
ಸರವೂರು ಸಿದ್ದೇಶ್ವರಗೆ ಶರಣು ।[೨೩]

ಎಂಬ ಪದ್ಯಗಳಿಂದ ಸಿದ್ದೇಶ್ವರನನ್ನು ಸ್ಮರಿಸುತ್ತಾನೆ. ನಂತರ ಎಲ್ಲ ಪುರಾಣಗಳಲ್ಲಿ ಪೂರ್ವ ಕವಿಗಳನ್ನು ಗೌರವಿಸುವಂತೆ ಈ ಕೃತಿಯ ಕರ್ತೃ ಕೂಡ ವರಕವಿ ಗಮಕಿಗಳಾದ ವಾಲ್ಮೀಕಿಯನ್ನು ಹಾಗೂ ಪಂಪಾಕ್ಷೇತ್ರದ ವಿರೂಪಾಕ್ಷಲಿಂಗವನ್ನು ಅಭಿನಂದಿಸುತ್ತಾನೆ. ಈ ಮೂಲಕವಾಗಿ ಕಥೆಯು ಕೈಲಾಸದಿಂದ ನಡೆಯುತ್ತದೆ. ಶಿವಪಾರ್ವತಿಯರು ನಾಟ್ಯದೋಲಗದಲ್ಲಿ ಸಭೆ ಸೇರಿರುತ್ತಾರೆ. ಇಲ್ಲಿಗೆ ಬಂದ ಶಿವಭಕ್ತ ಭೃಂಗೀಶನು ಒಂದು ಕೈಯಿಂದ ಶಿವನಿಗೆ ನಮಸ್ಕಾರ ಮಾಡುತ್ತಾನೆ. ಅದಕ್ಕೆ ಪಾರ್ವತಿಯು

"ಕರವೆರಡಿರಲಿಕ್ಕೆ ಕರವೊಂದು ಮುಗಿವಂಥ ।
ಪರಿಯಿದೇನೆಂದು ಕೇಳಿದಳು ॥[೨೪]

ಪ್ರತಿಯಾಗಿ ಭೃಂಗೀಶನು ಜಗಕ್ಕೆ ಶಿವನೊಬ್ಬನೆ ಒಡೆಯ ಆದಕ್ಕಾಗಿ ಒಂದೇ ಕೈಯಲ್ಲಿ ಮುಗಿದೆನೆಂದು ಹೇಳುತ್ತಾನೆ. ಪಾರ್ವತಿಯು ನಮ್ಮ ಅಂತ ನಿಮ್ಮಂಗದಲ್ಲಿ ಇಲ್ಲ ಎಂದು ಕೇಳಿದಾಗ ಭೃಂಗಿಯು ಚರ್ಮವನ್ನು ಕಿತ್ತೆಗೆದು ರುದ್ರನಿಂದಾದ ಅಸ್ತಿಯ ಶರೀರ ಪಡೆಯುತ್ತಾನೆ. ಹೀಗೆ ಪಾರ್ವತಿ ಮತ್ತು ಭೃಂಗೀಶರ ನಡುವಿನ ಪೈಪೋಟಿಯನ್ನು ಕಂಡು ಗಂದರ್ವ ಕಿನ್ನರರು ನಗುತ್ತಾರೆ. ಈ ಪಾಪಕ್ಕೆ ಗಂಧರ್ವರು

"ಕುರಿ ಜನ್ಮ ನಿಮಗಾಗಿ ಹರಣ ನೀಗಿರಿ ನೀವೆಂದು ।
ಹರಸತಿ ಶಾಪವಿತ್ತಳಂದವರ್ಗೆ ॥[೨೫]

ಮುಂದೆ ನಕ್ಕವರು ಮೂಢ ಕುರಿಯಾಗಿ, ಹಿಂದೆ ನಕ್ಕವರು ಮೇಕೆಗಳಾಗಿಸಿ ಶಿವ–ಪಾರ್ವತಿಯರು ಕುರಿಗಳನ್ನು ಕಾಯಲು ದೇವತೆಗಳಿಗೆ ವಹಿಸುತ್ತಾರೆ. ಕೊನೆಗೆ ಶಿವನು ಕುರಿಗಳ ಕಾಯಲು ಕೈಲಾಸದಿಂದ ವೇಷ ಬದಲಿಸಿಕೊಂಡು ತಮ್ಮ ಮುರಕ್ಕೆ ಬರುತ್ತಾನೆ. ಅಲ್ಲಿ ಗೌಡನಾದ ಆದಿಗೊಂಡನ ಬಳಿಯಲ್ಲಿ ರೇವಣಸಿದ್ಧನಾಗಿ ಭೂಮಿಯನ್ನು ಬೇಡಲು

"ಕರದಲ್ಲಿ ಕಪ್ಪರ ಶಿರದಲ್ಲಿ ಕಿರಿಜಡೆ ।
ಕರೆಯ ಕಂಬಳಿಯು ಪುಲಿಯ ಚರ್ಮ ॥

ಉರುಗನಾಭರಣವು ಉಲಿವ ಜಂಗುಗಳಿಂದ ।

ಮೆರೆವ ತ್ರಿಶೂಲವ ಪಿಡಿದು ॥"[೨೯]

ವೇಷ ಧರಿಸಿ, ರೇವಣಸಿದ್ಧನೆಂಬ ನಾಮಧೇಯನಾಗಿ ಭಿಕ್ಷೆಗೆ ಬರುತ್ತಾನೆ. ಆದಿಗೊಂಡನಲ್ಲಿ ಐದು ಮೊಳ ಭೂಮಿಯನ್ನು ಪಡೆದನು. ತ್ರಿಶೂಲದಿಂದ ಭೂಮಿಯನ್ನು ತಿವಿದು ಗುಹೆಯಾಗಿ ಅದರಲ್ಲಿ ಕುರಿಗಳನ್ನು ಹೋಗಿಸಿ, ಗಿರಿಜೆಯ ಮೂಗುತಿಯನ್ನು ಮುದ್ರೆಯಾಗಿರಿಸಿ, ಮುಚ್ಚಿದ ಕಂತೆಯ ಮೇಲೆ ಹುತ್ತು ಬೆಳೆಯುವಂತೆ ಮಾಡುತ್ತಾನೆ. ಹೀಗೆ ಒಂದನೆ ಸಂಧಿಯಲ್ಲಿ ಕುರಿಗಳನ್ನು ಕೈಲಾಸದಿಂದ ತಂದು ಭೂಮಿಯಲ್ಲಿ ವಾಸಿಸಲು ಅವಕಾಶ ಮಾಡಿಕೊಡುವುದಕ್ಕೆ ಗಂಧರ್ವರ ಶಾಪವು ಪ್ರಮುಖ ಅಂಶವಾಗಿ ಕಂಡುಬರುತ್ತದೆ.

ಎರಡನೆ ಸಂಧಿಯಲ್ಲಿ ರೇವಣಸಿದ್ಧರು ಪೃಥ್ವಿಗೆ ಬರುವುದರ ಮೂಲಕ ಸರುವೂರ ಪುರವನ್ನು ಕಂಡು ಹರುಷಪಡುತ್ತಾನೆ. ಕಾರಣ ಮುದ್ದುಗೊಂಡನ ಪತ್ನಿಯಾದ ಸುಗ್ಗಲ ದೇವಿಯ ಬಳಿಗೆ ಬಂದು ಶಿವನೇ ನಿನ್ನ ಗರ್ಭದಲ್ಲಿ ಜನಿಸಿ ಬರುತ್ತಾನೆಂದು ಆಶೀರ್ವಾದ ಮಾಡುತ್ತಾರೆ. ಅದೇ ರೀತಿಯಾಗಿ ಸುಗ್ಗಲೆಯು

"ವರ ಕರ್ನದಿಂದಲೆ ಜನಿಸಿ ॥

ಮರುಳಸಿದ್ಧೇಶನು ಧರೆಗೆ ಸಂಜನಿಸಲು ।

ಕರೆಯಿತು ಪುಷ್ಪದ ಮಳೆಯು ॥"[೩೦]

ಹೀಗೆ ಮಗುವನ್ನು ಪಡೆಯುತ್ತಾಳೆ. ಆ ಶಿಶುವಿಗೆ ಸಿದ್ಧರಾಮಯ್ಯನೆಂದು ನಾಮಕರಣ ಮಾಡುತ್ತಾರೆ. ಈ ಸಂಧಿಯಲ್ಲಿ ಸಿದ್ಧರಾಮನ ಬೆಳವಣಿಗೆಯ ಹಂತಗಳು ಕಾಣುತ್ತವೆ. ಜೊತೆಗೆ ತಾಯ್ತಂದೆಯರು ಮಗನ ಮೇಲೆ ಮಮತೆಯನ್ನು ತೋರಿಸುವುದಕ್ಕೆ ಆಗದೆ ಕೊರಗುವುದು ವ್ಯಕ್ತವಾಗಿದೆ. ಈತನು ಯಕ್ಕಯ್ಯ-ಜೋಗಯ್ಯ ಎಂಬುವರ ಜೊತೆ ದನಕರುಗಳ ಕಾಯುವುದಕ್ಕೆ ಹೋಗುತ್ತಾನೆ. ಅಲ್ಲಿ ಎಲ್ಲ ದನಗಾಯಿಗಳಂತೆ ಉಣ್ಣದೆ ತಿನ್ನದೆ ಕಲ್ಲುಲಿಂಗಕ್ಕೆ ಪೂಜೆಯನ್ನು ದಿನನಿತ್ಯ ಮಾಡುತ್ತಿರುತ್ತಾನೆ. ಈ ಪೂಜೆಯಿಂದ ತೃಪ್ತನಾದ ಮಲ್ಲಯ್ಯನು ನಿಜರೂಪ ಬದಲಿಸಿ ಸಿದ್ಧರಾಮನ ಹತ್ತಿರ ಭಿಕ್ಷೆಗೆ ಬರುತ್ತಾನೆ. ಹಸಿವನ್ನು ಅಂಬಲಿಯಿಂದ ನೀಗಿಸಲು ಬೇಡಿಕೊಳ್ಳುತ್ತಾನೆ. ಆಗ ಮರುಳಸಿದ್ಧರಾಮನು ತಾಯಿ ಹತ್ತಿರ ಬಂದು ಬುತ್ತಿಯನ್ನು ಕಟ್ಟಿಸಿಕೊಂಡು ಹೋಗುವನು. ಆದರೆ ಅಷ್ಟರಲ್ಲಿ ಮಲ್ಲಯ್ಯನು ಮಾಯವಾಗುತ್ತಾನೆ. ಮೂಕ ಮಗನ ಮಾತಿನಿಂದ ತೃಪ್ತರಾದ ದಂಪತಿಗಳು ಸಂತೋಷದಿಂದ ಇರುತ್ತಾರೆ. ಆಗ ಅಲ್ಲಿನ ಎಲ್ಲರನ್ನು ಮಲ್ಲಯ್ಯನು ಎಲ್ಲಿ ಹೋದನೆಂದು ವಿಚಾರಿಸುತ್ತಾನೆ. ಆಗ ಪರ್ವತಕ್ಕೆ ಹೊರಟ ಜನರು ಶ್ರೀಶೈಲದಲ್ಲಿರುವುದಾಗಿ ಹೇಳಿದಾಗ ಮಂಕುಸಿದ್ಧರಾಮನು ಕಲ್ಲು, ಮರಡಿಯನ್ನದೆ ಹುಡುಕುತ್ತಾ ಹೋಗುವನು. ಪರ್ವತದಲ್ಲಿನ ಶ್ರೀಶೈಲ

ಮಲ್ಲಿಕಾರ್ಜುನನ ಮೂರ್ತಿ ನೋಡಿ ಈತನು ಮಲ್ಲಯ್ಯ ಅಲ್ಲ ಎಂದು ವಾದಿಸುತ್ತಾನೆ. ಮಲ್ಲಯ್ಯನು ಬರದಿದ್ದಾಗ ಪರ್ವತದಿಂದ ಧುಮುಕಲು ಹೋದಾಗ ಮಲ್ಲಿಕಾರ್ಜುನನು ಪ್ರತ್ಯಕ್ಷನಾಗುತ್ತಾನೆ. ತಂದ ಬುತ್ತಿಯನ್ನು ಸೇವಿಸಿ ಮರುಳಸಿದ್ಧನೆಂದು ಹೆಸರಿನಿಂದ ಸಿದ್ಧರಾಮನನ್ನು ಕರೆಯುತ್ತಾನೆ.

ಮೂರನೆ ಸಂಧಿಯಲ್ಲಿ ಸಿದ್ಧರಾಮನೆ ಮಂಕುಸಿದ್ಧರಾಮನಾಗಿ, ಮರುಳಸಿದ್ಧನಾಗಿ ತಪಸ್ಸು ಕೈಗೊಂಡ ಕಥೆಯನ್ನು ಬಿತ್ತರಿಸುತ್ತದೆ. ಮರುಳಸಿದ್ಧನನ್ನು ಕರೆದು ಶ್ರೀಗಿರಿ ಮಲ್ಲಯ್ಯನು

> "ವರತಪೋಧನನು ನೀನಾಗು ॥
> ಇರುಹೋಗು ನಿನ್ನ ಚಿತ್ತಕ್ಕೆ ಬಂದಲ್ಲೆಂದು ।
> ಹರ ಕರುಣಿಸಿ ಉಪನಯನಾ ॥
> ಸೂಜಿ ಹನ್ನೆರಡು ದಬ್ಬಣವೆ ಈರಾರು ।
> ವಾಜಿಲಿ ಕೊಟ್ಟ ಬಾಲಕಗೆ ॥
> ತಾಜಮೆ ಮಾಡಿದ ಶಕ್ರಮುಖವು ।
> ಗುಂಜಿ ಸಾಧಿಸಿ ತೂಗು ಭೂಮಿಯನು ॥"[೨೧]

ಎಂದು ಆಶೀರ್ವಾದ ಮಾಡುತ್ತಾನೆ. ಮರುಳಸಿದ್ಧನಿಗೆ ಸ್ಥಳದ ಆಯ್ಕೆಯಲ್ಲಿ ಸ್ವತಂತ್ರವನ್ನು ಶ್ರೀಗಿರಿ ಮಲ್ಲಯ್ಯನು ಕೊಟ್ಟಿರುವುದು ವಿಶೇಷವಾಗಿದೆ. ಶಿವನ ಮಾತಿನಂತೆ ಸಿದ್ಧನು ಗುಂಜಿಯನ್ನು ತೂಗುತ್ತಾ ಹೆಚ್ಚು ತೂಕವಿದ್ದ ಕ್ಷೇತ್ರದಲ್ಲಿ ತಪಸ್ಸನ್ನು ಕೈಗೊಳ್ಳಲು ಮುಂದಾಗುವನು.

> "ತೂಗುತ ಬರಲು ಧರೆಯೊಳಗೆ ।
> ತೂಗುಡ್ಡವೆಂಬಾಸ್ಥಳದಲ್ಲಿ ॥
> ತೂಗಿ ನೋಡಲು ಭೂಮಿಯ ತೂಕ ವೆಗ್ಗಳವಾಗಿ
> ಜಾಗ ಮಾಡಿದ ಸ್ಥಲವಾ ॥"[೨೨]

ಹೀಗೆ ಸಿದ್ಧಮಂಕನು ಕೋಡುಗಲ್ಲಿನ ಮೇಲೆ ತಪಸ್ಸಿಗೆ ಗುರುತನ್ನು ಮಾಡುತ್ತಾನೆ. ಅಲ್ಲಿ ಗುಲಗಂಜಿ ಸೂಜಿಯ ಮೇಲೆ ನಿಲ್ಲಿಸಿ, ದಬ್ಬಣದಿಂದ ಅಡಿಕೆಗಳನ್ನು ಒಲಿಯುತ್ತಾರೆ. ನಂತರ ಶಿರವನ್ನು ಅಡಿಯಾಗಿಸಿ ಚರಣವನ್ನು ಮೇಲಾಗಿಸಿ ತಪಸ್ಸಿಗೆ ಅಣಿಯಾಗುತ್ತಾನೆ. ಅಲ್ಲದೆ ಈ ಸಂಧಿಯಲ್ಲಿ ಆದಿಗೊಂಡನ ವಂಶವನ್ನು ತಿಳಿಸುತ್ತದೆ. ಈತನಿಗೆ ಆಮಗೊಂಡ, ಶಿವಗೊಂಡ, ಬೆಟ್ಟದ ಬೀರುಗೊಂಡ, ಮಾದೇವನೊಲಿಸಿದ ಮಾರುಗೊಂಡ, ಕಾಡಿಹ ಮೊರಡೆ ಮುದ್ದುಗೊಂಡ, ಕಡೆಹುಟ್ಟಿದ ಉಂಡಾಡು ಪದ್ಮಗೊಂಡನ ಚರಿತ್ರೆ ಸವಿಸ್ತಾರವಾಗಿ ಹೇಳುತ್ತಾನೆ. ಇವರೆಲ್ಲಾ ಸೇರಿ ಭೂಮಿಯನ್ನು ಉಳುಮೆ ಮಾಡುತ್ತಾರೆ. ಆದರೆ ಉಂಡಾಡಿ

ಪದ್ಮಗೊಂಡನು ಯಾವ ಕೆಲಸಕ್ಕೆ ಹೋಗದೆ ಕಾಲಕಳೆಯುತ್ತಾನೆ. ಇದನ್ನು ಕಂಡ ತಾಯಿಯು ಹೊಲ ಉಳಲು ಹೋಗೆಂದು ಕಳಿಸಿಕೊಡುತ್ತಾಳೆ. ತಾಯಿ ಮಾತನ್ನು ಕೇಳಿ ಪದ್ಮಗೊಂಡನು ಹೊಲಕ್ಕೆ ಹೋಗಿರುವಾಗ ಹುತ್ತಕ್ಕೆ ಮಡಿಕೆಯನ್ನು ಹಾಯಿಸುತ್ತಾನೆ. ಆಗ ಹುತ್ತದಲ್ಲಿದ್ದ ಕುರಿಗಳು ವಿವಿಧ ಬಣ್ಣಗಳೊಳಗೊಂಡು ಹೊರ ಬರುತ್ತವೆ. ಇಲ್ಲಿಂದ ಪದ್ಮಗೊಂಡನು ವ್ಯವಸಾಯದಿಂದ ದೂರವಾಗಿ ಕುರಿಯ ಸಾಕಾಣಿಕೆಯನ್ನು ಕೈಗೊಂಡ ದೃಶ್ಯವು ಬಿಟ್ಟಿಕೊಳ್ಳುತ್ತಾ ಹೋಗುತ್ತದೆ.

ಕುರಿಯನ್ನು ಕಾಯುವುದರ ಮೂಲಕ ಬೆಂಕಿಯನ್ನು ಕಂಡುಹಿಡಿಯುತ್ತಾನೆ. ಹಾಲಿನಿಂದ ಗಿಣ್ಣ ತಯಾರಿಸುವುದನ್ನು ತಿಳಿಸಿಕೊಡುತ್ತಾರೆ. ರೇವಣಸಿದ್ಧನ ಕೃಪೆಯಿಂದ ಕಾಡಿನಲ್ಲಿದ್ದ ರಾಕ್ಷಸಿಯನ್ನು ಕೊಂದು ರಕ್ಕಸಿಯ ಸಾಕುಮಗಳಾದ ಚೆನ್ನಮ್ಮಳನ್ನು ಮದುವೆ ಮಾಡಿಸುತ್ತಾರೆ. ಈ ವೈವಾಹಿಕದ ಮೂಲಕ ಉಣ್ಣೆಕಂಕಣವು ಕುರುಬರಲ್ಲಿ ಕಂಡುಬರುತ್ತದೆ. ಸತ್ತ ರಕ್ಕಸಿಯು ಕುರಿ ಹಿಂಡಿನಿಂದೆ ತೋಳವಾಗಿ ಬರುವುದನ್ನು ತಿಳಿಯಬಹುದು. ಕಂಬಳಿಯನ್ನು ಕುರಿಯ ಉಣ್ಣೆಯಿಂದ ತಯಾರಿಸುವುದು. ಉಣ್ಣೆ ಕತ್ತರಿಸುವುದಕ್ಕೆ ಕಮ್ಮಾರನ ಸೃಷ್ಟಿಯನ್ನು ಮಾಡಲಾಗಿದೆ. ಇದರಿಂದ ಕುರುಬರ ವೃತ್ತಿಯು ಹಲವಾರು ಜನರ ಜೀವನಕ್ಕೆ ಆಶ್ರಯವಾಗಿದೆ ಎನ್ನಬಹುದು. ಹೀಗೆ ಮೂರನೆ ಸಂಧಿಯು ಕಂಬಳಿಯಿಂದ ಕುರುಬರು ಉಪಜೀವನವನ್ನು ನಡೆಸುತ್ತಾರೆಂದು ಹೇಳುತ್ತಾ ಅದೇ ಮುಂದೆ ಪವಿತ್ರವಾದ ಸಂಪ್ರದಾಯವಾದುದ್ದನ್ನು ತಿಳಿಯಪಡಿಸುತ್ತದೆ.

ನಾಲ್ಕನೆಯ ಸಂಧಿಯಲ್ಲಿ ಪದ್ಮಗೊಂಡನು ಕಾಡಿನಿಂದ ನಾಡಿಗೆ ಬರುವುದನ್ನು ಹೇಳುತ್ತದೆ. ತಮ್ಮಪುರದಲ್ಲಿ ಕುರಿ ಹಿಂಡನ್ನು ನಿಲ್ಲಿಸಿದಾಗ ಪದ್ಮಣ್ಣನ ಅಣ್ಣಂದಿರು ಗುರುತಿಸದೆ ಹೊಡೆಯಲು ಬರುತ್ತಾರೆ. ತದನಂತರ ತಾಯಿ ಮಗನು ಬರುವುದನ್ನು ಕನಸಿನಲ್ಲಿ ಅರಿತುಕೊಂಡು ವಾಸ್ತವದಲ್ಲಿ ಪದ್ಮಣ್ಣನನ್ನು ಸ್ವಾಗತಿಸುತ್ತಾಳೆ. ಪದ್ಮಗೊಂಡನಿಗೆ ಕಿರಿಯ ಹೆಂಡತಿಯಾದ ಚೆನ್ನಮ್ಮಳ ಮದುವೆ ತತ್ತ್ವ ಪರೀಕ್ಷೆಗೆ ಗುರಿಮಾಡುತ್ತದೆ. ಮೊದಲ ಹೆಂಡತಿಯ ಹೆಸರು ಸಿದ್ದಮ್ಮ. ಇವರಿಬ್ಬರನ್ನು ಒಂದೇ ಮನೆಯಲ್ಲಿರಿಸಿದಾಗ ಇಬ್ಬರ ನಡುವೆ ಸಂಘರ್ಷವಾಗಿ ಸಂಸಾರ ಇಬ್ಭಾಗವಾಗುತ್ತದೆ. ಜೊತೆಗೆ ಕುರಿಗಳನ್ನು ಭಾಗ ಮಾಡಿಸುತ್ತಾರೆ. ಚೆನ್ನಮ್ಮಳಿಗೆ ಇಪ್ಪತ್ತೊಂದು ಪುತ್ರರು ಜನಿಸಿದರೆ ಸಿದ್ದಮ್ಮಳಿಗೆ ನಲ್ವತ್ತು ಪುತ್ರರು ಜನಿಸುತ್ತಾರೆ. ಹೀಗೆ ಇವರು ಮರುಳಸಿದ್ಧನ ಬಿಡಾರದಲ್ಲಿ ಹಟ್ಟಿಯನ್ನು ಹಾಕಿಕೊಂಡು ಜೀವನ ನಡೆಸುವರು. ಚೆನ್ನಮ್ಮನ ಮಕ್ಕಳು ಉಣ್ಣೆಕಂಕಣದವರಾಗಿ, ಸಿದ್ದಮ್ಮನ ಮಕ್ಕಳು ಹತ್ತಿಕಂಕಣದವರಾಗಿ ಮೆರೆಯುವ ಕಥೆಯನ್ನು ತಿಳಿಸುತ್ತದೆ. ಆಗ ತೂಗುದ್ದಕ್ಕೆ ಬಸವಣ್ಣ, ಬಿಜ್ಜಳರು ಬರುವರು. ಬಿಸಿಲಿಗೆ ಧಣಿದ ಇವರು ತೃಷೆಯನ್ನು ನೀಗಿಸಲು ಕುರಿಗಾಯಿಗಳನ್ನು ಕೇಳುತ್ತಾರೆ. ಆಗ ಪವಾಡದಂತೆ ಕಲ್ಲಿನಲ್ಲಿ ನೀರನ್ನು ತೆಗೆಯುವರು.

"ಗಚ್ಚಿನ ಕಣದೊಳು ಹೆಪ್ಪು ಹಾಲಿಗೆ ಕೊಟ್ಟು ।

ಎತ್ತಿನ ಕಾಲ ತೊಳೆ ತೊಳೆದು ॥

ಸುತ್ತಲಿ ಹಂತಿಯ ಕಟ್ಟಿ ತುಳಸಿ ಬೆಣ್ಣೆ ।

ಮತ್ತೆ ಗೋರೆಹಲ್ಲಿಲೆ ಎಳಳುಳೆದು ॥"[೩೩]

ಹೀಗೆ ಬಿಜ್ಜಳ, ಬಸವಣ್ಣರಿಂದ ಷಭಾಶಗಿರಿ ಪಡೆದು ಕುರುಬರು ಕಲ್ಯಾಣಪುರವನ್ನು ಕುರಿಗಳ ಸಹಿತಾಗಿ ಪ್ರವೇಶಿಸುತ್ತಾರೆ. ನಂತರ ಬಿರುಸಾದ ಮಳೆಯಿಂದ ಕುರಿಗಳು ಸತ್ತು ಹೋಗುತ್ತವೆ. ಆಗ ಕುರುಬರು ಕುರಿಗಳನ್ನು ಸುಡುತ್ತಾರೆ. ಇದರ ದುರ್ಗಂಧವನ್ನು ತಡೆಯಲಾರದೆ ಇಡೀ ಕುರುಬ ಸಮುದಾಯವನ್ನು ಹೊರಹಾಕುತ್ತಾರೆ. ಮತ್ತೆ ಕುರುಬರು ತೂಗುಡ್ಡಕ್ಕೆ ಬಂದು ನೆಲೆಸುವ ಘಟನೆಯನ್ನು, ಸರವೂರ ಸ್ಥಳದ ಕೋಡುಗಲ್ಲಿನಲ್ಲಿ ಮರುಳಸಿದ್ಧನು ಕುರುಬರ ಕುಲಜರೆಂದು ತೋರಿಸಲು ಕಠಿಣ ತಪಸ್ಸನ್ನು ಕೈಗೊಂಡ ವಿವರವು ನೀಡಲಾಗಿದೆ.

ಐದನೆಯ ಸಂಧಿಯಲ್ಲಿ ಮರುಳಸಿದ್ಧನ ತಪಸ್ಸಿಗೆ ಶಿವನೊಲಿದು ಇಚ್ಛೆಯನ್ನು ಕೇಳುತ್ತಾನೆ. ಆಗ ಸಾಕ್ಷಿಯೆಂಬಂತೆ

"ತೆತ್ತೀಸಕೋಟಿ ದೇವರ್ಕಗಳು ನೆರೆದರು ।

ಮತ್ತೆ ಮಾಧವ ಬ್ರಹ್ಮರೆಲ್ಲ ॥

ಸುತ್ತಲಿ ದೇವಗಣ ನೆರೆದರು ಮುಂತಾಗಿ ।"[೩೪]

ಹೀಗೆ ಸಿದ್ಧನಿಗೆ ಶಿವನು ನೀಡುವ ವರಕ್ಕೆ ಸಾಕ್ಷಿಭೂತರಾಗಿ ದೇವಗಣಗಳು ಸೇರುತ್ತವೆ.

"ಕುರುಬ ತುರುಗರು ನಾಲ್ವತ್ತು ಮಂದಿಯ ।

ಹೊರ ಹಾಕಿದರು ಕಲ್ಯಾಣದಲಿ ।

ಅವರೆನ್ನ ಬಳಿಯ ಹಟ್ಟಿಯ ಹಾಕಿಕೊಂಡಿರುವ ವಿವರವ ಪಾಲಿಸು ದೇವ॥

ಇವರ ಕುಲಕ್ಕೆ ಎನ್ನ ಒಡೆಯನ ಮಾಡಿ ।

ಭುವಿಯ ಗೆಲುವಂತೆ ಮಾಡು ॥

ಸತ್ತ ಕುರಿಯು ಹೆತ್ತ ಮೊಸರು ಹಾಲನೆ ಮಾರಿ ।

ಮತ್ತೆ ಮಜ್ಜಿಗೆ ಬೆಣ್ಣೆಗಳನ್ನು ॥

ಎತ್ತಿ ಕಲ್ಯಾಣದಲ್ಲಿ ಮತ್ತೆ ಪವಾಡವ ।

ನಿತ್ತು ಕರುಣಿಮುದು ಸದ್ಗುರುವೆ ॥"[೩೫]

ಹೀಗೆ ಮರುಳಸಿದ್ಧನು ಕಲ್ಯಾಣದಿಂದ ಕುರುಬರನ್ನು ಹೊರಹಾಕಿದ್ದನ್ನು ಪ್ರತಿಯಾಗಿ ಸತ್ತ ಕುರಿಯನ್ನು ಬದುಕಿಸುವ ವರಕೊಡು. ಆ ಮೂಲಕ ನಮಗೆ ಕಲ್ಯಾಣಕ್ಕೆ ಪ್ರವೇಶ ಕೊಡಿಸಿದರೆಂದು ಬೇಡಿಕೊಳ್ಳುವ

ದೃಶ್ಯವನ್ನು ಇಲ್ಲಿ ಚಿತ್ರಿಸಲಾಗಿದೆ. ಸತ್ತ ಕುರಿಯನ್ನು ಬದುಕಿಸುವುದನ್ನು ವೀಕ್ಷಿಸಲು ಕಲ್ಯಾಣದ ಶಿವಶರಣರೆಲ್ಲಾ ಧಾವಿಸುತ್ತಾರೆ. ರೇವಣಸಿದ್ಧನ ಕೃಪೆಯಿಂದ ಜಗ್ಗಮುತ್ತಯ್ಯ ತಗರನೆಬ್ಬಿಸಿ ಕರೆಯುವನು. ಈ ಮೂಲಕ ಕುರುಬರು ಸತ್ತ ತಗರನ್ನು ಬದುಕಿಸಿಕೊಟ್ಟರು. ನಂತರ ಆ ತಗರಿನ ಕೊಂಬು ಕಲಕೇತ ಬ್ರಹ್ಮಯ್ಯನ ಕೈಯಲ್ಲಿ ಬರುತ್ತದೆ. ಅದಕ್ಕೆ ಆತನು ನಿಮ್ಮ ಪವಾಡ ನಮ್ಮ ಬಿರುದಿನಲ್ಲಿ ಸೇರಲೆಂದು ಕೇಳಿಕೊಳ್ಳುತ್ತಾನೆ. ಹೀಗೆ ಕುರುಬರ ಕುಲಕ್ಕೆ ಮರುಳಸಿದ್ಧೇಶ್ವರನು ಗುರುದೇವನಾಗಿದ್ದ ಸನ್ನಿವೇಶವನ್ನು 'ಹಾಲುಮತ ಪುರಾಣ'ವು ತಿಳಿಸಿಕೊಡುತ್ತದೆ.

## ಗೊಲ್ಲಾಳಯ್ಯನ ಪುರಾಣ

ಗೊಲ್ಲಾಳಯ್ಯನ ಪುರಾಣವು ಬಿಜಾಪುರ ಜಿಲ್ಲೆಯ ಗೋಲ್ಗೇರಿ ಗ್ರಾಮದ ಕಾಟಕೋಟನ ಮಗ ಗೊಲ್ಲಾಳನ ಕುರಿತ ಕಥೆಯನ್ನು ಒಳಗೊಂಡಿದೆ. ಈ ಕೃತಿಯು ಸಹ ಹಸ್ತಪ್ರತಿಯಿಂದ ಮುದ್ರಣವನ್ನು ೧೯೭೨ರಲ್ಲಿ ಮಾಡಲಾಗಿದೆ. ಕರ್ತೃಯಾರೆಂದು ತಿಳಿದುಬರುವುದಿಲ್ಲ. ನಿರ್ದಿಷ್ಟವಾದ ಕಾಲವನ್ನು ತಿಳಿಯುವುದು ಅಸಾಧ್ಯ. ಈ ಪುರಾಣವು ಒಂಭತ್ತು ಸಂಧಿಗಳನ್ನು ಒಳಗೊಂಡಿದ್ದು, ವೃತ್ತ ಮತ್ತು ಕಂದಗಳಿಂದ ರಚನೆಯಾಗಿದೆ. ಇದು ಚಾರಿತ್ರಿಕ ಕಥೆಯೆಂದು ಅನೇಕ ಗ್ರಂಥಗಳು ತಿಳಿಸುತ್ತವೆ. ೧೨ನೇ ಶತಮಾನದ ನಂತರದಲ್ಲಿ ರಚನೆಯಾದ ಕೃತಿಯಾಗಿರಬಹುದು. ಅಂದರೆ ಹರೀಶ್ವರ(ಹರಿಹರ)ನು ಶರಣರ ಚರಿತ್ರೆಯನ್ನು ಮಾತ್ರ ಬರೆದಂತೆ, ಈ ಪುರಾಣದ ಕರ್ತೃ ಶರಣರ ಚರಿತ್ರೆಯನ್ನು ಹೇಳುತ್ತೇನೆಂದು ಕೃತಿಯಲ್ಲಿ ತಿಳಿಸಿದ್ದಾನೆ. ಸಿದ್ಧರಾಮನ ಚರಿತೆಯಂತೆ ವೀರಗೊಲ್ಲಾಳನು ಮರುಳನಾಗಿ ಜನಿಸುವನು. ಕೈಲಾಸದಲ್ಲಿ ಭೃಂಗೀಶನನ್ನು ಹಾಸ್ಯಮಾಡಿದ್ದಕ್ಕೆ ರೇಣುಕ ಎಂಬುವನು ಮರ್ತ್ಯದಲ್ಲಿ ಕುರುಬ ಕುಲದ ವ್ಯಕ್ತಿಯಾಗಿ ಜನಿಸುತ್ತಾನೆ.

ಈ ಕೃತಿಯು ಮೊದಲಿಗೆ ಶ್ರೀಶೈಲಕ್ಕೆ ಹೋಗುವ ಪರಿಷೆಯನ್ನು ವಿಧವಿಧವಾಗಿ ವರ್ಣಿಸುತ್ತದೆ. ಈ ಪರಿಷೆಯಲ್ಲಿ ನಾನಾ ರೀತಿಯ ಜನಗಳಿರುವುದನ್ನು ತಿಳಿಸುತ್ತದೆ. ಕುಂತಳ ದೇಶದ ಚಿಂತಾಮಣಿಯಲ್ಲಿನ ನಾರಿಯರ ವರ್ಣನೆ, ಶರೀರದ ವರ್ಣನೆ, ರಾಜ್ಯದ ವರ್ಣನೆ, ಅರಮನೆಯ ನರ್ತಕಿಯರ ವರ್ಣನೆಯು ಕಂಡುಬರುತ್ತದೆ. ಮಕ್ಕಳಿಲ್ಲದ ಸುಗ್ಗಳೆಯು ಶಿವನನ್ನು ಪೂಜಿಸಿ ಮಗುವನ್ನು ಪಡೆಯುವಳು. ಆತನಿಗೆ ಗೊಲ್ಲಾಳನೆಂದು ನಾಮಕರಣ ಮಾಡಲಾಗುತ್ತದೆ. ಗೊಲ್ಲಾಳನು

"ವಿರಚಿಸಿಪಲಬಗೆ ತೆರದ ಪೆಸರುಗಳ
ಕುರುಹಿನ ಕುರಿಗಳನರುಹಿ
ಹಿರಿದು ಕಿರಿದು ಮರಿ ಸರಿಸ ಪಾಲುಂಗಿಯ
ತೆರಗಳ ನೊರೆದಾತ್ಮನಿಗೆ"[೩೬]

ಕುರುಬರ ವ್ಯಕ್ತಿ ಸೂಚಕವಾದ ಕಂಬಳಿಯನ್ನು ಹೊಯ್ದುಕೊಂಡು, ಕೊಡಲಿ, ಕೈಯಲ್ಲಿ ಕೋಲು ಹಿಡಿದು ಕುರಿಗಳನ್ನು ಕಾಯುತ್ತಿರುತ್ತಾನೆ. ಈ ಲಕ್ಷಣವು ರೇವಣಸಿದ್ಧರ ಮೂರ್ತಿಯನ್ನು ನೆನಪಿಸುತ್ತದೆ. ಹೀಗೆ ದುಮ್ಮಳ ಗ್ರಾಮದ ಶಿವಪೂಜೆಯಲ್ಲಿ ನಿರತವಾದ ಶ್ರೀಶೈಲ ಪರಿಷೆಯು ತಂಗುವುದು. ಅಲ್ಲಿಂದ ಮಲ್ಲಯ್ಯನ ಗುರುತು ತಿಳಿದ ಗೊಲ್ಲಾಳನು ಲಿಂಗ ತರಲು ಪರಿಷೆಯಲ್ಲಿನ ನಂದೀಶ್ವರ ಮುನಿಗೆ ಹೇಳುವನು. ನಂದೀಶ್ವರರು ಶ್ರೀಶೈಲದ ವರ್ಣನೆಯನ್ನು ಮಾಡುತ್ತಾ, ಪಾತಾಳ ಗಂಗೆ, ಜ್ಯೋತಿರ್ಲಿಂಗ, ಪಂಚಮಠ, ಪಂಚಗೃಹ ಸ್ಥಾನಗಳು, ಪಂಚಾಕ್ಷರ ಮಂತ್ರ, ಪಂಚಾಸ್ಯನೊಲುಮೆಯನ್ನು ತಿಳಿಸುತ್ತಾನೆ. ಮುಗ್ಧನಾದ ಗೊಲ್ಲಾಳನು ಅವರ ಪ್ರವಚನಕ್ಕೆ ಮನಸೋತು ಲಿಂಗ ತರಲು ಹೇಳುತ್ತಾನೆ. ಆದರೆ ಮುನಿಯು ಲಿಂಗ ತರದೆ ಕುರಿ ಹಿಕ್ಕೆಯನ್ನು ಲಿಂಗವೆಂದು ಹೇಳಿ ಪೂಜಿಸುವ ವಿಧಾನವನ್ನು ಹೇಳಿಕೊಡುವನು.

"ಮುಗ್ಧನ ಕರದು ತಂದ ಹಿಕ್ಕೆಯ ಲಿಂಗವೆಂದು ಕೊಡಲು ನೋಡಿ

ಇನಿತಕ್ಕೆ ಜಗವೆಲ್ಲಾ ಘನಯಾತ್ರಿ ಪೋಪುದೆ ಯೆನಲು ಗುರುವು ನಸುನಗುತ"[೩೭]

ಎಂದು ಹೇಳಿದಾಗ ಆ ಕುರಿಹಿಕ್ಕೆಗೆ ಪ್ರತಿನಿತ್ಯ ಕುರಿಹಾಲಿನಿಂದ ಅಭಿಷೇಕ ಮಾಡುವನು. ನುಲಿಯ ಚಂದಯ್ಯನು ಜಲದಲ್ಲಿ ಲಿಂಗಕಂಡಂತೆ, ಗೊಲ್ಲಾಳನು ಕುರಿಹಿಕ್ಕೆಯಲ್ಲಿ ಲಿಂಗವನ್ನು ನೋಡುತ್ತಾನೆ. ಲಿಂಗಕ್ಕೆ ವಿಧ ವಿಧವಾಗಿ ಪೂಜೆಯನ್ನು ಗೊಲ್ಲಾಳನು ಮಾಡುತ್ತಿರುತ್ತಾನೆ. ಪ್ರತಿನಿತ್ಯ ಕುರಿಯ ಹಾಲನ್ನು ಮನೆಗೆ ತರದೆ ಹಿಕ್ಕೆಯ ರಾಶಿಗೆ ಲಿಂಗವೆಂದು ನೈವೇದ್ಯ ಮಾಡುವನು.

"ಹಿಕ್ಕೆ ಸೂಕ್ಷ್ಮ ಲಿಂಗದ್ಹಿಕ್ಕೆ ಪುಷ್ಪದರಾ
ಯಕ್ಕ ಸಮಧುಗುಪ್ತ ಮಾಗೆ
ಅಕ್ಕರಿಂ ಗೊಲ್ಲಯ್ಯ ಲೆಕ್ಕಿಸಿ ಕುರಿಗಳ
ಹಿಕ್ಕೆಯ ರಾಸಿಯ ತಂದು"[೩೮]

ಹಿಕ್ಕೆಯೇ ಶಿವನೆಂದು, ಶ್ರೀಶೈಲದ ಮಲ್ಲಿಕಾರ್ಜುನನೆಂದು ಹಾಲಿನ ಅಭಿಷೇಕವನ್ನು ಮಾಡುವನು. ಈ ಘಟನೆಯು ರಾಘವಾಂಕನ ಸಿದ್ಧರಾಮ ಚರಿತ್ರೆಯಲ್ಲಿನ ಸಿದ್ಧರಾಮನ ಭಕ್ತಿಗಿಂತ ಭಿನ್ನವಾಗಿ ಮೂಡಿಬಂದಿದೆ. ಅಲ್ಲಿ ಸಿದ್ಧರಾಮನು ಶಿವನಿಗೆ ಅಂಬಲಿಯನ್ನು ಕೊಡುವ ಪ್ರಸಂಗವಿದೆ. ಇಲ್ಲಿ ಗೊಲ್ಲಾಳಯ್ಯನು ಹಿಕ್ಕೆಯಲ್ಲಿ ಶಿವನನ್ನು ಕಾಣುವ ಭಕ್ತಿಯನ್ನು ಹೊಂದಿದ್ದಾನೆ. ಅಲ್ಲಿ ಸಿದ್ಧರಾಮನ ಭಕ್ತಿಗೆ ತಂದೆ–ತಾಯಿಗಳು ಅಡ್ಡಿಯಾಗುವುದಿಲ್ಲ. ಆದರೆ ಇಲ್ಲಿ ಗೊಲ್ಲಾಳ ತಂದೆಯು ಅಡ್ಡಿಯನ್ನುಂಟು ಮಾಡುವನು.

ಹಿಕ್ಕೆಯ ಲಿಂಗಕ್ಕೆ ವಿವಿಧ ಪುಷ್ಪಗಳು, ಸಂಗೀತದಿಂದ ಸ್ತೋತ್ರವನ್ನು ಪಠಿಸುತ್ತಾ ಗೊಲ್ಲಾಳನು ಉತ್ಸವದಂತೆ ಪೂಜೆಯನ್ನು ಮಾಡುವನು. ಇದನ್ನು ಕಂಡ ಊರಜನರು ಗೊಲ್ಲಾಳನ ಹುಚ್ಚುಭಕ್ತಿಯ ಬಗ್ಗೆ ತಂದೆಗೆ ಚಾಡಿ ಹೇಳುತ್ತಾರೆ. ಕುರಿ ಹಾಲು ವರ್ಥ್ಯವಾಗುತ್ತಿವೆ ಎಂದು ನುಡಿಯುವರು. ಆಗ ತಂದೆಯು ಅತಿಕೋಪದಿಂದ ಗೊಲ್ಲಾಳನ ಹತ್ತಿರಕ್ಕೆ ಧಾವಿಸಿ ಬರುವನು. ಆದರೆ ಗೊಲ್ಲಾಳನು ಹಾಲು

ತುಪ್ಪದಿಂದ ಆ ಸ್ಥಳವನ್ನು ಹಳ್ಳವಾಗಿಸಿರುತ್ತಾನೆ. ಅದರ ಮಧ್ಯದಲ್ಲಿ ಹಿಕ್ಕೆಗಳು ಪುಷ್ಪದಂತೆ ಗೋಚರಿಸುತ್ತವೆ. ಈ ರೀತಿಯಾಗಿ ಗೊಲ್ಲಾಳನು ಭಾವಪರವಶನಾಗಿ ಶಿವನ ಲೀಲೆಯನ್ನು ಕೊಂಡಾಡುತ್ತ ಕುಣಿಯುವುದನ್ನು ನೋಡುತ್ತಾನೆ.

"ಬಿಡದಲೆಕೈಚಪ್ಪಗೂಡಲಿ ಕಚ್ಚುಟ ಸುತ್ತಿ
ನುಡಿನುಡಿಗೆ ಕುಣಿವ ಗೊಲ್ಲಾಳ
ಬಿಡದಿಟ್ಟಸುತ ಬಂದೆಡಗಯ್ಯ ಕೋಲಂದ
ಕಡೆಯೆಂದು ಹೊಡೆದನಾಗ"[36]

ಕೋಪದಿಂದ ಗೊಲ್ಲಾಳನ ತಂದೆಯು ಶಿವನನ್ನು ತೆಗಳುತ್ತಾ ಕಾಲಿನಿಂದ ಒದೆಯುವನು. ಆಗ ಗೊಲ್ಲಾಳನು ತಂದೆಯ ಶಿರಚ್ಛೇದನವನ್ನು ಮಾಡುತ್ತಾನೆ. ನಂತರ ಶಿವನ ಪೂರ್ವದ ನಾನಾ ಲೀಲೆಗಳನ್ನು ಮೂರು ಲೋಕಕ್ಕೆ ತಿಳಿಯುವಂತೆ ಒಂದೊಂದಾಗಿ ಹೇಳುತ್ತಾ ಹೊರಡುವನು. ಹುಟ್ಟಲು ತಾಯಿಯ ಅಪ್ಪಣೆಯು ನಮಗಿರುವುದಿಲ್ಲ. ಜೊತೆಗೆ ಪಿತನೆಂಬುದು ಬರಿ ನಟನೆ. ಹೀಗಿರುವಾಗ ಅನ್ಯರನ್ನು ನಿಂದಿಸುವುದು ತರವಲ್ಲವೆಂದು ಗೊಲ್ಲಾಳನು ಎಲ್ಲ ಭವಿಗಳಿಗೆ ಹೇಳುತ್ತಾನೆ. ತಾರಕಾಸುರನಿಗೆ ಕರುಣೆ ನೀಡಿದ, ಹಂಪೆಯಲ್ಲಿ ನೆಲೆಯೂರಿದ ದುಷ್ಟರನ್ನು ಭಸ್ಮವಾಗಿಸಿದ ಕೀರ್ತಿ ಲಿಂಗಕ್ಕಿದೆ. ಅಡವಿಗೆ ಜಲವನ್ನು ತರಿಸಿದ್ದು ಲಿಂಗ, ಕಾಶಿಯಲ್ಲಿ ಮಹಾಲಿಂಗವಾಗಿ, ಲಿಂಗ ಜಗರಕ್ಷವಾಗಿ ಕಾಲಕಾಲಕ್ಕೆ ಪ್ರಸಿದ್ಧಿ ಹೊಂದಿದೆ. ದೇವತೆಗಳ–ರಾಕ್ಷಸರ ನಡುವೆ ಸಮುದ್ರ ಮಂಥನದಲ್ಲಿ ವಿಷದಿಂದ ಜಗತ್ತನ್ನು ಉಳಿಸಿದ್ದು ಲಿಂಗ. ಹೀಗೆ ಬೇಡರ ಕನ್ನಪ್ಪನ ಭಕ್ತಿಗೆ ಮೆಚ್ಚಿ ಕಣ್ಣನ್ನು ಪಡೆದ ಲಿಂಗ, ಸಿರಿಯಾಳನ ಭಕ್ತಿ ಪರೀಕ್ಷೆಗೆ ಮಗನನ್ನು ಭಿಕ್ಷೆ ಬೇಡಿದ ಲಿಂಗ ಈ ರೀತಿಯ ಭಕ್ತಿಯಲ್ಲಿ ಗೊಲ್ಲಾಳನ ಲಿಂಗಭಕ್ತಿಯು ಮಿಗಿಲಾದುದು. ಹೀಗೆ ಗೊಲ್ಲಾಳನು ಅನೇಕ ರೀತಿಯ ಕಥೆಗಳನ್ನು ಹೇಳುತ್ತಾನೆ. ಅದಕ್ಕೆ ಗೊಲ್ಲಾಳನು ಶಿವನಿಂದ ತಂದೆಯ ಪ್ರಾಣವನ್ನು ಮತ್ತೆ ಕೇಳಿ ಪಡೆಯುವನು. ಈ ಹಿನ್ನೆಲೆಯಲ್ಲಿ ಗೊಲ್ಲಾಳನು ಗೊಲ್ಲೇಶ್ವರಲಿಂಗವೆಂದು ಹೆಸರನ್ನು ಪಡೆಯುತ್ತದೆ. ಗೊಲ್ಲಾಳನು ಕೈಲಾಸಕ್ಕೆ ಹೋದ ಕಥೆಯನ್ನು ಗೊಲ್ಲಾಳಯ್ಯನ ಪುರಾಣವು ತಿಳಿಸಿಕೊಡುತ್ತದೆ. ಗೊಲ್ಲಾಳನು ಕೈಲಾಸಕ್ಕೆ ಹೋದರೂ ಆತನ ಮಹಿಮೆ ಪವಾಡವು ನಡೆಯುತ್ತಿತ್ತು ಎಂದು ಜನರುಗಳು ನಂಬಿದ್ದರು. ಹಾಗಾಗಿ ಗೊಲ್ಲಾಳಯನು ಅನೇಕ ಊರುಗಳಲ್ಲಿ ಭಕ್ತರನ್ನು ಪಡೆಯುವ ದೈವವಾಗಿದ್ದನೆಂದು ಗೊಲ್ಲಾಳಯ್ಯನ ಪುರಾಣದಿಂದ ತಿಳಿದು ಬರುತ್ತದೆ.

**ಹಾಲುಮತೋತ್ತೇಜಕ ಪುರಾಣ**

ಕರ್ನಾಟಕದ ಇತಿಹಾಸ ಚಾರಿತ್ರಿಕ ವೈಶಿಷ್ಟ್ಯದಿಂದ ಕೂಡಿದೆ. ಅನೇಕ ಸಮುದಾಯಗಳ ಸಂಗಮವಾಗಿರುವ ಈ ಪ್ರದೇಶವು ಭಿನ್ನತೆಯಿಂದ ಕೂಡಿದ್ದು, ಬ್ರಾಹ್ಮಣ, ವೀರಶೈವ, ಲಿಂಗಾಯತ

ಗಾಣಿಗ ಮುಂತಾದ ಜನಸಮುದಾಯಗಳಂತೆ ಕುರುಬ ಸಮುದಾಯವು ಐತಿಹಾಸಿಕ ದೃಷ್ಟಿಯಿಂದ ಚರಿತ್ರೆಯನ್ನು ಸಾಂಸ್ಕೃತಿಕ ದೃಷ್ಟಿಯಿಂದ ಆಚರಣೆಗಳನ್ನು ಕಟ್ಟಿಕೊಡುತ್ತದೆ. ಪ್ರಸ್ತುತ ಕೃತಿ ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣವು ಸಾಂಸ್ಕೃತಿಕ ದೃಷ್ಟಿಯಿಂದ ಗಮನಾರ್ಹವಾದ ಕೃತಿಯಾಗಿದೆ. ಇದರ ಒಡಲಲ್ಲಿ ರೇವಣಸಿದ್ಧ, ಶಿವಪದ್ಮ, ಬೀರೇಶ್ವರ, ಆದಿಗೊಂಡ, ಮಾಳಿಂಗರಾಯ, ವೀರಗೊಲ್ಲಾಳೇಶ್ವರ ಮೊದಲಾದ ಸಾಂಸ್ಕೃತಿಕ ನಾಯಕರ ಚರಿತ್ರೆಯನ್ನು ವಿವರವಾಗಿ ಚರ್ಚಿಸುವುದರ ಜೊತೆಗೆ ಈ ಸಮುದಾಯದ ಕುಲ-ಕಸಬುಗಳಾದ ಕುರಿ ಸಾಕಣೆ, ಕಂಬಳಿ ತಯಾರಿಕೆ, ಕೃಷಿ ಕಾಯಕವನ್ನು ಸ್ಥೂಲವಾಗಿ ತಿಳಿಯಪಡಿಸುತ್ತದೆ.

ಈ ಕೃತಿಯ ಕರ್ತೃ ರಸ್ತಾಪುರದ ಭೀಮಕವಿ, ಭೀಮಾಖ್ಯ, ಭೀಮನಾಯಕ ಎಂದು ಪ್ರತಿಸಂಧಿಯ ಕೊನೆಯಲ್ಲಿ ತನ್ನನ್ನು ಕರೆದುಕೊಂಡಿದ್ದಾನೆ. "ರಸ್ತಾಪುರದ ಪತಿ ಶರಭಲಿಂಗನ ಪಾದದ್ವಯವನುದಿನದಲಿ ಪಾಲ್ಮಜ ಜಂಬುಲಿಂಗನ ಪ್ರೇಮಸುತನಾದ ಭೀಮಾಖ್ಯ ರಚಿಸಿದಂ ಮುದದಿಂದ ಕ್ಷಿತಿಯೊಳಗೆ ಲಕನಾಪುರದ ಗೌಡ ಹನುಮಂತರೆಡ್ಡಿ ಗುರುವರನ ದಯದಿಂದ"[೪೦] ಈ ಕೃತಿಯನ್ನು ರಚಿಸಿದ್ದೇನೆಂದು ಸ್ಪಷ್ಟಪಡಿಸುತ್ತಾನೆ. ಹಾಗಾಗಿ ಕವಿಯ ವಿಚಾರದಲ್ಲಿ ಯಾವುದೇ ಸಂದೇಹ ಊಹೆ, ಕಲ್ಪನೆಗಳಿಗೆ ಆಸ್ಪದವಿಲ್ಲ.

ಈತನ ಸ್ಥಳ ಗುಲ್ಬರ್ಗಾ ಜಿಲ್ಲೆಯ ಶಹಪೂರ ತಾಲೂಕಿನ ರಸ್ತಾಪುರ ಆದುದರಿಂದ ಕವಿಯ ಹೆಸರಿನೊಂದಿಗೆ ಗ್ರಾಮದ ಹೆಸರು ಸೇರಿಕೊಂಡು ಜನಮಾನಸದಲ್ಲಿ ರಸ್ತಾಪುರದ ಭೀಮಕವಿಯೆಂದು ಜನಜನ್ನಿತವಾಗಿದೆ. ಶಹಪೂರದಿಂದ ೧೫ ಕಿ.ಮೀ.ಗಳ ಅಂತರದಲ್ಲಿದೆ. ತಂದೆ ಜಂಬುಲಿಂಗ, ತಾಯಿ ಭೀಮವ್ವ, ಗುರು ಲಕನಾಪುರದ ಗೌಡ ಹನುಮಂತರೆಡ್ಡಿ ಎಂಬುದು ಆತನ ಕೃತಿಗಳಿಂದ ತಿಳಿದು ಬರುತ್ತದೆ. ಎಂ.ಎಸ್. ಲಠ್ಠೆ ಅವರು ಈತನ ಕಾಲವನ್ನು ಕ್ರಿ.ಶ. ೧೮೭೭ ಎಂದು ತಮ್ಮ ಜನಪದ ಕವಿಚರಿತೆಯಲ್ಲಿ ದಾಖಲಿಸಿದ್ದಾರೆ.

ಕವಿಯು ಕೃತಿಯ ರಚನೆಯ ಕಾಲವನ್ನು ಕೊನೆಯ ಪದ್ಯದಲ್ಲಿ ಸ್ಪಷ್ಟಪಡಿಸುತ್ತಾನೆ. "ಶಾಲಿವಾಹನ ಶಕದ ಪದಿನೆಂಟುನೂರ ಮೂವತ್ತು ನಾಲ್ಕನೆಯ ಸೇರಿದ ಮಹಾಪರಿಧಾವಿ ನಾಮಸಂವತ್ಸರಾಶ್ವೀಜ ಶುಕ್ಲಪಕ್ಷ ದಶಮಿ ಸದಮಲಾದಿತ್ಯ ವಾರಕ್ಕೆ ಬಹುಸಾಂಗದಿಂದಿದು ಪೇಳಿಮುಗಿಸಿದಂ"[೪೧] ಎಂದಿರುವುದರಿಂದ ಕವಿಕಾಲ ಕ್ರಿ.ಶ. ೧೯೧೨ ಹೀಗಾಗಿ ೧೯-೨೦ನೆಯ ಶತಮಾನದ ಮಧ್ಯಭಾಗದವರೆಗೆ ಬದುಕಿರುವನೆಂದು ಹೇಳಬಹುದು.

ಶರಭಲಿಂಗೇಶ್ವರ ಪುರಾಣ, ಮಹಾಂತೇಶ್ವರ ಪುರಾಣ, ಚರಬಸವೇಶ್ವರ ಪುರಾಣ, ಶಂಕರ ಕೈವಲ್ಯ ಕಲ್ಪದ್ರುಮ ಮುಂತಾದವು ಕವಿಯ ಇತರ ಕೃತಿಗಳು. ಕರಿಭಂಟ ಕಮಲಾಕ್ಷಿ, ಕುಶಲವರ ಕಾಳಗ, ರಾಮರಾಜ್ಯ ವಿಯೋಗ, ಸತ್ಯಶೀಲ ಕಲ್ಪಿತಕಥಾ ಇತ್ಯಾದಿ ಬಯಲಾಟಗಳನ್ನು ರಚಿಸಿದ್ದಾನೆ.

"ಹಾಲುಮತೋತ್ತೇಜಕ ಪುರಾಣ"ವು ಪ್ರಮುಖವಾಗಿ ೯ ಸಂಧಿ, ೫೯೮ ವಾರ್ಧಕ ಷಟ್ಪದಿಯನೊಳಗೊಂಡಿದ್ದು, ಈ ಕೃತಿಯನ್ನು ಪರಿಷ್ಕರಿಸಿ ಉತ್ತಮವಾದ ಪ್ರಸ್ತಾವನೆಯೊಂದಿಗೆ ಪ್ರಾಧ್ಯಾಪಕರಾದ ಡಾ. ಎಫ್.ಟಿ. ಹಳ್ಳಿಕೇರಿಯವರು ಸಂಪಾದಿಸಿಕೊಟ್ಟಿದ್ದಾರೆ. ಯಾವುದೇ ಕಾವ್ಯ ಪುರಾಣಗಳನ್ನು ಆರಂಭಿಸುವ ಮೊದಲು ದೇವತಾಸ್ತುತಿಯನ್ನು ಮಾಡುವುದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಅದಕ್ಕೆ ಕವಿಯು ಕೂಡ ಹೊರತಾಗಿಲ್ಲ. ತನ್ನ ಮನದ ಇಂಗಿತದ ಜೊತೆಗೆ ದೇವಾನುದೇವತೆಗಳನ್ನು ಸ್ಮರಿಸಿ ಕಾವ್ಯವನ್ನು ಮುಂದುವರಿಸಿದ್ದಾನೆ.

"ಲೋಕದೊಳ್ ಕವಿಯೆನಿಸಬೇಕೆಂಬ ಕಕ್ಕುಲತೆ-
ಗೇಕೀ ಕವಿತ್ವಮಂ ತಾ ಕಲ್ಪಿಸಿದನೆಂದ
ನೇಕ ವಿಧದಿಂದಲಿ ನಿರಾಕರಿಸಿಯನ್ನಯ ವಿವೇಕತ್ವ ಗುಣವೆನಿಸದೆ
ಯೇಕ ಮಾನಸದೊಳವಲೋಕಿಸಿ ಸುಗುಣಗಳನು
ಸಾಕಾರದಿಂದಲೇ ಸ್ವೀಕರಿಪುದೆಂದು ಸುವಿ
ವೇಕಿಯರ್ಗೆರಗಿ ಕೃತಿಪ್ರಾಕೃತದಿ ರಚಿಸಿದೆ ಸುಖಕರ ಶಿವನದಯದೊಳು"[೪೨]

ಪ್ರಾಚೀನ ಕವಿಗಳು ಹೇಳಿದ ಶಬ್ದಾರ್ಥಗಳನ್ನು ಯೋಚಿಸಿ ಕಾವ್ಯವನ್ನು ಸಕಲರಿಗೂ ತಿಳಿಯುವಂತೆ ರಚಿಸಿದ್ದೇನೆ ಎಂದು ಹೇಳುತ್ತಾ ಕಾವ್ಯದಲ್ಲಿ ಏನಾದರೂ ಅಲ್ಪದೋಷಗಳು ಇದ್ದರೆ ತಿದ್ದಿ ತೀಡಿ ಶುದ್ಧವಾಗುವಂತೆ ಮಾಡಿರಿ ಎಂದು ಪಂಡಿತರಿಗೆ ವಿನಯದಿಂದ ಕೇಳಿಕೊಂಡಿದ್ದಾನೆ. ಹಾಗೇಯೇ ಲೋಕದಲ್ಲಿ ಕವಿಯೆನಿಸಬೇಕೆಂಬ ಹಂಬಲದಿಂದ ಕಾವ್ಯವನ್ನು ರಚಿಸಿದವನಲ್ಲ. ಆದ್ದರಿಂದ ನನ್ನನ್ನು ನಿರಾಕರಿಸದೆ ವಿವೇಕ ಗುಣಗಳನ್ನು ಅವಲೋಕಿಸಿ ಸುಗುಣಗಳನ್ನು ಒಳ್ಳೆಯ ಮನಸ್ಸಿನಿಂದ ಸ್ವೀಕರಿಸಬೇಕೆಂದು ಸುವಿವೇಕಗಳಿಗೆ ಎರಗಿ ಶಿವನ ದಯದಿಂದ ಈ ಕೃತಿಯನ್ನು ರಚನೆ ಮಾಡಿರುವೆ ಎಂದಿರುವನು.

ಶಿವನ ರೂಪವಾಗಿ ಬಂದು ಅಮಿತ ಮಹಿಮೆಗಳನ್ನು ತೋರುವ ಶಿವಯೋಗಿ ಸಿದ್ಧರ ಸಿದ್ಧ ಸೊನ್ನಲಿಗೆ ಗುರು ಸಿದ್ಧರಾಮೇಶ್ವರನನ್ನು ಸ್ತುತಿಸಿದ್ದಾನೆ. ಮುಂದುರೆದು ಪದ್ಯವೊಂದರಲ್ಲಿ

ಪಾಲ್ಕುರಿಕೆ ಸೋಮಾರಾಧ್ಯ ಹಂಪೆಯ ಹರೀಶ ಭೀಮರಸ ಗುರು ಪಂಡಿತೇಶ
ಬಿರಿದಂಕ ಕೇಶವ ಶ್ರೀ ರಾಘವಾಂಕ ಚಾ
ಮರಸನುದ್ಭಟ ನಿಜಗುಣಾರಾಧ್ಯ ಪರಮ ಬಾ
ಸುರ ಶಂಕರಾಚಾರ್ಯ ಮಲ್ಲಣಾರ್ಯಾದಿ ಶಿವಕವಿಗಳೊಂದಿಸುವೆನು[೪೩]

ವರಕಾಳಿದಾಸ ಭವಭೂತಿ ಮಲುಹಣ-ಬಾಣ ಕೆರೆಯ ಪದ್ಮರಸ, ಮೊಗ್ಗೆಯ ಮಾಯಿದೇವ ಪಾಲ್ಕುರಿಕೆ ಸೋಮಾರಾಧ್ಯ, ಹಂಪೆಯ ಹರಿಹರ, ಭೀಮಕವಿ ಗುರು ಪಂಡಿತೇಶ, ರಾಘವಾಂಕ, ಚಾಮರಸ

ಉದ್ಭಟ, ನಿಜಗುಣ ಶಿವಯೋಗಿ ಮಲ್ಲಣಾರ್ಯ ಮೊದಲಾದ ಶಿವಕವಿಗಳಿಗೆ ವಂದಿಸುವೆನು ಎಂದು ಹೇಳಿದ್ದಾನೆ. ಹೀಗಾಗಿ ಕವಿಯು ಸ್ಮರಣೆ ಕೃತಾರ್ಥ ಕಂಡುಬರುತ್ತದೆ.

ಸಂಧಿ ಎರಡರಲ್ಲಿ ರೇವಣಸಿದ್ಧೇಶ್ವರ ಚರಿತ್ರೆಯ ಕುರಿತು ವಿಪುಲವಾದ ಮಾಹಿತಿಯನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ. ಕೊಲ್ಲಿಪಾಕಿಯ ಸೋಮಲಿಂಗದಿಂದ ಉದಯಿಸಿದ ರೇವಣಸಿದ್ಧನು ಭಕ್ತರನ್ನು ಉದ್ಧರಿಸಲು ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆ ಗಣಗಳಲ್ಲಿ ಒಬ್ಬನಾದ ದಾರುಕನನ್ನು ದಾಟಿದಕ್ಕೆ ಸಂತೈಸಿ ಶಿವನು ರೇವಣಸಿದ್ಧನಿಗೆ ನಿನಗೊಂದು ನರಜನ್ಮಬಂದಿದೆ ಮರ್ತ್ಯದಲ್ಲಿ ಜನಿಸಿ ಬಾಳು ಎಂದು ಆಶೀರ್ವಾದಿಸುತ್ತಾನೆ. ಶಿವನ ಪಾದಕ್ಕೆ ಎರಗಿದ ರೇವಣಸಿದ್ಧ ಕರುಣೆ ತೋರಿ ಪರಿಪಾಲನೆ ಮಾಡು ಎಂದು ಬೇಡಿಕೊಳ್ಳುತ್ತಾನೆ. ಅಂಜದಿರು, ಕಂಗೆಡದಿರು ಬಾಲಕ ಎಂದು ಶಿವನು ಭೂಮಿಯಲ್ಲಿ ನಿರಂತರ ಪವಾಡ ಮಾಡುತ್ತಿರು ಎಂದು ಹೇಳಿ ಸಂತೋಷದಿಂದ ಕಳುಹಿಸಿಕೊಡುತ್ತಾನೆ. ಇಲ್ಲಿ ಕವಿಯ ಭಕ್ತಿ ಪರಾಕಾಷ್ಠೆಯನ್ನು ಮೆರೆಯುವಂತಹದ್ದು.

ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯದ ಶಿವನ ವೇಷದಿಂದ ರೇಣುಕರು ರೇವಾಣಾಚಾರ್ಯವೆಂಬ ಹೆಸರಿನಿಂದ ಸರ್ವಾಂಗಕೆಲ್ಲ ವಿಭೂತಿಯನ್ನು ಧರಿಸಿ ರುದ್ರಾಕ್ಷಿಗಳನ್ನು ಹಾಕಿಕೊಂಡು ಪ್ರಾಣಿಗಳ ಕಾಯುವ ರೂಪದಲ್ಲಿ ದಂಡ ಲಾಕುಳ ಹಿಡಿದು, ಅಷ್ಟಾಂಗಯೋಗ ಚತುರಾಶ್ರಮ ಷಟ್ಚಕ್ರ ಷಟ್ಸ್ಥಲ ದೀಕ್ಷಾಮಂತ್ರ ಮುದ್ರಾಭೇದಗಳನ್ನು ಮುನಿಗೆ ತಿಳಿಸಿ ಇಷ್ಟಲಿಂಗ ಪೂಜಿಸುತ್ತ ರೇವಣಸಿದ್ಧರು ಆಕಾಶ ಮಾರ್ಗದಿಂದ ಅಗಸ್ತ್ಯಾಶ್ರಮಕ್ಕೆ ಬರುವ ವಿವರವನ್ನು ಚಿತ್ರಿಸಲಾಗಿದೆ.

ಆ ಪ್ರಾಂತದಲ್ಲಿ ಚೋಳನೃಪ ವಿಷ್ಣು ಪ್ರತಿಮೆಗೆ ಪೂಜಿಸುವ ಕ್ರಮ, ಯತಿಯ ಶಾಪದಿಂದ ಮಾಸನೂರಿನ ಅಕ್ಷಯಾತ್ಮಕನ ಮಂದಿರದಲ್ಲಿ ವೃಕ್ಷ ಕುಣಿಗಳಾಗಿ ನಿದ್ರಿಸುವ ಮಿಥುನ ಭಕ್ಷಿಸುವ ಸಂದರ್ಭ, ಸಿದ್ದೇಂದ್ರ ಅವುಗಳನ್ನು ಕೊಂದು ಕಮ್ಮಾರರಿಂದ ಸುರಗಿ, ಕರಕಠಾರಿಗಳೆಂಬ ಎರಡು ಆಯುಧಗಳನ್ನು ರಚಿಸುವುದು ಮುಂತಾದ ಕಥೆಗಳು ಕವಿಯ ಮನೋಭೂಮಿಕೆಯಿಂದ ಮೂಡಿಬಂದಿವೆ. ಅತ್ತ ಪ್ರಜ್ವಲಿಸುವ ಸರೂರು ಎಂಬ ಗ್ರಾಮದಲ್ಲಿ ಹಿಂದಿನ ಶಾಂತಮುತ್ತಯ್ಯನಿದ್ದು, ಆತನಿಗೆ ಸುವ್ವಿ ಮುತ್ತಯ್ಯ, ಜಗಮುತ್ತಯ್ಯ ಲಲಿತ ಶಾಂತಯ್ಯ ಎಂಬ ಮಕ್ಕಳಿದ್ದು, ಅವರು ಕೆಲವು ದಿವಸ ಗೋವುಗಳನ್ನು ಸಾಕುತ್ತ ಸಂಚರಿಸಿ ಕಲ್ಲಿನ ಕೆರೆಯ ಒಂದು ಭಾಗದಲ್ಲಿ ಮನೆಯನ್ನು ಕಟ್ಟಿಕೊಂಡು ಸತತವಾಗಿ ಹನ್ನೆರಡು ವರ್ಷ ಕಂಬಿ ಹಾಲನ್ನು ಕೊಟ್ಟು ಉಲ್ಲಾಸದಿಂದ ಇರುವುದು. ಆ ಸಮಯದಲ್ಲಿ ಸಿದ್ದೇಂದ್ರನು ಬಂದು ಅಮೃತವನ್ನು ಕೇಳುವ ಸನ್ನಿವೇಶ, ಶಾಂತಮುತ್ತಯ್ಯ ಸಿದ್ದೇಂದ್ರನನ್ನು ಭಕ್ತಿಯಿಂದ ಬರಮಾಡಿಕೊಳ್ಳುವ ವಿಚಾರ, ಸಿದ್ಧಗುರು ಶಾಂತಮುತ್ತಯ್ಯನಿಗೆ ಆಶೀರ್ವದಿಸಿ ಉದ್ಧರಿಸಿ ಲಿಂಗದೀಕ್ಷೆಯನ್ನು ನೀಡಿ 'ಕ್ಷೀರಕುಲಕಧ್ಯಕ್ಷನಂ ಗೊಳಿಸಿ ಗುರುಕಂಕಣವ ಧರಿಸಿ ಕರಕೆ ಘನ ಕಂಗೊಳಿಪ ತೆರದಿ ಪಟ್ಟವಗಟ್ಟಿ ಗುರುನಾಮ ಶಾಸನವಗೈದು"[೪೪] ಹಾಲನ್ನು ಸೇವಿಸಿ ಮುನ್ನಡೆಯುವ ವಿಚಾರ ವ್ಯಕ್ತವಾಗಿದೆ.

ರೇವಣಸಿದ್ಧನು ಬಿಜ್ಜಳರಾಯನ ಅರಮನೆಯನ್ನು ಪ್ರವೇಶಿಸಿ ಅರಸನು ಮಾಡಿದ ಅಪರಾಧವನ್ನು ಮನ್ನಿಸಿ ಅನ್ನಜ್ವಾಲೆನ್ನು ನಂದಿಸಿ ಅರಸನಿಗೆ ರಾಜನೀತಿಯನ್ನು ತಿಳಿಸಿ ಕೊಲ್ಲಾಪುರಕ್ಕೆ ಬರುವನು, ಕುಟಿಲ ಸಿದ್ಧರನ್ನು ಜಯಿಸಿ, ಗೋರಕ್ಷಕನನ್ನು ಕಾಪಾಡಿ ಬಿಜ್ಜಳನು ಮಾಸೂರಿನ ಮಡುವಿನಲ್ಲಿ ಸುರಗಿಯನ್ನು ಹೊರತೆಗೆದು ಹನ್ನೆರಡು ಸಾವಿರ ಬಾಲೆಯರನ್ನು ಬಲಿಕೊಡುವ ಸಂದರ್ಭದಲ್ಲಿ ರೇವಣಸಿದ್ಧ ಕರುಣ ಕಟಾಕ್ಷದಿಂದ ಬಾಲೆಯರನ್ನು ಬಂಧನದಿಂದ ಮುಕ್ತಗೊಳಿಸಿ ಬಿಜ್ಜಳನ ಮಗಳನ್ನು ಮದುವೆಯಾಗುತ್ತಾನೆ.

ಲೋಕಕಲ್ಯಾಣಕ್ಕಾಗಿ ಕೆರೆಯನ್ನು ನಿರ್ಮಿಸಬೇಕೆಂದು ಸ್ಥಳವನ್ನು ಗುರುತಿಸಿ ಸ್ವತಃ ಗುದ್ದಲಿ ಪಿಕಾಸಿಗಳನ್ನು ತೆಗೆದುಕೊಂಡು ನೆಲವನ್ನು ಅಗೆದು ಕೆರೆಯ ಕಾರ್ಯವನ್ನು ಕೆಲವು ದಿನಗಳವರೆಗೆ ನಡೆಸಿದನು. ಚೋಳರಾಜನ ಮಗಳು ಗರ್ಭವತಿಯಾಗಿರುವುದನ್ನು ಗಮನಿಸಿದ ರೇವಣಸಿದ್ಧ ಅವಳನ್ನು ಕರೆದು ನನ್ನ ಒಡವೆಯನ್ನು ನನಗೆ ಕೊಟ್ಟು ನೀನು ತವರಿಗೆ ಹೋಗಿ ಸಂತೋಷದಿಂದ ವಿಶ್ರಾಂತಿ ಪಡೆ ಎಂದು ಹೇಳಿ ಕಳಿಸುತ್ತಾನೆ. ಇದರಿಂದ ಭಾವನಾತ್ಮಕ ಸಂಬಂಧ ಮತ್ತು ಮಾನವಿಯತೆಯ ಲಕ್ಷಣಗಳು ಕವಿಯ ಹೃದಯ ಮಂದಿರದಲ್ಲಿ ಇರುವುದು ಕಂಡು ಬರುತ್ತದೆ. ನಂತರ ಅವಳ ಗರ್ಭವನ್ನು ಸೀಳಿ ಮೂರು ತಿಂಗಳ ಪಿಂಡವ ತೆಗೆದು ಅದನ್ನು ಕೆರೆಯ ದಂಡೆಯಲ್ಲಿ ಹೂಳಿಟ್ಟು ತನ್ನ ಕಾಯಕವನ್ನು ಮುಂದುವರಿಸಿದನು. ಆಗ ಆರು ತಿಂಗಳೊಳಗೆ ಕೆರೆಯನ್ನು ನಿರ್ಮಿಸಿ ಹೂಳಿಟ್ಟ ಪಿಂಡವನ್ನು ತೆಗೆಯಲು ಗುರು ರೇವಣಸಿದ್ಧನ ಪ್ರತಿರೂಪದಂತಿರುವ ಶಿಶುವಿಗೆ ರುದ್ರಮುನಿ ಎಂದು ನಾಮಕರಣ ಮಾಡಿ ಬಿಜ್ಜಳರಾಯನ ಮಗಳಿಗೆ ಒಪ್ಪಿಸಿದನು. ತನ್ನ ಅನುರೂಪದಂತಿರುವ ರುದ್ರಮುನಿಯನ್ನು ಕರೆದು ರೇವಣಸಿದ್ಧನು ವೀರಶೈವ ದೀಕ್ಷೆಯನ್ನು ಕೊಟ್ಟು ತತ್ವಗಳನ್ನು ಬೋಧಿಸಿದನು.

ನಂತರ ಸಿದ್ಧರಾಮ ಜನಿಸುವ ವಿಷಯವನ್ನು ಸುಗ್ಗಲೆಗೆ ತಿಳಿಸಿ ಶಾಂತಮುತ್ತಯ್ಯನಿರುವ ಸರೂರು ಕ್ಷೇತ್ರಕ್ಕೆ ಬಂದನು. ಶಿಷ್ಯನಾದ ಶಾಂತಮುತ್ತಯ್ಯನೊಡನೆ ರೇವಣಸಿದ್ಧನು ಹರಭವನಗಳನ್ನು ನೋಡುತ್ತ ಕೊಲ್ಲಾಪುರಕ್ಕೆ ಹೋಗುವ ಸನ್ನಿವೇಶವನ್ನು ಚಿತ್ರಿಸಿದ್ದಾನೆ. ಅಲ್ಲಿ ಸಿದ್ಧರೊಡನೆ ವಾದಕ್ಕಿಳಿದು ಗೆದ್ದು ಶಾಪಕೊಟ್ಟು ಅವರನ್ನೆಲ್ಲ ನರಿಕುರಿಗಳನ್ನಾಗಿ ಮಾಡಿ ಆ ರಕ್ಕಸರನ್ನು ಮೂರು ಭಾಗ ಸೀಳಿ ಧೈರ್ಯದಿಂದ ಬರುವ ಶಾಂತಮುತ್ತಯ್ಯನ ನಿಜ ಚರಿತ್ರೆಯನ್ನು ಮೆಚ್ಚುವಂತಹದ್ದು. ಈ ಕುರಿಗಳ ಉಣ್ಣೆ ಕಂಬಳಿ ಗದ್ದುಗೆಗೆ, ಚರ್ಮವು ಗುರುಪಾದ ಪೂಜೆಗೆ ಉಪಯೋಗವಾಗುವ ಡೊಳ್ಳು ವಾದ್ಯಗಳಾಗಲಿ ಎಂದು ಹೇಳಿ ಶಾಂತಮುತ್ತಯ್ಯನಿಗೆ ಆಶೀರ್ವಾದಿಸಿ ಹೊರಟು ಹೋಗುವ ದೃಶ್ಯ ಜೀವಂತವಾಗಿ ಪಾತ್ರಗಳ ಮೂಲಕ ಮಾತನಾಡುತ್ತವೆ. ಮೂರನೇ ಸಂಧಿಯಲ್ಲಿ ಒಂದು ದಿನ ಕೈಲಾಸಪುರದಲ್ಲಿ ಶಿವನ ಉಪಸ್ಥಿತಿಯಲ್ಲಿ ಇಬ್ಬರು ಗಂಧರ್ವರು ಕುರೂಪಿಯಾದ ಮುನಿಯನ್ನು ನೋಡಿ ಹಾಸ್ಯದಿಂದ ನಕ್ಕರು. ಕೋಪಗೊಂಡ ಶಿವನು ನರಲೋಕದಲ್ಲಿ ಕುಡುವಕ್ಕಲಿಗರಲ್ಲಿ ಸತಿ ಪತಿಗಳಾಗಿ ಜನಿಸಿರೆಂದು ಶಾಪಕೊಟ್ಟನು. ಈ ಸತಿ-ಪತಿಗಳಿಗೆ ಒಳ್ಳೆಯ ದಿನದಲ್ಲಿ ಒಬ್ಬ ಬಾಲಕ ಜನಿಸಿದನು. ಶಿವನು ಕೊಟ್ಟ ಶಾಪದಿಂದ ಮುಕ್ತಿಗೊಳ್ಳಲು

ಮುನಿವರ್ಯನಾದ ಶಂಕರನ ಸನ್ನಿಧಿಯಲ್ಲಿ ತಮ್ಮ ಶಾಪಕ್ಕೆ ಕಾರಣವಾಗಿರುವ ಅಂಶಗಳನ್ನು ತಿಳಿಯುವ ಪರಿ ಮೆಚ್ಚುವಂತಹದ್ದು.

ಇತ್ತ ಮಧ್ಯಭಾಗದಲ್ಲಿ ಕೀರ್ತಿಯನ್ನು ಹೊಂದಿರುವ ಜಾಗ್ರತಪುರದಲ್ಲಿ ಗಂಧರ್ವರೀರ್ವರು ಮುದ್ದುಗೊಂಡ, ಮುದ್ದಾಯಿ ಎಂಬ ದಂಪತಿಗಳಾಗಿ ಹುಟ್ಟುತ್ತಾರೆ. ಇವರ ಗರ್ಭದಿಂದ ಉದಯಿಸಿದ ಮಗುವೇ 'ಆದಿಗೊಂಡ' ಸ್ವಲ್ಪ ದಿನಗಳ ನಂತರ ಮುದ್ದುಗೊಂಡನ ಸಹೋದರಿಗೆ 'ಚುಂಚಲೆ' ಎಂಬ ಮಗಳು ಜನಿಸುತ್ತಾಳೆ. ನಂತರ ಇವರಿಬ್ಬರಿಗೆ ಮದುವೆಯನ್ನು ಮಾಡಿಸಿ, ಇಬ್ಬರೂ ಪ್ರೀತಿಯಿಂದ ಸಂಸಾರ ನಡೆಸಲು ಸುಂದರವಾದ ಆಯಗೊಂಡ, ಪಾಲ್ಗೊಂಡ, ಅಮರಗೊಂಡ ಮತ್ತು ಜಾಯ್ಗೊಂಡ ಎಂಬ ನಾಲ್ಕು ಮಕ್ಕಳನ್ನು ಪಡೆಯುವರು. ಈ ಮಕ್ಕಳ ಕೆಟ್ಟಗುಣಗಳನ್ನು ನೋಡಿ ಚಿಂತಿಸುತ್ತಿರುವರು. ಆ ಸಮಯದಲ್ಲಿ ರೇವಣಸಿದ್ಧ ಶಿವನನ್ನು ಸ್ತುತಿಸುತ್ತ ಶಿಷ್ಯರೊಂದಿಗೆ ಜಾಗ್ರತ ಪಟ್ಟಣಕ್ಕೆ ಬರುವನು. ನಂತರ ತಾಂಡವನಾಡಿ ಪುರವನ್ನು ನೋಡುತ್ತ ಇದು ಶೀವಕ್ಷೇತ್ರ, ಶೀವನಿಲಯವೆಂದು ಸ್ಥಳದ ಮಹಿಮೆಯನ್ನು ತಿಳಿಸುವನು. ಸಂಚರಿಸುತ್ತ ರೇವಣಸಿದ್ಧನು ಕುಡುವಕ್ಕಲಿಗರ ಸಾಲುಮನೆಗಳತ್ತ ಬಂದು ಅಲ್ಲಿರುವ ಚುಂಚಲೆಯನ್ನು ನೋಡಿ ನಿನ್ನ ಪೂರ್ವ ಪುಣ್ಯದ ಫಲದಿಂದ ನಿನ್ನ ಉದರದಲ್ಲಿ ಐದು ತಿಂಗಳೊಳಗಾಗಿ ಪ್ರಜ್ವಲಿಸುವ ಮಗು ಜನಿಸುವುದು ಎಂದು ಆಶೀರ್ವದಿಸುವನು. ಅದರಂತೆ ಮಗು ಜನಿಸುವುದು ಶಿವನ ಕರುಣೆಯಿಂದ ಜನಿಸಿದ ಮಗುವಿಗೆ 'ಶಿವಪದ್ಮ' ಎಂಬ ಹೆಸರಿಡುವಳು.

ಸಂಧಿ ನಾಲ್ಕರಲ್ಲಿ ಆದಿಗೊಂಡನು ನಿದ್ರೆಯಿಂದ ಎದ್ದು ಸುವಿವೇಕದಿಂದ ಸಂತೋಷದಿಂದ ಮುಸುಕಿನಲ್ಲಿ ಮರೆಯಾದ ಬಾಲಕನನ್ನು ತನ್ನ ಸತಿಯ ಸಮ್ಮುಖದಲ್ಲಿ ದಿಟ್ಟಿಸುತ್ತ ಈತ ನನಗೆ ಯೋಗ್ಯವಾದ ಪುತ್ರನೆಂದು ನುಡಿದನು. ಆಗ ನಾಗತಿಯು ಎದ್ದು ಸಿರಿಸರಸ್ವತಿ ಗೌರಿಯರು ಬಂದು ಜೋಗುಳವನ್ನು ಹಾಡಿ ಶಿವಪದ್ಮವೆಂದು ಹೆಸರಿಟ್ಟು ಪುಷ್ಪವೃಷ್ಟಿಯಗಿರಿಸಿ ಪರಶಿವನ ಸಕಲ ಸಾಮರ್ಥ್ಯ ಇರಲೆಂದು ಹಾರೈಸಿ ಸ್ವರ್ಗಕ್ಕೆ ಪಯಣಿಸಿದಾಗ ಎಚ್ಚರವಾಯಿತು ಎಂದು ಹೇಳಿದಳು. ಶಿವನ ಲೀಲೆಯನ್ನು ಸತ್ಯವೆಂಬಂತೆ ಕನಸಿನಲ್ಲಿ ನಡೆದ ವೃತ್ತಾಂತವನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಆದಿಗೊಂಡನು ತನ್ನ ಸಹೋದರಿಯ ಮಗಳಾದ ಜಂಕಾದೇವಿಯೊಂದಿಗೆ ಶಿವಪದ್ಮನ ಮದುವೆ ಮಾಡುತ್ತಾನೆ. ಇತ್ತ ರೇವಣಸಿದ್ಧನು ಶಿವಪದ್ಮನನ್ನು ನೋಡಬೇಕೆಂದು ಜಾಗ್ರತಿಪುರಕ್ಕೆ ಬಂದು ಗಂಗಮ್ಮನೆಂಬ ಕಡುಬಡವಿಯ ಮನೆಗೆ ತೆರಳಿ ಅತಿಥಿ ಸತ್ಕಾರ ಸ್ವೀಕರಿಸಿ ಆಕೆಯ ಗುಣಗಾನ ಭಕ್ತಿ ನಿಷ್ಠೆಯನ್ನು ಮೆಚ್ಚುತ್ತಾನೆ. ಹೊರಡಲು ಮುಂದಾದಾಗ ಗಂಗಮ್ಮ ಕಂಬಳಿಯ ಗದ್ದುಗೆಯಲ್ಲಿ ನಿಧಿಯನ್ನು ಕಂಡು "ತಾಪಸೋತ್ತಮನೇ ದ್ರವ್ಯವ ತಂದು ಗದ್ದುಗೆಯ ಕೆಳಗಿರಿಸಿ ವಿಸ್ಮರಣದಿ ಇಲ್ಲಿಟ್ಟು ಪೋಗುವದಿದುತ್ತಮವೇ ಗುರುವರನೇ ಸಲ್ಲದೆನಗೀ ಹೊನ್ನು ತೆಗೆದುಕೊಳ್ಳಿರೀ ಬೇಗ ವಲ್ಲೆ ನಿಮ್ಮಯ ಪದಾರ್ಥವ"[೬೫] ಎಂದು

ಬಿನ್ನವಿಸಿಕೊಂಡಳು. ಪರರಿತ್ತ ಧನವಲ್ಲ ಮೇಣೆನ್ನದಲ್ಲ ಎನ್ನುತ್ತ ರೇವಣಸಿದ್ಧನು, ಶಿವನು ನಿನ್ನ ಭಕ್ತಿಗೆ ಮೆಚ್ಚಿಕೊಟ್ಟಿರುವನು. ಇದು ನಿನಗೆ ಸಲ್ಲತಕ್ಕದೆಂದು ಹೇಳಿ ಆಶೀರ್ವದಿಸಿ ಆದಿಗೊಂಡನ ಮನೆಗೆ ಬಂದು ಆದರಾತಿಥ್ಯವನ್ನು ಸ್ವೀಕರಿಸಿ ಶಿವಪದ್ಮನನ್ನು ಪ್ರೀತಿಯಿಂದ ಮುದ್ದಿಸಿ, ಚುಂಚಲೆಗೆ ಆಶೀರ್ವದಿಸುತ್ತ ಜಯಶೀಲಳಾಗು ಎಂದು ಹರಿಸಿ, ಶಿವಪದ್ಮನಿಗೆ ಶಿವಪಂಚಾಕ್ಷರಿ ಮಂತ್ರವನ್ನು ಬೋಧಿಸಿ ಕುರಿಗಳ ಸಲಹು ಸತತ, ನೀನೇ ಕುರಿಗಳನ್ನು ಕಾಯುತ್ತ ಚಂದವಾಗಿ ಶ್ರೀಗಿರಿಯ ಸಮೀಪಕ್ಕೆ ನಡೆ ಎಂದು ಹೇಳಿ, ನಿನ್ನನ್ನು ರಕ್ಷಿಸುವೆ ಎನ್ನುತ್ತ ರೇವಣಸಿದ್ಧನು ಹೊರಟು ಹೋಗುವ ಸನ್ನಿವೇಶವನ್ನು ಕಥೆಯ ರೂಪದಲ್ಲಿ ನಿರೂಪಿಸಲಾಗಿದೆ.

ಸಂಧಿ ಐದರಲ್ಲಿ ಗುರುವಿನ ಸಲಹೆ ಸೂಚನೆಯ ಮೇರೆಗೆ ನ್ಯಾಯ, ನೀತಿ, ಧರ್ಮದಿಂದ ಕೈಯಲ್ಲಿ ಕೋಲು ತಲೆಯ ಮೇಲೆ ಕಂಬಳಿ ಹೊದ್ದು ಬೆಟ್ಟದ ಬುಡದಲ್ಲಿ ಗುಡಿಸಲನ್ನು ನಿರ್ಮಿಸಿಕೊಂಡು ಶಿವಪದ್ಮನು ಕುರಿಕಾಯುತ್ತ ಸುಖದಿಂದಿದ್ದನು. ಖೇಚರನು ಶಾಪವಿಮೋಚನೆಗಾಗಿ ಬೇಡಿಕೊಳ್ಳಲು ಶಿವನು "ನೀಂ ಧರೆಗೆ ಪೋಗಿ ಜಾಬಾಲ ಮುನಿಯಾಗಿ ಪುಟ್ಟು, ಸದುಗುಣದಿ ಕೂಡಿ ಯೋಗಭ್ಯಾಸವ ಮಾಡು ಘನಮುದದಿಂದ"[೪೬] ಎಂದು ಹರಿಸಿದನು. ಖೇಚರನು ವಿರಕ್ತನಾಗಿ ಭೂಮಿಯೊಳು ಉದಯಿಸಿ ಗಿರಿತಟ್ಟದಲ್ಲಿ ಯೋಗಭ್ಯಾಸ ಮಾಡುತ್ತಿರಲು ಇತ್ತ ರಾಜ ಗಂಗಾಧರನ ರಾಣಿ ಚಂಗಲಾದೇವಿಯರು ಗಂಡು ಮಗು ಜನಿಸಿದರಿಂದ ಸಂತೋಷದಿಂದಿದ್ದರು. ಮಹೇಶ್ವರನು ಮೃತ್ಯು ದೇವಿಯ ಕರೆದು ಭೂಲೋಕಕ್ಕೆ ಹೋಗಿ ನೂತನ ಪುರದ ರಾಜಕುಮಾರನ ರುಂಡವನ್ನು ಕತ್ತರಿಸಿ ತಪಸ್ಸಿನಲ್ಲಿ ಕುಳಿತಿರುವ ಜಾಬಾಲ ಮುನಿಯ ಸನ್ನಿಧಿಯಲ್ಲಿಟ್ಟು ಬಾ ಎನ್ನಲು ಮೃತ್ಯದೇವತೆ ಆ ಕಾರ್ಯ ಮಾಡಿದಳು.

ಚಂಗಲೆಯು ಎಚ್ಚರಗೊಂಡು ಕೂಸಿನ ಮೇಲಿರುವ ಬಟ್ಟೆಯನ್ನು ತೆಗೆಯಲು "ಈಗಲೇ ಸುತ್ತನುತ್ತ ಮಾಂಗಮಂ ಕತ್ತರಿಸಿ ಪೋಗಿರ್ಪರಯ್ಯಯ್ಯೋ ಮಾಡಲಿನ್ನೇನು"[೪೭] ಎಂದು ರೋಧಿಸತೊಡಗಿದಳು. ರಾಜನು ಮಂತ್ರಿಯನ್ನು ಕರೆಯಿಸಿ ರುಂಡವನ್ನು ಕತ್ತರಿಸಿದ ದುಷ್ಟರ ತಲೆಯನ್ನು ಕತ್ತರಿಸಬೇಕು ಎಂದು ಆಜ್ಞೆ ಮಾಡಿದನು. ಬೆಟ್ಟದ ಗಿಡದಡಿಯಲ್ಲಿ ಕುಳಿತಿದ್ದ ಮುನಿಯ ಮುಂದೆ ರುಂಡವನ್ನು ನೋಡಿ ಅಳುತ್ತ ಬಂದು ರಾಜನಿಗೆ ತಿಳಿಸಲು ಕೋಪದಿಂದ ರಾಜನು ಚಂದ್ರಾಯುಧದ ಮೂಲಕ ಜಾಬಾಲ ಮುನಿಯ ರುಂಡವನ್ನು ಕತ್ತರಿಸಿ ಹಾಕುತ್ತಾನೆ. ಭೂಮಿಯ ಮೇಲೆ ಬಿದ್ದ ಆ ಮುನಿಯ ರಕ್ತದಲ್ಲಿ ಬಗೆ ಬಗೆಯಾದ ಅಸಂಖ್ಯಾತ ಕುರಿಗಳು ಜನಿಸಿದವು. ಇತ್ತ ಜಾಬಲ ಮುನಿಯು ಶಾಪವಿಮೋಚನೆ ಪಡೆಯುವನು.

ಇತ್ತ ರಾಹುತರು, ಮಂತ್ರಿಗಳು ರಾಜನೇ ಸ್ವತಃ ಕುರಿಗಳನ್ನು ಕಾದು ಬೇಸತ್ತು ಶಿವಧ್ಯಾನ ಮಾಡಲು ಶಿವ ಬರ್ಮನಿಗೆ ಹೇಳುತ್ತಾನೆ. ಬರ್ಮ ಬೆಸತ್ತಾಗ ಶ್ರೀ ಹರಿಯನ್ನು ನೇಮಿಸುತ್ತಾನೆ. ಆತ ಕಂಬಳಿಯನ್ನು ಧರಿಸಿ ಕುರಿಗಳನ್ನು ಸಂರಕ್ಷಿಸುತ್ತ ಗುಡ್ಡಗಾಡುಗಳನ್ನು ತಿರುಗಿ ಬೇಸರಗೊಂಡಾಗ ಕೊನೆಗೆ ಶಿವ ಪಾರ್ವತಿ ಕುರಿಗಳನ್ನು ಕಾಯುತ್ತ ಗಣಪತಿಯ ಜೊತೆಗೆ ಜಾಗೃತಪುರಕ್ಕೆ ಬರುವಳು. ಆ ಪ್ರದೇಶದ ಎಡಬಲದ

ಗುಡ್ಡಗಳಲ್ಲಿ ಮೂರು ಕಣ್ಣುಳ್ಳ ಹುತ್ತವನ್ನು ಹುಡುಕಿ ಶಿವಪಂಚಾಕ್ಷರಿ ಮಂತ್ರವನ್ನು ಜಪಿಸಿ ಆ ಹುತ್ತದೊಳಗೆ ಎಲ್ಲ ಕುರಿಗಳನ್ನು ನೂಕಿದರು. ಕುರಿಗಳಿಗೆ ತೊಂದರೆಯಾಗದಂತೆ ತನ್ನ ಮೊಲೆಯ ಹಾಲಿನಿಂದ ಮಣ್ಣನ್ನು ಹದ ಮಾಡಿ ಮುಚ್ಚಿ ಮುತ್ತಿನ ಮೂಗುತಿಯ ಮುದ್ರೆಯೊನ್ನೊತ್ತಿದಳು. ವೀರಭದ್ರನನ್ನು ಕಾವಲಿಟ್ಟು ಆ ಮೂಗುತಿ ಮುತ್ತುಗದ ಮರವಾಗಿ ಬೆಳೆಯಲೆಂದು ಹರಿಸಿಹೋದಳು.

ಜಾಗ್ರತಪಟ್ಟಣದಲ್ಲಿ ಶಿವಪದ್ಮನು ಶುದ್ಧಮನದಿಂದ ಕುರಿಗಳನ್ನು ಕಾಯುತ್ತ ಇರಲು ಅವನ ಹೆಂಡತಿ ಜಿಂಕಾದೇವಿ ಗರ್ಭವತಿಯಾದ ಸುದ್ದಿ ಕೇಳಿ ಆನಂದಭರಿತನಾಗಿ ಗುರುವನ್ನು ಧ್ಯಾನಿಸುವನು. ಜನಿಸಿದ ಮಗನಿಗೆ ರೇವಣ್ಣನೆಂದು ನಾಮಕರಣ ಮಾಡುವರು. ಆದಿಗೊಂಡ ತನ್ನ ಎಲ್ಲ ಮಕ್ಕಳನ್ನು ಕರೆದು "ಎಲೆ ಸುತರೆ ಎಮ್ಮ ಹಿರಿಯರ್ಮಾಡುತಿರ್ದ ಹೊಸನೆಲಗಳಂ ಬಿಟ್ಟು ಕುರಿಗಳಂ ಕಾಯ್ದುದೊಂದೆ ಘನ ಕೆಲಸಮಂ ಮಾಡುತ್ತ ಸೋಮಾರಿತನದಿಂದ ವರ್ತಿಸುವದುಚಿತಮಲ"[೪೮] ನೇಗಿಲಹೂಡಿ ಹೊಲ ಹಸನು ಮಾಡಿದರೆ ಉತ್ತಮವಾದ ಬೆಳೆಯ ಜೊತೆಗೆ ಪಶುಪಕ್ಷಿಗಳು ಬದುಕುತ್ತವೆ ಎನ್ನುವ ಈ ಮಾತುಗಳನ್ನು ಕೇಳಿದ ಜಾಯ್ಗೊಂಡ, ಪಾಯ್ಗೊಂಡರು ತಮ್ಮಿಂದ ಸಾಧ್ಯವಿಲ್ಲವೆಂದರು. ಇತ್ತ ಶಿವಪದ್ಮನು ತಂದೆಗೆ ಮರುಮಾತನಾಡದೆ ನೇಗಿಲ, ಎತ್ತುಗಳನ್ನು ಹೂಡಿಕೊಂಡು ಹೊಲಕ್ಕೆ ಹೋಗಿ ಮನದಲ್ಲಿ ರೇವಣಸಿದ್ಧನನ್ನು ನೆನೆದು ಹೊಲ ಊಳಲು ಪ್ರಾರಂಭಿಸಲು ತಾಯಿ ಮಮತೆಯಿಂದ ಬುತ್ತಿಯನ್ನು ತರಲು ಎಲ್ಲರೂ ಉಂಡು ಉಳಿದುದನ್ನು ಚೆಲ್ಲಾಡುವರು. ಶಿವಪದ್ಮನು ಗುರುವಿನ ಧ್ಯಾನದಿಂದ ಪರಮಾನ್ನವನ್ನು ಸೇವಿಸುವನು. ಶಿವಪದ್ಮ ಮತ್ತೆ ಹೊಲವನ್ನು ಊಳುತ್ತಿರುವಾಗ ಮೂರು ಕಣ್ಣಿನ ಹುತ್ತ ನೇಗಿಲಿಗೆ ತಾಕುವುದು. ಆಗ ಹೊಸ ಬಣ್ಣದಿಂದ ಕಂಗೊಳಿಸುವ ಕುರಿಗಳು ಹೊರ ಬರುವವು. ಇಲ್ಲಿ ಕವಿ ಭಕ್ತಿಯ ಮೂಲಕ ಶಿವನ ಲೀಲೆಯನ್ನು ಎತ್ತು, ಹೊಲ, ಕುರಿಯ ಮೂಲಕ ಸಂಕೇತ ರೂಪದಲ್ಲಿ ಬಿಂಬಿಸಿದ್ದಾನೆ.

ಸಂಧಿ ಆರರಲ್ಲಿ ಶಿವಪದ್ಮನು ಕುರಿಯನ್ನು ಕಾಯುತ್ತಾ ಸಂತೋಷದಿಂದ ಕೊಳಲನೂದುತ್ತಾ ಭುವನವೆಲ್ಲ ತಿರುಗಿ ಬೇಸತ್ತನು. ಆಗ ಶಿವನು ಪ್ರತ್ಯಕ್ಷನಾಗಲು ಶಿವಪದ್ಮನು "ಕುರಿಗಳಂ ಕಾಯ್ದು ನಾಂ ಕೊರಗಿದೆ, ಸೊರಗಿದೆ ವರಗಿರಿಗಳಂ ಸುತ್ತಿ ತವೆ ತೆರಳಿದೆ ಹೊರಳಿದೆ ಎಳೆ ಮರಿಗಳಂ ಹೊತ್ತು ಬಲುಬಳಲಿದೆ ತೋಳೀದೆ ಹೆಗ್ಗಾಡಿನೋಳ್ವಾಸಮಾದೇ ಕುರಿಗಳಂ ಕಂಡು ಕಂಡಳಕಿದೆ ಬಳಕಿದೆನತಿ ಕೆರೆಗಳಂ ಹುಡುಕಿ ನೀರ್ಗುಡಿಸಿದೆ ಪಡಿಸಿದೆ ಸುಖಹರಿಗಳಂ ನೋಡಿ ಭಯ ಧರಿಸಿದೆ ನಿನ್ನಯ ಪಾದವನುಜಗಳೆನಲ್ಲೂ"[೪೯] ನೀನು ಬಳಲಬೇಡ ನಿನ್ನ ಜೊತೆಯಲ್ಲಿ ವೀರೇಶನನ್ನು ಕಳುಹಿಸುವೆ ಕುರಿಗಳನ್ನು ಸಲುಹುತ್ತ ಸುಖವಾಗಿರು ಎಂದು ಹರಿಸಿದನು.

ಹನ್ನೆರಡು ವರ್ಷ ಕಳೆದ ಶಿವಪದ್ಮನು ಗಣತೃಪ್ತಿಗೈಯಲು ಒಪ್ಪಿ ಬೆಂಕಿಯನ್ನು ತರಲು ಕಾಡಿಗೆ ಹೋಗುವನು. ದೂರದ ಮನೆಯೊಂದರಲ್ಲಿ ಹೊಗೆ ಬರುವುದು. ದಟ್ಟ ಅರಣ್ಯದ ಮಧ್ಯದಲ್ಲಿ ಮನೆಯನ್ನು

ನಿರ್ಮಿಸಿದವರು ಯಾರು ಎಂದು ಯೋಚಿಸುವುದು. ಮನೆಯ ಹತ್ತಿರ ಹೋದಾಗ ಬೆಂಕಿ ಕೇಳುವುದು ಮನೆಯೊಳಗಿರುವ ಚೆಲುವೆ ಚುಮಲಾದೇವಿ ಶಿವಪದ್ಮನನ್ನು ನೋಡಿ ಮನುಷ್ಯರಾದವರು ಇಲ್ಲಿಗೆ ಬರುವುದು ಸಾಧ್ಯವಿಲ್ಲ ಹೇಳಿ ನಿನ್ನ ವೃತ್ತಾಂತವೇನು ಎಂದು ವಿಚಾರಿಸುವಳು. ರೇವಣಸಿದ್ಧನ ಶಿಷ್ಯ ಶಿವಪದ್ಮ ಎಂದು ಹೇಳಿದನು. ಚುಮಲಾದೇವಿ ತನ್ನ ವೃತ್ತಾಂತ ಹೇಳುವಳು. ಶಿವಪದ್ಮ ಗಣತೃಪ್ತಿಗೊಳಿಸಿ ಮತ್ತೆ ಬರುವೆ ಎಂದು ವಚನವಿತ್ತು ಬೆಂಕಿಯನ್ನು ತೆಗೆದುಕೊಂಡು ಹೋಗುವನು. ಗಣಸಮೂಹದೊಂದಿಗೆ ಭೋಜನ ಸ್ವೀಕರಿಸಿದ ರೇವಣಸಿದ್ಧನು ಶಿವಪದ್ಮನಿಗೆ ಆಶೀರ್ವದಿಸಿ ನಡೆದನು. ಇತ್ತ ವಚನ ಕೊಟ್ಟಂತೆ ಶಿವಪದ್ಮ ಉಳಿದ ಪ್ರಸಾದವನ್ನು ತೆಗೆದುಕೊಂಡು ಚುಮಲಾದೇವಿಯತ್ತ ಹೋಗಿ ಪ್ರಸಾದವನ್ನು ಕೊಡುವನು. ಕೈಮುಗಿದು ನನ್ನನ್ನು ವರಿಸಬೇಕೆಂದು ಬಿನ್ನೈಸಿಕೊಳ್ಳುವ ಪರಿ ದೈನ್ಯತಾಭಾವವನ್ನು ಬಿಂಬಿಸುತ್ತದೆ. ಹೀನ ಕುಲದವಳಾದ ರಕ್ಕಸಿಯಲ್ಲಿ ಅನುದಿನವೂ ಬಾಳುವ ನಿನ್ನನ್ನು ವರಿಸಲು ಆಗುವುದಿಲ್ಲ ಎನ್ನುವ ದೃಶ್ಯ ಚುಮಲೆಯ ಮನಸೋತ ಮಾನನೀಯ ಬಿಟ್ಟು ಬಳಲಿಸುವುದು ಉಚಿತವೇ. ಘನತರವೇ ನೀಡೆನ್ನಭಯ ಬಹುಬೇಗದಿ ಮುನಿಸ್ಯಾಕೆ ಸಾಕು ಸೈರಿಸು ಶಾಂತನಾಗು ಕುಂದಿಟ್ಟು ಪೋಗುವುದುಚಿತವೇ ಜಾತಿದೋಷವೆನಿಸಬೇಡ ಎಂದು ತೂಗು ಮಂಚದ ಮೇಲೆ ಶಿವಪದ್ಮನನ್ನು ಕೂಡಿಸಿ ಪಂಚಾಮೃತವ ಉಣಬಡಿಸಿ ರತಿಕೇಳಿಯಲ್ಲಿ ಮಗ್ನರಾಗುವರು. ರಕ್ಕಸಿಯ ಅರ್ಭಟ. ಚುಮಲೆಯು ವೈರಿಗಳು ನಿನ್ನನ್ನು ಕೊಂದರೆ ನಾನು ಒಬ್ಬಳೇ ಹೇಗೆ ಇರಲಿ ಎಂದು ರಕ್ಕಸಿಯನ್ನು ಪ್ರಶ್ನಿಸುವಳು. ಒಂದು ವೇಳೆ ಕೊಂದರೆ ಮನೆಯ ಮುಂದಿರುವ ಕಾಂಚಾಲ ಮರದಲ್ಲಿರುವ ಕಾಗೆಯನ್ನು ಕೊಲ್ಲಲು ಆ ಮರವು ನೆಲಕ್ಕುರುಳುವುದು. ಆಗ ನಾನು ನೆಲಕ್ಕುರುಳಿ ಸಾಯುವೆನು ಎಂದು ರಕ್ಕಸಿ ಹೇಳಿದಳು. ಶಿವಪದ್ಮನು ಕಾಗೆಯನ್ನು ಕೊಲ್ಲುವ ಉಪಾಯವನ್ನು ರೇವಣಸಿದ್ಧನಿಂದ ತಿಳಿದುಕೊಂಡು ಕಾಗೆಯನ್ನು ಕತ್ತರಿಸಿದಾಗ ರಕ್ಕಸಿಯು ನೆಲಕ್ಕೆ ಬಿದ್ದು ಸಾವನ್ನಪ್ಪುವಳು. ಯತಿವರನ ಶಾಪವು ಮುಗಿಯುವುದು. ಶಿವಪದ್ಮ ಮುಕ್ತಿಯನ್ನು ಹೊಂದಿ ಮೂವರು ಗಂಧರ್ವರು ಕೈಲಾಸಕ್ಕೆ ತೆರಳುವರು.

ಸಂಧಿ ಏಳರಲ್ಲಿ ಶಿವಪದ್ಮ ರಕ್ಕಸಿಯ ಅವಯವಗಳಿಂದ ಐವತ್ತೆರಡು ಬಿರುದುಗಳನ್ನು ಮಾಡಿ ಬಂಕಾಪುರದೊಳಿಟ್ಟು ಚುಮಲೆಯೊಂದಿಗೆ ಕುರಿಕಾಯುತ್ತ, ಇರುವಾಗ ನಾರದನು ಕೈಲಾಸದಲ್ಲಿ ಶಿವನಿಗೆ ತಿಳಿಸುತ್ತಾನೆ. ಬಿರುದಾವಳಿಗಳನ್ನು ಕಾಯಲು ಬಾಗಿಬಂಕಣ್ಣನನ್ನು ಕರೆದು 'ಹಾಳು ಬಂಕಾಪುರಕ್ಕೆ ಹೋಗಿ ಪದ್ಮನ ಬಿರಿದ ಮೇಳದಿಂದಿಟ್ಟು ಪಾಲಿಸು ಮುಂದೆ ಶಿವಸಿದ್ಧ ಬೀರನುದ್ಭವಿಸುತಿಹನು'[೫೦] ಎಂದು ಭೂಲೋಕಕ್ಕೆ ಕಳುಹಿಸುವ ಚರಿತ್ರೆ ಬರುತ್ತದೆ. ಶಿವಪದ್ಮನ ಶಿವಭಕ್ತಿ ಕಂಡ ರೇವಣ್ಣ ಸಿದ್ಧ ಚುಮಲಾದೇವಿಯೊಂದಿಗೆ ಶಿವಪದ್ಮನ ಮದುವೆಯನ್ನು ಮಾಡಿ ಆಶೀರ್ವಾದ ನೀಡುವನು. ಇತ್ತ ಗುರುಸ್ಮರಣೆ ಮಾಡುತ್ತ ಕುರಿಗಳ ಜೊತೆಗೆ ಪದ್ಮನು ಜಾಗ್ರತಿಪುರಕ್ಕೆ ಆದಿಗೊಂಡನ ಹೊಲಕ್ಕೆ ಬರುವನು. ಕುರಿಗಳು ಹೊಲದಲ್ಲಿ ಮೇಯ್ದು ಬೆಳೆಯನ್ನು ನಾಶಮಾಡಲು, ಜಾಯ್ಗೊಂಡ, ಪಾಯ್ಗೊಂಡ, ಆಮರಗೊಂಡರೆಲ್ಲರೂ ಕೋಪಗೊಂಡು

'ಭಂಡ ನೀನಾವವನೆಲೊ ಭರದಿಂದ ಬಂದು ಕುರಿಹಿಂಡುಗಳೆಮ್ಮ ಹೊಲಮಂ ಪೋಗಿಸಿ ಭುವನದೊಳು ಮುಂಡನಂತ್ಯೆ ತರುವಿ ಛೀ ನಿನಗೆ ನಾಚಿಕಿಲ್ಲವೆ ನೀಚ ದುರ್ನೀತನೇ ದಂಡಿಸುವೆವೀಗ'[೫೧] ಎಂದು ಬೈಯ್ಯುವರು. ಇತ್ತ ಸಹೋದರರು ತಾಯಿ ನಿನಗಾಗಿ ಕೊರಗಿ ದುಃಖಿತಳಾಗಿದ್ದಾಳೆ ಎಂದು ಬೇಡಿಕೊಳ್ಳಲು ತಿರಸ್ಕಾರ ಭಾವದಿಂದ ಕುರಿಗಳೊಂದಿಗೆ ಮುಂದಕ್ಕೆ ಹೋಗುವನು. ಮಗ ಬಂದ ಸುದ್ದಿಯನ್ನು ತಿಳಿದು ತಾಯಿಯ ವಾತ್ಸಲ್ಯ ಪುತ್ರನನ್ನು ಮಗುವಿನಂತೆ ಮಾತನಾಡಿಸುವಳು. ಆಗ ಪದ್ಮನು "ಈ ಲೌಕಿಕ ಸುಖದಾಪೇಕ್ಷೆಯನಗಿಲ್ಲ. ಭವಜಾಲಮಂ ಪರಿದು ಮುಕ್ತನ ಮಾಡ್ದ ಗುರುಸಿದ್ಧಂ ಪಾಲಿಸುವೆ"[೫೨] ಎಂದು ಹೇಳಿದನು. ನಂತರ ಚುಮಲೆಯನ್ನು ಕರೆದುಕೊಂಡು ಮಾತಾಪಿತರ ಮನೆಗೆ ತೆರಳುವನು. ಸ್ವಲ್ಪ ದಿನಗಳು ಗತಿಸಿದ ನಂತರ ರೇವಣ ಎಂಬ ಮಗ, ಒಬ್ಬ ಮಗಳು ಜನಿಸುವರು. ಹೀಗಿರುವಾಗ ರೇವಣಸಿದ್ದೇಶರನು ಆಗಮಿಸಿ "ಈಗಲೇ ಲೌಕಿಕದ ವಿಷಯದಾಪೇಕ್ಷೆಯಂ ಬಿಟ್ಟು ಕೈಲಾಸಪುರಕ್ಕೆ ಬೇಗದಿ ನಡೆ ಶಿವವಲ್ಲಭನನಾಜ್ಞೆ ನಿನಗಾಗಿಹುದು ಪುಸಿಯಲ್ಲ"[೫೩] ಎನ್ನಲು ಶಿವಪದ್ಮ ನಮಸ್ಕರಿಸಿ ಕೈಲಾಸಕ್ಕೆ ಹೋಗುವನು. ಮುಂದೆ ಶಿವಪದ್ಮನ ಮಹಿಮೆಗಳನ್ನು ಮೆಚ್ಚಿ ಶಿವನು ಚಂದ್ರಗಿರಿ ಅರಸ ನಿಲಂಕಾರ ಮಹಾರಾಜನ ಮಗ ಬರ್ಮದೇವನ ಪುತ್ರನಾಗಿ ಜನಿಸಿ ಭೂಮಿಯಲ್ಲಿ ಮಹಿಮೆಯನ್ನು ತೋರು ಎಂದು ಹರಸುವನು.

ಇತ್ತ ಶಿವನ ಆಜ್ಞೆಯಂತೆ ಗುರು ರೇವಣಸಿದ್ಧನನ್ನು ಸ್ಮರಿಸಿ ಶಿವಪದ್ಮ ಸಹೋದರನನ್ನು ಕರೆದು ಸತಿಪುತ್ರರನ್ನು ಸಂತೈಸಿ, "ಅವನಿಯೊಳ್ಸು ರೂಪರಾಗಿರಿ ಗುರುಲಿಂಗಜಂಗಮಕ್ಕಭಿನಮಿಸಿರಿ ತವೆ ಶೋಭಿಸುವ ಪಾಲ್ಮತವನುದ್ಧರಿಸಿರಿ ದುರ್ಭವದೂರ ರೇವಣಾರಾಧ್ಯನ ಸುಪಾದ ಸರೋಜನ ನಿರಂತರದಿ ಸ್ಮರಿಸಿರಿ ಸತ್ತ ಕುರಿಗಳಂ ಹೊತ್ತು ವಿಕ್ರೈಸಿರಿ"[೫೪] ಎಂದು ಹೇಳಿ ಕೈಲಾಸಕ್ಕೆ ಹೋಗುವನು. ಶಿವನು ಬರ್ಮದೇವನ ಮಡಿದಿಯ ಮಗನಾಗಿ ಜನ್ಮವ ಪಡೆದು ಈ ಲೋಕವನ್ನುದ್ಧರಿಸು ಎನ್ನಲು ಶಿವನಾಡಿದ ನುಡಿಗಳನ್ನು ಕೇಳಿ ಶಿವಪದ್ಮ ನಮಸ್ಕರಿಸಿ ನನಗೊಬ್ಬ ಶಿಷ್ಯನನ್ನು ಕೊಡು ಎಂದು ಬೇಡಿಕೊಳ್ಳಲು ಬಿಲ್ವಾಡಪುರದ ಸೋಮರಾಯನ ಪುತ್ರ ಮಾಳಿಂಗರಾಯನನ್ನು ಕಳುಹಿಸುವನು. "ನೀನಂದ ನುಡಿಯೇ ನಿಜಮಂತ್ರನಿಂದೆದ್ದ ಸುಕ್ಷೇತ್ರ ಮೇಣ್ ಪಿಡಿದ ಮೃತ್ತಿಕೆ ನಿನಗೆ ಹೊನ್ನಾಗಲೆಂದು ಪಂಚಾಕ್ಷರಿಯ ಬೋಧಿಸಿದನು."[೫೫] ಸುರಾವತಿಯು ಗರ್ಭಿಣಿಯಾಗಿ ಮಧುರನ್ನಾವನು ಬಯಸಿ ಅಣ್ಣನಾದ ಹರಿದೇವನಿಗೆ ಹೇಳುವ ದೃಶ್ಯ ಸಹೋದರಿಯ ಗರ್ಭದಲ್ಲಿ ಜನಿಸಿ ಮುಂದೆ ತನ್ನ ಮಗಳ ಗಂಡನಾಗಿ ಬಂದು ನನ್ನನ್ನು ಪರಿಹಾಸ್ಯ ಮಾಡುವನೆಂದು ಭಾವಿಸಿ ಹರಿದೇವನು ವಿಷ ಬೆರೆಸಿದ ಮಧುರಾನ್ನ ತರುವನು. ಸುರಾವತಿಯ ಆ ಮಧುರಾನ್ನವನ್ನು ಸೇವಿಸದೆ ಶುಭಮುಹೂರ್ತದಲ್ಲಿ ಸುವರ್ಣ ಜಡೆಯುಳ್ಳ ಸುಪುತ್ರನಿಗೆ ಜನ್ಮ ನೀಡುವಳು. ಹರಿದೇವನು ಜ್ಯೋತಿಷಿಯ ವೇಷಧಾರಿಯಾಗಿ ತಂಗಿ ಮನೆಗೆ ಬಂದು ಶಿಶು ಪುಟ್ಟಿದ ಮುಹೂರ್ತವು ಹೀನವು ಒಂದು ಮಾಸಕ್ಕೆ ನಿನ್ನಾಗ್ರಜೆಗೆ ಮರಣವು ಎಂದು ಹೇಳುತ್ತಾನೆ. ಈ ಮಾತನ್ನು ನಂಬಿದ ಸುರಾವತಿಯು ಮಗುವನ್ನು ಕೊದಲಿ ಬನದ ಹಾಲಹೇವಲಿ ಹಳ್ಳದ ವಟವೃಕ್ಷದ ಕೆಳಗೆ ಬಿಟ್ಟು ಬರುವಳು.

ಪಾರ್ವತಿ ಸಹಿತ ಶಿವನು ಹಾಲಹೇವಲಿ ಹಳ್ಳಕ್ಕೆ ಬಂದು ಪ್ರೀತಿಯಿಂದ ಆ ಮಗುವಿಗೆ ಶಿವಸಿದ್ಧಬೀರ ಎಂದು ಹೆಸರಿಡುವರು. ಭೂಮಂಡಲದಿ ಘನಾರ್ಭಟದಿ ರಿಪುಗಳಗೆದ್ದು ಭುವನದೊಳಗೆ ಬಾಳು ಎಂದು ಹರಿಸಿ ಕೊಲ್ಲಿಪಾಕಿಯ ಪುರದಲ್ಲಿರುವ ಮಾದರಚನ್ನಯ್ಯನ ಮನೆಗೆ ಹೋಗಿ ಅಂಬಲಿಯನ್ನು ಕುಡಿದು, ವಟವೃಕ್ಷವನ್ನು ನೋಡಿ ಸುರಕನ್ಯೆಯರು ಗರ್ಭವತಿಯಾಗಲೆಂದು ಹರಸಿ ದೇವಗನ್ಯೆಯರು ಗರ್ಭವತಿಯಾಗಿ, ಲಕ್ಷ್ಮಮ್ಮ, ಮಾಯಮ್ಮ, ಮಂಕಮ್ಮ, ಮಾಳೆಮ್ಮ ಮತ್ತು ಅಕ್ಕಮ್ಮ ಮಕ್ಕಳಿಗೆ ಜನ್ಮ ನೀಡುವರು. ನಂತರ ಇವರೆಲ್ಲ ದೊಡ್ಡವರಾಗಿ ಕುರಿ ಮೇಯಿಸುತ್ತ ಹಾಲಹೇವಲಿ ಹಳ್ಳದತ್ತ ಬರುವರು. ಅಲ್ಲಿ ಮಗುವಿನ ಚಿತ್ಕಾರ ಧ್ವನಿಯನ್ನು ಕೇಳಿ ಮಗು ನನಗೆ, ತನಗೆ ಎಂದು ಜಗಳವಾಡಲು ಅಕ್ಕಮ್ಮ ಉಪಾಯವನ್ನು ಹೇಳಿ ಮರದ ಅಡಿಯಲ್ಲಿ ಎಲ್ಲರೂ ಉಡಿ ಒಡ್ಡಿ ನಿಲ್ಲೋಣ. ಆ ಮಗು ಯಾರ ಉಡಿಯಲ್ಲಿ ಬೀಳುತ್ತದೆಯೋ ಅವರಿಗೆ ಆ ಮಗು ಎನ್ನಲು ಮಗು ಅಕ್ಕಮ್ಮನ ಉಡಿಯಲ್ಲಿ ಬೀಳುವುದು. ಸಿದ್ಧಬೀರನ ಶಿರದೊಳಭವ ಕರವಿಟ್ಟು ಭುವನೋದ್ಧಾರವಾಗಲಿ, ಸಕಲ ಯಂತ್ರಮಂತ್ರಗಳು ಸಿದ್ಧಿಯಾಗಲಿ ಪೇಳಿದನ್ನತ ವಚನಗಳೆಲ್ಲ ಭೂವಲಯದೊಳಗೆ ನಿರುತ ಬದ್ಧವಾಗಲಿ ರಿಪುಗಳಂ ಜೋಡುವದಕೆ ಸನ್ನುದ್ಧರಾಗಲಿ ಮುಂದೆ ಶ್ರೀ ರೇವಣಾರಾಧ್ಯಂ ಸಿದ್ಧಗುರು ನಿನಗಾಗಲೆಂದು ಆಶೀರ್ವಾದಿಸುವನು.

ಸಂಧಿ ಎಂಟರಲ್ಲಿ ಅಕ್ಕಮ್ಮ ಪ್ರತಿದಿನ ಶಿವನ ಆಜ್ಞೆಯಂತೆ ಶಿವಸಿದ್ಧಬೀರನಿಗೆ ಕಂಚು ಬೋಳಿ ಸುಗುಡಿಯ ಕೊರಳ ಮೊಲೆಯ ಹಾಲನ್ನು ಕುಡಿಸುತ್ತ ಕುರಿಯನ್ನು ಪೂಜಿಸುತ್ತಿದ್ದಳು.

ಶಿವಸಿದ್ಧಬೀರನು ಆಟವಾಡುತ್ತಿರುವ ಸಂದರ್ಭದಲ್ಲಿ ಬಿಲ್ಲಿನಿಂದ ಬಾಣವನ್ನು ಎಸೆಯುತ್ತಿರುವಾಗ ನೀರು ತರುವ ಏಳ್ನೂರು ತರುಣಿಯರು ತುಂಬಿದ ಕೊಡಗಳಿಗೆ ತಾಗಿ ಕೊಡಗಳು ತೂತು ಬೀಳುವುವು. ತರಣೀಯರು ಕೋಪಗೊಂಡು 'ಜನನಿ ಜನಕರಕಾಣದ ಪರಮ ನೀಚನೆ' ಎಂದು ನಿಂದಿಸುವರು. ಶಿವಸಿದ್ಧಬೀರನು ಅಕ್ಕಮ್ಮನನ್ನು ನನ್ನ ತಂದೆ ತಾಯಿಗಳು ಯಾರು ಎಂದು ವಿಚಾರಿಸಲು ತಂದೆ ಬರ್ಮದೇವ, ತಾಯಿ ಹರಿದೇವ ಸಹೋದರಿ ಸುರಾವತಿ, ಜನ್ಮಸ್ಥಳ ಇಂದುಗಿರಿ ಎಂದು ಹೇಳುವಳು. ಇತ್ತ ಹರಿದೇವನ ಮಗಳಾದ ಕನ್ನಿಕಾಮಾಲೆಯನ್ನು ತರುವೆನೆಂದು ಶಪಥ ಮಾಡಿ ರೇವಣಸಿದ್ಧನನ್ನು ಸ್ಮರಿಸಿ ಅಕ್ಕಮ್ಮನಿಗೆ ನಮಸ್ಕರಿಸಿ ವೈಕುಂಠಪುರಕ್ಕೆ ಹೊರಡುವನು. ಬಳೆಗಾರ ವೇಷ ತೊಟ್ಟು ಹೆಗಲ ಮೇಲೆ ಬಳೆಗಳನ್ನು ಹೊತ್ತು ರಾಜಬೀದಿಯಲ್ಲಿ ನಡೆದು ಅರಮನೆಯನ್ನು ಪ್ರವೇಶಿಸುವನು. ಕನ್ನಿಕಾಮಾಲೆಗೆ ಬಳೆಗಳನ್ನು ತೋಡಿಸುತ್ತ "ಪುಲ್ಲನೇತ್ರಿಯೇ ನಿನ್ನಗಿದು ತವರ್ಮನೆಯೋ ಮೇಣೋಲ್ಲಭನ ಮನೆಯೋ ಮತ್ತೀಖಳರ ಕಾವಲಿಯೊಳಿಟ್ಟರೇಕೆ"[೫೭] ಎಂದು ಪ್ರಶ್ನಿಸಿದನು. ಅದಕ್ಕೆ ಅವಳು ಶಿವಸಿದ್ಧ ಬೀರೇಶನು ನನ್ನು ಒಯ್ಯುತ್ತಾನೆಂಬ ಭೀತಿಯಿಂದ ನನ್ನನ್ನು ಬಂಧನದಲ್ಲಿಟ್ಟಿದ್ದಾರೆ ಎಂದು ಕಣ್ಣೀರಿಡಲು, ಕೊರಗಬೇಡ ಬೆಳ್ಳಿಗುತ್ತಿಗೆ ಹೋಗಿ ಶಿವಸಿದ್ಧ ಬೀರೇಶನನ್ನು ಕರೆತರುವೆ ಎಂದು ಹೇಳಿ ಅರಮನೆಯಿಂದ ಹೊರಟುಹೋಗುವನು. ಅರಮನೆಗೆ ಬರುವನು, ಮರುದಿನ ಸಿಂಪಿಗನ ವೇಷಧಾರಿಯಾಗಿ ಕನ್ನಿಕಾಮಾಲೆ ನೀನಾರು ಎಂದು ವಿಚಾರಿಸಲು

'ಇಂದುಗಿರಿ ಪುರದ ಬರ್ಮಭೂಪನ ಸತಿ ಸುರಾವತಿಯ ಸುಪುತ್ರನು ನಾನು, ಹರಿದೇವನ ಅಳಿಯ, ಗುರು ರೇವಣಸಿದ್ಧನ ಶಿಷ್ಯನಾದ ಶಿವಸಿದ್ಧಬೀರೇಶ. ನಿನ್ನನ್ನು ಒಯ್ಯಬೇಕೆಂದು ಬಂದಿಹೆನು ಎಂದನು. ಸಂತೋಷದಿಂದ ರಾಜಪುತ್ರಿಯನ್ನು ಕುದುರೆಯ ಮೇಲೆ ಕೂಡಿಸಿಕೊಂಡು ಶಿವಪುರಕ್ಕೆ ಹೋಗುವ ಸನ್ನಿವೇಶ ರಮ್ಯವಾಗಿ ಚಿತ್ರಿತಗೊಂಡಿದೆ.

ಸಂಧಿ ಒಂಬತ್ತರಲ್ಲಿ ಶಿವಸಿದ್ಧ ಬೀರೇಶನು ಶಿವನ ಪಾದಗಳಿಗೆ ನಮಸ್ಕರಿಸಿ ನನ್ನ ಸೇವೆಗೆ ಒಬ್ಬ ಶಿಷ್ಯನನ್ನು ಕರುಣಿಸೆಂದು ಕೇಳಿಕೊಳ್ಳುವನು. ವೀರಮಾಳಿಂಗ ನಿನ್ನ ಶಿಷ್ಯನೆಂದು ಹೇಳಿ ಬ್ರಾಹ್ಮಿದೇವಿಯಲ್ಲಿ ಮೊರೆಯಿಡು ಶಿಷ್ಯನನ್ನು ತೋರಿಸುವಳು ಎನ್ನುವನು. ಬ್ರಹ್ಮದೇವಿಯನ್ನು ಬೇಡಿಕೊಳ್ಳಲು ಆಕೆ ಮಾಳಿಂಗರಾಯನ ಪೂರ್ಣ ಇತಿಹಾಸವನ್ನು ಹೇಳುವಳು. ಬಿಲ್ವಾಡಪುರದ ಅರಸ ತುಕ್ಕಪ್ಪರಾಯ ಸಹೋದರ ಸೋಮರಾಯ ಕುದುರೆ, ಆನೆಗಳನ್ನು ಕಾಯ್ದುಕೊಂಡು ಸುಖದಿಂದಿರಲು ಗೌಳಿಗರ ಎಮ್ಮೆ ಕೋಣಗಳು ಮಲಗಿದ್ದ ಸೋಮರಾಯನನ್ನು ಎಬ್ಬಿಸಲು ಹಿಂಬಾಲಿಸುತ್ತ ಹೋಗಲು ಕುಲದೇವತೆಗಳಿಗೆ ಬಲಿಕೊಟ್ಟು ಪೂಜಿಸುತ್ತಿರುವ ಗೌಳಿಗರಿಂದ ವೀಳ್ಯವ ತೆಗೆದುಕೊಂಡನು. ಕೋಪಗೊಂಡ ಗೌಳಿಗರ ಕುಲದೇವತೆ ಅರಮನೆಯನ್ನು ಹೊಕ್ಕು ಸಂಪತ್ತನ್ನು ನಾಶ ಮಾಡಿ ತುಕ್ಕಪ್ಪರಾಯನಿಗೆ ಕಷ್ಟ ಕೊಡುವಳು. ಗೋರಖನಾಥ ಸೊನ್ನಲಿಗೆಸಿದ್ಧ ಭೈರವ ದೇವಿಪೂಜೆ ಮಾಡು ಎಂದು ತಿಳಿಸುವ ದೃಶ್ಯ ಗೋರಖನಾಥ ತುಕ್ಕಪ್ಪನ ಮಡದಿ ಕಾನಕಾಬಾಯಿಗೆ ಮಾಣಿಕ್ಯ ಕೊಡುವ ದೃಶ್ಯ 'ನೀನಗೋರ್ವ ಕುಲದೀಪ ಸುತನುದಯಿಸುವ ನಿನ್ನ ಮನದೊಳಗಿಹ ನಿಜಾಪೇಕ್ಷೆ ತೀರಿಸಿದೆನಾ ಬಾಲಕಗೆ ವೀರಮಾಳಿಂಗನೆಂಬ ಹೆಸರನ್ನಿಡು' ಎಂದು ಹೇಳುವ ಸನ್ನಿವೇಶ ಜಪಮಣಿಯೊಂದನ್ನು ನೀಡಿ, ನಿತ್ಯ ಸೇವಿಸು, ನಿನಗೂ ಸಹ ಪುತ್ರನು ಜನಿಸುವನು ಎಂದು ಸೋಮರಾಯನ ಸತಿಗೆ ಹೇಳುವ ಮಾತುಗಳು, ಶಿವಸಿದ್ಧ ಬೀರೇಶ್ವರನು ಬಿಲ್ವಾಡಪುರದ ಜಲಮಾಯಿ ಕೆರೆಯದಡದಲ್ಲಿರುವ ಮಾಳಿಂಗರಾಯನನ್ನು ಶಿವನಿಗೆ ತೋರಿಸಿದಾಗ "ಸುಜ್ಞಾನಿಯತನಾಗು ಮೇಣಾಳುಗಳಿಗರಸನಾಗು ವರಸಿದ್ಧಬೀರಂಗೆ ಸಚ್ಛಿಷ್ಯನಾಗು ನೀನೊರೆದದ್ದು ದಿಟವಾಗಲಿ"[೫೭] ಎಂದು ಹಾರೈಸುವನು.

ಭೂಲೋಕಕ್ಕೆ ಬರುವ ಸಂದರ್ಭದಲ್ಲಿ ಮದವೇರಿದ ಕೋಣವೊಂದನ್ನು ಕೊಂದು ಹಾಕುವುದು, ಕೋಣಬಿದ್ದಲ್ಲಿ ಕೋಣಗನೂರು, ಮುಂಡ ಬಿದ್ದಲ್ಲಿ ಮುಂಡಗನೂರು ಆಗಲೆಂದು ಹರಿಸುವುದು, ರೇವಣಸಿದ್ಧ ಇಬ್ಬರನ್ನು ಆಶೀರ್ವದಿಸಿ ಕೈಲಾಸಕ್ಕೆ ಬರಲು ಹೇಳುವುದು, ಗುರುವಿನ ಕರುಣೆಯಿಂದ ಬ್ರಹ್ಮಾಂಡ ಪುರಾಣ, ವ್ಯಾಸ ಪುರಾಣ ಮತ್ತು ವೇದೋಪನಿಷತ್ತುಗಳ ಆಧಾರದಿಂದ ಕುರುಬರ ಇತಿಹಾಸ ವಿವರಿಸುವುದು. ಕಾಂಪಿಲ್ಯ, ಪೃಥಕ, ಶೃಣಿ, ಮಹಾಬಲ, ಗಣಕ, ಮೃತಿ, ಕುಶಲ, ಪ್ರಭಾವ, ಕರುಣ, ಸುವರ್ಣ ಅನೇಕ ಗೋತ್ರಗಳ ಬಗ್ಗೆ ತಿಳಿಹೇಳುವರು. ಹಾಲುಮತದವರಿಗೆ ಭಾನುವಾರ ಮುಖ್ಯದಿನ ಎಂದು ತಿಳಿಯಪಡಿಸುವ ಪರಿ. ಹಾಲುಮತದವರು ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಶಿವಧ್ಯಾನ ಮಾಡುತ್ತ ಅಹಿಂಸಾ ಪರರಾಗಿ

ಬಾಳಿರಿ ಎಂದು ಹರಿಸುವನು. ರೇವಣಸಿದ್ಧ ಮೇಕೆ, ಕುರಿಗಳ ತುಪ್ಪಟ ವಸ್ತ್ರಗಳನ್ನು ತಯಾರಿಸಿ ಜನರಿಗೆ ಕೊಡುತ್ತ ಕುರಿಗಳನ್ನು ಸಲುಹಿರಿ ಎಂದು ಹೇಳುವುದು, ಕುರಿಯ ಹಿಕ್ಕೆಗಳಿಂದ ಲಿಂಗವನ್ನು ಮಾಡಿ ಪೂಜೆ ಮಾಡಿಕೊಂಡು ಶ್ರೀಶೈಲ ಮಲ್ಲಿಕಾರ್ಜುನನ್ನು ಕಂಡುಕೊಂಡ ಶಿವಶರಣ ವೀರಗೊಲ್ಲಾಳ ಭಕ್ತಿಯನ್ನು ರೇವಣಸಿದ್ಧ ಬೀರೇಶ್ವರನಿಗೆ ತಿಳಿಸುವನು. ಬೀರೇಶ್ವರನಿಗೆ ವೀರಮಾಳಿಂಗರಾಯನೊಂದಿಗೆ ಅನಂತ ಮಹಿಮೆಗಳನ್ನು ತೋರಿರಿ ಎಂದು ಹರಿಸುವುದು, ರೇವಣಸಿದ್ಧ ಕೊಲ್ಲಿಪಾಕಿಗೆ ಬಂದು ಸೋಮೇಶ್ವರ ಲಿಂಗದಲ್ಲಿ ಐಕ್ಯನಾಗುವುದು. ಈ ಎಲ್ಲಾ ಅಂಶಗಳು ಕಾವ್ಯದಲ್ಲಿ ವಿಶಿಷ್ಟರೀತಿಯಲ್ಲಿ ಚಿತ್ರಿತವಾಗಿದೆ.

ವೀರಮಾಳಿಂಗನ ಭಕ್ತಿಗೆ ಮೆಚ್ಚಿ ಬೀರೇಶ ಆತನ ಶಕ್ತಿಯನ್ನು ಪ್ರಪಂಚಕ್ಕೆ ತೋರಿಸುವನು. ಮಾಳಿಂಗರಾಯ ಪಾಂಡ್ರಕೋಟೆಗೆ ಹೋಗಿ ಆಪತ್ತುಗಳನ್ನು ಎದುರಿಸುವುದು, ಮಾಳಿಂಗರಾಯ ಬೀರೇಶನ ಆದೇಶದಂತೆ ಕಲ್ಯಾಣನಗರ, ಕೋಣನೂರುಗಳಿಗೆ ಹೋಗಿ ಮಹಿಮೆ ಪವಾಡಗಳನ್ನು ತೋರಿಸುವುದು, ಇಂತಹ ಅನೇಕ ಲೀಲೆಗಳನ್ನು ರಸ್ತಾಪುರದ ಭೀಮಕವಿ ಹಾಲುಮತೋತ್ತೇಜಕ ಪುರಾಣದ ಮೂಲಕ ಪ್ರಾಚೀನ ಕಾಲದ ಭಕ್ತಿ ಸಂಕೇತವಾದ ಕಾವ್ಯವೊಂದನ್ನು ಕಟ್ಟಿಕೊಟ್ಟಿರುವುದು ನಮ್ಮೆಲ್ಲ ಭಾಗ್ಯವೆಂದು ಹೇಳಬೇಕು.

ಹಾಲುಮತ ಸಮುದಾಯದ ಇತಿಹಾಸ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಕೃತಿಯಾಗಿದ್ದು, ಮುಖ್ಯವಾಗಿ ರೇವಣಸಿದ್ಧನನ್ನು ಪ್ರಮುಖ ನಾಯಕನನ್ನಾಗಿ ಮಾಡಿಕೊಂಡು ಶಾಂತಮುತ್ತಯ್ಯ, ಆದಿಗೊಂಡ, ಶಿವಪದ್ಮ, ಶಿವಸಿದ್ಧಬೀರೇಶ್ವರ, ವೀರಮಾಳಿಂಗರಾಯ ಮತ್ತು ಗೊಲ್ಲಾಳೇಶ್ವರ ಮುಂತಾದವರು ಕವಿಯ ದೃಷ್ಟಿಯಲ್ಲಿ ಉಪನಾಯಕನಾಗಿ ಚಿತ್ರಿತಗೊಂಡಿರುವುದನ್ನು ಕೃತಿಯ ಉದ್ದಕ್ಕೂ ಕಾಣಬಹುದು.

ಕೃತಿಯ ಒಡಲಲ್ಲಿ ಸರೂರು, ಜಾಗೃತಪುರ, ಬಂಕಾಪುರ, ಕೊಲ್ಲಿಪಾಕಿ, ಸೊಲ್ಲಾಪುರ, ಕೋಣಗನೂರು, ಮುಂಡಗನೂರು ಮುಂತಾದ ಗ್ರಾಮಗಳು ಹಾಲುಮತ ಸಂಸ್ಕೃತಿಯ ಪ್ರಾಚೀನ ಕೇಂದ್ರಗಳಾಗಿ ರೂಪಗೊಂಡಿವೆ. ಚಾರಿತ್ರಿಕ ದೃಷ್ಟಿಯಿಂದ ಇವು ವೈಶಿಷ್ಟತೆಯನ್ನು ಪಡೆದುಕೊಂಡಿವೆ. ಈ ಮೇಲೆ ಹೆಸರಿಸಿರುವ ಎಲ್ಲ ನಾಯಕರು ಈ ಸಮುದಾಯದ ಆರಾಧ್ಯ ದೈವಗಳಾಗಿರುವುದು ಇಂದಿಗೂ ಪ್ರಸ್ತುತ. ಈ ಕೃತಿಗೆ ವಡ್ಡಾರಾಧನೆ, ವಚನಕಾರರ ಪ್ರಭಾವ, ದಾಸರ ಪ್ರೇರಣೆಯಾಗಿರುವ ಸೂಕ್ಷ್ಮತೆ ಕಂಡುಬರುತ್ತದೆ. ಜೊತೆಗೆ ಜನಪದ ಹಾಲುಮತ ಕಾವ್ಯದ ಪ್ರಭಾವ ಕೃತಿಗೆ ಪ್ರಾಪ್ತವಾಗಿದೆ. ಆದಿಗೊಂಡ ಕುರಿಕಾಯುವುದು, ನೇಗಿಲು ಹೂಡಿ ಹೊಲವನ್ನು ಹಸನುಗೊಳಿಸಿ ಬೆಳೆ ಬೆಳೆಯುವುದು, ಪಶುಪಾಲನೆ ಮತ್ತು ಕೃಷಿ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಒಟ್ಟಾರೆಯಾಗಿ ಈ ಕೃತಿಯ ಜೊತೆಗೆ ಉಪಕಥೆಯಿಂದ ಹೆಣೆದುಕೊಂಡಿದ್ದು, ಪವಾಡಗಳು, ಮಹಿಮೆಗಳು, ದುಷ್ಟಶಕ್ತಿಗಳ ಸಂಹಾರ, ಕರುಣೆ, ಅನುಕಂಪದೊಂದಿಗೆ ಭಕ್ತಿ, ಧ್ಯಾನ, ತತ್ತ್ವಸಿದ್ಧಾಂತಗಳ ಸಂಗಮವಾದ ಈ ಕೃತಿಯು ಓದುಗರನ್ನು ಭಕ್ತಿಯಲ್ಲಿ ತೇಲಿಸುವಂತೆ

ಮಾಡಿದೆ. ಹೀಗಾಗಿ ಚಾರಿತ್ರಿಕ ದೃಷ್ಟಿಯಿಂದ ಇತಿಹಾಸ, ಸಮುದಾಯದಿಂದ ನಂಬಿಕೆ, ಆಚರಣೆಯು ಬೆಳೆದುಬಂದಿದೆ.

**ಹಾಲುಮತದ ಪುರಾಣ**

ಪಂಡಿತ ಶ್ರೀ ಸವಶಾಸ್ತ್ರೀ ಚನ್ನಬಸಪ್ಪ ಎಂಬ ಕವಿಯು ಕುರುಬರ ಚರಿತ್ರೆ, ಆಚರಣೆ, ಹಾಲುಮತ ಸಮಾಜದ ಸಾಂಸ್ಕೃತಿಕ ನಾಯಕರುಗಳ ಚರಿತ್ರೆಯನ್ನು 'ಹಾಲುಮತದ ಪುರಾಣ' ಎಂಬ ಶೀರ್ಷಿಕೆಯಡಿಯಲ್ಲಿ ಸಾಂಗತ್ಯ ಪ್ರಕಾರದಲ್ಲಿ ಕೃತಿ ರಚಿಸಿದ್ದಾರೆ. ಇದರ ಹದಿನೈದು ಸಂಧಿಯಲ್ಲಿ ಕಥೆಯ ಪಾತ್ರಗಳು ಚಿತ್ರಣಗೊಂಡಿವೆ. ಈ ಪುರಾಣವು ರಸ್ತಾಪುರ ಭೀಮಕವಿಯ 'ಹಾಲುಮತೋತ್ತೇಜಕ ಪುರಾಣ' ಕೃತಿಯ ರಚನೆಯ ನಂತರ ರಚಿಸಿರುವುದು ತಿಳಿದುಬರುತ್ತದೆ. ಚನ್ನಬಸವ ಕವಿಯು ಈ ಕೃತಿಯನ್ನು ರಚಿಸಿದ ಕಾಲ ಮತ್ತು ಮುಕ್ತಾಯಗೊಂಡ ಕಾಲವನ್ನು ಹೀಗೆ ತಿಳಿಸಿದ್ದಾರೆ.

ಅರಿಯಲು ಶಾಲಿವಾಹನ ಶಕೆಯೊಂದು ಸಾ। ವಿರದೆಂಟುನೂರೆಪ್ಪತ್ತೆಂಟು ॥

ವರುಷ ದುರ್ಮುಖಿಯದರೊಳು ಮಾಘ ಶುದ್ಧದ । ವರ ಚತುರ್ದಶಿ ಬುಧವಾರ[೫೮] ॥

೧೮೭೮ ವರ್ಷ ಮಾಘಶುದ್ಧ ಚತುರ್ದಶಿ ಬುಧವಾರದಂದು ಕೃತಿಯನ್ನು ಗುರುವಿನ ಸನ್ನಿಧಿಯಲ್ಲಿ ಪ್ರಾರಂಭಿಸಿದ್ದನೆಂದು ಹೇಳುತ್ತಾರೆ. ಹಾಗೂ ಮುಗಿದ ವರ್ಷ

ಶಾಲಿವಾಹನ ಶಕವನು ತಿಳಿಯಲು ಭೂಮಿ । ಮೇಲಷ್ಟದಿಕ್ಕಷ್ಟಗಜವು ॥

ಮೇಲೊಂದು ಶೂನ್ಯ ಏಳಂಬಿ ಸಂವತ್ಸರ । ವಾಲೋಚಿಸಲು ವೈಶಾಖಿ[೫೯] ॥

ಬಹುಳ ಬಿದಿಗೆ ಸೋಮವಾರಾನುರಾಧವೆಂ । ದಿಹ ಶುಭ ನಕ್ಷತ್ರದೊಳು ॥

ಮಹಿಮಸದ್ಗುರು ಕೃಪೆಯಿಂದ ಪೂರ್ಣಮದಾಯ್ತು । ಮಹಿಜನರಿದನರಿಯುವುದು[೬೦] ॥

ಎಂದು ತಿಳಿಸುತ್ತಾರೆ. ಅಂದರೆ ಈ ಪುರಾಣವು ಕ್ರಿ.ಶ. ೧೯೫೮ರಲ್ಲಿ ಎರಡು ವರ್ಷಗಳ ಅವಧಿಯಲ್ಲಿ ರಚಿಸಿದಾಗಿ ತಿಳಿದು ಬರುತ್ತದೆ. ಇವರು ಅನೇಕ ಕೃತಿಗಳನ್ನು ರಚಿಸಿರುವುದಾಗಿಯು ಹೇಳಿಕೊಂಡಿದ್ದಾರೆ. ವೀರಶೈವಾಚಾರ ದರ್ಪಣ, ಬೃಹತ್ ಶಿವಪೂಜಾವಿಧಿ ಮತ್ತು ಸಂಕ್ಷಿಪ್ತ ಶಿವಪೂಜಾವಿಧಿ, ಶ್ರೀಮದ್ವೇದವೇದಾಂತಶಾಸ್ತ್ರಾಂತರ್ಗತ ಶಬ್ದಸಾರಸಂಗ್ರಹ (ಸಂಕಲಿತ) ಆಯುರ್ವೇದ ಕೈಗನ್ನಡಿ, ಒಂದು ಮತ್ತು ಎರಡನೆಯ ಭಾಗಗಳು (ಕಂದಪದ್ಯ ರೂಪ) ಜ್ಞಾನಮಾರ್ಗ ಪ್ರಶಂಸೆ, (ಪ್ರಶ್ನೋತ್ತರ ರೂಪ) ಇಷ್ಟಲಿಂಗದ ಭಜನೆ, ಸ್ತೋತ್ರ, ಗುರುಸ್ತವನಾದ್ಯನೇಕ ಹಾಡುಗಳೂ, ಆಧ್ಯಾತ್ಮ ಸಂಬಂಧವಾದ ಗದ್ಯಪದ್ಯಗಳೂ, ಕೋಳೂರು ಕೊಡಗೂಸಿನ ಚರಿತ್ರೆ (ಹಾಡಿನ ರೂಪ) ಭಕ್ತಿ, ಜ್ಞಾನ, ವೈರಾಗ್ಯದಿಗಳಿಂ ಕೂಡಿದ ಪದ್ಯಮಂಜರಿ, ಶಾಲಾ ಬಾಲಕರಿಗುಪಯುಕ್ತವಾಗಿರುವಂತೆ ಪ್ರಭುವಿಜಯ ಚರಿತ್ರೆ ನಾಟಕ, ಜಾತಕ ಫಲ ಭಾಗದ ಜ್ಯೋತಿಷ್ಯ ಸಂಗ್ರಹ ಇತ್ಯಾದಿ"[೬೧] ಕೃತಿಗಳ ವಿವರವನ್ನು ಪುರಾಣದಲ್ಲಿ ತಿಳಿಸಲಾಗಿದೆ.

ಕವಿಯು ಚಿತ್ರದುರ್ಗ ಜಿಲ್ಲಾ ದಾವಣಗೆರೆ ತಾಲ್ಲೂಕಿನ ಚಿಕ್ಕಬೂದಿಹಾಳ ಗ್ರಾಮದಲ್ಲಿ ಶ್ರೀಮದಭಿನವ ರೇಣುಕ ಗುರುಕುಲಾಶ್ರಮವನ್ನು ಸ್ಥಾಪನೆ ಮಾಡಿ ಅಲ್ಲಿ ಈ ಕೃತಿ ರಚಿಸಿದ್ದನು ಹೇಳುತ್ತಾರೆ.

ರೇವಣಸಿದ್ಧರು, ಶಾಂತಮುತ್ತಯ್ಯ, ಶಿವಪದ್ಮ, ಶಿವಸಿದ್ಧ ಬೀರ (ಬೀರಪ್ಪ), ಚುಂಚಲೆ-ಆದಿಗೊಂಡ, ಜಿಂಕಾದೇವಿ-ಚುಮಲಾದೇವಿಯರು ಶಿವಪದ್ಮನ ಹೆಂಡತಿಯರಾಗಿ, ರೇವಣ್ಣ ಜಿಂಕಾದೇವಿಯ ಮಗನಾಗಿ ಬೆಳೆದ ಕಥೆಯನ್ನು ವಿವರಿಸುವುದು. ಕುರಿಯ ಸಾಕಾಣಿಕೆ, ಕಂಬಳಿಯ ತಯಾರಿಕೆಯು ಶಿವಪದ್ಮನಿಂದ ಬಂದಿತೆಂದು ಹೇಳುತ್ತದೆ. ರೇವಣಸಿದ್ಧರು ಲಿಂಗಾವತಾರ ಹೊಂದಿ ಭೂಮಿಯಲ್ಲಿ ಗುರುಭಕ್ತಿಯ ಚಾಲನೆಗೆ ಶಾಂತಮುತ್ತಯ್ಯನಿಗೆ ಲಿಂಗ ದಯಪಾಲಿಸಿದ್ದನ್ನು, ಹಾಲುಮತದವರಿಗೆ ಗುರುವಾಗಿ ಕಾರ್ಯ ನಿರ್ವಹಿಸುವುದನ್ನು ಹೇಳಲಾಗಿದೆ. ಸಿದ್ಧ ಸಂಪ್ರದಾಯದವರು ಜಪ, ತಪ, ಶಿವಾಚಾರ್ಯಕ್ಕೆ ಹೇಗೆ ಪರಿವರ್ತನೆಯಾದರೆಂದು ತಿಳಿಸುವುದು, ರೇವಣಸಿದ್ಧರು ಅಂಬರಮಾರ್ಗವಾಗಿ ದೇಶ ಸಂಚಾರವನ್ನು ಕೈಗೊಂಡಿದ್ದನ್ನು ತಿಳಿಸುತ್ತದೆ. ಆ ಸಂದರ್ಭದಲ್ಲಿ ಸರೂರ ಶಾಂತಮುತ್ತಯ್ಯನ ಪ್ರದೇಶಕ್ಕೆ ಆಗಮಿಸುವರು. ಅಲ್ಲಿ ಶಾಂತಮುತ್ತಯ್ಯನು ಹರಪೂಜೆ, ಗುರುಸೇವೆಯಲ್ಲಿ ಮಗ್ನನಾಗಿರುತ್ತಾ ಕುರಿಗಳನ್ನು ಕಾಯುತ್ತಿರುತ್ತಾನೆ. ಈತನಿಗೆ ಸುವ್ವಿಮುತ್ತಯ್ಯ ಜಗಮುತ್ತಯ್ಯ, ಲಲಿತ ಮುತ್ತಯ್ಯ ಎಂಬ ಮೂರು ಮಕ್ಕಳು ಜನಿಸುತ್ತವೆ. ಇವರು ಪಿತೃವಾಕ್ಯ ಪರಿಪಾಲಕರಾಗಿದ್ದರು. ಈ ಸುದ್ದಿಯನ್ನು ಅರಿತ ರೇವಣಸಿದ್ಧರು ಶಾಂತಮುತ್ತಯ್ಯನ ಮನೆಗೆ ಬರುತ್ತಾರೆ. ಇವರ ವಿನಯಭಕ್ತಿಯನ್ನು ಜನರು ಕೊಂಡಾಡುವುದನ್ನು ನೋಡಿ ರೇವಣಸಿದ್ಧರು ಲಿಂಗೋಪದೇಶವಿಲ್ಲದ ಮೇಲೆ ಲೋಕದಲ್ಲಿ ಇರಲು ಅನರ್ಹರೆಂದು ಭಾವಿಸಿ ಲಿಂಗಾಧಾರಣೆಯನ್ನು ಮಾಡಿಸುತ್ತಾರೆ.

ಕರಪೀಠಿಕೆ ಲಿಂಗಶ್ರೋತ್ರಪೀಠಕೆ ಬೋಧ । ಬರಬೇಕಾದರೆ ಸುಕೃತಬೇಕು ।

ಅರಿದೇನಿಸುಕೃತಶಾಲಿಯುಯೆಂದು ಲಿಂಗವ । ಕರುಣದಿಂಕೊಡುತಲಿಗುರುವು[೬] ।

ಲಿಂಗವಿಲ್ಲದೆ ಜನ್ಮಜನ್ಮಾಂತರದ ದೋಷಗಳು ನಿವಾರಣೆಯಾಗುವುದಿಲ್ಲ. ಲಿಂಗದಿಂದಲೇ ಅರಿವು ಜೀವನದಲ್ಲಿ ಮೂಡುತ್ತದೆ. ತನುವನು ಗುರುವಿಗೆ, ಮನವನು ಲಿಂಗಕ್ಕೆ ಧನವನು ಜಂಗಮಕ್ಕೆ ದಿನನಿತ್ಯ ಶರಣರು ಶುದ್ಧಾಂಗರಾಗಿ ಅರ್ಪಿಸಬೇಕು. ನಮ್ಮ ಆಚಾರವೇ ಧರ್ಮವಾಗಬೇಕು. ಪ್ರಸಾದೋಪಚಾರದ ಪರಿಕಲ್ಪನೆಯನ್ನು ಹುಟ್ಟುಹಾಕಿದೆ. ಕಾಯ ವಾಚ ಮನಗಳು ಲಿಂಗಕ್ಕೆ ಭೋಗವಾಗಿರಬೇಕು ಎಂದು ಸಂದೇಶ ನೀಡುತ್ತಾ ಶಾಂತಮುತ್ತಯ್ಯನನ್ನು ಲಿಂಗವಂತನಾಗಿ ಮಾಡುವರು. ಹೀಗೆ ಲಿಂಗಾಂಗಿಯಾದ ಶಾಂತಯ್ಯನನ್ನು ಕಂಡು ನಕ್ಕವರು ಕುರಿಗಳಾಗುವರು. ನಂತರ ಆ ಕುರಿಗಳನ್ನು ತಿನ್ನಲು ಧಾವಿಸಿ ಬಂದ ಮುಂಡಾಸುರನೆಂಬ ದೈತ್ಯನನ್ನು ಮೂರು ಭಾಗ ಮಾಡಿ ಸೀಳುವನು. ಆಗ ರೇವಣರು ಆ ಮೂರು ಹೋಳನ್ನು ಕಂಡು ಶಾಂತಯ್ಯನಿಗೆ ಮುರಡಿನ ಕಂತೆಯನ್ನು ನೀಡುವರು. ನಂತರ ನರಗುರಿಗಳನ್ನು ವಿಶಾಪರನ್ನಾಗಿ ಮಾಡಿ ಕುಟಲ ಶಾಸ್ತ್ರದಿಂದ ಕುರಿಗಳಾಗಿದ್ದಕ್ಕೆ ನೀವು ಜಗದಲ್ಲಿ ಕಾಡುಸಿದ್ಧರೆಂದು ಪ್ರಸಿದ್ಧಿ ಪಡೆಯಿರಿ ಎನ್ನುವರು.

ಗಂಟೆಯ ಪಿಡಿದೆನ್ನ ಹೆಸರೆತ್ತಿ ಭಿಕ್ಷೆಯಂ । ಕುಟುಂಬ ನಟನೆಗಳಿಂದ ॥

ಸಟೆಧಿಟಗಳ ಸಮದಿಂ ವೃತ್ತಿಯ ಚಟು । ವಟಿಕೆಯಿಂ ನಡೆಸಿ ಜೀವಿಸಿರಿ[೬೩]

ಕುಟಿಲತನದಿಂದ ಜನರನ್ನು ಮನರಂಜನೆಗೆ ಒಳಪಡಿಸುವ ಕಾಡುಸಿದ್ಧರು ರೇವಣಸಿದ್ಧರ ಆರ್ಶೀವಾದದಿಂದ ಹುಟ್ಟಿದವರೆಂದು ತಿಳಿದುಬರುವುದು. ಇವರನ್ನು ಸುಡುಗಾಡುಸಿದ್ಧರೆಂದು ಕರೆಯುತ್ತಾರೆ.

ಹಾಲುಮತೋತ್ತೇಜಕ ಪುರಾಣ ಮತ್ತು ಚನ್ನಬಸವ ಕವಿಯ ಹಾಲುಮತ ಪುರಾಣ ಕೃತಿಗಳು ಒಂದೇ ವಸ್ತುವನ್ನು ಹೇಳುತ್ತವೆ. ಆದರೆ ಸ್ತ್ರೀಪಾತ್ರಗಳ ಹೆಸರುಗಳು ಮಾತ್ರ ಬದಲಾವಣೆಯನ್ನು ಹೊಂದಿವೆ. ಹಾಲುಮತ ಪುರಾಣದಲ್ಲಿ ಶಿವಪದ್ಮನ ಹೆಂಡತಿಯರಾಗಿ ಜಿಂಕಾದೇವಿ, ಚುಮುಲಾದೇವಿಯರು ಬರುತ್ತಾರೆ.

ನಂತರ ಶಿವಪದ್ಮನು ಜಿಂಕಾದೇವಿಯನ್ನು ಶಾಸ್ತ್ರಬದ್ಧವಾಗಿ ಮದುವೆಯಾಗುತ್ತಾನೆ. ಆಕೆಗೆ ರೇವಣನೆಂಬ ಮಗುವು ಜನಿಸುವದು. ಕುರಿಗಳನ್ನು ಕಾಡಿಗೆ ಹೊಯ್ಯುವಾಗ ಆಹಾರಕ್ಕಾಗಿ ರೇವಣಸಿದ್ಧರು ಪ್ರತ್ಯಕ್ಷರಾಗಿ ಬೆಂಕಿಯನ್ನು ತರಲು ರಾಕ್ಷಸಿಯ ಮನೆಗೆ ಕಳಿಸುತ್ತಾರೆ. ಅಲ್ಲಿ ರಾಕ್ಷಸಿಯು ಚುಮುಲಾದೇವಿಯನ್ನು ಸಾಕುಮಗಳಾಗಿರಿಸಿಕೊಂಡಿರುತ್ತಾಳೆ. ಚುಮುಲಾದೇವಿಯನ್ನು ರಕ್ಷಿಸಲು ಮತ್ತು ರಾಕ್ಷಸ ಗಂಧರ್ವನ ಶಾಪಕ್ಕೆ ಮುಕ್ತಿ ಕೊಡಲು ಶಿವಪದ್ಮನು ಹಲ್ಲಿಯ ವೇಷ ಧರಿಸುವನು. ನಂತರ ರಾಕ್ಷಸಿಯ ಮರಣದ ಮರ್ಮ ತಿಳಿದುಕೊಂಡು ದೈತ್ಯನನ್ನು ಕೊಲ್ಲುವನು. ಆದರ ಅಂಗಾಂಗಳಿಂದ ಡೊಳ್ಳು ವಾದ್ಯವನ್ನು ಮಾಡುತ್ತಾನೆ. ಅವುಗಳನ್ನು ಬಂಕಾಪುರದೊಳಗೆ ಇರಿಸುವನು. ಅವುಗಳ ರಕ್ಷಣೆಗೆ ಬಂಕಣ್ಣ ಎಂಬುವವನನ್ನು ನೇಮಿಸುವನು.

ಶಿವಪದ್ಮನು ಮುಂದಿನ ಜನ್ಮದಲ್ಲಿ ಶಿವಸಿದ್ಧ ಬೀರೇಶನಾಗುವುದನ್ನು ಹೇಳಲಾಗಿದೆ. ಸುರಾವತಿಯ ಗರ್ಭದಲ್ಲಿ ಶಿವಸಿದ್ಧ ಬೀರನು ಬೆವರ ಹನಿಯಿಂದ ಜನಿಸುವ ಕಥೆಯನ್ನು ಹೇಳಲಾಗಿದೆ. ಈತನಿಗೆ ಬಿಲ್ವಾಡದರಸನ ಮಗ ವೀರಮಾಳಿಂಗನು ಶಿಷ್ಯನಾಗಿ ಬರುವುದನ್ನು ತಿಳಿಸುತ್ತದೆ. ಶಿವಸಿದ್ಧ ಬೀರನು ಜನಪದ ಹಾಲುಮತ ಮಹಾಕಾವ್ಯದಲ್ಲಿ ಮಾಯವ್ವ-ಅಕ್ಕಮ್ಮರ ಆಶ್ರಯದಲ್ಲಿ ಬೆಳೆದರೆ ಇಲ್ಲಿ ಅಕ್ಕಮ್ಮಳ ಪೋಷಣೆಯಲ್ಲಿ ಬೆಳೆಯುತ್ತಾನೆ. ಬೀರಪ್ಪನ ಹೆಂಡತಿಯಾಗಿ ಹರಿದೇವನ ಮಗಳು ಕನ್ನಿಕಾಮಾಯೆ ಬರುವಳು. ಹೀಗೆ ಚನ್ನಬಸವ ಕವಿಯು ಬರೆದ 'ಹಾಲುಮತದ ಪುರಾಣ' ಮತ್ತು ಭೀಮಕವಿಯ 'ಹಾಲುಮತೋತ್ತೇಜಕ ಪುರಾಣ'ದಲ್ಲಿ ಪಾತ್ರಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಯಗೊಳಿಸಿದ್ದಾರೆ. ಏಕೆಂದರೆ ಎರಡೂ ಕಾವ್ಯದ ಲೇಖಕರು ಬೇರೆ ಬೇರೆ ಪ್ರದೇಶವರಾಗಿರುವರು. ರಚನೆಯ ಕಾಲ, ಪ್ರದೇಶ, ವ್ಯಕ್ತಿ, ಛಂದಸ್ಸಿನ ಪ್ರಕಾರ ಭಿನ್ನವಾಗಿದ್ದರೂ ಮೂಲ ಉದ್ದೇಶ ಒಂದೇ ಆಗಿದೆ. ಹಾಲುಮತದ ಚರಿತ್ರೆಯನ್ನು ಜಾಹಿರಮಾಡುವಲ್ಲಿ ಈ ರೀತಿಯ ರಚನೆಗಳು ನಡೆದಿರಲು ಸಾಧ್ಯವಿದೆ. ಹಾಲುಮತಕ್ಕೆ ಸಂಬಂಧಿಸಿದಂತೆ ಎಷ್ಟು ಕವಿಗಳ, ಕೃತಿಗಳು ಬಂದಿವೆ ಎನ್ನುವುದಕ್ಕಿಂತ ಅವುಗಳ ಮುಖ್ಯ ಉದ್ದೇಶ ಏನಾಗಿತ್ತು ಎಂದು

ಆಲೋಚಿಸಿದರೆ ಇಂತಹ ಪುರಾಣಗಳ ರಚನೆಯು ಅವಶ್ಯವೆಂದು ತೋರುತ್ತದೆ. ಜೊತೆಗೆ ಬಿಡಿಬಿಡಿಯಾಗಿ ದೊರೆಯುವ ಹಾಲುಮತದ ನಾಯಕರ ಕಥೆಗಳನ್ನು ಈ ಕೃತಿಯು ಸ್ಮರಿಸುತ್ತಾ ಹೋಗುವುದು ತುಂಬ ವಿಶೇಷವಾಗಿದೆ. ಇಲ್ಲಿ ಕುರುಬರ ಹುಟ್ಟು ಮತ್ತು ವೃತ್ತಿಯನ್ನು, ಅವರ ವೇಷ-ಭೂಷಣಗಳಿಗೆ ಬಳಸುವ ವಸ್ತುಗಳು ಕುಲ ಪ್ರತೀಕವೆಂದು ಸೂಚಿಸುತ್ತದೆ.

ಈ ಪುರಾಣದ ಕೊನೆಯಲ್ಲಿ ಕಂಬಳಿ ಕುರಿತು ತತ್ವಪದವನ್ನು ರಚಿಸಿದ್ದಾರೆ. ಕಂಬಳಿಗೆ ಯಾವುದೇ ತರಹದ ಮುಟ್ಟು-ತಟ್ಟು ಆಗಬಾರದು. ಕಂಬಳಿಗೆ ಉಣ್ಣೆಯನ್ನು ಒದಗಿಸುವ ಕುರಿಗಳನ್ನು ಬಲಿಕೊಡುವುದಾಗಲಿ, ಮಾಂಸ ಸೇವಿಸುವುದಾಗಲಿ ಮಾಡಬಾರದು ಎಂದು ಹೇಳುತ್ತದೆ. ಕಂಬಳಿಯು ಬಹುಪಯೋಗಿ ಆಚರಣೆಯ ವಸ್ತುವೆಂದು ಕಾವ್ಯವು ಸಾಬೀತು ಪಡಿಸುತ್ತದೆ.

### ಶ್ರೀ ಸುಕ್ಷೇತ್ರ ಹುಲಜಂತಿ ಮಹಿಮಾಂತಕ ಮಹಾಲಿಂಗಯರ ಹಾಲುಮತ ಪುರಾಣ

ಈ ಕೃತಿಯನ್ನು ಅಡಿವೆಪ್ಪ ಮಾಳಪ್ಪ ಸೋಮುತ್ತೆ (ಒಡೆಯರ) ಅವರು ಗದ್ಯ ಪ್ರಕಾರದಲ್ಲಿ ೧೯೯೨ರಲ್ಲಿ ರಚಿಸಿದ್ದಾರೆ. ಇಲ್ಲಿನ ಪ್ರಮುಖ ವ್ಯಕ್ತಿ ಮಾಳಿಂಗರಾಯನೇ ಆಗಿರುವನು. ಇದು ಗದ್ಯ ಪ್ರಕಾರವಾಗಿರುವುದರಿಂದ ಓದಿ ಅರ್ಥಮಾಡಿಕೊಳ್ಳಲು ಸುಲಭವಾಗಿದೆ. ಈ ಮಾಳಿಂಗರಾಯನ ಚರಿತ್ರೆಯನ್ನು ಹೇಳುವ ಮತ್ತೊಂದು ಕಾವ್ಯವೆಂದರೆ ಗಂಗಾಧರ ದೈವಜ್ಞರು ೧೯೯೯ರಲ್ಲಿ ಸಂಗ್ರಹಿಸಿದ ಮಾಳಿಂಗರಾಯನ ಕಾವ್ಯವಾಗಿದೆ. ಇವರು ಡೊಳ್ಳಿನ ಹಾಡುಗಳಲ್ಲಿ ಮಾಳಿಂಗರಾಯರ ಕಥೆಯನ್ನು ಸಂಗ್ರಹಿಸಿದ್ದಾರೆ. ಇದಕ್ಕಿಂತ ಮುಂಚಿತವಾಗಿ ಗದ್ಯರೂಪದಲ್ಲಿ ಈತನ ಚರಿತ್ರೆಯು ದೊರೆಯುತ್ತದೆ. ಈ ಕೃತಿಯು ಒಟ್ಟು ೬೯ ಅಧ್ಯಾಯಗಳನ್ನು ಒಳಗೊಂಡಿದೆ. ಇಲ್ಲಿ ಗುರುವಿಗೆ ತುಂಬಾ ಮಹತ್ವ ಕೊಡಲಾಗಿದೆ. ತುಕ್ಕಪ್ಪರಾಯ ಮತ್ತು ಸೋಮರಾಯ ಸೋನಾರಸಿದ್ಧರಿಂದ ಬಾಲಜನ್ನಿಗೆಗಳನ್ನು ಪಡೆಯುವುದರ ಮುಖಾಂತರ ತೇರಾಮತಿ, ಬಾರಾಮತಿ ಪ್ರದೇಶಗಳ ಗೌಡಕಿತನ ಅರಸನ ಪದವಿ ಪಡೆಯುವರು. ಇವರು ತಮ್ಮ ಕುಲಕಸುಬಿನ ಜೊತೆಗೆ ರಾಜಕೀಯ ಒಡೆತನವನ್ನು ಹೊಂದಿದ್ದರೆಂದು ಹಾಲುಮತ ಪುರಾಣಗಳಲ್ಲಿನ ಮಾಳಿಂಗರಾಯನ ಪುರಾಣವು ತಿಳಿಸುತ್ತದೆ. ಆಧ್ಯಾತ್ಮಿಕ ಭಕ್ತಿಯ ಜೊತೆಗೆ ರಾಜಕೀಯ ಜ್ಞಾನವನ್ನು ಬಲ್ಲವರಾಗಿದ್ದರು.

ಇವರು ಬಾಲಜನ್ನಿಗೆಗಳನ್ನು ಮೇಯಿಸುತ್ತಾ ಹೋದ ಕಡೆ ಅವರ ಆಚರಣೆಯ ಪದ್ಧತಿಯನ್ನು ಬಿಟ್ಟು ಬಂದಿರುವುದನ್ನು ತಿಳಿಸುತ್ತದೆ. ಬಾಳಭರಮ ಎಂದು ಉಳಿದ ಹಾಲುಮತ ಪುರಾಣಗಳಲ್ಲಿ ಬಂದರೆ, ಈ ಪುರಾಣದಲ್ಲಿ ಆಕಾಶ ಭರಮ ಎಂದು ಚಿತ್ರಿಸಲಾಗಿದೆ. ಈತನು ಸಪ್ತ ಜಲಕನ್ಯೆಯರ ಸಹಾಯದಿಂದ ಎಳು ಮುಷ್ಟಿ ಪುಷ್ಪ ಬೀಜಗಳನ್ನು ನೆಡುತ್ತಾನೆ. ಅವುಗಳು ಆಕಾಶದಿಂದ ಭೂಮಿಯಲ್ಲಿ ಬೇರನ್ನು ಬಿಡುತ್ತವೆ. ಆ ಹೂಗಳಿಂದಲೇ ಆಕಾಶಮಾರ್ಗವಾಗಿ ಹೋಗಿ ಶಿವನಿಗೆ ಅರ್ಪಿಸಿ ಬರುತ್ತಾನೆ. ಇದು ಚಂದಗಿರಿ, ಮಂದನಗಿರಿಯ ಸಂಪರ್ಕವನ್ನು ಬೆಳೆಸುವುದು. ಮಂದನಗಿರಿಯಲ್ಲಿ ಹರಿದೇವ

ಅರ್ಥಾತ್ ಕಾಳಿನಾರಾಯಣ ವಾಸವಾಗಿದ್ದರೆ ಚಂದಗಿರಿಯಲ್ಲಿ ಮಾಳಪ್ಪನು ವಾಸವಾಗಿರುತ್ತಾನೆ. ಹಾಲುಮತದವರ ವಂಶವನ್ನು ಬೆಳೆಸಿದ ಮೊದಲ ವ್ಯಕ್ತಿಯೆಂದರೆ ಮುದ್ದುಗೊಂಡ. ಈತನಿಗೆ ರಾಚಗೊಂಡ ಉರ್ಫ ಆದಿಗೊಂಡ, ಅನಾದಿಗೊಂಡ, ಲಕ್ಕಗೊಂಡ, ಖ್ಯಾಮಗೊಂಡ, ಧ್ಯಾಮಗೊಂಡ, ನೇಮಗೊಂಡ ಮತ್ತು ಉಂಡಾಡ ಪದ್ಮಗೊಂಡರೆಂದು ಜನಿಸುತ್ತಾರೆ. ಈತನ ಮಕ್ಕಳು ಮರಿಮೊಮ್ಮಕ್ಕಳಿಗೆ ಸಿದ್ಧ ಮಾಳಪ್ಪನ ವಂಶದವರೆಂದು ಹೇಳುತ್ತದೆ. ಇದು ಗದ್ಯ ಪ್ರಕಾರವಾಗಿ ರಚನೆಯಾದರಿಂದ ಓದುಗಬ್ಬವಾಗಿದೆ. ೧೯೯೯ರಲ್ಲಿ ದೈವಜ್ಞರು ಸಂಪಾದಿಸಿದ ಮಾಳಿಂಗರಾಯನ ಕಾವ್ಯ ಹಾಡುಗಬ್ಬವಾಗಿದೆ. ಹೀಗಾಗಿ ಇವೆರಡರಲ್ಲಿಯೂ ಕಥೆಯ ವಿಶ್ಲೇಷಣೆ ಒಂದೇ ರೀತಿಯದ್ದಾಗಿದೆ.

ಅಡಿವೆಪ್ಪ ಮಾಳಪ್ಪ ಸೋಮುತ್ತೆ (ಒಡೆಯರ) ಅವರು ಮಾಳಿಂಗರಾಯನ ಕಥೆಯನ್ನು ಗದ್ಯರೂಪದಲ್ಲಿ ಬರೆದಿರುವುದನ್ನು ಡಾ. ಗಂಗಾಧರ ದೈವಜ್ಞ ಅವರು ೧೯೯೯ರಲ್ಲಿ ಬುಡಕಟ್ಟು ಮಾಲೆಯಲ್ಲಿ ಜತ್ತ ತಾಲ್ಲೂಕಿನ ಸೊನ್ಯಾಳ ಗ್ರಾಮದ ಶ್ರೀ ಹನುಮಂತಗೌಡ ಬಿರಾದಾರ ಹಾಡಿರುವುದನ್ನು ಗಮನಿಸಿದರೆ ಹಾಲುಮತದಲ್ಲಿ ಮಾಳಿಂಗರಾಯನ ಕುರಿತು ಗದ್ಯ ಮತ್ತು ಪದ್ಯಗಳಲ್ಲಿಯೂ ವಿಸ್ತಾರವಾಗಿ ಹೇಳುವ ಕೌಶಲ್ಯ ಹೊಂದಿರುವುದು ಕಂಡುಬರುತ್ತದೆ. ಇಲ್ಲಿ ಬರುವ ಉಂಬಳಿ ಠಾಣೆ, ಹುಲಜಂತಿ, ಸಿಂದಗಿ, ಹೊನ್ನೂರ, ಉಟಗಿ, ಸಿರಿಡೋಣ ಸ್ಥಳಗಳು ಎರಡು ಕಾವ್ಯಗಳಲ್ಲಿ ಉಲ್ಲೇಖಿಸಿದ್ದಾರೆ. ನಂತರ ಈ ಮಹಾಲಿಂಗರಾಯರ ಪುರಾಣವು ಮಾಳಪ್ಪನ ವಂಶವು ಭಂಡಾರ ಸಂಸ್ಕೃತಿಯನ್ನು ಹೊಂದಿತ್ತೆಂದು ಹೇಳುತ್ತದೆ. ಜೊತೆಗೆ ಮಾಳಪ್ಪನಿಗೆ ಈರಮ್ಮ ಎಂಬುವಳು ಎರಡನೇ ಹೆಂಡತಿಯಾಗಿ ಬರುತ್ತಾಳೆ. ಮೊದಲ ಹೆಂಡತಿ ಲಕ್ಷ್ಮೀಯೆಂದು ಸುಕ್ಷೇತ್ರ ಮಹಿಮಾಂತಕ ಮಹಾಲಿಂಗರಾಯರ ಹಾಲುಮತ ಪುರಾಣ ಮತ್ತು ಮಾಳಿಂಗರಾಯನ ಕಾವ್ಯದಲ್ಲಿ ಬಂದರೆ, ಜನಪದ ಹಾಲುಮತ ಮಹಾಕಾವ್ಯದಲ್ಲಿ ಮಾಳಿಂಗರಾಯನ ಮೊದಲ ಹೆಂಡತಿಯಾಗಿ ಶರಣಮ್ಮ ಎಂಬುವಳು ಬರುತ್ತಾಳೆ. ಎರಡನೇ ಹೆಂಡತಿಯ ವಿಚಾರದಲ್ಲಿ ಮೇಲಿನ ಮೂರು ಕಾವ್ಯದಲ್ಲಿಯೂ ಈರಮ್ಮ ಎಂದು ಹೇಳುತ್ತವೆ. ಲಕ್ಷ್ಮೀ ಅರ್ಥಾತ್ ಶರಣಮ್ಮ ತೀರಿಕೊಂಡಾಗ ವಂಶೋದ್ಧಾರಕ್ಕಾಗಿ ಈರಮ್ಮನನ್ನು ಮದುವೆ ಮಾಡಿಕೊಂಡಿರುವುದು ಮೂರು ಪುರಾಣ ಕಾವ್ಯಗಳಲ್ಲಿ ಕಂಡುಬರುತ್ತದೆ. ಮಾಳಪ್ಪ–ಈರಮ್ಮನ ಮಕ್ಕಳಿಗೆ ಸಂಬಂಧಿಸಿದಂತೆ ಮೂರು ಪುರಾಣ ಕಾವ್ಯಗಳಲ್ಲಿ ರೆಬ್ಬರಾಯ, ಬೀರಮುತ್ತ್ಯ, ಕಣ್ಣಮುತ್ತ್ಯ ಮತ್ತು ಸೋಮಮುತ್ತ್ಯಾ ಎಂದು ದಾಖಲಿಸಿವೆ. ನಂತರ ಸಾಕುಮಗನಾಗಿ ಬುಳ್ಳಪ್ಪನು ಕುರಿಗಳನ್ನು ಕಾಯುತ್ತಿದ್ದನೆಂದು ಈ ಕಾವ್ಯ ತಿಳಿಯಪಡಿಸುತ್ತದೆ.

ಮಾಳಪ್ಪನನ್ನು ಪರೀಕ್ಷಿಸಲು ಶಿವ–ಪಾರ್ವತಿಯರು ವೇಷಧರಿಸಿಕೊಂಡು ಬರುತ್ತಾರೆ. ಶಿವನಿಗೆ ಮಹಾರೋಗ ಉಂಟಾಗಿರುತ್ತದೆ. ದೇಹದಲ್ಲಿ ಕೀವು, ಮಲಿನ ರಕ್ತವನ್ನು ನಾಲಿಗೆಯಿಂದ ಸ್ವೀಕರಿಸಿದಾಗ ಮಾಳಿಂಗರಾಯನ ದೇಹ ವಜ್ರವಾಗುತ್ತದೆ. ಆಗ ಹೆಗಲಮೇಲೆ ಹೊತ್ತುಕೊಂಡು ಹಾಗೂ ಆತನ ಮಡದಿಯನ್ನು ಬಗಲಲ್ಲಿ ಎತ್ತಿಕೊಂಡು ಪ್ರೀತಿಯಿಂದ ಆಶ್ರಮಕ್ಕೆ ಬರುತ್ತಾನೆ. ಇವನ ಭಕ್ತಿಯನ್ನು ಶಿವ

ಪಾರ್ವತಿ ಮೆಚ್ಚುವರು. ನಂತರ ಮಾಳಿಂಗರಾಯನು ದೀರ್ಘದಂಡ ನಮಸ್ಕೃತನಾಗಿ ಅಲಗದಾಟವನ್ನು ಪ್ರಾರಂಭಿಸುವನು. ಆದರೆ ಶಿವನು ಅಲಗದ ತಾಳಕ್ಕೆ ದೇವಲೋಕದಿಂದ ರಂಭಯನ್ನು ನೃತ್ಯ ಮಾಡಲು ಕರೆಯುತ್ತಾನೆ. ಆಗ ಜನರು ಮಾಳಪ್ಪನನ್ನು ನೋಡದೆ ರಂಬೆಯಲ್ಲಿ ಮಗ್ನರಾಗುತ್ತಾರೆ. ಅದನ್ನು ಅರಿತ ಮಾಳಪ್ಪನು ಅಲಗಗಳನ್ನು ದೇಹಕ್ಕೆ ಚುಚ್ಚಿಕೊಂಡು ಕರಳನ್ನು ಕೈಗೆ ಸುತ್ತಿಕೊಳ್ಳುವನು. ಅದನ್ನರಿತ ಶಿವನು ಮೊದಲಿನಂತೆ ಮಾಡಿ, ನೀನು ಪ್ರಪಂಚದಲ್ಲಿನ ಸಿದ್ಧರಿಗೆ, ಮುನಿಗಳಿಗೆ ಗುರುಭಕ್ತಿಯನ್ನು ತಿಳಿಸೆಂದು ಹೇಳುತ್ತಾನೆ. ಈ ಅಲಗದಾಟವು ಜನಪದ ಹಾಲುಮತ ಮಹಾಕಾವ್ಯದಲ್ಲಿ ಹೇಳಿಲ್ಲ. ಮಹಿಮಾಂತಕ ಮಹಾಲಿಂಗರಾಯನ ಪುರಾಣ ಮತ್ತು ಮಾಳಿಂಗರಾಯನ ಕಾವ್ಯ ಮಹಾಲಿಂಗರಾಯರ ಹಾಲುಮತ ಪುರಾಣಗಳು ಒಬ್ಬ ವ್ಯಕ್ತಿಯ ಸುತ್ತ ಹೆಣೆದುಕೊಂಡ ಚಾರಿತ್ರಿಕ ಕಥೆಯಾಗಿರುವುದು ಕಂಡುಬರುತ್ತದೆ.

ಇವೆರಡು ಪುರಾಣ ಕಾವ್ಯಗಳ ಕಾಲದ ಅಂತರವು ಕಡಿಮೆ ಇರುವುದರಿಂದ ಮೊದಲು ಗದ್ಯ ಪ್ರಕಾರದಲ್ಲಿ, ನಂತರ ಹಾಡುಗಬ್ಬ ಪದ್ಯ ಪ್ರಕಾರದಲ್ಲಿ ಹೇಳಿರುವುದು ಸಮಾಜದಲ್ಲಿ ಬರಹಗಾರರು ಮತ್ತು ಮೌಖಿಕ ಪರಂಪರೆಗೂ ಬೇಕಾದ ಬಹು ಮುಖ್ಯ ವಸ್ತುವಾಗಿತ್ತೆಂದು ಈ ಮೂಲಕ ತಿಳಿದುಬರುತ್ತದೆ.

**ಮಾಳಿಂಗರಾಯನ ಕಾವ್ಯ**

ಹಾಲುಮತ ಸಮುದಾಯದ ಹಲವು ಪುರಾಣ ಕಾವ್ಯಗಳಲ್ಲಿ ಮಾಳಿಂಗರಾಯನ ಕಾವ್ಯವು ಒಂದಾಗಿದೆ. ಪ್ರಸ್ತುತ ಈ ಕಾವ್ಯವನ್ನು ಡಾ.ಗಂಗಾಧರ ದೈವಜ್ಞರವರು ಸಂಪಾದಿಸಿಕೊಟ್ಟಿದ್ದಾರೆ. ಜತ್ತ ತಾಲೂಕಿನ ಸೋನ್ನಾಳ ಗ್ರಾಮದ ಶ್ರೀ ಹನುಮಂತಗೌಡ ಬಿರಾದಾರ ಮತ್ತು ಅಡಿವೆಪ್ಪ ಮಾಳಪ್ಪ ಅವರು ಮಾಳಿಂಗರಾಯನ ಕಾವ್ಯವನ್ನು ಹಾಡುವುದರ ಮೂಲಕ ಸಂಪಾದಕರಿಗೆ ತುಂಬ ಉಪಯುಕ್ತ ಮಾಡಿಕೊಟ್ಟಿದ್ದಾರೆ. ಈ ಕಾವ್ಯ ಹಾಡುಗಬ್ಬವಾಗಿದ್ದು. ಇದರಲ್ಲಿ ಸ್ತುತಿ ಪದ್ಯದಿಂದ ಹಿಡಿದು ಮಂಗಳಾರತಿಯವರೆಗೆ ಒಟ್ಟು ೧೮೮ ಪುಟಗಳಲ್ಲಿ ಅಚ್ಚಾಗಿದೆ. ಒಟ್ಟಾರೆ ಈ ಕಾವ್ಯವು ತುಕ್ಕಪ್ಪರಾಯನ ಸಾವಿಗೆ ಕಾರಣರಾದ ಬೇಡರ ನಿರ್ನಾಮ ಮಾಡಲು ಶಪಥ ಮಾಡಿರುವುದೇ ಕಥೆಯ ಮೂಲ ವಸ್ತು. ಈ ಕಾವ್ಯದಲ್ಲಿ ಗುರುವಿಗಿಂತ ಶಿಷ್ಯ ಹೆಚ್ಚಿನವ ಎಂದು ಸಾಬೀತು ಪಡಿಸುತ್ತದೆ.

ಬೇರೆ ಬೇರೆ ಸಮುದಾಯಗಳಲ್ಲಿ ಕಥೆ ಪುರಾಣ, ಕಥನ ಕಾವ್ಯ ಮಹಾಕಾವ್ಯಗಳಿರುವಂತೆ ಹಾಲುಮತ ಸಮುದಾಯದಲ್ಲೂ ಕಂಡು ಬರುತ್ತವೆ. ಈ ಪುರಾಣ ಕೃತಿಗಳ ಮೂಲಕ ಹಾಲುಮತ ಸಮಾಜದ ಸಾಂಸ್ಕೃತಿಕ ವೈವಿಧ್ಯತೆಯನ್ನು ಸಹ ಗುರುತಿಸಬಹುದಾಗಿದೆ. ಒಂದು ಜನಾಂಗದ ಸಾಂಸ್ಕೃತಿಕ ವೀರ, ದೈವನಾದ ಮೇಲೆ ಹಂತ ಹಂತವಾಗಿ ಸಮುದಾಯವು ಅತ್ಯಂತ ಪ್ರಾಚೀನ ಕಾಲದ್ದು, ವೇದ ಪುರಾಣಗಳಿಗಿಂತಲೂ ಹಳೆಯದು, ದೈವಿ ಶಕ್ತಿಯಿಂದ ಜನಾಂಗ ಬೆಳೆದು ಬಂದಿದೆ ಎಂಬ ಅನೇಕ

ಸಂಗತಿಗಳನ್ನು ತಿಳಿಸುತ್ತದೆ. ಮಾಳಿಂಗರಾಯನ ಕಾವ್ಯ ಕೂಡ ಇದಕ್ಕೆ ಹೊರತಾಗಿಲ್ಲ. "ಈ ಕಾವ್ಯ ಪುರಾಣದ ಕಲ್ಪನೆಯಲ್ಲಿಯೇ ಬೆಳೆದಿದೆ. ಮಾಳಿಂಗರಾಯ ಬಸವಣ್ಣನ ಅವತಾರ. ಇದು ಅವನ ಏಳನೇ ಅವತಾರ ಎಂದು ಹೇಳುತ್ತದೆ. ಹುಲಜಂತಿಯಲ್ಲಿ ಮಾಳಿಂಗರಾಯನ ಸಮಾಧಿ ಹತ್ತಿರ 'ಆದಿ ಬಸವಣ್ಣ' ಪೀಠವಿದೆ. ಮಾಳಿಂಗರಾಯ ಮೊದಲು ಬಸವಣ್ಣನಾಗಿದ್ದ, ಇಲ್ಲಿಗೆ ಬರುವ ಭಕ್ತರೆಲ್ಲ ಮೊದಲು ಈ ಬಸವಣ್ಣನ ಪೀಠಕ್ಕೆ ಪೂಜೆ ಸಲ್ಲಿಸಿ, ಮಾಳಿಂಗರಾಯನ ಗದ್ದಿಗೆಗೆ ಹೋಗುವರು."[೬೪] ಬೇಟೆ, ಪಶುಪಾಲನೆ ಅಲೆಮಾರಿ ಸಮುದಾಯದ ಪ್ರಮುಖ ಲಕ್ಷಣ. ಹೀಗಾಗಿ ಈ ಅಲೆಮಾರಿ ಸಮುದಾಯಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ತಮ್ಮ ಪಶುಗಳ ಪಾಲನೆ ಪೋಷಣೆ ಮಾಡಬೇಕಾಗಿರುತ್ತದೆ. ಹಾಲುಮತ ಸಮುದಾಯವು ಸಹ ಮೂಲತಃ ಪಶುಪಾಲನ ಸಂಸ್ಕೃತಿಯಿಂದಲೇ ಬಂದಿದ್ದು, ಪ್ರಸ್ತುತ ಮಾಳಿಂಗರಾಯನ ಕಾವ್ಯವು ಪಶುಪಾಲನೆಯನ್ನಾಧರಿಸಿದ ಅಲೆಮಾರಿ ಜೀವಿಗಳ ಚರಿತ್ರೆಯಾಗಿದೆ.

ಈ ಕಾವ್ಯದಲ್ಲಿ ಜರಗುವ ಪ್ರಮುಖ ಘಟನೆ ಪಶು ಸಂಪತ್ತಿಗೆ ಸಂಬಂಧಿಸಿರುವಂತಹದ್ದು. ಪಶುಪಾಲನೆಯನ್ನೇ ಅವಲಂಬಿಸಿ ಬದುಕುತ್ತಿದ್ದ ಈ ಸಮುದಾಯ ಭೂಮಿಯಲ್ಲಿನ ನೀರು ಮತ್ತು ಪಶುಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದೆ. ಹೀಗಾಗಿ ಈ ಸಮುದಾಯದ ಮೂಲ ಪುರುಷ ಮಣ್ಣಿನ ಮೂಲಕ ಹುಟ್ಟುತ್ತಾನೆ. ಅದು ದೈವಿಶಕ್ತಿ ಪ್ರೇರಣೆಯಿಂದ ಎಂದು ಈ ಕಾವ್ಯ ತಿಳಿಸುತ್ತದೆ.

ದೇವರ ಮಾತೋ ಆಡ್ವರ ತಂತೋ
ಶಿವ ಪಾರ್ವತಿ ಕೂಡ್ಯಾರ ಕಾಂತೋ
ಪಾರ್ವತಿ ಶಂಭೋಗ ಹೇಳ್ಯಾಳ ಮಾತೋ
ಭೂಮಂಡಲದಾಗ ಕಾಡ ರುದ್ರಭೂಮಿ
ನೋಡಿ ಬರುವುನಂತೋ"[೬೫]

ಶಿವ-ಪಾರ್ವತಿ ಭೂಲೋಕಕ್ಕೆ ಇಳಿದು ಬರುತ್ತಾರೆ. ಪಾರ್ವತಿಗೆ ಕಾಡು ರುದ್ರಭೂಮಿ ನೋಡಿ ಮನಸ್ಸಿಗೆ ನಿರಾಸೆಯಾಗುತ್ತದೆ. ಅಲ್ಲಿ ಒಂದು ಮಾಯದ ವನ ನಿರ್ಮಾಣ ಮಾಡುತ್ತಾಳೆ. ಅದನ್ನು ನೋಡಿ ಪಾರ್ವತಿ ಮನಕ್ಕೆ ಹುಚ್ಚು ಹಿಡಿದು, ಮೋಹ ಹೆಚ್ಚಾಗಿ ಮೊಲೆ ಹಾಲು ಸುರಿಯುತ್ತಿವೆ. ಮೂರು ವಿಧದ ಮಣ್ಣನ್ನು ತೆಗೆದುಕೊಂಡು ಎದೆಹಾಲಿನಲ್ಲಿ ಮಣ್ಣು ಕಲಿಸಿ ಒಂದು ಹೆಣ್ಣು ಒಂದು ಗಂಡು ಗೊಂಬಿ ತಯಾರಿಸುತ್ತಾಳೆ. ಪರಮೇಶ್ವರ ಅವುಗಳಿಗೆ ಜೀವ ತುಂಬುತ್ತಾನೆ. ಅವರಿಗೆ ಮುದ್ದವ್ವ ಮುದಗೊಂಡ ಎಂದು ಹೆಸರಿಡುತ್ತಾರೆ. ಮುದ್ದವ್ವ ಮುದಗೊಂಡರಿಂದ ಹಾಲುಮತ ಬೆಳೆಯುತ್ತದೆ. ಇವರಿಬ್ಬರೂ ಪಾರ್ವತಿ-ಪರಮೇಶ್ವರ ಮಾನಸ ಪುತ್ರರೆಂದು ಕಾವ್ಯ ಹೇಳುತ್ತದೆ. ಮುಂದೆ

ಬಿಲ್ಲಾಳ ಗುಡದಾಗ

ಒಂದು ತುಕ್ಕಪ್ಪಗೌಡ

ಜಪಾ ಮಾಡುತ ಕುಂತೋ॥ ಬಿಲ್ಲಾಳ ಗುಡದಾ[೬೬] ॥

ಇವರ ತಪಸ್ಸು ಎಷ್ಟು ಕಠಿಣವಾಗಿತ್ತೆಂದರೆ ದೇವಲೋಕದ ಇಂದ್ರನಿಗೆ ಸಹ ನಡುಕ ಹುಟ್ಟುವಂತಿತ್ತು. ಇವರ ತಪಸ್ಸನ್ನು ಭಂಗ ಪಡಿಸಲು ಇಂದ್ರ ರಂಭೆಯನ್ನು ಕಳಿಸಿದ. ಆಗ ಭಯಾಂಕರ ಮಳೆ, ಗಾಳಿ, ಸಿಡಿಲು ಬೀಸಿದರು. ಇವರ ತಪಸ್ಸು ಭಗ್ನಗೊಳಿಸಲಿಲ್ಲ. ಅಂದರೆ ತುಕ್ಕಪ್ಪನು ಮಕ್ಕಳನ್ನು ಪಡೆಯುವುದಕ್ಕೆ ತಪಸ್ಸ ಕೈಗೊಂಡಿರುವುದು ಮೇಲುನೋಟಕ್ಕೆ ಕಂಡರು ತನ್ನ ವಂಶವನ್ನು ಬೆಳೆಸುವ ಹುನ್ನಾರ ಸೂಕ್ಷ್ಮವಾಗಿ ಕಂಡುಬರುತ್ತದೆ. ಆಗ ಶಿವನು ಇವರ ಭಕ್ತಿಗೆ ಮೆಚ್ಚಿ ಜಪಮಣಿ ಮತ್ತು ಮಾಣಿಕ ಮಣಿಯನ್ನು ದಯಪಾಲಿಸಿ ಬಯಲಾದನು.

ಜಪಮಣಿಯಿಂದ

ಜನ್ನಾತನವತಾರ

ಜಕ್ಕಪ್ಪರಾಯಂದು ಆಯ್ತೋ

ಮಾಣಿಕ ಮಣಿಯಿಂದ

ಬಸವನ ಅವತಾರ

ಮಾಳಪ್ಪಂದು ಆಯ್ತೋ

ಮೃತ್ಯ ಲೋಕದಾಗ

ಹುಟ್ಟ ಬಂದಾರೇನೋ

ಜನ ಉದ್ಧಾರವಾಯ್ತೋ[೬೭]

ಹೀಗೆ ಹಾಲುಮತ ಪುರಾಣಗಳಲ್ಲಿ ಎರಡು ರೀತಿಯಾಗಿ ಸಾಂಸ್ಕೃತಿಕ ನಾಯಕರು ಜನ್ಮವನ್ನು ಪಡೆಯುವರು. ಒಂದು ಶಿವನೇ ಭೂಮಿಯಲ್ಲಿ ಅವತಾರ ಪುರುಷನಾಗಿ ಜನಿಸುವುದು. ಮತ್ತೊಂದು ವೃದ್ಧ್ಯಾಪದಲ್ಲಿನ ದಂಪತಿಗಳ ತಪ್ಪಸಿನ ಮೂಲಕ ಶಿವನ ವರದಿಂದ ಮಕ್ಕಳನ್ನು ದಯಪಾಲಿಸುವುದು. ಇದೇ ರೀತಿ ಅನೇಕ ಸಮುದಾಯಗಳ ಪುರಾಣ ಕಾವ್ಯಗಳಲ್ಲಿ ಜನಿಸಿರುವ ಸಾಂಸ್ಕೃತಿಕ ವೀರರು ತಪಸ್ಸಿನ ಫಲದಿಂದಲೇ ಜನಿಸಿದ್ದಾರೆ. ಇದಕ್ಕೆ ಮಾಳಿಂಗರಾಯ, ಜಕ್ಕಪ್ಪರು ಹೊರತಾಗಿಲ್ಲ. ಈ ವೀರರ ಜನನವು ರಕ್ತಮಾಂಸಗಳ ಕಲ್ಮಶದಿಂದ ಜನಿಸದ ಇವರು ಹುಟ್ಟಿನಿಂದಲೇ ಶುದ್ಧಾಂಗಿಗಳು ಎಂದು ಪುರಾಣಗಳು ಹೇಳುತ್ತವೆ. ಈ ಮೂಲಕ ಸಮುದಾಯವು ಸಹ ಎಲ್ಲಾರಲ್ಲಿಯೂ ಶ್ರೇಷ್ಠತೆಯನ್ನು ಪಡೆಯಬಲ್ಲದು

ಎಂದು ಹೇಳಲು ಈ ರೀತಿಯ ಹುಟ್ಟನ್ನು ಪುರಾಣಗಳು ಆರಿಸಿಕೊಂಡಿವೆ. ಇಲ್ಲಿ ಬರುವ ಮಾಳಪ್ಪ, ಜಕ್ಕಪ್ಪರು ಕ್ರಮವಾಗಿ ಶಿವ ಮತ್ತು ವಿಷ್ಣುವಿನ ಪ್ರತಿರೂಪವೆಂದು ಹೇಳುತ್ತವೆ. ಆದ್ದರಿಂದಲೇ ಮಾಳಪ್ಪ, ಜಕ್ಕಪ್ಪರು ದೈವವೆಂದು ತಿಳಿಯುವುದು ರೂಢಿಯಾಗಿದೆ. ಹೀಗೆ ಜನಿಸಿದ ದೈವಿ ಪುರುಷರು ಕಾಲಜ್ಞಾನಿಗಳಾಗಿ ಹಲವು ಪವಾಡ ಶಕ್ತಿಯಿಂದ ಮೆರೆಯುತ್ತಿದ್ದರು ಸರ್ಪವನ್ನು ಹಿಡಿದು ಬೆತ್ತವಾಗಿಸಿಕೊಂಡದ್ದು, ಹಾವು ಕಚ್ಚಿದ ಸಂಗ್ಯಾನನ್ನು ಬದುಕಿಸಿದ್ದು, ಸತ್ತ ಮೀನನ್ನು ನೀರಲ್ಲಿ ಬಿಟ್ಟು ಜೀವಕೊಟ್ಟ ಪ್ರಸಂಗಗಳು ಮಾಳಪ್ಪ ಬಾಲ್ಯದಲ್ಲಿ ನಡೆಸಿದ ಪವಾಡಗಳಲ್ಲಿ ಪ್ರಮುಖವಾದವುಗಳಾಗಿವೆ. ಈ ಮೂಲಕ ದುಷ್ಟರನ್ನು ಶಿಕ್ಷಿಸುವ, ಸಜ್ಜನರನ್ನು ರಕ್ಷಿಸುವ ಮಾಳಪ್ಪ ಸಮರ್ಥ ಪುರುಷನಾಗಿ ಕಂಡುಬರುತ್ತಾನೆ, ಇದನ್ನು ಕಂಡ ಸೋನಾರ ಸಿದ್ಧರು ಇವರುಗಳ ಅವತಾರ ಪುರುಷರು ಎಂದು ಹೊಗುಳುತ್ತಾನೆ, ಮಾಳಪ್ಪ ಚಿಕ್ಕನಿಂದಲೇ ಭವಿಷ್ಯ ನುಡಿಯುವುದು ಈ ರೀತಿ ಕಂಡುಬರುತ್ತದೆ.

"ಮಾಳಪ್ಪ ಹೇಳ್ತಾನ ಅಣ್ಣ ಜಕ್ಕಪ್ಪನ ಬಲ್ಯಕ

ಬರಗಾಲ ಬೀಳೊದು ಅಣ್ಣಾ ಬಾರಾಮತಿ ಭಾಗಕ"[೮]

ಚಿಕ್ಕ ಬಾಲಕನ ನುಡಿಯು ಸತ್ಯವೆಂದು ನಂಬಿದ ತಂದೆ-ತಾಯಿಗಳು ವಲಸೆ ಹೋಗುವರು. ಇದು ಮುಂದೆ ಮಾಳಪ್ಪನ ಹೇಳಿಕೆಗೆ ಅವಕಾಶವನ್ನು ಒದಗಿಸುತ್ತದೆ.

ಈ ಪದ್ಯವು ಮಾಳಪ್ಪನ ವಂಶಸ್ಥರು ಅಲೆಮಾರಿಗಳೆಂದು ಸಾಬೀತು ಪಡಿಸುವುದು. ಈ ವಲಸೆ ಪ್ರವೃತ್ತಿಯು ಹಾಲುಮತದವರು ತಮ್ಮ ಜನ್ನಿಗಗಳನ್ನು ರಕ್ಷಿಸಲು ಬಿಲ್ಲು ವಿದ್ಯೆಯನ್ನು ಕಲಿಯಬೇಕಿತ್ತು. ಹಾಗಾಗಿ ಸೋನಾರ ಸಿದ್ಧರಿಂದ ದುಷ್ಟರನ್ನು, ಕಾಡು ಪ್ರಾಣಿಗಳಿಂದ ಗೋವುಗಳನ್ನು ಕಾಪಾಡಲು ಬಿಲ್ಲು ವಿದ್ಯೆಯನ್ನು ಕಲಿಯುತ್ತಾರೆ. ಹೀಗೆ ಸ್ಥಳದಿಂದ ಸ್ಥಳಕ್ಕೆ ಅಲೆಮಾರಿಯಾಗಿ ಪಶುಗಳನ್ನು ಪೋಷಿಸುತ್ತಿದ್ದ ಇವರಿಗೆ ಏಳುನೂರು ಜನ ಬೇಡರು ಹಿಂಬಾಲಿಸುವರು. ಇದು ಹಾಲುಮತದವರ ವೃತ್ತಿಯನ್ನು ಕಸಿದುಕೊಳ್ಳುವ ಹುನ್ನಾರವು ವ್ಯಕ್ತವಾಗಿದೆ. ಹಟ್ಟಿಯನ್ನು ತಯಾರಿಸಿಕೊಂಡು ಜೀವಿಸುತ್ತಿದ್ದ ತುಕ್ಕಪ್ಪರಾಯ ಮತ್ತು ಸೋಮರಾಯರ ಸಹೋದರತ್ವವು ಗಾಢವಾದುದು. ಇದನ್ನು ಬೇರ್ಪಡಿಸುವ ಬೇಡರ ಆಲೋಚನೆಯು ಒಂದು ಸಮುದಾಯವನ್ನು ಅಂಚಿಗೆ ತಳ್ಳುವ ಅಂಶವನ್ನು ಪ್ರತಿಪಾದಿಸುತ್ತದೆ. ಅಸಹಾಯಕನಾದ ತುಕ್ಕಪ್ಪರಾಯನು ಬೇಡರೊಂದಿಗೆ ಹೋರಾಡದೆ ಆತ್ಮಹತ್ಯೆ ಮಾಡಿಕೊಳ್ಳುವನು. ಇದನ್ನು ತಿಳಿದ ಕೂಡಲೇ ಬಂದ ಸೋಮರಾಯ ಅಣ್ಣನ ಹತ್ತಿರ ಬರುತ್ತಾನೆ. ಜಕ್ಕಪ್ಪ ಮತ್ತು ಮಾಳಪ್ಪ ಈ ಸಂದರ್ಭದಲ್ಲಿ ಬೇಡರ ತಲೆ ಕಡಿಯುತ್ತೇವೆ ಎಂದು ತಂದೆಗೆ ಮಾತು ಕೊಡುತ್ತಾರೆ.

"ಬ್ಯಾಡರ್ನ ಹುಡಿಕ್ಯಾಡಿ ಚಂಡ

ಕಡಿಯುತೇವ ಕೂಗ್ಯಾಡೀ

ಚಂಡಿನ ಮ್ಯಾಲೆ

ಚಕ್ರಗಟ್ಟಿ ಕಟ್ಟಿತೇವೋ

ರುದ್ರರಗಟ್ಟಿ ಮ್ಯಾಲ ಮಾಡೀ[೬] ॥

ಹೀಗೆ ತಂದೆಯ ಸಾವಿಗೆ ಕಾರಣಿಕರ್ತರಾದ ಬೇಡರನ್ನು ನಾಶಗೊಳಿಸುವ ತವಕದಲ್ಲಿರುತ್ತಾರೆ. ಇದೇ ಸಂದರ್ಭದಲ್ಲಿ ಸೋನಾರ ಸಿದ್ಧ ಸೋಮರಾಯನಿಗೆ ಪರೀಕ್ಷಿಸುವ ಸಂದರ್ಭ, ಅದೇ ರೀತಿ ಬಂಜೆ ಕಪಿಲೆ ಆಕಳ ಹಾಲುಬೇಕೆಂದು ಕೇಳುವ ಪ್ರಸಂಗಗಳು ಕಾವ್ಯದಲ್ಲಿ ವಿಶಿಷ್ಟ ರೀತಿಯಲ್ಲಿ ವ್ಯವಸ್ಥೆಯ ಕುರಿತು ಚಿತ್ರಣವಿದೆ. ಸೋನಾರ ಸಿದ್ಧರು ಕಣ್ಣವ್ವಳನ್ನು ಪರೀಕ್ಷಿಸಲು ಬಂದಾಗ ತುಳಜಾಪುರದ ಅಮೃತಬಾಯಿಯು ದಾಸೋಹದ ಪರೀಕ್ಷೆಯಲ್ಲಿ ಗೆಲ್ಲುವಂತೆ ಮಾಡುವಳು.

ಜಕ್ಕಪ್ಪ ಮಾಳಪ್ಪರವರು ಹಲವು ರೀತಿಯ ಪವಾಡಗಳನ್ನು ತೋರಿಸುತ್ತಾ, ಮುಂದೆ ಹರನಾಪುರ ಎಂಬ ಪಟ್ಟಣಶೆಟ್ಟಿ ಹನ್ನೆರಡು ವರ್ಷ ರಾಜ್ಯವಾಳಿ ಇಪ್ಪತ್ನಾಲ್ಕು ಸಾವಿರ ಸೈನ್ಯ ತೆಗೆದುಕೊಂಡು ಭೀಮನದಿ ದಾಟಿ ಮಂಗ್ಯಾನ ಹಟ್ಟಿಯಲ್ಲಿ ಅಡಗಿದ್ದ ಏಳನೂರು ಜನ ಬೇಡರ ತಲೆ ಕಡಿಯುತ್ತಾರೆ. ಅದನ್ನು ಚಕ್ರಗಟ್ಟಿ ಎಂದು ಕರೆಯುತ್ತಾರೆ. ಅದರ ಮೇಲೆ ನಿಂತು ಭವಿಷ್ಯವನ್ನು ಹೇಳುವುದನ್ನು ಈ ಪುರಾಣ ತಿಳಿಸುತ್ತದೆ. ಈ ಕಾವ್ಯದಲ್ಲಿ ಶಿಷ್ಯ ಮಾಳಪ್ಪನ ಗುರುವಿನ ಭಕ್ತಿಯನ್ನು ಮಾರ್ಮಿಕವಾಗಿ ಹೇಳಲ್ಪಟ್ಟಿದೆ. ಹಾಗೂ ಗುರುವಿನ ಪರೀಕ್ಷೆಯು ಮಾಳಪ್ಪನ ತಾತ್ವಿಕ್ತತೆಯನ್ನು ಪ್ರತಿಬಿಂಬಿಸುತ್ತದೆ.

"ಹುಲಿಗಡ್ಡಕ್ಕೆ ಹೋಗಿದ್ದ ಮಾಳಗ್ಹಾ

ಹುಲಿಯಾಗಿ ಕೂಣ್ಯಾನ ಗುಡದಾಗೇನ

ಗುಡಗಿನ ಸಪ್ಪಳ ಕೇಳಿ ಹುಲಿ ಬಂತೇನ

ಹುಲಿ ಹಾಲ ಹಿಂಡಿ ಕೊಂಡಾನ

ಹುಲಿಗಿ ವರವಾ ತಾ ಕೊಟ್ಟಾಗಿ

ಗುರುವಿನ ಉಣಸ್ಯಾನ

ತಂದ ಹುಲಿಗಿಣ್ಣಾ[೭೦]

ಈ ಸನ್ನಿವೇಶದ ಹಿನ್ನೆಲೆಯಲ್ಲಿ ಮಾಳಪ್ಪನು ವೀರಮಾಳಿಂಗರಾಯನಾಗುವುದು ಕಂಡುಬರುವುದು. ಕ್ರೂರ, ಶಕ್ತಿಶಾಲಿಯಾದ ಪ್ರಾಣಿಯನ್ನು ಸೌಮ್ಯವಾಗಿಸಿ ದೈವತ್ವದ ಸ್ಥಾನವನ್ನು ನೀಡುತ್ತಾನೆ. ಅಲ್ಲದೆ ಹುಲಿಯನ್ನು ತಂದು ವೇದ ಓದಿಸಿ, ಕುರಿಗಳನ್ನು ಕಾಯಿಸುವುದು ಮತ್ತು ತನ್ನ ಊರಿನ ಹೆಬ್ಬಾಗಿಲನ್ನು ಮಾಡುವುದು ಮೇಲ್ವರ್ಗದವರನ್ನು ಆಂತರಿಕ ಶಕ್ತಿಯ ಮೂಲಕ ಹಿಡಿದಿಡುವ ತಂತ್ರ ವ್ಯಕ್ತವಾಗಿದೆ.

ಈತನ ಮಹಿಮೆ ಭೂಲೋಕಕ್ಕೆ ಮಾತ್ರ ಸೀಮಿತಿ ಮಾಡದೆ ಕೈಲಾಸಕ್ಕೂ ಕೊಂಡೊಯ್ಯುವ ಕಥಾ ತಂತ್ರವು ಕಂಡುಬರುತ್ತದೆ. ಕೈಲಾಸದಲ್ಲಿರುವ ಅಮೋಘಸಿದ್ಧನು ಭೂಮಿಗೆ ಬಂದು ಮಾಳಪ್ಪನ ಜೊತೆ ಪೈಪೋಟಿಗೆ ಇಳಿಯುತ್ತಾನೆ. ಕಂಬಳಿ ಬೀಸಿ ಮಳೆ ಬರಿಸುವ ಪ್ರಸಂಗದಲ್ಲಿ ಮಾಳಿಂಗರಾಯ ಗೆಲುವನ್ನು ಸಾಧಿಸುತ್ತಾನೆ.

ಮಾಟ, ಮೋಡಿ ಮಾಡುವುದರಲ್ಲಿ ತುಂಬ ಪ್ರಸಿದ್ಧನಾಗಿದ್ದ ಮಾಳಪ್ಪ ಹಲವು ಪವಾಡಗಳನ್ನು ನೆರವೇರಿಸಿದ. ಈ ಕಾವ್ಯದುದ್ದಕ್ಕೂ ದುಷ್ಟರನ್ನು ಶಿಕ್ಷಿಸಿ ಅವರ ಗರ್ವ ಮುರಿದು ಬುದ್ಧಿ ಕಲಿಸಿ ಅವರಿಗೆ ಸಹಾಯ ಮಾಡುವ ಪ್ರಸಂಗಗಳು ಕಂಡುಬರುತ್ತವೆ. ಈ ರೀತಿಯ ಭಕ್ತಿ ಮಹಿಮೆಯನ್ನು ಕಂಡ ಶಿವಪಾರ್ವತಿಯರು ವರವನ್ನು ಕೇಳಲು ಹೇಳುತ್ತಾರೆ. ಆಗ ಮಾಳಪ್ಪ ಬಡವರಿಗೆ ಭಾಗ್ಯ, ವರಷಕ್ಕೊಮ್ಮೆ ನನಗೆ ನಿಮ್ಮ ದರ್ಶನ ಭಾಗ್ಯಬೇಕೆಂದು ಕೇಳುತ್ತಾನೆ. ಮಾಳಿಂಗರಾಯ ದೇಹತ್ಯಾಗ ಮಾಡಿದ ನಂತರವು ಶಿವಪಾರ್ವತಿಯರು ಆತನಿಗೆ ದರ್ಶನ ನೀಡುತ್ತಾರೆ. ಈಗಲೂ ಹುಲಜಂತಿಯಲ್ಲಿ ಮಾಳಿಂಗರಾಯನ ಉತ್ಸವದಲ್ಲಿ ಸಮಾಧಿ ಸ್ಥಳಕ್ಕೆ ಶಿವಪಾರ್ವತಿಯರು ಬಂದು ಆತನಿಗೆ ಪಟಗಾ ಸುತ್ತಿ ಮುಂಡಾಸ ಕೊಟ್ಟು ಹೋಗುತ್ತಾರೆ ಎಂಬ ನಂಬಿಕೆ ಇದೆ.

ಪಶುಪಾಲಕ ಸಂಸ್ಕೃತಿಗೆ ಸೇರಿದ ಮಾಳಿಂಗರಾಯರದ್ದು ಅಲೆಮಾರಿತನದ ಬದುಕು. ಬೆಟ್ಟಗುಡ್ಡಗಳಲ್ಲಿ ಇವರ ವಾಸದ ನೆಲೆಗಳು. ಹೀಗಾಗಿ ಇವರ ಮೇಲೆ ನಾಥ ಸಿದ್ಧರ ಪ್ರಭಾವ ಸಹಜವಾಗಿಯೇ ಮಾಳಿಂಗರಾಯನ ಮೇಲಾಗಿದೆ. ಮಾಳಿಂಗರಾಯನಿಗೆ ಇಬ್ಬರು ಪತ್ನಿಯರು. ಮೊದಲ ಪತ್ನಿ ತೀರಿಕೊಂಡಾಗ ತುರಬಿ ಹಟ್ಟಿಕೇರಿ ಚಂದ್ರಯ್ಯನ ಮಗಳು ಈರವ್ವಳನ್ನು ಮದುವೆಯಾಗುತ್ತಾನೆ. ಈ ಬಹುಪತ್ನಿತ್ವ ಮಾಳಿಂಗರಾಯನ ವಂಶವನ್ನು ಬೆಳೆಸುವುದಕ್ಕೆ ಕಾರಣ ನೀಡುತ್ತದೆ ಹೊರತು ಕಾಮುಕತ್ವವನ್ನು ಸೂಚಿಸುವುದಾಗಿಲ್ಲ. ಈಕೆಯ ನಾಲ್ಕು ಜನ ಮಕ್ಕಳ ಸಂತತಿಯೇ ಈಗ ಹುಲಜಂತಿಯಲ್ಲಿರುವುದು ಎಂದು ಸಹ ಹೇಳುತ್ತದೆ. ಈ ಮೂಲಕ ಹಾಲುಮತ ಸಮುದಾಯವು ಇವರನ್ನು ಗುರುಸ್ಥಾನದಲ್ಲಿಟ್ಟು ನೋಡುತ್ತದೆ ಎಂಬುದು ಹಾಡುಗರ ಅಭಿಪ್ರಾಯ.

ಹೀಗೆ ಅನೇಕ ರೀತಿ ಪವಾಡ ಶಕ್ತಿಯನ್ನು ಮೆರೆದು ದೈವಪುರುಷನಾಗಿ ಕಂಗೊಳಿಸಿದ ಮಾಳಿಂಗರಾಯನ ಕಥೆಯನ್ನು ಹಾಡುಗಾರನು ಸುಂದರವಾಗಿ ಮುಗಿಸುತ್ತಾನೆ. ಮಾಳಿಂಗರಾಯ ಶ್ರಾವಣ ಅಮವಾಸ್ಯೆಯ ಆದಿತ್ಯವಾರ ಮಧ್ಯ ರಾತ್ರಿಯಲ್ಲಿ ಜೀವ ಸಮಾಧಿಯಾಗುತ್ತಾನೆಂದು ಹೇಳುತ್ತದೆ. ನಂತರ ಜಕ್ಕಪ್ಪನು ಏಣಕಿ ಮಠದಲ್ಲಿ ಸಮಾಧಿಯಾಗುವನು. ಅಲ್ಲದೇ ಕಾವ್ಯದಲ್ಲಿ ಆಧುನಿಕ ಭಾಷೆಯ ಶಬ್ದಗಳು ಬಳಕೆಯಾಗಿವೆ. ಜೊತೆಗೆ ಪ್ರಾದೇಶಿಕ ಭಾಷೆಯನ್ನು ಇದರಲ್ಲಿ ಕಾಣುತ್ತೇವೆ.

ಒಟ್ಟನಲ್ಲಿ ಹಾಲುಮತ ಸಮುದಾಯದ ಸಾಂಸ್ಕೃತಿಕ ನಾಯಕರಲ್ಲಿ ಮಾಳಿಂಗರಾಯನು ಒಬ್ಬನೆಂದು ಕಾವ್ಯದುದ್ದಕ್ಕೂ ತುಂಬಾ ವಿಶಿಷ್ಟ ರೀತಿಯಲ್ಲಿ ಕಂಡುಬರುತ್ತಾನೆ.

## ಜನಪದ ಹಾಲುಮತ ಮಹಾಕಾವ್ಯ

ಡಾ. ವೀರಣ್ಣ ದಂಡೆಯವರು ಈ ಕೃತಿಯನ್ನು ಸಂಪಾದಿಸಿದ್ದಾರೆ. ಜನಪದ ಹಾಲುಮತ ಮಹಾಕಾವ್ಯವನ್ನು ಸಿದ್ದಪ್ಪ ಮೇಟಿ ಅವರು ವಿಸ್ತಾರವಾಗಿ ಹಾಡಿದ್ದಾರೆ. ಈ ಪುರಾಣದಲ್ಲಿ ನೂರಾರು ಪಾತ್ರಗಳು ಮುಂಜಾನೆಯಲ್ಲಿ ಅರಳುವ ಹೂವಿನ ದಳದಂತೆ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಆದರೆ ಮುಖ್ಯ ಪಾತ್ರದಲ್ಲಿ ಲಿಂಗಬೀರಣ್ಣ ಮತ್ತು ಮಾಳಿಂಗರಾಯನು ಮಾತ್ರ ಕಾವ್ಯದಲ್ಲಿ ಕಂಡುಬರುತ್ತಾರೆ. ಉಳಿದ ಪಾತ್ರಗಳು ಇವರಿಬ್ಬರ ಸಾಹಸ-ಸಾಧನೆಗೆ ಬಳಕೆಯಾಗುವುದರ ಮೂಲಕ ಚಿತ್ರಣಗೊಂಡಿವೆ. ಕಾವ್ಯವು ಒಟ್ಟು ಹದಿನಾಲ್ಕು ವೃತ್ತಾಂತಗಳಲ್ಲಿ ಕಥೆಯ ಹಂದರವನ್ನು ಹೊಂದಿದೆ. ಮೊದಲಿನ ಭಾಗವೇ 'ಕೈಲಾಸದ ಹಾಡಿಕೆ' ಈ ಭಾಗದಲ್ಲಿ ನೀರಿನಿಂದ ಭೂಮಿ ಸೃಷ್ಟಿಯಾದುದರ ಬಗ್ಗೆ ತಿಳಿಸುತ್ತದೆ. ಮೂರು ಯುಗಗಳು 'ಹಾಲುಮತ' ಎಂಬುದನ್ನು ಬರಮಾಡಿಕೊಳ್ಳಲು ಅವಕಾಶ ಮಾಡಿಕಟ್ಟುದನ್ನು ತಿಳಿಸುವುದು. ದಕ್ಷಬ್ರಹ್ಮನ ಮಗಳು ಪಾರ್ವತಿಯು ಶಿವನನ್ನು ಮದುವೆಯಾಗುವಾಗ ಶಾಂತಮುತ್ಯಾ ಒಡ್ಡೋಲಗಕ್ಕೆ ಬಂದು ಕಂಬಳಿ ಅಯ್ಯರಿ ಮಾಡುವನು. ಈ ಕಾವ್ಯವು ಶಾಂತಮುತ್ತಯ್ಯನು ಕೈಲಾಸದಲ್ಲಿ ಜನಿಸಿದನೆಂದು ಹೇಳುತ್ತದೆ. ಈತನು ಐದು ಮಂದಿ ರಾಕ್ಷಸರನ್ನು ಕೊಂದು ಟಗರು, ಡೊಳ್ಳು, ಶಂಕ, ತಾಳ, ಕತ್ತರಿ ಸುಖದ ಕೊಳಲು, ದುಃಖದ ಕೊಳಲು ಇತ್ಯಾದಿಗಳನ್ನು ತಯಾರಿಸುತ್ತಾನೆ. ನಂತರ ಟಗರಿನಿಂದ ಉಣ್ಣೆ ಕತ್ತರಿಸಿ ಕಂಬಳಿ ತಯಾರಿಸಿ ಪಾರ್ವತಿಗೆ ಮುಯ್ಯ ಮಾಡುವುದನ್ನು ಹೇಳಲಾಗಿದೆ.

ತದನಂತರ ಹಾಲುಮತವು ಶಿವಪಾರ್ವತಿಯರಿಂದಾಗಿದ್ದನ್ನು ವಿವರಿಸಲಾಗಿದೆ. ಶಿವಪಾರ್ವತಿಯರು ಭೂಲೋಕಕ್ಕೆ ಕುರಿಕಾಯಲು ಬರುತ್ತಾರೆ. ಇದ್ದರಿಂದ ಬೇಸರಗೊಂಡು ಬಂಕಾಪುರದಲ್ಲಿ "ಮೂರು ಕಣ್ಣಿನ ಹುತ್ತಿನೊಳಗೆ ಕುರಿಯೂ ಹೊಗಸುತಾಳೇನ, ಕುರಿಯಾ ಹೊಗಸೂತಾಳೇನ ಹುತ್ತ ಮುಚ್ಚು ತಾಳೇನ, ಮುತ್ತಲ ಮರವಂದು ಮಾಡ್ಯಾಳೆ ಕೆಳಗೆ ಹುತ್ತಿನ ಗಡ್ಡಿಗ ವಾರ್‍ಯಾಳ, ಮುತ್ತಿನಂತ ಮರವೇನ ಹುತ್ತಿಗೆ ಬೆಳೆಯುತ್ತಾವೇನ"[೨] ಹೀಗೆ ಪಾರ್ವತಿಯು ಕೈಲಾಸದಿಂದ ಕಾಯಲು ತನ್ನ ಎದೆಯ ಹಾಲಿನಿಂದ ಮಣ್ಣು ಕಲಿಸಿ ಮುದ್ದೆಮಾಡಿ ಎರಡು ಗೊಂಬೆಗಳನ್ನು ಮಾಡುವಳು. ಆ ಮಣ್ಣುಗೊಂಬೆಗಳೇ ಮುದ್ದುಗೊಂಡ, ಮುದ್ದವ್ವರಾಗಿ ಹಾಲುಮತದ ಸೃಷ್ಟಿಗೆ ಕಾರಣೀಭೂತರಾಗುವರು. ಹಾಲುಮತದ ಬೆಳವಣಿಗೆಗೆ ಈ ದಂಪತಿಗಳು ಆದಿಗೊಂಡ, ಅನಂತಗೊಂಡ, ಸಿದ್ದಗೊಂಡ, ಪದುಮಗೊಂಡ ಎಂಬ ನಾಲ್ಕು ಜನ ಗಂಡುಮಕ್ಕಳನ್ನು ಪಡೆಯುತ್ತಾಳೆ. ಪದುಮಗೊಂಡನಿಂದ ಹುತ್ತದಲ್ಲಿರುವ ಕುರಿಗಳು ಹೊರಬರುತ್ತವೆ. ಆ ಕುರಿಗಳನ್ನು ಪದುಮಗೊಂಡನು ಕಾಯುತ್ತಾ ಕಾಡಿಗೆ ಹೊರಡುವನು. ಇಲ್ಲಿ ಮುದ್ದುಗೊಂಡನ ವಂಶವು ಕವಲೊಡೆಯುವುದನ್ನು ಕಾಣುತ್ತೇವೆ. ಪದುಮಗೊಂಡ ಕುರಿಕಾಯುವುದರಿಂದ ಒಂದು ಸಂತತಿ ಬೆಳೆಸಿದರೆ, ಇನ್ನುಳಿದ ಮಕ್ಕಳು ಒಕ್ಕಲುತನದಿಂದ ಒಂದು ಸಂತತಿ ಬೆಳೆಸುವರು. ಪದ್ಮಗೊಂಡನು

ಕುರಿಕಾಯುತ್ತಾ ಹೋರಟಾಗ ಬೆಂಕಿಯನ್ನು, ಕೊಬ್ಬರಿ ಶೋಧವನ್ನು ಮಾಡಿ ಕುರಿ ಹಾಲಿನಿಂದ ಗಿಣ್ಣವನ್ನು ತಯಾರಿಸಿ ಆಹಾರದ ಭಾದೆಯನ್ನು ಕಳೆದುಕೊಳ್ಳುವನು. ಈ ಮೂಲಕ ಪದ್ಮಗೊಂಡನಿಗೆ ಶಿವಲಿಂಗಮ್ಮನೊಂದಿಗೆ ಎರಡನೆಯ ಮದುವೆಯಾಗುತ್ತದೆ. ಈ ದಂಪತಿಗಳ ಮಗನೇ ಮಡ್ಡಪ್ಪ. ಮಡ್ಡಪ್ಪನು ಕಾಡಿನಲ್ಲಿಯೇ ಬೆಳೆಯುತ್ತಾನೆ. ಮಡ್ಡಪ್ಪನು ಗಾಣಿಗ ಮಲ್ಲಪ್ಪನ ಕಷ್ಟ ಪರಿಹರಿಸಿದ್ದಕ್ಕೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವುದರ ಮೂಲಕ ಗಾಣಿಗ ವೃತ್ತಿಯಿಂದ ಗೌಳಿಗನಾಗುವ ಪರಿವರ್ತನೆಯು ಮುಖ್ಯವಾಗಿ ಕಂಡುಬರುತ್ತದೆ. ಇವರು ಕಾಡಿನಲ್ಲಿ ಇರುವುದರಿಂದ ಕಾಡುಕುರುಬರೆಂದೂ, ಪದುಮಗೊಂಡನ ಮಕ್ಕಳು ಗೊಂಡ ಕುರುಬರೆಂದು ಪ್ರಸಿದ್ಧಿಯಾದರು.

ಎರಡನೇ ಭಾಗದಲ್ಲಿ ಬೀರಪ್ಪನ ಪೂರ್ವಜರ ವೃತ್ತಾಂತವನ್ನು ಹೇಳಲಾಗಿದೆ. ತಿಪರೇಸೂರ ಏಳು ಹೆಣ್ಣುಮಕ್ಕಳನ್ನು ಸಮುದ್ರದ ಪಾಲ ಮಾಡ್ಯಾನ, ಕದ್ದು ಮಾಡಿದ ಹಾದರ ಗೆದ್ದು ತಂದಿನಿ ಅಂದಾಳ, ಕಾಳಿನಾರಾಯಣ ದೇವರು ಶಿವನ ಪೂಜೆ ಮಾಡ್ಯಾನ ಭಾಳಭರಮದೇವ ಸೂರಮ್ಮದೇವಿಯರ ಮದುವೆ. ಈ ನಾಲ್ಕು ವಿಭಾಗದಲ್ಲಿ ಬೀರಪ್ಪನ ಜನನ ರೋಚಕ ಮತ್ತು ಅವಶ್ಯವೆಂದು ಹೇಳಲಾಗಿದೆ. ಬೀರಪ್ಪನ ಹುಟ್ಟಿಗಾಗಿಯೇ ಕಥೆಗಳ ಹಂದರ ಇಬ್ಭಾಗವಾಗುತ್ತಾ ಹೋಗುತ್ತದೆ. ತಿಪರಂಗಿ ನಾಡಿನ ಅರಸ ತಿಪರೇಸೂರನಿಗೆ ಏಳು ಜನ ಹೆಣ್ಣು ಮಕ್ಕಳು. ಅವರನ್ನು ಏಳು ಜನ ಅಣ್ಣತಮ್ಮಂದಿರಿಗೆ ಕೊಟ್ಟು ಮದುವೆ ಮಾಡುವಲ್ಲಿ ಅರಸ ಸೋಲುತ್ತಾನೆ. ಅದಕ್ಕೆ ಅವರನ್ನು ಸಮುದ್ರದಲ್ಲಿ ಮುಳುಗಿಸಿ ಸಾಯಿಸುತ್ತಾನೆ. ಆದರೆ ಕೊನೆಯವಳಾದ ಕಮಳಾದೇವಿ ಮಾತ್ರ ಬದುಕುವಳು. ನಂತರ ಕಮಳಾದೇವಿಯನ್ನು ತಂದು ಅರಮನೆಯಲ್ಲಿ ಕೂಡಿ ಹಾಕುತ್ತಾನೆ. ಇದನ್ನು ಅರಿತ ಶಿವನು ಬುಡಬುಡಕ್ಯಾನ ವೇಷ ಧರಿಸಿಕೊಂಡು ಆಕೆಗೆ ಸೂಜಿ, ಡಬ್ಬಣದಿಂದ ಚುಚ್ಚುವಂತಹ ರೋಗ ಹಾಕುವನು. ನಂತರ ತಾನು ನಾನಾ ತರಹದ ಕಾಯಿಲೆ ಗುಣಪಡಿಸುವನೆಂದು ಹೇಳಿತ್ತಾಗ ಅರಮನೆಗೆ ಹೋಗುವನು. ಮದುವೆಯಾದವರಿಗೆ ಮಾತ್ರ ಔಷಧಿ ಕೊಡುವುದಾಗಿ ಹೇಳುತ್ತಾನೆ. ಅದಕ್ಕೆ ಅರಸನಿಗೆ ಊರಿದ ಕೂಡಲೇ ಗಿಡವಾಗಿ ಬೆಳೆಯುವ ಸಸ್ಯದ ಬೀಜಕೊಟ್ಟು, ಊರಲು ಹೇಳುತ್ತಾನೆ. ಹಾಗೂ ಆ ಗಿಡದೊಂದಿಗೆ ಕಮಳಾದೇವಿಯ ಮದುವೆ ಮಾಡಬೇಕೆಂದು ಹೇಳುವನು. ಹಾಗೆಯೇ ಬೀಜ ಊರಿದಾಗ ಸೂರ್ಯ ಮೇಲೆರಿದಂತೆ ಸಸಿಯು ಬೆಳೆದು ಗಿಡವಾಗಿ ನಿಲ್ಲುವುದು. ಅದರ ಜೊತೆ ಕಮಳಾದೇವಿಗೆ ಮದುವೆ ಮಾಡುತ್ತಾರೆ. ನಂತರ ಕೋಲ್‌ಮಿಂಚು ಹೊಡೆದಾಗ ಅದರಿಂದ ಆಕೆಯು ಗರ್ಭವತಿಯಾಗುತ್ತಾಳೆ. ಮದುವೆಯಾಗದೆ ಮಕ್ಕಳನ್ನು ಪಡೆದಿದ್ದರಿಂದ ಕಮಳಾದೇವಿ ಹೆದರಿ ಆ ಮಗುವನ್ನು ಸೇವಕಿಯರ ಜೊತೆ ಕಳಿಸುವಳು. ಅಲ್ಲಿಗೆ ಪಾರ್ವತಿಯು ಕೊರವಂಜಿ ವೇಷ ಧರಿಸಿ ಮಗುವನ್ನು ಬುಟ್ಟಿಯಲ್ಲಿಟ್ಟು ಕೈಲಾಸಕ್ಕೆ ವೈಯ್ದು ಶಿವನು ಕದ್ದು ಮಾಡಿದ ಹಾದರವನ್ನು ಬಹಿರಂಗ ಪಡಿಸಲು ಮಗುವನ್ನು ಒಯ್ಯುತ್ತಾಳೆ. ಆಗ ಶಿವನು ಹದ್ದಾಗಿ ಆ ಶಿಶುವನ್ನು ಹೊತ್ತುಕೊಂಡು ಜಂಬುದ್ವೀಪದ ಗಡ್ಡಿಯ ಕೊಳದ ಕಮಲದ ಹೂವಿನಲ್ಲಿ ಅಡಗಿರುಸುತ್ತಾನೆ.

ಆ ಮಗುವೇ ಭಾಳಭರಮವಾಗುತ್ತಾನೆ. ಶಿವನು ಮಾಡಿದ ಈ ಕುತಂತ್ರದಿಂದ ಪಾರ್ವತಿಯು ಕೋಪದಿಂದ ಬೆವರಿಳಿಸಿ ಆ ಬೆವರಿನಿಂದ ಮೈಯಮಣ್ಣ ತೆಗೆದು ಗೊಂಬೆಮಾಡಿ ಮತ್ತೆ ಶಿವನಿಂದಲೇ ಜೀವ ತುಂಬಿಸಿ ಆ ಮಗುವಿಗೆ ಅಮೋಘಸಿದ್ಧ ಎಂದು ಹೆಸರಿಡುತ್ತಾರೆ. ಈ ಎರಡು ಘಟನೆಗಳು ಶಿವನಿಂದಾದ ಭಾಳಭರಮ ಶ್ರೇಷ್ಠ ಎಂತಲೂ, ಪಾರ್ವತಿ ವರಪುತ್ರ ಅಮೋಘಸಿದ್ಧನು ಹಠಮಾರಿಯಾಗಿ ಪಾರ್ವತಿಯ ಮಮತೆಯಲ್ಲಿ ಬೆಳೆಯುವುದನ್ನು ತಿಳಿಸುತ್ತದೆ.

ಮೂರನೆಯ ಭಾಗದಲ್ಲಿ ಕಾಳಿನಾರಾಯಣನು ಶಿವನ ಪೂಜೆಗೆ ಉದುರಿ ಬಿದ್ದಿದ್ದ ಹೂವಿನಿಂದ ಬತ್ತಿದ ಗುಂಡಿಯ ನೀರಿನಿಂದ ಪೂಜೆ ಮಾಡುತ್ತಾನೆ. ಈ ತಪ್ಪಿಗಾಗಿ ಕಾಶಿಗೆ ಹೋಗಿ ಬರಬೇಕೆಂದು ಶಿವನು ಸೂಚಿಸುತ್ತಾನೆ. ಶಿವನ ಪೂಜೆಗೆ ಬಾಳಭರಮನನ್ನು ನೇಮಿಸಿ ಕಾಶಿಗೆ ಪ್ರಯಾಣ ಮಾಡುವನು. ಅವನು ಬರುವಷ್ಟರಲ್ಲಿ ಬಾಳಭರಮನ ಪೂಜೆಯೇ ಶಿವನಿಗೆ ಪ್ರಿಯವಾಗಿರುತ್ತದೆ. ಆದರೆ ಇದನ್ನು ಕಾಳಿನಾರಾಯಣನು ಸಹಿಸದೆ ಕುತಂತ್ರ ಹೂಡುವನು. ಪ್ರತಿಯಾಗಿ "ಕುಳಬಾನ ನೋಡಲಿಬಾರದ ಉರಿಯ ಕಿಚ್ಚನಂದಾನ, ಒಣಗಿಡ ನೋಡಲಿ ಬಾರದ ಒಣಗಿಡಿ ಕಟಗಿನಂದಾನ"[1] ಹೀಗೆ ಬಾಳಭರಮನನ್ನು ಬಂಜೆಯೆಂದು ಹೀಯಾಳಿಸಿ ಶಿವನ ಪೂಜೆಯನ್ನು ಮತ್ತೆ ಕಾಳಿನಾರಾಯಣನು ಪಡೆಯುತ್ತಾನೆ. ಈ ಆಧ್ಯಾತ್ಮಿಕ ಸಂಘರ್ಷವೇ ಲಿಂಗಬೀರಣ್ಣನ ಹುಟ್ಟು ಮತ್ತು ಜೀವನವು ಸ್ವಾರಸ್ಯಕರವಾಗುವಂತೆ ಮಾಡಿದೆ.

ನಾಲ್ಕನೇ ಭಾಗದಲ್ಲಿ ಬೀರಪ್ಪನು ಹುಟ್ಟುವುದಕ್ಕೆ ಕಾಳಿನಾರಾಯಣ ಕಪಟ ಸೂತ್ರಗಳ ವಿಶ್ಲೇಷಣೆಯು ಕಂಡುಬರುತ್ತದೆ. ಇಲ್ಲಿಂದಲೇ ಗಟ್ಟಿಯಾದ ಹಾಲುಮತದ ಪೂರ್ವ ಚರಿತ್ರೆಯು ಅನಾವರಣಗೊಳ್ಳುತ್ತದೆ. ಅಣ್ಣನು ಮಾಡಿದ ಅವಮಾನಕ್ಕೆ ತಂಗಿ ಸೂರಮ್ಮದೇವಿ ತಪಸ್ಸು ಮಾಡುವುದು, ಆಗ ಶಿವ ಪ್ರತ್ಯಕ್ಷನಾಗಿ ತನ್ನ ಹಣೆಯ ಬೆವರಿನಿಂದ ಲಿಂಗಬೀರಣ್ಣನ ಜನನಕ್ಕೆ ಕಾರಣೀಕರ್ತನಾಗುತ್ತಾನೆ. ಈ ಕಾವ್ಯದಲ್ಲಿ ಬರುವ ಎಲ್ಲ ವ್ಯಕ್ತಿಗಳ ಜನನವು ಆಯೋನಿಜವಾಗಿಯೇ ಚಿತ್ರಿತವಾಗಿದೆ. ಈ ಕಾರಣದಿಂದಲೇ ಆ ವ್ಯಕ್ತಿಗಳು ಸಮುದಾಯದ ನಾಯಕರು ಆಗಲೂ ಅರ್ಹತೆಯನ್ನು ಪಡೆಯುತ್ತಾರೆಂದು, ಪ್ರತಿಯೊಂದು ಸ್ತ್ರೀಪುರುಷ ಪಾತ್ರಗಳಿಂದ ಕಂಡುಬರುತ್ತದೆ. ಈ ಭಾಗದಲ್ಲಿ ಬರುವ ಕಾಳಿನಾರಾಯಣನ ತಂತ್ರಗಳು ಇಂದು ಹಾಲುಮತದವರಲ್ಲಿ ಶುಭಕಾರ್ಯಗಳಾಗಿ ಮಾರ್ಪಾಟಾಗಿರುವುದನ್ನು ನೋಡಬಹುದು. ಉದಾ: ಐದು ತಿಂಗಳು ಬಯಕೆ ಬುತ್ತಿಯನ್ನು ಕೊಡುವುದು ಶಿಶುವನ್ನು ಕೊಲ್ಲುವ ಉದ್ದೇಶ ಹೊಂದಿರುತ್ತದೆ. ಸೂಲಗಿತ್ತಿಯರನ್ನು ಕಳುಹಿಸುವುದು ಮತ್ತು ಶಿಶುವನ್ನು ಕಾಡಿಗೆ ಕಳುಹಿಸಿಕೊಡುವುದು ಈ ತಂತ್ರಕ್ಕೆ ಬೀರಪ್ಪನು ಅಂಜದೆ ಸೆಟೆದು ನಿಲ್ಲುವಲ್ಲಿ ವೈರಿಯನ್ನು ಹೆದರಿಸುವ ಎದೆಗಾರಿಕೆಯನ್ನು ಹೋರಾಟದ ಪ್ರತೀಕವಾಗಿ ಕಂಡುಬರುತ್ತದೆ. ಕಾಳಿನಾರಾಯಣನು ಸೂರಮ್ಮದೇವಿಯನ್ನು ಬಂಜೆಯಾಗಿಸುವ ಭಾವನೆಯು ಮಾತೃ ಪ್ರಧಾನತೆಯನ್ನು ವಿರೋಧಿಸುವುದನ್ನು ತಿಳಿಸಿಕೊಡುತ್ತದೆ. ಬೀರಪ್ಪನ ಪವಾಡಗಳು ಹೋರಾಟ ಮಾಡುವ ರಾಜಕೀಯ ಕುಶಲತೆಗಳಾಗಿ ಕಂಡುಬರುತ್ತವೆ. ಗರ್ಭದಲ್ಲಿ ತಾಯಿಯನ್ನು ವಿಷದ ಬುತ್ತಿಯನ್ನು

ತಿನ್ನದಂತೆ ಎಚ್ಚರಿಸುವುದು. ಸೂಲಗಿತ್ತಿಯರ ಸೊಂಟವನ್ನು ಮುರಿಯುವುದು. ನಂತರ ಕಾಳಿನಾರಾಯಣನ ಎಮ್ಮೆಗಳನ್ನು ಸಾಯಿಸುವುದು. ಆದರೂ ಜೋಯಿಸನ ವೇಷಧಾರಿಯಾಗಿ ತಂಗಿಯ ಮುಂದೆ ಭವಿಷ್ಯವನ್ನು ಹೇಳಿ ಕಾಡಿಗೆ ಬೀರಣ್ಣನನ್ನು ಕಳುಹಿಸುತ್ತಾನೆ. ಇಲ್ಲಿ ಸೂರಮ್ಮದೇವಿಯು ನಿಸ್ಸಾಯಕ ಸ್ತ್ರೀಯಾಗಿ ಆತನ ಮಾತಿಗೆ ಸಮ್ಮತಿಸುವುದು ಪುರುಷ ಪ್ರಧಾನ್ಯತೆಯ ಆರಂಭವನ್ನು ತಿಳಿಸುವುದು. ಹೀಗೆ ಬೀರಪ್ಪನ ಜನನ ವೃತ್ತಾಂತದಲ್ಲಿ ಕಾಳಿನಾರಾಯಣನ ವೃತ್ತಿ ಬೀರಪ್ಪನ ಮೊದಲ ಹೋರಾಟವನ್ನು ನೋಡುತ್ತೇವೆ. ಕಂಚಿನ ಆಲದಮರದಲ್ಲಿದ್ದ ತೊಟ್ಟಿಲಿಗೆ ಶಿವನೇ ರಕ್ಷಕನಾಗಿ ಮುಂದಿರುವುದು ಶಿಷ್ಟರ ರಕ್ಷಣೆ, ದುಷ್ಟರ ಶಿಕ್ಷಕನಾಗಿ ಬರುವ ಉದ್ದೇಶವನ್ನು ತಿಳಿಸುವುದು.

ಬೀರಪ್ಪನು ಸ್ವತಃ ತಾಯಿಯ ಮಮತೆಯನ್ನು ಕಳೆದುಕೊಂಡರೂ, ಸಾಕುತಾಯಿ ಮಾಯವ್ವನಲ್ಲಿ ಪ್ರೀತಿ, ವಾತ್ಸಲ್ಯವನ್ನು ಪಡೆಯುವನು. ಮಾಯವ್ವಳು ಸಹ ಬೀರಪ್ಪನಂತೆ ಅನಾಥಳಾಗಿ ಬೆಳೆಯುವ ಪಾತ್ರ. ಈಕೆಯು ದಿಬ್ಬೆಯ ದಿಬ್ಬರಾಯನ ಮಗಳಾಗಿ ಬೆಳೆಯುತ್ತಾಳೆ. ದಿಬ್ಬರಾಯನ ಏಳು ಜನ ಹೆಣ್ಣುಮಕ್ಕಳ ಜೊತೆ ಮಾಯವ್ವಳು ಒಬ್ಬಳಾಗಿ ಬೆಳೆಯುವಳು. ನಂತರ ಕಾಡುಸಿದ್ಧರ ಭೂಮಿಯಲ್ಲಿ ಕುರಿಯನ್ನು ಕಾಯುತ್ತಾಳೆ.

"ಕಾಡುರುದ್ದರ ಭೂಮಿಗೆ ಎಲ್ಲಾ ಸಿಗತಾವಾಂದಾಳ
ಮೇವ ಸಿಗುತಾವಂದಾಳೇ ನೀರ ಸಿಗತಾವಂದಾಳ"[೭೩]

ಮಾಯವ್ವ ಕುರಿಯನ್ನು ಕಾಯುವುದು ತಂದೆಯ ಆಸ್ತಿಯಲ್ಲಿ ಸಮಭಾಗಿದಾರಳೆಂದು ತಿಳಿಸುತ್ತದೆ. ಗಂಡಿನಂತೆ ಆಸ್ತಿಯಲ್ಲಿ ಪಾಲುದಾರಿಕೆಯನ್ನು ಪಡೆಯುವಳು. ನಂತರ ಕುರಿಯ ಹಿಕ್ಕೆಯನ್ನು ಗೊಬ್ಬರವಾಗಿಸುವುದು. ಉಣ್ಣೆ ಹಿಂಜಿ ನೂಲ ತಯಾರಿಸಿ ಕಂಬಳಿಯ ನೇಯ್ಗೆಯನ್ನು ಮಾಡುವಳು. ಕಾಡಿನಿಂದ ನಾಡಿಗೆ ಕಂಬಳಿಯ ಪರಿಚಯವನ್ನು ಮಾಡಿಸುತ್ತದೆ.

"ಗೊಬ್ಬರ ಬಳಿಯುತಾರೇನೆ ಉಣ್ಣೆ ಹಿಂಜುತಾರೇನ
ನೂಲ ಭರಕಿ ಮಾಡ್ಯಾರೆ ಉಣ್ಣೆ ಹಿಂಜುತಾರೇನ
ಉಣ್ಣಿ ಸುತ್ತತಾರೇನೆ ನೂಲ ತಯ್ಯಾರ ಮಾಡ್ಯಾರ
ಏಳು ಮಂದಿ ಹೆಣ್ಣುಮಕ್ಕಳೇ ಧಂದಾ ಮಾಡುತಾರೇನ"[೭೪]

ಇಲ್ಲಿ ಮಾಯವ್ವ ಪುರುಷನ ಸರಿಸಮನಾಗಿ ಕಾರ್ಯ ಪ್ರವೃತ್ತಿಯನ್ನು ಕೈಗೊಂಡಿದ್ದಾಳೆ. ಕೈಲಾಸದಲ್ಲಿ ಆರು ಮಂದಿ ಅಕ್ಕಂದಿರಿಂದ ದೂರವಾಗಿ ಭೂಮಿಯಲ್ಲಿ ಜನ್ಮ ಪಡೆಯುವಳು. ಕೆಲ ವರ್ಷದ ನಂತರ ತಂಗಿಯನ್ನು ಹುಡುಕಿಕೊಂಡು ಭೂಮಿಗೆ ಬಂದಾಗ ಕಾಡುರುದ್ದರ ಭೂಮಿಯಲ್ಲಿ ಭೇಟಿಯಾಗುತ್ತಾರೆ. ಈ ಮೂಲಕ ಆರು ಮಂದಿಯಲ್ಲಿ ಅಕ್ಕಮ್ಮ ಎಂಬುವಳು ಮಾಯವ್ವ ಜೊತೆ ಕಾಡುರುದ್ರ ಭೂಮಿಯಲ್ಲಿ

ಉಳಿಯುವಳು. ಉಳಿದವರು ಕೈಲಾಸಕ್ಕೆ ಮರಳುವರು. ಅಕ್ಕಮ್ಮ-ಮಾಯವ್ವರು ಸೇರಿ ಕುರಿಗಳನ್ನು ದ್ವಿಗುಣಗೊಳಿಸುತ್ತಾರೆ.

"ಏಳ ಹಿಂಡಿಗಲ್ಲೇಳ ಮೂವತ್ತೈದ ಮಾಡ್ಯಾರ

ಇಬ್ಬರು ಅಕ್ಕ ತಂಗಿದೇರಿಗೆ ಕುರಿಯ ಕೊಟ್ಟವಿ ಅಂದಾರ

ಕುರಿಯಾ ಕೊಟ್ಟವಿ ಅಂದಾರೆ ಬೀಜದ ಮರಿಗೋಳ ಹೊಡೆದೇವ"[೭೫]

ಇಬ್ಬರು ಸೇರಿ ಮಾಡುವ ವೃತ್ತಿಯು ಕುರಿಯ ಕೃಷಿಯಾಗಿದೆ. ಕುರಿಯನ್ನು ಕಾಯುತ್ತಾ ಕಾಡಿಗೆ ಬರುವಾಗ ಕಂಚಿನ ಆಲದ ಮರದಲ್ಲಿನ ತೊಟ್ಟಿಲು ನೋಡುತ್ತಾರೆ. ಇಬ್ಬರು ಮಗುಬೇಕೆಂದು ಜಗಳ ಮಾಡುತ್ತಾರೆ. ನಂತರ ಒಂದು ತೀರ್ಮಾನಕ್ಕೆ ಬರುವರು. ಅದೇನೆಂದರೆ ಯಾರ ಸೆರಗಿನಲ್ಲಿ ಮಗು ಬೀಳುವುದೋ ಅವರು ಆ ಮಗುವಿನ ತಾಯಿಯೆಂದು ತೀರ್ಮಾನಿಸುವರು. ಆಗ ಅಕ್ಕಮ್ಮ ಮೊದಲು ಮರವನ್ನು ಮುಟ್ಟಲು ಹೋದಾಗ ಅಲ್ಲಿನ ಕಟ್ಟಿರುವೆಗಳು ಕಡಿಯುತ್ತವೆ. ಆದರೆ ಮಾಯವ್ವಳು ಇರುವೆಗೆ ಸೋಮವಾರದಂದು ಸಕ್ಕರೆ ಬೀರುವುದಾಗಿ, ನಾಗರ ಹಾವಿಗೆ ಬೀರಣ್ಣನ ಶಯನವಾಗಿಸುವೆನೆಂದು, ಜೇನಿಗೆ ಸಿಹಿಯನ್ನು ಉಣಿಸುವೆನೆಂದು, ಗಿಳಿಗಳಿಗೆ ತೊಟ್ಟಿಲದ ಅಲಂಕಾರದ ವಸ್ತು ಮಾಡಿ ಮಗುವಿಗೆ ಆಟಕ್ಕೆ ಕೊಡುವೆನೆಂದು ಮಾತು ಕೊಡುತ್ತಾಳೆ. ಇವರಿಬ್ಬರಲ್ಲಿ ಜಗಳ ನಡೆಯುತ್ತಿರುವಾಗ ಎಳ್ಳಿಗುಂಪಿ ರಾಯಣ್ಣ ಬಂದು ಇಬ್ಬರಲ್ಲಿ ಯಾರಿಗೆ ತಾಯಿಯ ಲಕ್ಷಣಗಳು ಬರುತ್ತವೋ ಅವರೇ ಆ ಕೂಸಿನ ತಾಯಿಯೆಂದು ಹೇಳುತ್ತಾನೆ. ಅದೇ ರೀತಿ ಮಾಯವ್ವಳು ಬಾಣಂತಿ ರೂಪವನ್ನು ಪಡೆಯುವಳು. ಹೀಗೆ ಚಂದನಗಿರಿಯಲ್ಲಿ ಅಕ್ಕಮ್ಮ, ಮಾಯವ್ವ ಮತ್ತು ಲಿಂಗಬೀರಣ್ಣನು ಕುರಿಗಳ ಜೊತೆಯಲ್ಲಿ ಜೀವನ ನಡೆಸುವರು. ಹೀಗೆ ಮನಕ್ಕೆ ಮಗನಾಗಿ ಜನಕ್ಕೆ ತಮ್ಮನಾಗಿ, ಬೀರಣ್ಣನನ್ನು ಮಾಯವ್ವ ಬೆಳೆಸುವಳು. ನಂತರ ಮಾಯವ್ವಳ ಪಾಲನೆಯಲ್ಲಿ ಊರಿನ ಜನರ ಜೊತೆ ಚಿನ್ನಿ ದಂಡ, ಚೆಂಡಿನ ಮಾಯಾದಾಟವನ್ನು ಆಡುತ್ತಾನೆ. ಊರಿನ ಜನರು ಸೋಲುತ್ತಾರೆ.

ಚೆಂಡಿನ ಆಟವನ್ನು ಚೆಟ್ಟಿ ಸಾಹುಕಾರನ ಮಗನ ಜೊತೆ ಮೊದಲು ಆಡುವನು. ಚೆಂಡಿನ ಹೊಡೆತಕ್ಕೆ ಸಾಹುಕಾರನ ಮಗ ಪ್ರಾಣಬಿಡುತ್ತಾನೆ.

"ಒಂದು ಲಗ್ಯಾನೋಡಪ್ಪ ಕರುಸಣಗಿ ಮಠಕ ಹೋಗಾವ್ಯ

ಕ್ವಾಣಗನೂರಿಗ ಬಂದೇನ ರಾಯಹುನೂರಕ ಒಂದೇನ

ಜ್ಯೋತಿ ಸಿಡಿಯಾಣಕ ಒಂದೇನ ಗೋಡಗೇರಿ ಗುಡ್ಡರ ಒಂದೇನ

ಉಂಬರಿಜು ಮಠಕ ಒಂದೇನ ಆಲಕನೂರಿಗ ಒಂದೇನ

ಬಾಣಮತಿಗೆ ಒಂದೇನ ತೇರಾಮತಿ ಒಂದೇನ"[೭೬]

ಚೆಂಡಿನ ಆಟದ ಮೂಲಕ ಎಂಟು ಸ್ಥಳದಲ್ಲಿ ತನ್ನ ಸ್ಥಾನದ ವಿಸ್ತಾರತೆಯನ್ನು ತಿಳಿಸುತ್ತಾನೆ. ಶೈವರಿಗೂ-ವೈಷ್ಣವರಿಗೂ ಹೋರಾಟವು ಕಾಲಕ್ಕೆ ತಕ್ಕಂತೆ ನಡೆಯುತ್ತಲೇ ಬರುತ್ತವೆ. ಬೀರಪ್ಪನು ರಾಮರಮಿಕವನ್ನು ಬೇಟೆಯಾಡುವಲ್ಲಿ ಇದನ್ನು ನೋಡಬಹುದು.

"ರಾಮರ ಮಿಕವ ಬಂದಾವೆ ತಾನೇ ನೋಡುತಾನೇನ
ಮಿಕವ ನೋಡುತಾನೇನ ವೈರಿ ನಾರ್‍ಯಾಣ ಭೂಮ್ಯಾಗ
ವೈರಿ ನಾರ್‍ಯಾಣ ಭೂಮ್ಯಾಗ ಹ್ಯಾಂಗ ಬಿಡಬೇಕಂದಾನ"[೭೭]

ವಿಷ್ಣುವಿನ ಅವತಾರದ ಮಿಕವು ಬೀರಣ್ಣನ ಪಾದಕ್ಕೆ ಬಿದ್ದು ಪ್ರಾಣ ಭಿಕ್ಷೆಯನ್ನು ಯಾಚಿಸುತ್ತದೆ. ಅಲ್ಲದೆ ಬಾಣದಿಂದ ನನ್ನ ಪ್ರಾಣ ತೆಗೆಯದೆ ನಿನ್ನ (ಬೀರಣ್ಣ) ಪಾದ ತಲೆಯ ಮೇಲೆ ಇಟ್ಟು ಪಾವನ ಮಾಡೆಂದು ಬೇಡಿಕೊಳ್ಳುತ್ತದೆ. ಬೀರಣ್ಣ ಮಿಕದ ತಲೆ ಮೇಲೆ ಪಾದವಿಟ್ಟಾಗ ಮಿಕ ಪುಣ್ಯ ಪಡೆದು ಪ್ರಾಣ ಬಿಡುತ್ತದೆ. ಇದರಿಂದ ವೈಷ್ಣವರು ಶೈವರಿಗೆ ಶರಣಾಗುವ ಸೂಕ್ಷ್ಮತೆಯನ್ನು ತೋರಿಸಿಕೊಡುತ್ತದೆ.

ಲಿಂಗ ಬೀರಣ್ಣನು ಕನ್ನಿಕಾದೇವಿಯನ್ನು ಮದುವೆಯಾಗಿ ಕಾಳಿನಾರಾಯಣನ ದರ್ಪಕ್ಕೆ ಅಂತ್ಯ ಆಡುತ್ತಾನೆ. ತನಗೆ ಕಾಳಿನಾರಾಯಣನೆಂಬ ಸೋದರ ಮಾವ, ಸೋದರ ಸೊಸೆ ಕನ್ನಿಕಾದೇವಿ ಇರುವುದನ್ನು ತಿಳಿದುಕೊಂಡು ಮದುವೆಯಾಗಲು ತಯಾರಿಸುವನು. ಕನ್ನಿಕಾದೇವಿಯನ್ನು ತಂದೆ ಕಾಳಿನಾರಾಯಣನ ಅರಮನೆಯಲ್ಲಿ ಯಾರಿಗೂ ಕಾಣದಂತೆ ಇರಿಸುತ್ತಾನೆ. ಇದನ್ನು ತಿಳಿದ ಬೀರಣ್ಣನು ಹೂ ಮಾರುವ ಸಂಗವ್ವನ ಮನೆಯಲ್ಲಿದ್ದುಕೊಂಡು ವಜ್ರದ ದಂಡೆ ಏಣೆದು ಕನ್ನಿಕಾದೇವಿಯ ಮನವನ್ನು ಗೆಲ್ಲುವನು. ತನಗೆ ಆಶ್ರಯ ಕೊಡುವ ಜನರಿಗೆ ಸಕಲ ಸಂಪತ್ತನ್ನು ಬೀರಪ್ಪ ಕೊಡುತ್ತಾನೆ. ಕಾಳಿನಾರಾಯಣನು ಕನ್ನಿಕಾದೇವಿಯನ್ನು ನಗರಿಪಟ್ಟಣದ ಏಳು ಅಂತಸ್ತಿನಲ್ಲಿ ಇಟ್ಟು ಕಾವಲಿಗೆ ಹನ್ನೆರಡು ನೂರು ದಂಡನ್ನು ನೇಮಿಸಿರುತ್ತಾನೆ. ತಂಗಿಯ ಮಗ ಲಿಂಗಬೀರಣ್ಣನು ಯಾವಾಗ ಬೇಕಾದರೂ, ಹೇಗಾದರೂ ಬರಬಹುದು. ಅದನ್ನು ತಡೆಯಲು ಸಕಲ ಸಿದ್ಧತೆಯನ್ನು ಮಾಡುತ್ತಾನೆ. ಅಲ್ಲದೆ ಕನ್ನಿಕಾದೇವಿಗೆ ಸಾಹುಕಾರ ರಾಜನನ್ನು ಮದುವೆಯಾಗು ಎಂದಾಗ, ಆಕೆಯು ಸಹೋದರ ಮಾವನನ್ನೇ ಮದುವೆಯಾಗುತ್ತೇನೆಂದು ತಿಳಿಸುವಳು. ಆಗ ಕಾಳಿನಾರಾಯಣ ಲಿಂಗಬೀರಣ್ಣನನ್ನು ಹುಟ್ಟಿದ ಹದಿಮೂರನೆ ದಿನದಲ್ಲಿ ಅಡವಿ ಪಾಲಾಗಿ ಮಾಡಿದ್ದನ್ನು ತಿಳಿಸುತ್ತಾನೆ. ಇದಕ್ಕೆ ಕನ್ನಿಕಾದೇವಿಯು ಈ ರೀತಿಯಾಗಿ ತಂದೆಗೆ ಹೇಳುತ್ತಾಳೆ.

"ಹುಟ್ಟಿದ ಮ್ಯಾಲ ಹಡದಪ್ಪ ಸಾವನಿಲ್ಲೇಳು ಅಂದಾಳ
ಗಾಡಿಕಾರನ ಗಂಡನೇ ಮೋಡಿಕಾರನ ಮಿಂಡನೆ"[೭೮]

ತನ್ನ ಸೋದರ ಮಾವ ಲಿಂಗ ಬೀರಣ್ಣನ ಇರುವಿಕೆಯನ್ನು ಈ ರೀತಿ ವ್ಯಕ್ತಪಡಿಸುವಳು. ಹೀಗಿರುವಾಗ ಕಾಳಿನಾರಾಯಣನ ಅರಮನೆಗೆ ಪ್ರತಿನಿತ್ಯ ಜೀರರ (ಹೂಗಾರ) ಸಂಗವ್ವ ಹೋಗುತ್ತಿರುತ್ತಾಳೆ. ಈ

ಸಂಗವ್ವನ ಮನೆಯಲ್ಲಿ ಲಿಂಗಬೀರಣ್ಣನು ಆಶ್ರಯ ಪಡೆದು ವಜ್ರದ ದಂಡಿಯನ್ನು ಹೆಣೆದು ಕನ್ನಿಕಾದೇವಿಗೆ ಕಳಿಸಿಕೊಡುತ್ತಾನೆ. ವಜ್ರದ ದಂಡಿಗೆ ಮುತ್ತುಗಳಿಂದ, ಮಾಣಿಕ್ಯಗಳಿಂದ ಭೂಮಿ ತೂಕದಷ್ಟು ದಂಡಿಯನ್ನು ಕಟ್ಟುತ್ತಾನೆ. ವಜ್ರದ ದಂಡಿಯನ್ನು ಕನ್ನಿಕಾದೇವಿಗೆ ಕೊಟ್ಟು ನನ್ನ ತಂಗಿ ಮಗಳು ಮಾಡಿದ್ದಾಗಿ ಹೇಳುತ್ತಾಳೆ. ಹೀಗೆ ಅರಮನೆ ಹೊಕ್ಕ ಲಿಂಗಬೀರಣ್ಣನು ಕನ್ನಿಕಾದೇವಿ ಮುಂದೆ ಹೆಣ್ಣು ವೇಷಧಾರಿಯಾಗಿ ಸೋದರ ಮಾವನ ಬಗ್ಗೆ ಆಕೆಗೆ ಇದ್ದ ಸಂಪ್ರೀತಿಯನ್ನು ಕಂಡುಕೊಳ್ಳುತ್ತಾನೆ. ನಂತರ ಬಳೆಗಾರನಾಗಿ ಬೆಳ್ಳಿಗಿರಿಯಿಂದ ನಗರಿ ಪಟ್ಟಣಕ್ಕೆ ಬಂದು, ಅಲ್ಲಿ ಚಕ್ಕರಗಟ್ಟೆಯ ಮೇಲೆ ಕಂಬಳಿ ಹಾಸಿ ವಿವಿಧ ಬಳೆಗಳನ್ನು ವ್ಯಾಪಾರಕ್ಕೆ ಇಟ್ಟಿರುತ್ತಾನೆ. ಬಳೆಗಾರನು ನೂರುವರ್ಷದ ಮುದುಕನಾಗಿ, ಕಣ್ಣು ಕಾಣದ, ನಿಶಕ್ತ ವೃದ್ಧನಾಗಿ ತೋರುತ್ತಾನೆ. ಆದ ಕಾರಣ ಆ ಮುದುಕ ಬಳೆಗಾರನನ್ನು ಕರೆದುಕೊಂಡು ಹೋಗಿ ಏಳುಪರದಿ ಆಚೆಯಿಂದ ಇಬ್ಬರನ್ನು ಭೇಟಿಮಾಡಿಸುತ್ತಾರೆ. ಬಳೆಗಾರನು ಮದುವೆಯಾದ ಹೆಣ್ಣಿಗೆ ಮಾತ್ರ ಬಳೆಯನ್ನು ತೋಡಿಸುತ್ತೇನೆಂದು ಹೇಳುತ್ತಾ ಗಿಡದ ಜೊತೆ ಮದುವೆ ಮಾಡಿಸಿದ ನಂತರ ಬಳೆಯನ್ನು ಹಾಕುವುದಾಗಿ ತಿಳಿಸುತ್ತಾನೆ.

"ಬೀಜ ಊರಿದರಲ್ಲಪ್ಪ ನೀರ ಹಾಕಲಿ ಬೇಕಯ್ಯ
ಈಗ ಬೀಜ ಹಾಕಿದರ ನಾಳಿಗ
ಒಂಭತ್ತ ತಾಸಿಗಲ್ಲೇಳ ಗಿಡನೆ ಬೆಳೆದು ನಿಂತಾವ"[೮]

ಆ ಗಿಡವನ್ನು ಗಂಡುಯೆಂದು ಭಾವಿಸಿ ಗಂಡಿಗೆ ಮಾಡಬೇಕಾದ ಮದುವೆ ಕಾರ್ಯಗಳನ್ನು ಮಾಡುವುದರ ಮೂಲಕ ವಿವಾಹ ಮಾಡಲು ಹೇಳುತ್ತಾನೆ. ಊರಿಗೆ ಹಂದರ ಹಾಕಿ, ರೈತರನ್ನು ಲಗ್ನಕ್ಕೆ ಕರೆಯುತ್ತಾರೆ. ಹೆಣ್ಣಿನ ಚಾಜ ಹೆಣ್ಣಿಗೆ ಗಂಡಿನ ಚಾಜ ಗಂಡಿಗೆ ಹಿಟ್ಟು, ಗಂಡಿನ ಚಾಜಕ್ಕೆ ಬಾಸಿಂಗ, ಶಾಲಿನಿಂದ ಮುಂಡಾಸು ಕಟ್ಟುತ್ತಾರೆ. ಹೆಣ್ಣಿಗೆ ಕಾಲುಂಗರ, ಕಾಲಪಿಲ್ಲೆ, ತಾಳಿ, ಮುತ್ತು, ಮೇಲ ಮುಸುಕು ಹಾಕಿ ಬ್ರಹ್ಮ ಗಂಟನ್ನು ಹಾಕುತ್ತಾರೆ. ಈ ರೀತಿಯಾಗಿ ಗಿಡದ ಜೊತೆ ಕನ್ನಿಕಾದೇವಿ ಮದುವೆ ಮಾಡಿಸುತ್ತಾರೆ. ಬಳೆಗಾರ ಬಾಬಣ್ಣನಿಗೆ ಭಾಷೆ ಕೊಡುವುದರ ನೆಪದಲ್ಲಿ ಲಿಂಗಬೀರಣ್ಣನ ಕೈ ಹಿಡಿಯುತ್ತಾಳೆ. ನಂತರ ಮಾಯವ್ವಳ ಹತ್ತಿರ ಬಂದು ಸೂತರ ತೇಜಿಯನ್ನು ಮಾಡಿಸಿಕೊಂಡು ಅದರಲ್ಲಿ ಮಡದಿಯನ್ನು ತರಲು ಹೋಗುತ್ತಾನೆ. ಇದನ್ನು ಆತನು ಆದಿತ್ಯವಾರ ಅಮವಾಸ್ಯೆಯಂದು ಪಡೆದುಕೊಂಡು ಕನ್ನಿಕಾದೇವಿಯನ್ನು ಬೆಳ್ಳಿಗಿರಿಗೆ ಕರೆತರುವನು. ಕಾಳಿನಾರಾಯಣ ಹನ್ನೆರಡನೂರ ದಂಡನ್ನು ಮೀರಿಸುವಷ್ಟು ಶಕ್ತಿ, ಯುಕ್ತಿಯಿಂದ ಲಿಂಗಬೀರಣ್ಣನ ವ್ಯಕ್ತಿತ್ವ ಚಿತ್ರಣಗೊಂಡಿದೆ. ಸೂತರ ತೇಜಿಯಲ್ಲಿ ಬಂದ ತಮ್ಮ ಮತ್ತು ಕನ್ನಿಕಾದೇವಿಗೆ ಆರತಿ ಮಾಡಿ ಮನೆ ತುಂಬಿಸಿಕೊಳ್ಳುವಳು. ಈ ಸನ್ನಿವೇಶವು ಹಾಲುಮತದವರ ಮದುವೆ ಆಚರಣೆಯಲ್ಲಿ ಕಾಲುತೊಳೆಯುವ ಶಾಸ್ತ್ರವನ್ನು ನೆನಪಿಸುತ್ತದೆ.

ಲಿಂಗಬೀರಣ್ಣನು ಮದುವೆಯ ನಂತರ ಕನ್ನಿಕಾದೇವಿಯ ಪಾತ್ರ ಗೌಣವಾಗಿ ಕಂಡುಬರುತ್ತದೆ. ಆದರೆ ಮಾಯವ್ವಳ ಪಾತ್ರ ಲಿಂಗಬೀರಣ್ಣನ ಜೊತೆ ಜೊತೆಯಲ್ಲಿಯೇ ಮಹತ್ವ ಪಡೆಯುವುದು. ಇವರಿಬ್ಬರು

ನಾಡುನೋಡಲು ಹೊರಡುತ್ತಾರೆ. ಬೀರಪ್ಪನು ಕೂಸಿನ ರೂಪದಲ್ಲಿ ಮಾಯವ್ವಳ ಜೊತೆ ಮೊದಲಿಗೆ ಮುಂಗಿ ಪಟ್ಟಣ ಎಂಬಲ್ಲಿ ಹೋಗುತ್ತಾರೆ. ಅಲ್ಲಿನ ಅರಸನ ಮಗಳು ಬೆನ್ನ ಬ್ಯಾತಳ ರೋಗದಿಂದ ನರುಳುತ್ತಿರುವುದನ್ನು ತಿಳಿದು ರೋಗವನ್ನು ವಾಸಿ ಮಾಡಲು ಬರುವರು. ಅದಕ್ಕೆ ಅರಸನು ರೋಗ ಗುಣಪಡಿಸಿದವರಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದಾಗಿ ಪ್ರಚಾರ ಮಾಡುವನು. ಅದನ್ನು ತಿಳಿದ ಮಾಯವ್ವ ತಮ್ಮನಿಗೆ ಆ ರೋಗ ಗುಣಪಡಿಸಲು ಹೇಳುತ್ತಾಳೆ. ಅಕ್ಕನ ಮಾತಿಗೆ ಬೀರಪ್ಪ ರೋಗ ಗುಣಪಡಿಸಿದ ಉಪಕಾರವಾಗಿ ವಾಯಿಗಂಗಾಳ, ರುಮ್ಮೀಚೂರಿ, ಪಂಚಡಂಕಿ, ಹೊನ್ನ ಕಠಾರಿ, ಕಲಿಕೆ ಸಿರಪೇಚಯನ್ನು ತೆಗೆದುಕೊಂಡು ಹೋಗುತ್ತಾರೆ.

ಮತ್ತೆ ಇಬ್ಬರು ಸೇರಿ ಭೀಮನದಿ ದಂಡಿಯ ಕಲುಬುರ್ಗಿಯ ಕೆಳಗಿನ ಕಲ್ಲತ್ತಿ ಎಂಬ ಊರಿಗೆ ಬರುತ್ತಾರೆ. ಅಲ್ಲಿ ಬೃಹತ್ ಹುತ್ತದಡಿ ಲಿಂಗಬೀರಣ್ಣ ನಾಗರಹಾವನ್ನು ನೋಡಲು ಮನದಲ್ಲಿಯೇ ಬಯಸುವನು. ಆಗ ನಾಗರ ಹಾವು ಹೆಡಿ ಎತ್ತಿ ನಿಲ್ಲುತ್ತದೆ. ಆ ಹೆಡೆಯ ಮೇಲೆ ಬೀರಣ್ಣ ನಿಂತುಕೊಳ್ಳುವನು. ನಂತರ ಹೇಡಿಂಬಲ್ಲಿಗೆ ಬಂದು ರಾಕ್ಷಸನನ್ನು ಸಂಹಾರ ಮಾಡುತ್ತಾನೆ. ಆದ್ದರಿಂದ ಹೇಡಿಂಬ ಎಂಬ ಊರು 'ಸೇಡಂ' ಎಂದು ಹೆಸರು ಪಡೆಯುತ್ತದೆ. ನಂತರ ಕಾಯಿ ಕೊಂಕಣ ನಾಡಿನ ಸಿರಿವಾಳ ಗ್ರಾಮಕ್ಕೆ ಹೋಗುತ್ತಾರೆ. ಅಲ್ಲಿ ಬಾಗಿಯ ಬಗನಾಥನ ರಾಜಕೀಯ ಇರುತ್ತದೆ. ಮಾಯವ್ವಳ ಪಕ್ಕದಲ್ಲಿ ಕೂಸಾಗಿ ಮಲಗಿದ್ದ ಬೀರಪ್ಪನು ಬಾವಿಯಲ್ಲಿ ಈಜಾಡಲು ಹೋಗುವನು. ಆದ್ದರಿಂದ ಬಾವಿಯ ನೀರು ರಾಡಿಯಾಗುತ್ತವೆ. ಗಿಡದ ಹೂಗಳನ್ನು ಕಡಿದು ಎಸೆಯುವನು. ಅಲ್ಲಿಗೆ ಬಂದ ಬಗನಾಥನೆಂಬ ಹಾರುವನು. ಮಾಯವ್ವಳ ಸೌಂದರ್ಯಕ್ಕೆ ಸೋತು ಪೈಲವಾನರಿಗೆ ಆಕೆಯನ್ನು ಕಟ್ಟಿ ಹಾಕಲು ಹೇಳುತ್ತಾನೆ. ಬಗನಾಥನು ಗದ್ದುಗೆ ಇಳಿದು ಬಂದು ಮಾಯವ್ವಳ ಸೆರಗು ಹಿಡಿದು ಎಳೆದಾಗ ಕೂಸಿನ ರೂಪದಲ್ಲಿದ್ದ ಬೀರಪ್ಪನು ಅವತಾರಪುರುಷನಾಗಿ "ಪಾತಾಳದೊಳಗೆ ಇವನ ಪಾದೇನೆ ಕೈಲಾಸದೊಳಗ ಇವರ ಕಳಸೇನ"[೮೦] ಹೀಗೆ ಹಿಂದೆ ಸಾಹಸದ ಸಂಕೇತವಾಗಿ ಪಡೆದ ಆಯುಧಗಳಿಂದ ದುಷ್ಟರನ್ನು ಸಂಹಾರ ಮಾಡುವನು. ಶಿರಗಳು ಹಾರಿ ಬಿದ್ದಂತಹ ಪ್ರದೇಶವೇ ಸಿರಿವಾಳವೆಂದು ಹೆಸರು ಪಡೆಯುತ್ತದೆ. ಇಲ್ಲಿ ಬೀರಪ್ಪನು ಶಿವಲಿಂಗಪ್ಪನ ಅವತಾರವಾಗಿ ಸಿರಿವಾಳದಲ್ಲಿ ನೆಲೆಸುವನು.

ನಂತರ ಮಂಟೂರು ಕಣಿಯ ಮೇಲೆ ದೈತ್ಯಾನದ ಕ್ವಾಣೆಸೂರನು ಮಲಗಿರುತ್ತಾನೆ. ಆಶ್ಚರ್ಯವೆಂಬಂತೆ ರಾಕ್ಷಸನಿಗೆ ಕನಸಿನಲ್ಲಿ ಮದುವೆಯಾಗುತ್ತದೆ. ತಕ್ಷಣ ಎದ್ದು ನೋಡಿದಾಗ ಬೀರಪ್ಪನು ನಿಂತಿರುತ್ತಾನೆ. ಆಗ ಇವರಿಬ್ಬರ ನಡುವೆ ಯುದ್ಧ ನಡೆಯುತ್ತದೆ. ಬೀರಪ್ಪನು ವಾಯಿಗಂಗಾಳ್ಯ, ಪಂಚಡಂಕಿಯಿಂದ ಕೊಲ್ಲಲು ಮುಂದೆ ಬರುವನು. ದೈತ್ಯನು ಬೀರಪ್ಪನ ಪಾದ ಹಿಡಿದು ಭೂಮಿ ಮೇಲೆ ಕೀರ್ತಿ ಪಡೆಯುವಂತೆ ಮಾಡೆಂದು ಯಾಚಿಸುವನು. ಆದ್ದರಿಂದ ಬೀರಪ್ಪನು ದೈತ್ಯನ ಹೊಡೆದು ಕರಿಯದೇವರು ಎಂದು ಹೆಸರು ಪಡೆಯುತ್ತಾನೆ. ಅಲ್ಲದೇ,

"ಮುಂಡಿಯ ಬಿದ್ದಲ್ಲಲ್ಲೇಳ ಮುಂಡಗನೂರು ಅನಸೇನ
ಕ್ವಾಣೆಸೂರ ದೈತ್ಯನ ತಲಿಯಾ ಗುದ್ದುಗಿ ಆಗುತಾನೇನ"[೮೧]

ಈಗಲೂ ಕನಸಿನಲ್ಲಿ ಶುಭವಸ್ತುಗಳು ಬಂದರೆ, ಊಟಮಾಡಿದರೆ, ಸಾವು ಖಚಿತ ಎಂಬ ಹಾಲುಮತದವರ ನಂಬಿಕೆಗೆ ದೈತ್ಯಾಸೂರನ ಕನಸು ನಿದರ್ಶನವಾಗಿ ಕಂಡುಬರುತ್ತದೆ. ದೈತ್ಯನು ಕರಿಯದೇವರಿಗೆ ಗದ್ದುಗೆಯಾಗುತ್ತದೆ. ಬೀರಪ್ಪನು ಮಾಯವ್ವಳಿಂದ ಪಡೆದ ಕುರಿಗಳನ್ನು ಕಾಯುವುದಕ್ಕೆ ಬೋಪಣ್ಣನನ್ನು ನೇಮಿಸುವನು. ಆದರೆ ಯಾವ ಕುರಿಗಳು ಹನ್ನೆರಡು ವರ್ಷವಾದರೂ ಮರಿ ಹಾಕುವುದಿಲ್ಲ. ಅದಕ್ಕೆ ಹಿರಿಯರು ಅಕ್ಕನನ್ನು ಕರೆದುಕೊಂಡು ಬಂದು ಹಬ್ಬ ಮಾಡಿದರೆ; ಅಕ್ಕನ ಆಶೀರ್ವಾದದಿಂದ ಒಳಿತಾಗುವುದು ಎಂದು ಹೇಳುವರು. ಕಾಡಿಗೆ ರೊಟ್ಟಿಬುತ್ತಿ ಜೊತೆಯಲ್ಲಿ ಬೊಪಣ್ಣನಿಗೆ ಅಕ್ಕನನ್ನು ಕರೆತರಲು ಕಳಿಸುತ್ತಾನೆ. ಮಾಯವ್ವ ರೊಟ್ಟಬುತ್ತಿಯನ್ನು ನೋಡಿ ಕನ್ನಿಕಾಮವ್ವಳ ಮೇಲೆ ಸಂದೇಹ ಪಡುತ್ತಾಳೆ. ಅಲ್ಲದೇ ತಮ್ಮ ಕರಿಯಲು ಬರದೆ, ಪರರನ್ನು ಕಳಿಸಿದ್ದಕ್ಕೆ ಮಾಯವ್ವ ತವರಿಗೆ ಹೋಗಲು ನಿರಾಕರಿಸಿ ಮನೆಯಲ್ಲಿಯೇ ಹಬ್ಬವನ್ನು ಮಾಡುತ್ತಾಳೆ. ಅಕ್ಕ ಬರದೆ ಹೋಗಿದ್ದರಿಂದ ಬೀರಪ್ಪನೆ ನೇರವಾಗಿ ಮಾಯವ್ವಳ ಮನೆಗೆ ಬರುತ್ತಾನೆ. ಕರೆಯುವುದಕ್ಕೆ ಬಂದಿಲ್ಲ ಕಾಡುವುದಕ್ಕೆ ಬಂದಿದ್ದೇನೆಂದು ಕೋಪಗೊಂಡು ಹಾವಿನ ಗದ್ದುಗೆ, ಎಂಜಲ ಆಗದ ನೀರನ್ನು, ಮೀಸಲು ಹಾಲನ್ನು ಬೇಡುತ್ತಾನೆ. ಮಾಯವ್ವಳು ಮೂರು ಕಣ್ಣಿನ ಹುತ್ತಕ್ಕೆ ಹೋಗಿ ಸರ್ಪಕ್ಕೆ ಗದ್ದುಗೆಯಾಗಲು, ಗಂಗೆಯನ್ನು ಪ್ರಾರ್ಥಿಸಿ ಶುದ್ಧ ನೀರನ್ನು, ಕಾಮಧೇನುವನ್ನು ಪೂಜಿಸಿ ಮೀಸಲು ಹಾಲನ್ನು ಪಡೆಯುತ್ತಾಳೆ. ಹೀಗೆ ತಮ್ಮ ಬೀರಪ್ಪನನ್ನು ಸಮಾಧಾನಪಡಿಸಿ ಹಬ್ಬಕ್ಕೆ ಬೆಳ್ಳಗಿತ್ತಿಗೆ ಹೋಗುವಳು. ಅಕ್ಕನನ್ನು ಕರೆದುಕೊಂಡು ಬಂದು ಸೀರೆಯಲ್ಲಿ ಉಡಿಯಕ್ಕಿ ಹಾಕಿ ಕಳಿಸಿಕೊಡುವನು. ಇದು ಬೀರಪ್ಪ ಮತ್ತು ಮಾಯವ್ವರ ಕಥೆಯ ವೃತ್ತಾಂತ.

ನಂತರ ಲಿಂಗಬೀರಣ್ಣ ಮತ್ತು ಮಾಳಿಂಗರಾಯನ ಕುರಿತು ಕಥೆಯು ಹೀಗೆ ಅಭಿವ್ಯಕ್ತಗೊಂಡಿದೆ. ಮಾಳಿಂಗರಾಯನ ಪೂರ್ಜರ ಮಾಹಿತಿಯನ್ನು ತಿಳಿಸುವಲ್ಲಿ ಸೋಮರಾಯ, ತುಕ್ಕಪ್ಪರಾಯರ ವಿಷಯ ಪ್ರಮುಖವಾಗಿದೆ. ಸೋಮರಾಯ, ತುಕ್ಕಪ್ಪರಾಯರು ಶಾಡಬಾಬನ ಗುಡ್ಡದ ಗುರು ಗೋರಖನಾಥರ ಆಜ್ಞೆಯ ಮೇರೆಗೆ ಏಳನೂರ ಬಾಲಜನ್ನಿಗಿಗಳನ್ನು ಕಾಯುವುದಕ್ಕೆ ಹೋಗುವರು.

"ಗುರುವ ಗೋರಖನಾಥನೆ ಮಂಡಿಲಿ ಹಸ್ತ ಇಟ್ಟಾನೋ
ಏಳನೂರ ಕಿಲ್ಲರಿ ಜೋಪಾನ ಮಾಡಬೇಕಾಂದನೆ
ಮೇವಿದ್ದ ನಾಡಿಗೆ ಹೋಗದೆ ನೀರಿದ್ದ ನಾಡಿನ ಹೋಗರೆ"[೮೨]

ಶಾಡಾಬಾಬನ ಗುಡ್ಡದಲ್ಲಿ ಬರಗಾಲದಿಂದ ಮೇವಿನ ಕೊರತೆ ಆಗುತ್ತದೆ. ಆದಕಾರಣ ಗೋರಖನಾಥರು ಇವರಿಗೆ ಕಿಲ್ಲಾರಗಳನ್ನು ಕೊಟ್ಟು ಸುವ್ಯವಸ್ಥಿತ ಪ್ರದೇಶಕ್ಕೆ ಹೋಗಲು ಹೇಳುತ್ತಾರೆ.

ಇವುಗಳ ರಕ್ಷಣೆಗೆ ಗುರುಗಳು ಹೊನ್ನ ಕಠಾರಿ, ರನ್ನದ ಚೂರಿಯನ್ನು ಕೊಡುವರು. ಕಾನಾಬಾಯಿ, ಅಮೃತಬಾಯಿ ಮನೆಯಲ್ಲಿ ಇರುವಾಗ ಶಿವನೇ ಬಂದು ಮಕ್ಕಳ ಫಲವನ್ನು ಕೊಟ್ಟು ಹೋಗುತ್ತಾನೆ.

"ಜಂಬುನೀಲ ಜಕರಾಯ ಮಾಣಿಕದಹರಳ ಮಾಳಣ್ಣ

ಮಾಂಸ ಪಿಂಡನಲ್ಲೆನ ಮಾನವ ಪಿಂಡನಾದಾವೆ

ಜಾತ ಜ್ಯೋತಿ ಮಕ್ಕಳೆ ಜಕ್ಕಪ್ಪ ಮಾಳಪ್ಪನೇ"[೮೩]

ಹೀಗೆ ಕಾನಾಬಾಯಿ, ಅಮೃತ ಬಾಯಿ ಅವರು ಮಣಿಗಳಿಂದ ಮಕ್ಕಳನ್ನು ಪಡೆಯುತ್ತಾರೆ. ನಂತರ ಬಾರಾಮತಿಯ ಗೌಡಕೆಯನ್ನು ಬಿಲ್ಲಾಳ ಸೋಮರಾಯ ಆಳಿದ ನಂತರ ತೇರಮತಿಯ ಅರಸುತನವನ್ನು ತುಕ್ಕಪ್ಪರಾಯ ಮಾಡುತ್ತಿರುತ್ತಾನೆ. ಭವೂಳಿ ನಾಡಿನ ಗೌಳೇರು ಏಳನೂರು ಎಮ್ಮೆಗಳನ್ನು ಸಾಕಿದ್ದರು. ಭವೂಳಿ ನಾಡಿಗೆ ಬರಗಾಲ ಬಂದಿದ್ದಕ್ಕೆ ಬಾರಾಮತಿಯ ಅಡವಿಯಲ್ಲಿ ನೆಲೆಸಲು ಬರುವರು. ಗೌಳಿಗರು ಕುಲದೇವತೆ ಇಜೇರಿ ಮಲಕವ್ವ ಬರಗಾಲ ಬಂದಿದ್ದಕ್ಕೆ ಇಜೇರಿ ಮಲಕವ್ವನನ್ನು ಗೋಪಾಳ ಪುಟ್ಟಿಯಲ್ಲಿಟ್ಟುಕೊಂಡು ಒಯ್ಯುತ್ತಾರೆ. ಹೀಗೆ ಬಾರಾಮತಿಗೆ ಬಂದ ಗೌಳಿಗರು ಮನೆದೇವತೆಯನ್ನು ನಿರ್ಲಕ್ಷೆ ಮಾಡುತ್ತಾರೆ. ಇದರಿಂದ ಕ್ರೋಧಗೊಂಡ ಮಲಕವ್ವ ಎಮ್ಮೆಯ ಮೇಲೆ ಸೆರಗು ಹಾಕಿ ಹಾಲು ಕೊಡುವ ಎಮ್ಮೆಗಳು ರಕ್ತ ಹಿಂಡುವಂತೆ ಮಾಡುವಳು. ಎಮ್ಮೆಗಳಿಗೆ ಉಟಗಿಬ್ಯಾನಿ, ಎಳಗರಿಗಿ ರೋಗಗಳು ಬಂದು ಸಾಯುತ್ತವೆ. ಈ ರೀತಿಯಾಗಿ ಇಜೇರಿ ಮಲಕವ್ವ ಬಯಲಿನಲ್ಲಿ ಕ್ಷುದ್ರ ದೇವತೆಯ ರೀತಿಯಲ್ಲಿ ನೆಲೆಸುವಳು. ನಂತರ ಅರಿತುಕೊಂಡ ಗೌಳಿಗರು

"ಕೂಗ್ಯಾಡಿ ಸಕಣ ಹೇಳವ್ವ ಮಳಿಯ ಕೀಲ ಹೇಳವ್ವ

ಮಳಿಯ ಕೀಲ ಹೇಳವ್ವ ಬೆಳಿಯಾಕೀಲ ಹೇಳವ್ವ

ಬಡುವಾಗ ಭ್ಯಾಗ ಹೇಳವ್ವ"[೮೪]

ಎಂದು ಬೇಡಿಕೊಳ್ಳುತ್ತಾರೆ. ಪಾರ್ವತಿಯು ಕೊರವಂಜಿ ವೇಷದಲ್ಲಿ ಬಂದು ಇಜೇರಿ ಮಲಕವ್ವಗೆ ಬಲಿಕೊಡಲು ಹೇಳುತ್ತಾಳೆ. ಕಾರಣವೆಂದರೆ ಊರು ಬಿಟ್ಟು ಬರುವಾಗ ಮಲಕವ್ವನನ್ನು ತಲೆಮೇಲೆ ಹೊತ್ತುಕೊಂಡು ಮೈಲಿಗೆ ಮಾಡಿದ್ದೀರಿ ಎಂದು ತಿಳಿಸುತ್ತಾಳೆ. ಜೊತೆಗೆ ಬಾರಾಮತಿಗೆ ಬಂದು ಶ್ರೀಮಂತರಾಗಿ ದೇವಿಯನ್ನು ಮರೆತಿದ್ದನ್ನು, ಮಂಗಳವಾರ, ಶುಕ್ರವಾರ ಪೂಜಿಸದೆ ಹೋಗಿದ್ದನ್ನು ನೆನಪಿಸುವಳು. ತಪ್ಪಿನ ಪರಿಹಾರಕ್ಕೆ ಗೌಳಿಗರು ಕುಲದೇವತೆಯನ್ನು ಪೂಜಿಸಿ ಭಂಡಾರವನ್ನು ಎಮ್ಮೆಗಳ ಮೇಲೆ ಹಾಕಿದಾಗ ರಕ್ತ ಹಿಂಡುವ ಬದಲು ಹಾಲು ಹಿಂಡತೊಡಗಿದವು. ಎಲ್ಲಾ ರೋಗಗಳು ದೂರವಾದವು. ನಂತರ ಗಾಣಿಗೇರ ಮಲ್ಲಣ್ಣನಿಗೆ ಬಲಿಕೊಡುವ ಜವಬ್ದಾರಿಯನ್ನು ವಹಿಸುವರು. ಆಗ ಗಾಣಿಗೇರ ಮಲ್ಲಣ್ಣನು ಅಡಗಿ ಮಾಡಿ ಮೀಸಲಿಟ್ಟು, ನಮಸ್ಕಾರ ಮಾಡುವುದಕ್ಕೆ ಬಾಗಿದಾಗ ಗೌಳಿಗೇರು ಶಿರವನ್ನು ಬಲಿ

ಕೊಡುತ್ತಾರೆ. ಹೀಗೆ ಮನುಷ್ಯ ಬಲಿಯನ್ನು ಗೌಳಿಗರು ಕೊಡುತ್ತಾರೆ. ಗೌಳಿಗರು ಬಲಿಕೊಟ್ಟು ಮಲಗಿರುವಾಗ ಎಮ್ಮೆಗಳು ಬಿಲ್ಲಾಳ ಸೋಮರಾಯನ ಹನ್ನೆರಡು ಕೂರಗಿ ಭೂಮಿಗೆ ನುಗ್ಗಿ ಹಾಳುಮಾಡುತ್ತವೆ. ಅವುಗಳನ್ನು ಹಿಂಬಾಲಿಸಿ ಸೋಮರಾಯ ಗೌಳಿಗರ ಪ್ರದೇಶಕ್ಕೆ ಬಂದಾಗ ಪೂಜಿಸಿದ ಗಂಧದಿಂದ ಹಬ್ಬ ಮಾಡಿದ್ದಾಳೆಂದು ತಿಳಿಯುತ್ತಾನೆ.

"ಬಾರಾಮತಿಯ ಗೌಡರು ತೇರಮತಿಯ ಅರಸರು
ಹುಕುಮ ಇಲ್ಲದೆ ನೀವು ದೇವರ ಮಾಡಿರಿ ಅಂದಾರೆ
ಏಳನೂರ ಗೌಳೇರು ಪಾದದ ಮ್ಯಾಲ ಬಿದ್ದಾರೆ"[೦೫]

ತಮ್ಮ ಅಪ್ಪಣೆಯಿಲ್ಲದೆ ಬಾರಾಮತಿ, ತೇರಮತಿಯಲ್ಲಿ ಕುಲದೇವತೆಯನ್ನು ಮಾಡಿದ್ದಕ್ಕೆ ವಿರೋಧಿಸುವನು. ಗೌಳಿಗರು ಹಬ್ಬ ಮಾಡಿಲ್ಲವೆಂದು ಸುಳ್ಳು ಹೇಳುತ್ತಾರೆ. ಆದರೆ ಭಂಡಾರ ಚೆಲ್ಲಿರುವ, ಕರ್ಪೂರದ ವಾಸನೆ, ತುಪ್ಪದ ವಾಸನೆ ಬರುವುದನ್ನು ಕಂಡು ಸೋಮರಾಯ ಕೋಪಗೊಳ್ಳುವನು. ಅಲ್ಲದೇ ದೇವತೆಗೆ ಹಾಕಿದ ಚಪ್ಪರ ಬಣ್ಣದ ಜೋರು, ಸುಣ್ಣದ ಜೋರು, ಕಬ್ಬಿಣದ ಹಂದರ, ಚಳಿಯ ಗಿಡಗಳಿಂದ ಅಲಂಕಾರ ಮಾಡಿರುವುದನ್ನು ಕಂಡು ತಪ್ಪಿಗೆ ತೆರವನ್ನು ಕೊಡಲು ಕೇಳುತ್ತಾನೆ. ಮಲಕವ್ವನ ಮುಂದೆ ಹಾಕಿದ ರಂಗದಲ್ಲಿ ಒಂದು ಮೂಲಿಯನ್ನು ಬೇಡುತ್ತಾನೆ. ಬಾಳಿಕಾಯಿ, ಭಂಡಾರ, ಲಿಂಬಿ ಕಾಯಿಯನ್ನು ಕಟ್ಟಿಕೊಂಡು ಬರುತ್ತಾನೆ. ಮತ್ತೆ ಇಜೇರಿ ಮಲಕವ್ವನ ಪೂಜೆಗೆ ಮೈಲಿಗೆಯು ಸೋಮರಾಯನಿಂದಾಗುತ್ತದೆ. ಅದಕ್ಕೆ ಗೌಳಿಗರ ದೇವತೆಯು ಸೋಮರಾಯನ ಏಳನೂರು ಕಿಲಾರಿಗಳು ರಕ್ತಹಿಂಡುವಂತೆ ಮಾಡುತ್ತಾಳೆ. ಅಲ್ಲದೆ ರೋಗ-ರುಜಿನಗಳಿಂದ ಆಕಳುಗಳನ್ನು ನಾಶಮಾಡುತ್ತಿರುತ್ತಾಳೆ. ನಂತರ ಗೌಳಿಗರಿಗೆ ಪಾರ್ವತಿಯು ಕೊರವಂಜಿ ವೇಷದಲ್ಲಿ ಬಂದು ಬಲಿಕೊಡುವಂತೆ ಹೇಳಿದರೆ, ಸೋಮರಾಯನಿಗೆ ಎಳೆಯ ಮಗುವನ್ನು ಇಜೇರಿ ಮಲಕವ್ವಗೆ ಬಲಿಕೊಡಲು ಹೇಳಿ ಹೋಗುವಳು. ಅದಕ್ಕಾಗಿ ಸೋಮರಾಯನು ಸಂಜೆ ಹೊತ್ತು ಊರಿನಲ್ಲಿ ಬರುವಾಗ ತಾಮಟಗೇರ ಹೆಣ್ಣುಮಗಳ ಮಗನನ್ನು ಹಿಡಿದು ಬಲಿಗಾಗಿ ತರುತ್ತಾನೆ.

"ರಂಗದ ಮುಂದ ಇಳಸಿದ್ದ ಶಿರವ ಬಿಡಸುತಾನೇನ
ಕಾಲ ಕಡಿಯುತಾನೇನ ಕೈಯ ಕಡಿಯುತಾನೇನ"[೦೬]

ಹೀಗೆ ಸೋಮರಾಯನು ತಾಮಟಗೇರ ಹೆಣ್ಣುಮಗಳ ಮಗನನ್ನು ಕದ್ದುಕೊಂಡು ಹೋದದ್ದನ್ನು ಊರ ಮಂದಿ ನೋಡುವರು. ಆದರೆ ಬಲಿಯ ಸ್ಥಳಕ್ಕೆ ಊರ ಮಂದಿ ಎಲ್ಲರೂ ಒಂದಾಗಿ ಹತ್ತಿರ ಬಂದಾಗ ಕಂದನ ತಲೆಯ ಬದಲಾಗಿ ಟಗರಿನ ತಲೆಯು ಗೋಚರಿಸುತ್ತದೆ. ಸೋಮರಾಯ ಶಿಶುವನ್ನು ಬಲಿಕೊಟ್ಟರು ದೇವಿಯು ಆತನನ್ನು ಕಾಪಾಡುವ ದೃಶ್ಯವು ನರಬಲಿಯನ್ನು ಸಮ್ಮತಿಸದಿರುವುದು

ಗೋಚರಿಸುತ್ತದೆ. ನಂತರ ಸೋಮರಾಯ, ತುಕ್ಕಪ್ಪರಾಯರು ಬಾರಾಮತಿ ಬಿಟ್ಟು ಉಂಬಳಿಠಾಣೆಗೆ ಬರುತ್ತಾರೆ. ಅಲ್ಲಿ ಕೋರಿಶೆಟ್ಟಿಯ ಹತ್ತಿರ ೩೦೦ ಕೂರಿಗೆ ಭೂಮಿಯನ್ನು ಪಡೆಯುತ್ತಾರೆ.

ಕಂದನ ಶಿರವು ಟಗರಿನ ಶಿರವಾಗುವುದು ಗೌಳಿಗರ ದೇವತೆಯು ಸೋಮರಾಯನನ್ನು ಸಂಕಟದಿಂದ ದೂರಮಾಡುವುದು ನಂತರ ಉಂಬಳಿಠಾಣೆಯ ಅಡವಿಯಲ್ಲಿ ದನಗಳ ದೊಡ್ಡಿಯನ್ನು ನಿರ್ಮಿಸಿ ಎಳೆಗರುಗಳನ್ನು ಅಲ್ಲಿಟ್ಟು, ದನಗಳನ್ನು ಮೇಯಿಸುತ್ತಾ ಜೀವನ ನಡೆಸುವರು. ಹೀಗಿರುವಾಗ ಏಳನೂರ ಬ್ಯಾಡರು ಆಕಳ ಸಂಪತ್ತನ್ನು ಕದಿಯಲು ಹೊಂಚು ಹಾಕುವರು. ಆದರೆ ಶಾಮರಾಯ ತುಕ್ಕಪ್ಪರಾಯನಲ್ಲಿ ಬಳಿಯಿದ್ದ ಬಿಲ್ಲು ಬಾಣಕ್ಕೆ ಹೆದರಿಕೊಂಡರು. ನಂತರ ಇಬ್ಬರು ಯಾವಾಗ ಬೇರೆಯಾಗುತ್ತಾರೋ ಆವಾಗ ಆಕಳ ಸಂಪತ್ತನ್ನು ಲೂಟಿ ಮಾಡಲು ನಿರ್ಧರಿಸುವರು. ಒಂದು ದಿನ ತುಕ್ಕಪ್ಪರಾಯನು ಒಬ್ಬನಿದ್ದಾಗ ಏಳುನೂರು ಬೇಡರು ಯುದ್ಧ ಮಾಡುತ್ತಾರೆ. ಆಗ ತುಕ್ಕಪ್ಪರಾಯ ವೀರವೇಷದಿಂದ ಬಾಣಬಿಟ್ಟರೂ ಉಪಯೋಗವಾಗಲ್ಲ, ಬೇಡರ ಕೈಯಿಂದ ಸಾಯುವುದಕ್ಕಿಂತ ಆತ್ಮಹತ್ಯೆ ಲೇಸೆಂದು ತುಕ್ಕಪ್ಪರಾಯನು

"ಕೆಟ್ಟ ಬ್ಯಾಡರ ಕೈಯ್ಯಾಗೆ ಪ್ರಾಣ ಕುಡುಬಾರದಂದಾನ
ಬಾಣ ಮೆಟ್ಟುತಾನೇನ ಎದಿಯಾಗ ಹೊಡಿಯುತಾನೇನ"[೧೭]

ಬಾಣಬಿಟ್ಟುಕೊಂಡು ಸಾಯುತ್ತಾನೆ. ಇದನ್ನು ಕಂಡ ಆಕಳು ದುಃಖದ ಕೊಳಲನ್ನು ಊದುತ್ತದೆ. ಕೊಳಲಿನ ಧ್ವನಿ ಕೇಳಿದ ತಕ್ಷಣ ಸೋಮರಾಯ, ಮಾಳಿಂಗರಾಯ, ಜಕ್ಕಪ್ಪರು ಬರುತ್ತಾರೆ. ಅವರಿಗೆ ಬೇಡರನ್ನು ಕೊಲ್ಲಲು ಹೇಳಿ ತುಕ್ಕಪ್ಪರಾಯನು ಉಂಬಳಿ ಠಾಣದ ಹೆಂಡಿಕಿಟ್ಟದ ಮೇಲೆ ಸಮಾಧಿಯಾಗುತ್ತಾನೆ. ನಂತರ ಸೋಮರಾಯನು ಗೋರಖನಾಥರಿಂದ ವಿದ್ಯೆಯನ್ನು ಕಲಿಯುತ್ತಾನೆ. ಬಿಲ್ಲು, ಬಾಣ, ಚಾಡಿ-ಮೋಡಿ ಎಲ್ಲ ವಿದ್ಯೆಗಳನ್ನು ಕಲಿಯುತ್ತಾನೆ. ಇಲ್ಲಿ ಗೋರಖನಾಥರಿಂದ ಸಿದ್ಧ ಪರಂಪರೆಯನ್ನು ಸೋಮರಾಯನು ಪಡೆಯುವುದು ಕಂಡುಬರುತ್ತದೆ.

ಮಾಳಿಂಗರಾಯ, ಜಕ್ಕಪ್ಪರಾಯರ ಮದುವೆಯು ಕ್ರಮವಾಗಿ ಕೆಂಪನೂರಿನ ಶರಣಮ್ಮನನ್ನು, ಏಣಿಕಿ ಊರಿನ ಬಾಕೂಬಾಯಿಯನ್ನು ಮಾಡಿಕೊಳ್ಳುತ್ತಾರೆ. ಮಾಳಿಂಗರಾಯನಿಗೆ ಗಂಗಿನಾಡ ಗೌಡನ ಮಗಳು ಈರಮ್ಮ ಎಂಬುವಳೂ ಎರಡನೇ ಹೆಂಡತಿಯಾಗಿ ಕಂಡುಬರುವಳು. ಇಲ್ಲಿ ಪದ್ಮಗೊಂಡನಂತೆ ಮಾಳಿಂಗರಾಯನು ಎರಡು ಮದುವೆಯಾಗುವುದನ್ನು ತಿಳಿಸುತ್ತದೆ. ಆದರೆ ಇವರಿಂದ ಯಾವುದೇ ಪಂಗಡಗಳು ರಚನೆಯಾದಂತೆ ತೋರುವುದಿಲ್ಲ. ನಂತರ ಮಾಳಿಂಗರಾಯನು ಮತ್ತು ಲಿಂಗಬೀರಣ್ಣರು ಡೆಂಕನಾಡಿನ ದೈಗೊಂಡನಿಗೆ ಸಂಪತ್ತು ಕೊಟ್ಟು-ಕಸಿದುಕೊಂಡು ಸಿರಿಗರ್ವವನ್ನು ಮುರಿಯುತ್ತಾರೆ. ಗರ್ವಮುರಿಯುವುದರ ಜೊತೆಗೆ ಇವರಿಬ್ಬರು ದೇವರಾಗಿ ಅನೇಕ ಪ್ರದೇಶದಲ್ಲಿ ನೆಲೆಯೂರುವರು. ಮೊದಲು ಬಡವನಾಗಿದ್ದ ದೈಗೊಂಡನಿಗೆ ಬೀರಪ್ಪ ಶ್ರೀಮಂತಿಕೆಯನ್ನು ಕೊಟ್ಟು ಪರೀಕ್ಷೆ ಮಾಡುತ್ತಾನೆ.

ಅಲ್ಪ ಸಿರಿಗೆ ದೈಗೊಂಡನು ದೇವರನ್ನು ತುಂಬಾ ಭಯ ಭಕ್ತಿಯಿಂದ ಕಾಣುತ್ತಾನೆ. ಮಾಳಿಂಗರಾಯನು ಮತ್ತೆ ಅವನಿಗೆ ಶ್ರೀಮಂತಿಕೆಯನ್ನು ಕೊಡುತ್ತಾನೆ. ಆಗ ದೈಗೊಂಡನು ತನ್ನ ಪ್ರದೇಶದಲ್ಲಿ ಬರುವವರು ಲಿಂಗ ಕಟ್ಟಿರಬೇಕೆಂದು ಗರ್ವವನ್ನು ಬೆಳೆಸಿಕೊಳ್ಳುವನು.

"ಮೂನ್ನೂರದರವತ್ತ ಬಾಯಿಗೆ ಬಾಯಿ ಲಿಂಗಕಟ್ಟಿದ್ದ
ಹನ್ನೆರಡನೂರ ದಂಡಿಗೆ ಲಿಂಗ ಕಟ್ಟುತಾನೇನ
ಸೀಮೆಯ ಲಿಂಗ ಕಟ್ಟಿದ್ದ ಭೂಮಿಯ ಲಿಂಗಕಟ್ಟಿದ್ದ"[೮೮]

ಹೀಗೆ ಲಿಂಗ ಇಲ್ಲದವರಿಗೆ ಪ್ರವೇಶವಿಲ್ಲದೆಂದು ಸಾರುತ್ತಾನೆ. ಮಾಳಿಂಗರಾಯನಿಗೆ ಲಿಂಗವಿಲ್ಲದೆ ಇರುವುದನ್ನು ಕಂಡು ಊರೊಳಕ್ಕೆ ಬಿಡುವುದಿಲ್ಲ. ಆಗ ಮಾಳಿಂಗರಾಯನನ್ನು ಮಾಯದಿಂದ ಒಳಹೊಕ್ಕುದನ್ನು ಕಂಡು ದೈಗೊಂಡನು ಬೆನ್ನುಹತ್ತಿ ಹೋಗುತ್ತಾನೆ. ಮಾಳಪ್ಪ ಅವರ ಕೈಯಲ್ಲಿ ಸಿಗದೇ ಪಾರಾಗುತ್ತಾನೆ. ಇತ್ತ ಬೀರಪ್ಪನು ದೈಗೊಂಡನ ಎದೆಯ ಮೇಲೆ ನಿಲ್ಲುತ್ತಾನೆ. 'ಭಂಡಾರದೊಳಗಿನ ಬಣ್ಣದ ಜೋಗಿ ಎದೆಯಾ ಮ್ಯಾಲೆ ನಿಂತಾನ' ಹೀಗೆ ಇಲ್ಲಿ ಬೇರೆ ದೇವರನ್ನು ಪೂಜಿಸುವವರನ್ನು ಬೀರಪ್ಪನು ಈ ರೀತಿ ಭಂಡಾರದವರನಾಗಿಸುವುದು ಕಂಡುಬರುತ್ತದೆ. ಮಾಳಿಂಗರಾಯನು ಕ್ಯಾಗನೂರು ಮಠಕ್ಕೆ ಬಂದು ಡಂಕನಾಡ ದೈಗೊಂಡನಿಂದ ಹಬ್ಬವನ್ನು ಮಾಡಿಸುತ್ತಾನೆ. ಈ ರೀತಿಯಾಗಿ ದೈಗೊಂಡನನ್ನು ಮಾಳಪ್ಪ ಸೋಲಿಸುತ್ತಾನೆ.

ಅಮೋಘಸಿದ್ಧ ಮತ್ತು ಮಾಳಪ್ಪರ ವಾಗ್ವಾದವು ಕೈಲಾಸ ಮತ್ತು ಭೂಮಿಯ ವಾಗ್ವಾದವನ್ನು ತಿಳಿಸುತ್ತದೆ. ಇವರಿಬ್ಬರ ನಡುವೆ ಯಾರ ಭಕ್ತಿ ಶ್ರೇಷ್ಠ ಎಂಬುದನ್ನು ತಿಳಿಸುತ್ತದೆ. ಕೊನೆಗೆ ಮಾಳಪ್ಪನೇ ಶ್ರೇಷ್ಠನಾಗಿ ಕಂಡುಬರುತ್ತಾನೆ. ಶಿವನ ವರಪುತ್ರನಾಗಿ ಮಾಳಪ್ಪ ಜನಿಸಿದರೆ, ಪಾರ್ವತಿಯ ಕೋಪದಿಂದ ಜನಿಸಿದ ಮಗನೇ ಅಮೋಘಸಿದ್ಧ. ಹೀಗಾಗಿ ಅಮೋಘಸಿದ್ಧ ಮಾಳಪ್ಪನನ್ನು ಪರೀಕ್ಷಿಸಲು ಹುಲಜಂತಿಗೆ ಧಾವಿಸುತ್ತಾನೆ. ಮೊದಲ ಪರೀಕ್ಷೆಯು ಎತ್ತುಗಳ ಮೇಲೆ ಮಾಡಲಾಗಿದೆ.

ಅಮೋಘಸಿದ್ಧನು ಮುಮ್ಮೆಟ್ಟಿ ಗುಡ್ಡದಲ್ಲಿರುತ್ತಾನೆ. ಈತನು ಎಪ್ಪತ್ತೊಂದು ಮಠಗಳನ್ನು ಹೊಂದಿರುವುದಾಗಿ ತಿಳಿದು ಬರುವುದು. ಮೊದಲ ಪರೀಕ್ಷೆಯಲ್ಲಿ ಸಿದ್ಧನು ಎತ್ತುಗಳನ್ನು ಕರೆದರೆ, ಮಾಳಪ್ಪ ಎತ್ತುಗಳನ್ನು ಹಿಂದಕ್ಕೆ ಕಳಿಸುವನು. ನಂತರ ಮಳೆಯ ಪ್ರಸಂಗ ಈ ರೀತಿ ಚಿತ್ರಣಗೊಂಡಿದೆ.

"ಕೈಯ ಮಾಡುತಾನೇನ ಕಂಬಳಿ ಬೀಸುತಾನೇನ
ಗಂಗಿ ದಿಕ್ಕಿನೋಗೇನ ಅಂಗೈಯಟ್ಟು ಮಾಡಾದವ
ಕೋಲಮಿಂಚ ಹೊಡದಾವ ನಾಡಿಗ ಜಾಲ ಹಾಕ್ಯಾವ
ಭೂಮಿಂಗ ಬರಬೇಕಾಂದವ ಗೋರ ಮಳಿಯ ಹತ್ಯಾವ"[೮೯]

ನಂತರ ಮಾಳಪ್ಪನು ಈ ರೀತಿಯಾಗಿ ಮಳೆಯನ್ನು ಹಿಂದಕ್ಕೆ ಕಳಿಸುವನು.

"ಮಾಣಿಕದ ಹರಳ ಮಾಳಪ್ಪ ಹಿಂದಕ ಕೈಯ ಮಾಡ್ಯಾನ
ಹಿಂದಕ ಕೈ ಮಾಡ್ಯಾನ ಮಳಿಯ ಕೈಲಾಸದ ಸೇರಾವ್ಯ
ಭೂಮಿಗ ಬಂದ ಮಳಿಯೇನ ಕೈಲಾಸಕ ಹೋಗುತಾವೇನ
ಮೂರ ತರ್ಪಿ ಕರದಾನ ಹಿಂದಕ ಹೋಗುತಾವೇನ"[೯೦]

ಹೀಗೆ ಇಬ್ಬರಲ್ಲಿ ಪೈಪೋಟಿಯು ಏರ್ಪಪಟ್ಟು ಅಮೋಘಸಿದ್ಧ ಸೋಲು ಒಪ್ಪಿಕೊಂಡು ಎಲ್ಲ ವಿದ್ಯೆಯನ್ನು, ಬಿಳಿನಂದಿ, ಕರಿಕಂಬಳಿ, ಪ್ರಸಾದ ಗಂಟನ್ನು ಮಾಳಪ್ಪನಿಗೆ ನೀಡುತ್ತಾನೆ. ನಂತರ ಅಮೋಘಸಿದ್ಧನನ್ನು ಹುಲಜಂತಿಗೆ ಕರೆದುಕೊಂಡು ಹೋಗಿ ಊಟ ಮಾಡಿಸುತ್ತಾನೆ. ಅನಂತರ ಐದು ಕುರಿಗಳನ್ನು ಕೊಟ್ಟು, ಅಣ್ಣ ಜಕ್ಕಪ್ಪರಾಯನ ಹತ್ತಿರ ಇನ್ನು ಐದು ಕುರಿ ಪಡೆಯಲು ಹೇಳುತ್ತಾನೆ. ಆದರೆ ಆ ಹತ್ತು ಕುರಿಗಳನ್ನು ಈತ ಪ್ರತ್ಯೇಕವಾಗಿ ಹಟ್ಟಿಯಲ್ಲಿ ಹೋಗಿಸಿರುತ್ತಾನೆ. ಒಂದು ದಿನ ದೊಡ್ಡಿಯಲ್ಲಿಯೇ ಹತ್ತು ಕುರಿಗಳು ಸತ್ತು ಹೋಗುತ್ತವೆ. ಅದನ್ನು ಬದುಕಿಸಲು ಕೇಳಿದರೆ ಮಾಳಪ್ಪನು ಒಪ್ಪುವುದಿಲ್ಲ. ಹೀಗೆ ಸಿದ್ಧನು ಬರಿಗೈಲಿ ಮುಮ್ಮಟ್ಟಿ ಗುಡ್ಡಕ್ಕೆ ಬರುವನು. ಆ ಮೇಲೆ ಭೂತಾಳ ಸಿದ್ಧನ ಜೊತೆ ಸೇರಿ ಕಲ್ಯಾಣಕ್ಕೆ ಹೋಗುವರು. ಅಲ್ಲಿ ಅರಕೇರಿ ನಾಗರಗಡ್ಡಿ ಮೇಲೆ ಅರಸ ಕೆರೆಕಟ್ಟಸುತ್ತಿದ್ದನು. ಆದರೆ ಆರು ತಿಂಗಳ ನಂತರ ಕುಸಿದು ಬೀಳುತ್ತಿತ್ತು. ಕುಂಬಾರಗುಂಡಯ್ಯನು ಅಮೋಘಸಿದ್ಧನನ್ನು ಪೂಜಿಸಿದಾಗ ಗಂಡು ಮಗು ಆಗುತ್ತದೆ. ಆ ಮಗುವಿಗೆ ಮಳಸಿದ್ಧಪ್ಪ ಎಂದು ಹೆಸರಿಟ್ಟು ಮುಮ್ಮಟ್ಟಿ ಗುಡ್ಡಕ್ಕೆ ಬಿಡಲು ಹೇಳುತ್ತಾನೆ. ಇದು ಅಮೋಘಸಿದ್ಧನು ತನ್ನ ಪರಂಪರೆಯ ಸಂಘಟನೆಯನ್ನು ತೋರಿಸಿಕೊಡುತ್ತದೆ.

ಅಮೋಘಸಿದ್ಧ ನಡುವಟ್ಟಿ ಊರಿನ ಅರಸನ ಕೆರೆ ಕಟ್ಟಡ ನಿಲ್ಲಿಸಿದ್ದಕ್ಕೆ ಪದ್ಮಾವತಿಯನ್ನು ಮದುವೆಯಾಗುವುದು ಕಂಡುಬರುತ್ತದೆ. ಒಂದು ಸೇರು ನವಣೆಕೊಟ್ಟು 'ಕಾಳಿಗೊಬ್ಬರು ಬರಬೇಕೆಂದು ಅರಸ ಹೇಳುವನು' ಆದರೆ ಮದುವೆಗೆ ಅಮೋಘಸಿದ್ಧನು ಹೋಗದೆ ಬೆತ್ತವನ್ನು ಭೂತಾಳ ಸಿದ್ಧನ ಕೈಯಲ್ಲಿ ಕಳುಹಿಸಿಕೊಟ್ಟು ಅದರ ಜೊತೆ ಮದುವೆ ಮಾಡಿಸುವುದು ಕಂಡುಬರುತ್ತದೆ.

"ನಾಗರಬೆತ್ತ ವೈದಾನೆ ಜಗಲಿಯ ಮ್ಯಾಲ ಇಟ್ಯಾನ
ಐದ ಕೋಲಿನಲ್ಲೇಳ ಮೂರ ತುತ್ತನಾದವ
ಸ್ಯಾಸಿಕಟ್ಟಿಯ ಮ್ಯಾಲೇನ ಬೆತ್ತ ಇಡುವುತಾರೇನ
ಪದ್ಮವತಿಯನಲ್ಲೇಳ ಎಡಕು ಕುಂಡ್ರುತಾಳೇನ
ಕೊಬ್ಬರಿ ಗುಂಡತಂದಾರ ಕರಮಣಿ ಮುತ್ತ ತಂದಾರ

ಮೂರೂರ ದೈವನಲ್ಲೇಳ ಹತ್ತು ಮಂದಿ ಕೂಡ್ಯಾರ

ಕಾಲಿಗೆ ಕಾಲುಂಗರೇನ ತಾವೇ ಇಡುವುತಾರೇನ

ಬಡಗಿಯ ಸಂಗಟಲ್ಲೇಳ ಲಗ್ಗನಾಗುತಾವೇನ್"[೧]

ಎಂದು ಹೇಳುವಲ್ಲಿ ಪದ್ಮವತಿಯು ಅಪರೋಕ್ಷವಾಗಿ ಅಮೋಘಸಿದ್ಧನ ಜೊತೆಯಲ್ಲಿ ಮದುವೆ ಮಾಡುವ ಪ್ರಸಂಗವು ಲಿಂಗಬೀರಣ್ಣನು ಆಗ ಬಿತ್ತಿ ಆಗ ಬೆಳೆದು ಗಿಡವಾಗಿಸಿ ಕನ್ನಿಕಾದೇವಿಯನ್ನು ಮದುವೆಯಾಗಿದ್ದನ್ನು ನೆನಪಿಸುತ್ತದೆ. ಇವರಿಬ್ಬರಿಗೆ ಮದುವೆ ಮುಖ್ಯವಲ್ಲ. ಕೊಟ್ಟ ಮಾತು ನಡೆಸುವ ಕರ್ತವ್ಯ ಮಹತ್ವವಾಗಿ ತೋರುತ್ತದೆ. ಹೀಗಾಗಿ ಗಿಡದ ಜೊತೆ ಮದುವೆ ಮಾಡಿಸುತ್ತಾರೆ. ಹೀಗೆ ಅಮೋಘಸಿದ್ಧ ಮುಮ್ಮೆಟ್ಟಿ ಗುಡ್ಡದಲ್ಲಿದ್ದರೆ ಪದ್ಮಾವತಿ ಅರಕೇರಿಯಲ್ಲಿರುತ್ತಾಳೆ. ಸಿದ್ಧನಿಗೆ ಸಾಧು ಎಂದು ಹೀಯಾಳಿಸುವಳು. ಆಗ ಕುಂಬಾರರ ಮಗನಾದ ಅಮೋಘಸಿದ್ಧನ ಶಿಷ್ಯ ಮಳಸಿದ್ಧಪ್ಪನು ಬರುತ್ತಾನೆ. ತನಗೆ ತಂಗಿ, ತಮ್ಮ ಕೊಡೆಂದು ಕೇಳುವನು. ಆಗ ಪದ್ಮಾವತಿಗೆ ಸಿದ್ಧನು ಐದು ಉತ್ತತ್ತಿ ಹಣ್ಣು ಕೊಟ್ಟನು. ಜಗಲಿಯ ಮೇಲೆ ಇಟ್ಟಾಗ ಒಂದು ಹೆಣ್ಣು, ನಾಲ್ಕು ಗಂಡು ಮಕ್ಕಳು ರೂಪ ಪಡೆಯುತ್ತವೆ. ನಾಲ್ಕು ಜನ ಗಂಡುಮಕ್ಕಳು ಮಳಸಿದ್ಧಪ್ಪನ ಜೊತೆ ತಂದೆ ಆಶೀರ್ವಾದ ಪಡೆಯಲು ಹೋಗುವರು. ಆದರೆ ನಾಲ್ಕು ಜನ ಮಕ್ಕಳು ಒಂದು ಕಡೆ, ಮಳಸಿದ್ಧಪ್ಪ ಮತ್ತೊಂದು ಕಡೆಯಾಗುತ್ತಾರೆ. ಮಳಸಿದ್ಧಪ್ಪ ಪದ್ಮಾವತಿಯ ಹತ್ತಿರವಿದ್ದ ಮಳೆಕೀಲಿ, ಬೆಳೆಕೀಲಿ, ಎಲ್ಲ ಗಂಟನ್ನು ಹೋಯ್ಯುತ್ತಾನೆ. ಇದನ್ನು ನಾಲ್ಕು ಜನ ಮಕ್ಕಳು ತಪ್ಪಾಗಿ ತಿಳಿದು ಹೊಡೆಯಲು ಹೋಗುತ್ತಾರೆ. ಆದರೆ ಮಳಸಿದ್ಧನು ಆ ಗಂಟನ್ನು ಅವರಿಗೆ ಕೊಡುವುದಿಲ್ಲ. ಅದಕ್ಕೆ ಹಿಂತಿರುಗಿ ಬರುತ್ತಾರೆ. ನಾಲ್ಕು ಜನರು ಗಂಟು ಕೊಡದಿದ್ದಕೆ ಗಂಗಿನಾಡ ಸೊನ್ನಲಗಿರಿಗೆ ಹೋಗಿ ನೆಲೆಸಲು ಹೇಳುತ್ತಾರೆ. ಹಾಗೆಯೇ ಮಳಸಿದ್ಧನು ಸೊನ್ನಲಗಿರಿಯಲ್ಲಿ ನೆಲೆಸುವನು.

ಪಾಂಡುರಂಗನು ಮಾಳಿಂಗರಾಯನ ಭಕ್ತಿ ಪರೀಕ್ಷೆ ಮಾಡಲು ಬಿಜ್ಜಳಗುಂತಿಗೆ ಬರುವನು. ಪಾಂಡುರಂಗ ಮಾಳಿಂಗರಾಯನ ಹತ್ತಿರ ಲಿಂಗವನ್ನು ಕೊಡಲು ಹೇಳುತ್ತಾನೆ. ಲಿಂಗಕ್ಕಾಗಿ ಹಾಲು ಹಳ್ಳಕ್ಕೆ ಬರುವನು. ಆದರೆ ಅಲ್ಲಿ ಲಿಂಗವು ಆಕಾಶ ಭೂಮಿಗೆ ಏಕವಾಗಿ ನಿಂತಿರುತ್ತದೆ. ನಂತರ ಒಂದು ಕರಿಯ ಕಲ್ಲಿನ ಮರಿಯಲ್ಲಿ ಲಿಂಗ ನೆಲೆಯೂರುತ್ತದೆ. ಮಾಳಪ್ಪನ ಹತ್ತಿರ ಬರಗೈಯಲ್ಲಿ ಹೋದರೆ ಏನು ಅನುತ್ತಾನೆಂದು ಪಾಂಡುರಂಗ ಮೂರು ದಿನಗಳವರೆಗೆ ಧರಿಯಾ ಧೋಳಗೊಂಡ, ನಂದಣ್ಣರ ಹತ್ತಿರ ಭಿಕ್ಷೆಗೆ ಹೋಗುವನು. ಪಾಂಡುರಂಗನಿಗೆ ಶ್ರೀಮಂತ ನಂದಣ್ಣನು ನಾಯಿಗಳಿಗೆ ಹೊಡೆಯುವಂತೆ ಹೊಡೆದು ಕಳಿಸುವನು. ಆದರೆ ಬಡವ ಧೋಳಗೊಂಡ ಕುರಿಗಳನ್ನು ಕಾಯ್ದು ಅದರಿಂದ ಉಣ್ಣೆ ತಯಾರಿಸಿ ಮಾರುವುದು ಆತನ ಕಾಯಕವಾಗಿತ್ತು. ಆಗ ಪಾಂಡುರಂಗನು ಚಿಕ್ಕ ಹುಡುಗನ ವೇಷಹಾಕಿಕೊಂಡು ಕುರಿಯನ್ನು ಕಾಯಲು ತೊಡಗುತ್ತಾನೆ. ಚಿಕ್ಕ ಹುಡುಗನಾದ್ದರಿಂದ ಧೋಳಗೊಂಡನ ಮಗಳು ಇದ್ದ

ಮೂರು ರೊಟ್ಟಿಯನ್ನು ಅವನಿಗೆ ನೀಡುತ್ತಾಳೆ. ಇವರ ನಿಷ್ಠೆಗೆ ಮೆಚ್ಚಿ ಗಡಿಗೆಯಲ್ಲಿ ಅಂಬಲಿ ತುಂಬುವಂತೆ ಪಾಂಡುರಂಗ ಪವಾಡ ಮಾಡುವನು. ನಂತರ ಈತನಿಗೆ ಕಂಬಳಿ ಮಾರಲು ಕಳಿಸುತ್ತಾರೆ. ನೇಯ್ದ ಕಂಬಳಿಯನ್ನು ಮಾರಾಟ ಮಾಡುವುದರ ಜೊತೆಗೆ ಪ್ರತ್ಯೇಕ ಉಣ್ಣೆಯನ್ನು ಮಾರಾಟ ಮಾಡುವುದನ್ನು ಪಾಂಡುರಂಗ ಮಾಡುತ್ತಾನೆ. ಹೀಗೆ ಧೋಳಗೊಂಡ ಸಂಪಾದಿಸಿದ ಹಣವನ್ನು ಪಾಂಡುರಂಗನು ಸಂಪಾದನೆ ಮಾಡಿಕೊಡುತ್ತಾನೆ. ವೈಷ್ಣವನಾದ ಪಾಂಡುರಂಗ ಶೈವರ ಜೊತೆ ಸೇರಿ ಕಂಬಳಿ ವ್ಯಾಪಾರ ಮಾಡುವುದು ವಿಶೇಷ. ಕುರುಬರು ಕಂಬಳಿಯ ವ್ಯಾಪಾರವನ್ನು ಅವರಿಗೆ ಕೊಟ್ಟಿರುವುದನ್ನು ಸೂಕ್ಷ್ಮವಾಗಿ ತಿಳಿದುಬರುತ್ತದೆ. ನಂತರ ಕುರುಬರು ಮಾತ್ರ ಕುರಿಯನ್ನು ಕಾಯುತ್ತಿರಲಿಲ್ಲ. ಆರ್ಥಿಕವಾಗಿ ಹಿಂದುಳಿದ ಎಲ್ಲ ವರ್ಗಗಳು ಕಾಯುತ್ತಿದ್ದವು ಎಂಬುದನ್ನು ಪಾಂಡುರಂಗ ಕುರಿಕಾಯುವುದರಲ್ಲಿ ಕಂಡುಬರುತ್ತದೆ.

"ಹಾಸ ಮಾಡುತಾನೇನ ಉಂಕಿ ಮಾಡುತಾನೇನ

ಉಂಕಿ ಮಾಡುತಾನೇನ ಸರಿಯ ಹಚ್ಚುತದೇನ

ಏಳ ವರ್ಣದ ಕಂಬಳೆ ಕಂಬಳಿ ನ್ಯೆಯುತಾನೇನ

ಏಳನೂರ ಕಂಬಳೆ ನ್ಯೆದು ಕಟ್ಟುತಾನೇನ"[9]

ಹೀಗೆ ಪಾಂಡುರಂಗನು ಮಾಳಿಂಗರಾಯನನ್ನು ಪರೀಕ್ಷೆ ಮಾಡಲು ಬಂದು ಲಿಂಗವನ್ನು ಪಡೆದು ಕರಿಯ ಕಲ್ಲಿನ ದೇವರನ್ನು (ಬೀರಪ್ಪ) ಮನೆದೇವರಾಗಿ ಮಾಡಿಕೊಳ್ಳುತ್ತಾನೆ. ಕುರಿಗಳನ್ನು ಕಾಯುವುದು, ಉಣ್ಣೆ ಮಾರಾಟ ಮತ್ತು ಕಂಬಳಿ ತಯಾರಿಸಿ ಮಾರಾಟ ಮಾಡುವುದರಿಂದ ಪ್ರಸಿದ್ಧಿಯಾಗುವನು. ಹಾಲುಹಳ್ಳದಲ್ಲಿನ ದೇವರು ಸಣ್ಣಳ್ಳಿ ಹಿಟ್ಟರಾಯಣ್ಣ, ತಿರಕ ಬೀರಪ್ಪ, ರಾಯ ಹೂನೂರಸಿದ್ಧ, ಜ್ಯೋತಿ ಸಿಡಿಯಾಣಸಿದ್ಧ, ಶೀಲವಂತಿ ಮತ್ತು ಮಾಳಿಂಗರಾಯನ ಜೊತೆಗೆ ಭೇಟಿಯನ್ನು ಪಡೆಯುತ್ತಾನೆ. ಇದು ಕುರಬರಲ್ಲಿ ನಾಮದ ಕುರುಬರು ಇರುವುದನ್ನು ಪ್ರತಿಪಾದಿಸುತ್ತದೆ.

ಕೊನೆಯಲ್ಲಿ ರೇವಣಸಿದ್ಧರ ಆಗಮನದಿಂದ ಭಕ್ತಿ ಪರೀಕ್ಷೆಯು ನಡೆಯುತ್ತದೆ. ಈ ಪರೀಕ್ಷೆಯಲ್ಲಿ ಕುರುಬರ ಸಿದ್ಧವ್ವ, ಹಾರರ ಗುಂಡವ್ವ, ಹಾಯದ ಲಿಂಗಮ್ಮ ಮಡಿವಾಳನ ಮಡದಿ ನೀಲಮ್ಮ ಪಾತ್ರಗಳು ರೇವಣಸಿದ್ಧರ ಮತ್ತು ಸಿದ್ಧರಾಮರ ಚರಿತ್ರೆಯನ್ನು ತಿಳಿಯಲು ಪೂರಕವಾಗಿ ನಿಲ್ಲುತ್ತವೆ. ಹೀಗೆ ಜನಪದ ಹಾಲುಮತ ಮಹಾಕಾವ್ಯ ೧೯ನೇ ಶತಮಾನದಲ್ಲಿ ಸಂಗ್ರಹ ಮಾಡಿದ್ದರಿಂದ ಮೈಲಾರಲಿಂಗನ ಹೆಂಡತಿ ಗಂಗಿ ಮಾಳಮ್ಮನ ಚರಿತ್ರೆಯ ಕುರಿತ ಪ್ರಸಂಗವು ಸೇರ್ಪಡೆಯಾಗಿದೆ. ಒಟ್ಟಾರೆ ಈ ಮಹಾಕಾವ್ಯವು ಲಿಂಗಬೀರಣ್ಣನ ಚರಿತ್ರೆ, ಮಾಳಿಂಗರಾಯನ ಚರಿತ್ರೆ ಮತ್ತು ಕಂಬಳಿಯ ಕುರಿತು ವಿಶೇಷವಾಗಿ ತಿಳಿಸಿಕೊಡುತ್ತದೆ.

## ಹಾಲುಮತದ ಶ್ರೀ ಸಿದ್ಧಬೀರೇಶ್ವರ ಅರ್ಥಾತ್ ಶ್ರೀ ಕರಿಸಿದ್ದೇಶ್ವರ ಪುರಾಣ

ಈ ಹಾಲುಮತ ಪುರಾಣವನ್ನು ಅಣ್ಣಪ್ಪ ವಾಸುದೇವರಾಯ ಮುತ್ತೂರ ಅವರು ೧೯೭೨ರಲ್ಲಿ ಬರೆದಿದ್ದಾರೆ. ಇದು ಸಹ ಹಾಲುಮತ ಸಮುದಾಯಕ್ಕೆ ಸಂಬಂಧಿಸಿದ ಗದ್ಯ ಕೃತಿಯಾಗಿದೆ. ಎಲ್ಲ ಹಾಲುಮತ ಪುರಾಣಗಳಲ್ಲಿರುವಂತೆ ಇದರಲ್ಲಿಯೂ ಹನ್ನೊಂದು ಅಧ್ಯಾಯಗಳನ್ನು ಒಳಗೊಂಡಿದೆ. ಈ ಪುರಾಣವು ಈಗಾಗಲೇ ಬಂದ ಒಂಭತ್ತು ಪುರಾಣಗಳನ್ನು ಅನುಲಕ್ಷಿಸಿ ಕರಿಸಿದ್ದೇಶ್ವರ ಪುರಾಣವೆಂದು ಹೇಳುತ್ತಾರೆ. ಆದರೆ ಇದು ಜನಪದ ಹಾಲುಮತ ಮಹಾಕಾವ್ಯ, ತಗರ ಪವಾಡ, ಸಿದ್ಧಮಂಕ ಚರಿತೆ, ಹಾಲುಮತೋತ್ತೇಜಕ ಪುರಾಣದಲ್ಲಿ ಹೇಳಿರುವುದನ್ನು ಪುನಃ ನೆನಪಿಸಿಕೊಡುವುದು. ಎಲ್ಲರಿಗೂ ಪದ್ಯವನ್ನು ಓದಿ, ಡೊಳ್ಳು, ಹಾಡುಗಳನ್ನು ಕೇಳಿ ಪುರಾಣವನ್ನು ಅರ್ಥೈಸಲು ಆಗದೆ ಹೋದಾಗ ಈ ರೀತಿಯ ಗದ್ಯ ಸಾಹಿತ್ಯವಾಗಿ ಪುರಾಣ ಶೀರ್ಷಿಕೆಯನ್ನು ಪಡೆಯಿತು ಎನ್ನಬಹುದು. ಬೀರಪ್ಪನ ಜನನ, ರಾಕ್ಷಸರನ್ನು ಸಂಹಾರ ಮಾಡುವುದು, ಸೂರಮ್ಮದೇವಿಯು ಬೀರಪ್ಪನನ್ನು ಅಗಲುವುದು, ನಂತರ ಮಾಯದೇವಿಯಾಗಿ ಜನಿಸುವುದನ್ನು ಈ ಕೃತಿಯು ಹೇಳುತ್ತದೆ. ಬೀರಪ್ಪ ಮತ್ತು ಕನ್ನಿಕಾಮಾಲೆಯರ ವಿವಾಹ, ಕಂಬಳಿಯ ಬಳಕೆಯನ್ನು ಹೇಳಲಾಗಿದೆ.

ಕಂಬಳಿಯ ಬಗ್ಗೆ ವಿಶೇಷವಾಗಿ ಈ ರೀತಿ ಹೇಳುತ್ತದೆ. ರತ್ನಗಂಬಳಿ ಮತ್ತು ಮಲ್ಲಗಂಬಳಿಗಳ ಅರ್ಥ ಸ್ಪಷ್ಟತೆಯಿಲ್ಲ ರತ್ನಗಂಬಳಿಯನ್ನು ಸಮಾಜದಲ್ಲಿ ಶುಭಕಾರ್ಯಕ್ಕೆ ಅಂದರೆ ಮದುವೆ, ನಾಮಕರಣ ಮುಂತಾದ ಕೆಲಸಕ್ಕೆ ಬಳಸುವರೆಂದು ಹೇಳಲಾಗಿದೆ. ಮಲ್ಲಗಂಬಳಿಯನ್ನು ಸಾಹಸ ಪ್ರತೀಕವಾಗಿ ಉಪಯೋಗಿಸಲಾಗುತ್ತಿತ್ತು. ಈ ಪುರಾಣವು ಬೀರೇಶ್ವರನನ್ನು ಮುಖ್ಯವಾಗಿಸಿದ್ದನ್ನು ಹೇಳುತ್ತದೆ. ಅದಕ್ಕಾಗಿ ಮಾಳಿಂಗರಾಯನ, ಅಮೋಘಸಿದ್ಧನ, ಸಿದ್ಧರಾಮನ, ಶಾಂತಮುತ್ತಯ್ಯನ ಬಗ್ಗೆ ಅಷ್ಟಾಗಿ ಹೇಳಿಲ್ಲ. ಕಂಬಳಿಯ ಪ್ರಸ್ತಾಪವು ಬಹುಮುಖ್ಯವಾಗಿ ತೋರುತ್ತದೆ. ರತ್ನಗಂಬಳಿ, ಮಲ್ಲಗಂಬಳಿಯ ಜೊತೆ ಹೋಮಗಂಬಳಿ, ನೇಮಗಂಬಳಿಗಳ ಪ್ರಸ್ತಾಪ ಬರುವುದು ರೇವಣಸಿದ್ಧರ ಒಂದು ಪರಂಪರೆಯಾದರೆ, ಅಮೋಘಸಿದ್ಧನದು ಒಂದು ಪರಂಪರೆಯೆಂದು ಪುರಾಣ ತಿಳಿಸಿಕೊಡುತ್ತದೆ.

ಪದ್ಮಗೊಂಡನ ಮಕ್ಕಳು ವಿಧವಿಧವಾಗಿ ವೃತ್ತಿಯ ಹೊಂದಿರುವುದನ್ನು ಇಲ್ಲಿ ಪಡಿಸಲಾಗಿದೆ. ಹಿರಿಯಮಗನಾದ ಗುರುಲಿಂಗನು ಗೌಡತನಕ್ಕೆ, ಶಿವಲಿಂಗನನ್ನು ಗುರುತನಕ್ಕೆ, ಬಸವಲಿಂಗನನ್ನು ಕುರಿಕಾಯುವುದಕ್ಕೆಂದು ನೇಮಿಸುತ್ತಾರೆ. ಹಾಲುಮತದವರು ಕುರಿಯನ್ನು ಸಾಕುವುದರ ಜೊತೆ ಜೊತೆಯಲ್ಲಿಯೇ ಅನೇಕ ವೃತ್ತಿಗಾರರಾಗಿ ಜೀವಿಸುತ್ತಿದ್ದರೆಂದು ಹೇಳಲಾಗಿದೆ.

### ಅವತಾರಗಳು

ಮನುಷ್ಯನು ಸಿದ್ಧಪಡಿಸಿದ ಮಾದರಿಯಲ್ಲಿಯೇ ಜೀವನ ನಿರ್ವಹಿಸುವ ಪ್ರಾಣಿ. ಸಹಜ ಪ್ರಾಣಿಗಳಂತೆ ವೈರಿಯನ್ನು ಹೆದರಿಸುವ ಧೈರ್ಯವಿದ್ದರೂ ನೇರವಾಗಿ ಹೋರಾಟ ಮಾಡದ ಗುಣದಿಂದ

ಮನುಷ್ಯ ವಿಶಿಷ್ಟತೆಯನ್ನು ಪಡೆದಿದ್ದಾನೆ. ಕಾರಣ ನಮ್ಮ ಮೇಲೆ ಹೋರಾಟ ಮಾಡಲು ಕಾರಣವೇನು? ಯಾರ ಬೆಂಬಲವಿದೆ? ಮತ್ತು ಹೇಗೆ ಇದನ್ನು ನಿಭಾಯಿಸಬಹುದು ಎಂಬೆಲ್ಲಾ ಆಲೋಚನೆಯನ್ನು ಮಾಡುವ ಸೂಕ್ಷ್ಮಜೀವಿ. ಮನುಷ್ಯನಿಗೆ ಮೀರಿದ ಕೆಲಸವನ್ನು ಒಳಗಿನ ಮನಸ್ಸು ನಿರ್ವಹಿಸುತ್ತಿರುತ್ತದೆ. ಉದಾಹರಣೆಗಾಗಿ ರಾಮಾಯಣದಲ್ಲಿ ಬರುವ ಹನುಮನ ಪಾತ್ರ, ಈತನು ಅಪ್ರತಿಮ ವೀರನಾಗಿದ್ದವನು. ಆದರೆ ಸೀತೆಯನ್ನು ಕಾಣಲು ನದಿ ದಾಟಿ ಹೋಗಬೇಕಾದಾಗ ವಾನರರು ಸೇತುವೆಯನ್ನು ಕಲ್ಲಿನಿಂದ ಕಟ್ಟುತ್ತಾರೆ. ಆದರೂ ದಡ ಸೇರದ ವಾನರರು ಹನುಮನಿಗೆ ಮನಸ್ಥೈರ್ಯ ತುಂಬಿ ಸಮುದ್ರೋಲಂಘನವನ್ನು ಅವನಿಂದ ನೆರವೇರಿಸುವ ಪ್ರಸಂಗವು, ಸಾಮಾನ್ಯ ವ್ಯಕ್ತಿಯು ಆತ್ಮವಿಶ್ವಾಸವಿದ್ದರೆ ಎಂತಹ ಕಠಿಣ ಕೆಲಸವನ್ನು ನಿರ್ವಹಿಸಬಲ್ಲ ಎಂಬ ಅಂಶ ತಿಳಿದು ಬರುತ್ತದೆ. ಅದೇ ರೀತಿಯಲ್ಲಿ ಸೃಷ್ಟಿಯಾದ ವಿಶಿಷ್ಟ ವ್ಯಕ್ತಿತ್ವದ ಕಥೆಗೆ ಪುರಾಣಗಳಲ್ಲಿ ಕಲ್ಪನೆಯು ಸೇರಿ 'ಅವತಾರ'ವೆಂಬ ಪರಿಕಲ್ಪನೆಯನ್ನು ಪಡೆಯಿತು. "ಅವತಾರ ಎಂದರೆ ದೇವತೆಗಳು ಭೂಮಿಯ ಮೇಲೆ ಹುಟ್ಟುವುದು, ವೇಷಧರಿಸುವುದು."[೩] ನಮ್ಮ ಜನರು ಪ್ರಕೃತಿಯಲ್ಲಿರುವ ಅದ್ಭುತ, ವಿಸ್ಮಯಕಾರಿ ಜೀವಿಗಳಿಗೆ ಅವತಾರ ಎಂದು ಕರೆಯುವ ರೂಢಿಯಿದೆ. ಮನುಷ್ಯ ಸಹಜ ಸ್ಥಿತಿಯ ಹುಟ್ಟಿನ ಮೂಲಕ ಮಾಡದ ಅನೇಕ ಕಾರ್ಯಗಳನ್ನು ಅವತಾರವೆಂಬುದನ್ನು ಧರಿಸಿದಾಗ ನಿರ್ವಹಿಸುವ ದಿವ್ಯಶಕ್ತಿ ಪಡೆಯುತ್ತಾರೆ. ಅವತಾರ ಎಂಬುದು ಪುರಾಣಗಳಲ್ಲಿ ಕೈಲಾಸದಲ್ಲಿನ ದೇವತೆಗಳು ಯಾವುದೋ ಕಾರಣಕ್ಕೆ ಶಾಪ ಹೊಂದುವರು. ಆ ಶಾಪ ವಿಮೋಚನೆಗೆ ಮಾನವ ಜನ್ಮ ಪಡೆದು ಸಮಾಜದಲ್ಲಿನ ದುಷ್ಟರನ್ನು, ಅಸಂಸ್ಕೃತರನ್ನು ಸದೆಬಡೆಯುವ ಕಾರ್ಯ ಪ್ರಾಚೀನ ಕಾಲದಿಂದಲೂ ಬಂದಿದೆ. ಇದರ ಮೂಲಕ ವ್ಯಕ್ತಿಗೆ ಚೇತನಾ ಶಕ್ತಿಯನ್ನು ಜ್ಯೋತಿಯ ರೂಪದಲ್ಲಿ ತುಂಬುವುದಾಗಿದೆ. ಕಠಿಣ, ಅಸಹಜ ಕೆಲಸ ಕಾರ್ಯಗಳನ್ನು ಸುಲಭವಾಗಿ, ತಂತ್ರಗಾರಿಕೆಯಿಂದ ಆಧ್ಯಾತ್ಮಿಕ ನೆಲೆಯಲ್ಲಿ ಬಗೆಹರಿಸುವ ಒಂದು ತಂತ್ರ, ಇದನ್ನು ಮನೋವಿಜ್ಞಾನದಲ್ಲಿಟ್ಟು ಅಧ್ಯಯನ ಮಾಡಿದರೆ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಇಂತಹ ಚೈತನ್ಯವಿರುತ್ತದೆ. ಆದರೆ ಇದರ ಬಳಕೆಗೆ ಸರಿಯಾದ ಅವಕಾಶಗಳು ಒದಗಿರುವುದಿಲ್ಲ.

ಅವತಾರವು ಯಾವ ವ್ಯಕ್ತಿಯಲ್ಲಿ ಸಮಸ್ಯೆವಿರುತ್ತದೆಯೋ ಅವನಲ್ಲಿ ಮೂಡುವ ಒಂದು ಶಕ್ತಿಯೆನ್ನಬಹುದು. ಏಕೆಂದರೆ ಸಮಾಜದಲ್ಲಿ ಕೆಲವು ಅಡ್ಡಿ ಆತಂಕಗಳನ್ನು, ಸಹಜವಾಗಿ ನಿವಾರಿಸಲು ಆಗುವುದಿಲ್ಲ. ಆಗ ಈ ಅವತಾರವು ಸಹಾಯ ಮಾಡುತ್ತದೆ. ಇದೇ ಹಿನ್ನೆಲೆಯಲ್ಲಿ ನಮ್ಮ ಕನ್ನಡ ಸಾಹಿತ್ಯದ ಅನೇಕ ಕಾವ್ಯ ಪುರಾಣಗಳಲ್ಲಿ ಅವತಾರಗಳು ಅನಾವರಣಗೊಂಡಿವೆ. ಪುರಾಣ ಪರ್ವದಲ್ಲಿ ಈ ಪದಕ್ಕೆ ಗೌರವ, ಪಾವಿತ್ರ್ಯತೆ, ಮರ್ಯಾದೆ, ಪ್ರತಿಷ್ಠೆ, ಆದರ್ಶಮಯತೆ, ಕಲ್ಪನೆಯೆಂಬ ಸೋಗಿನಲ್ಲಿ ಅರ್ಥೈಹಿಸಲಾಗುತ್ತದೆ. ಅವತಾರ ಎನ್ನುವುದು ದೈವಿಶಕ್ತಿ. ಅದನ್ನು ಪಡೆಯಲು ಯಾರಿಗೂ ಸಾಧ್ಯವಿಲ್ಲ. ಒಂದು ವೇಳೆ ಪಡೆದರೆ ಅವರು ಮಹಾಪುಣ್ಯವಂತರೆಂದು ಆ ಅವತಾರ ಪುರುಷರನ್ನು ಜನರು

ದೈವೀಕರಿಸುತ್ತಾ ಅವತಾರ ಮನುಷ್ಯನ ರಕ್ತದ ಕಣದಲ್ಲಿ ಬೆರೆತು ಬೇರೂರಿದೆ. ಇದರ ಅವನತಿಯು ಜಗತ್ತು ವಿಸ್ಮೃತಿ ಪಡೆದಾಗ ಎನ್ನಬಹುದು.

ಹೀಗೆ ನಮ್ಮ ಪರಂಪರೆಯು ರೂಪಿಸಿಕೊಟ್ಟ ಅಂದಿನ ಅನುಕೂಲತೆಯನ್ನು ಇಂದು ದೈವೀಕರಿಸುವುದು ಸೂಕ್ಷ್ಮವಾಗಿದೆ. ಮನುಷ್ಯ–ಮನುಷ್ಯರು ಯಾವಾಗ ಆತ್ಮವಿಶ್ವಾಸ ಕಳೆದುಕೊಳ್ಳುತ್ತಾರೋ ಅಂದಿನಿಂದ ಮನುಷ್ಯನ ಮತ್ತೊಂದು ಅಂಶವೇ ಅವತಾರವಾಗಿ ನಿಲ್ಲುವುದು. ಜೈನ ಧರ್ಮವು ತನ್ನ ಮತ ಪ್ರಚಾರದ ಹೊಣೆಗಾರಿಕೆಯನ್ನು ಅವತಾರದಿಂದ ಸಾಧಿಸಲು ಪ್ರಯತ್ನಪಟ್ಟಿರುವುದು ಕಂಡುಬರುತ್ತದೆ. ಸ್ವರ್ಗಲೋಕದಿಂದ ಸುರರು ಭೂಮಿಗೆ ಬಂದು ಮುಂದಿನ ತಮ್ಮ ಮತಪ್ರಚಾರದ ಮನುಷ್ಯ ಬೀಜವನ್ನು ಕಳುಹಿಸುವ ಒಂದು ಕ್ರಿಯೆ. ಜೈನ ಧರ್ಮದ ತೀರ್ಥಂಕರು ಸಾಮಾನ್ಯವಾಗಿ ಜನಿಸದೆ, ದೈವಾಂಶದಿಂದ ಜನಿಸಿದ್ದನ್ನು ಹೇಳುತ್ತದೆ. ಸಕಲ ಸೌಲಭ್ಯವನ್ನು ಈ ವ್ಯಕ್ತಿಗೆ ಒದಗಿಸುವರು. ದೇವ ಮತ್ತು ಈ ಅವತಾರ ವ್ಯಕ್ತಿ ಬೇರೆಯಲ್ಲವೆಂದು ಸುರಲೋಕದ ಪರಿವಾರವೇ ಬಂದು ಹುಟ್ಟಿದ ಪರಿಸರ, ಹುಟ್ಟಲಿರುವ ತಾಯ್ತಂದೆಗಳ ಸುಚಿತ್ವವನ್ನು ಕಾಪಾಡುತ್ತಾರೆ. ಈ ರೀತಿಯ ತಯಾರಿಯು ಮುಂದೆ ಕೇವಲ ಜ್ಞಾನಕ್ಕೆ ಬುನಾದಿಯಾಗಿರುತ್ತದೆ. ಇದೇ ರೀತಿಯಾಗಿ ಆದಿಕವಿ ಪಂಪನು ಅನುಸರಿಸುವುದನ್ನು ಕಾಣಬಹುದು.

"ಪಳಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೊಲ್ ಶುದ್ಧಗರ್ಭಗೃಹದೊಳ್ ತೇಜೋ
ನಿಳಯಂ ಬೆಳಗಿದನಜೀವಿನ
ಬೆಳಗಿನ ಮೊಳೆ ಮೊಳೆತು ಬೆಳವುದೊಂದಚ್ಚರಿಯೇ"

ಎಂದು ಪಂಪ ವರ್ಣಿಸುತ್ತ ವೃಷಭನಾಥನ ಅವತಾರವು ತುಂಬ ಮಹತ್ವದೆಂದು ಹೇಳುತ್ತಾನೆ. ಈ ವರ್ಣನೆಯು ಕೇವಲ ಪ್ರಾಚೀನ ಪುರಾಣಗಳಿಗೆ ಮಾತ್ರ ಸೀಮಿತವಾಗಿರದೆ ಕಾಲದಿಂದ ಕಾಲಕ್ಕೆ ಪರಿವರ್ತನೆಗೊಂಡು ಭವಾವಳಿಯಿಂದ ಅವತಾರಕ್ಕೆ ಬಂದು ನಿಂತಿತು. ಪಾಂಡಿತ್ಯ ಪ್ರತಿಭೆಯನ್ನು ತೋರಪಡಿಸುವಲ್ಲಿ ಅವತಾರಗಳು ಎಷ್ಟು ಸಂಖ್ಯೆಯಲ್ಲಿರುತ್ತವೋ ಅದರಿಂದ ಆ ಕವಿಯ ಮತ್ತು ಕೃತಿಯ ಮಹತ್ವವನ್ನು ಅರ್ಥೈಸಲಾಗುತ್ತಿತ್ತು. ಈ ರೀತಿಯ ಮಾದರಿಯನ್ನು ಕಾಲಗರ್ಭದಲ್ಲಿ ವಿಸ್ಮೃತಿ ಹೊಂದುತ್ತಿರುವ ಸಮುದಾಯಗಳ ವೀರರಿಗೆ ಆರೋಪಿಸಲಾಯಿತು. ಜನಪದರು ಅವತಾರಗಳ ಮತ್ತಷ್ಟು ದೈವಸ್ವರೂಪದಲ್ಲಿ ನೋಡುವ ರೂಢಿ ಸಂಸ್ಕೃತಿಯನ್ನು ಜಾರಿಗೆ ತಂದರು. ತಮ್ಮ ಸಮುದಾಯದಲ್ಲಿನ ಆಚಾರ–ವಿಚಾರಗಳನ್ನು ಬಿಟ್ಟು ಹೋಗದಂತೆ ಅವತಾರಗಳನ್ನು ವಿಶಿಷ್ಟವಾಗಿ ಬಳಸಿಕೊಳ್ಳುವುದು ಅನಿವಾರ್ಯವಾಗಿತ್ತು ಎಂಬ ಅಂಶವನ್ನು ಗಮನಿಸಬಹುದು.

ಹೀಗೆ ಕನ್ನಡ ಸಾಹಿತ್ಯದಲ್ಲಿ ಅವತಾರ ಕಲ್ಪನೆಯೂ ಅಂದಿನಿಂದ ಇವತ್ತಿನವರೆಗೆ ಬೇರೆ ಬೇರೆ ಅರ್ಥ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಅಷ್ಟಲ್ಲದೆ ಆಧುನಿಕ ಯುಗದಲ್ಲಿ ಅವತಾರ ಎನ್ನುವ ಪದ ಅಪಹಾಸ್ಯಕ್ಕೆ ಗುರಿಯಾಗಿದೆ. ಒಬ್ಬ ವ್ಯಕ್ತಿಯನ್ನು, ಅವನ ವರ್ತನೆಯನ್ನು ಅಲ್ಲಗಳೆಯಲು ಅವತಾರ ಪುರುಷ ಎಂದು ಪ್ರಯೋಗಿಸುವುದು ಕಂಡುಬರುತ್ತದೆ. ಆದರೆ ಪುರಾಣ ಪ್ರಪಂಚದಲ್ಲಿ ಇದರರ್ಥ ಗಗನಕ್ಕೇರಿದೆ. ಪ್ರಭುತ್ವದಿಂದ ವೈರಾಗ್ಯವು ದಾರ್ಶನಿಕ ನೆಲೆಯಲ್ಲಿ ಗೆಲ್ಲುವ ಸ್ತರವನ್ನು 'ಅವತಾರ'ವು ತಾತ್ವಿಕತೆಯನ್ನು ಪಡೆದಿದೆ. ಜೀವನವು ಮತ್ತೊಬ್ಬರಲ್ಲಿ ಅಂದರೆ ಅನ್ಯ ಮತದವರ ಸಂಕೋಲೆಯಲ್ಲಿ ಬಂದಿಯಾಗದೆ ಮುಕ್ತತೆಯನ್ನು ಹೊಂದಲು ಪ್ರಯತ್ನಿಸುತ್ತದೆ. ಇದು ವ್ಯಕ್ತಿತ್ವದ ವಿಕಾಸನದ ಸಂಕೀರ್ಣತೆಯನ್ನು, ಸಂಕ್ರಮಣತೆಯನ್ನು ತಿಳಿಸುತ್ತದೆ. ಮತ್ತೊಂದು ಸಮಾಜದಿಂದ ತನ್ನ ಸಮಾಜ ಸಂಸ್ಕೃತಿ ಶ್ರೇಷ್ಠವಾದುದು ಎಂದು ಪ್ರತಿಪಾದಿಸಲು ಅವತಾರಗಳನ್ನು ಪುರಾಣಗಳಲ್ಲಿ ಸೃಷ್ಟಿಮಾಡಲಾಯಿತು. ಮನುಷ್ಯನ ಸಮಾಜವು ಕಲ್ಯಾಣವನ್ನೇ ಸದಾ ಬಯಸುತ್ತದೆ. ಅದರಲ್ಲಿ ಕಾರ್ಪಣ್ಯಗಳಿರುವುದು ಸಹಜ. ಅಂತಹ ಕಷ್ಟ-ಕಾರ್ಪಣ್ಯಕ್ಕೆ ನರಮಾನವರು ದಾರ್ಶನಿಕ ರೂಪ ಪಡೆಯುವುದು ಅನಿವಾರ್ಯವಾಯಿತು.

ಈ ಹಿನ್ನೆಲೆಯಲ್ಲಿಯೇ ಅನೇಕ ಕೆಳವರ್ಗದ ಸಮುದಾಯಗಳು ಮೇಲ್ವರ್ಗದ ಪ್ರಭುತ್ವದ ಶೋಷಣೆಯನ್ನು ಬಯಲು ಮಾಡಲು, ಪ್ರತಿರೋಧವನ್ನು ವ್ಯಕ್ತಪಡಿಸಲು ಪ್ರತಿಭಟನೆ ಕೈಗೊಳ್ಳಲು, ಅಸಹಜ ವ್ಯಕ್ತಿತ್ವ ಚಿತ್ರಣ ಬೇಕಿತ್ತು. ಅದಕ್ಕೆ ಅವರು ಅವತಾರಗಳಿಗೆ ಶರಣಾದರು. ಒಂದು ಸಮುದಾಯವು ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸುವಲ್ಲಿ ಯಾವ ತಂತ್ರವನ್ನು ಬಳಸಿಕೊಂಡಿತು ಎನ್ನುವುದಕ್ಕಿಂತ ಸಮುದಾಯದ ಆಶಯವನ್ನು ಪೂರೈಸಿದೆಯೋ ಇಲ್ಲವೋ ಅನ್ನುವುದು ಮುಖ್ಯ. ಇಂತಹ ಮಹತ್ಕಾರ್ಯವನ್ನು ಸಮಾಜದ ಕೆಳಸಂಸ್ಕೃತಿ/ಸಮುದಾಯಗಳು ಏಕೆ ಕೈಗೊಂಡವೆಂಬ ಒಳಾರ್ಥವನ್ನು ಭೇದಿಸಲು ಸಮುದಾಯದಲ್ಲಿನ ಪುರಾಣಗಳಲ್ಲಿನ ಅವತಾರಗಳ ಅಧ್ಯಯನ ಪ್ರಮುಖವಾಗಿದೆ. ಈ ಕಾರಣಕ್ಕೆ ಪುರಾಣಗಳನ್ನು ಕೇವಲ ಕತೆ ಪುರಾಣವೆಂದು ಗ್ರಹಿಸದೆ ವೈಜ್ಞಾನಿಕ ಅಂಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶ.

ಹಾಲುಮತ ಪುರಾಣಗಳಲ್ಲಿ ಬರುವ ಎಲ್ಲಾ ವ್ಯಕ್ತಿಗಳು ಜನಪದರ ಸಾಹಿತ್ಯದಲ್ಲಿ ಅವತಾರ ಪುರುಷರಾಗಿ ಚಿತ್ರಣಗೊಂಡಿದ್ದಾರೆ. ಈ ರೀತಿಯಾಗಿ ಜನಪದರು ಯಾಕೆ ಕಲ್ಪನಾತೀತದಲ್ಲಿ ಸೇರಿಸಿದರು ಎಂಬ ಯಕ್ಷ ಪ್ರಶ್ನೆಯು ಮೂಡುವುದು ಸಹಜ. ಮನುಷ್ಯನಿಗೆ ಒಳಿತನ್ನು ನೇರವಾಗಿ ಹೇಳಿದರೆ ಅರಗಿಸಿಕೊಳ್ಳುವುದಕ್ಕೆ ಆಗದು. ಈ ಕಾರಣಕ್ಕೆ ಜನಪದರು ಮೌಖಿಕ ಸಾಹಿತ್ಯದಲ್ಲಿ ಕಲ್ಪನಾ, ವಾಸ್ತವತೆಯ ಚರಿತ್ರೆಯ ಸತ್ಯವನ್ನು ಅಡಗಿಸಿರುವುದು ತಿಳಿದು ಬರುತ್ತದೆ.

### i. ರೇವಣಸಿದ್ಧ

ಹಾಲುಮತದ ಪುರಾಣಗಳಲ್ಲಿ ರೇವಣಸಿದ್ಧರ ಪಾತ್ರವು ತುಂಬಾ ಮುಖ್ಯವಾದುದು. ಕೈಲಾಸದಲ್ಲಿ (ಶಿವನ ಪರಿವಾರದ ಸಭೆ) ದಿಕ್ಪಾಲಕರು, ಭಾರದ್ವಾಜ, ಭೃಗು, ಕಶ್ಯಪ, ವಶಿಷ್ಠ ಮೊದಲಾದ ಮುನಿವರರಿಂದ, ಗುಹಗಣಪ, ರುದ್ರ, ಭೈರವರೆಂಬ ಗಣಗಳ ಮಧ್ಯೆ ಶಿವನು ಭೃಂಗಿಯ ನಾಟ್ಯವನ್ನು ಸಂತಸದಿಂದ ನೋಡುತ್ತಿರುತ್ತಾರೆ. ಆಗ ಆ ಸಭೆಗೆ "ರೇಣುಕಭರದೊಳ್ಳೆ ತಂದು ದಾರುಕನ ದಾಂಟವಲ್ಕವಂ ಮನದೊಳತಿ ಮರುಗಿಕೊಂಡ"[೫೫] ನಡಿಗೆಯ ವೇಗದಲ್ಲಿ ರೇಣುಕನು ದಾರುಕನನ್ನು ದಾಟುತ್ತಾನೆ. ಇದರಿಂದ ರೇಣುಕನಿಗೆ ಭೂಲೋಕದಲ್ಲಿ ನರಜನ್ಮ ಪ್ರಾಪ್ತವಾಗುವುದು. ಯಾರು ಶಿವಭಕ್ತನನ್ನು ನಿಂದಿಸುವರೋ ಅವರು ಶಾಪಯುಕ್ತರಾಗಿ ನರಜನ್ಮ ಹೊಂದುವರೆಂದು ತಿಳಿಸುತ್ತದೆ. ಇದು ಕೇವಲ ರೇಣುಕನಿಗೆ ಮಾತ್ರ ಕೊಡುವ ಶಿಕ್ಷೆಯಲ್ಲ. ಪ್ರತಿಯೊಬ್ಬರಿಗೂ ಇದೇ ರೀತಿ ಧರ್ಮವು ಕಠಿಣ ಶಿಕ್ಷೆಯನ್ನು ನೀಡುತ್ತದೆಂದು ಜನರು ಗಾಢವಾಗಿ ನಂಬಿದ್ದರು. ಅದಕ್ಕೆ ಸಂಸ್ಕೃತಿಯ ಪ್ರತಿಯೊಂದು ವಾಕ್ಯವನ್ನು ಪರಿಪಾಲಿಸುವರು.

"ಕೊಲ್ಲಿಪಾಕಿಯ ಪುರದಿ ಸೋಮೇಶ್ವರಾಲಯ
ದೊಳೆಲ್ಲ ಭಕ್ತರು ಸೋಮವಾರದಿ ಹರನ ಭಜಿ
ಸಲಲ್ಲಿ ಲಿಂಗದೊಳು ಘನರವದಿಂದಲಂಕರಿಸುತತಿವೆಳಗುವೆಚ್ಚುತಾಗ
ಮೆಲ್ಲ ಮೆಲ್ಲನೆ ಲಿಂಗ ಬಿರಿಯೆ ನೆಲವದಿರಲಾಗ
ಮೆಲ್ಲಕುಣಿದಾಡೆ ರವಿಶಶಿದಿಕ್ಪಲೆಗಳು ಮನ
ತಲ್ಲಣಿಸಿದರು ಜಲಧಿಕದಲಹಿಪನ ಪಡೆಯುತಗಿದುದು ತಕ್ಷಣದಲಿ"[೭]

ಇಲ್ಲಿ ರೇವಣಸಿದ್ಧರು ನರಜನ್ಮವನ್ನು ಸಾಮನ್ಯರ ರೀತಿಯಲ್ಲಿ ಪಡೆಯದೆ ಉದ್ಭವ ಮಾನವನಾಗಿ ಕಾಣಿಸಿಕೊಳ್ಳುತ್ತಾರೆ. ನಂತರ ಕಾಂಚೀಪುರದ ಚೋಳನೃಪನು ವಿಷ್ಣು ಪ್ರತಿಮೆಗೆ ಹದಿನಾರು ಬಗೆಯಲ್ಲಿ ಪೂಜೆ ಮಾಡುತ್ತಿರುವಾಗ ಆ ಪ್ರತಿಮೆ ಅಲ್ಲಾಡುತ ನಿಂತಿರುತ್ತದೆ. ಅದಕ್ಕೆ ಭೂಪತಿಯು ಪಿಣ್ಣಾಂಕ ಸಿದ್ಧಗಿರಿ ಚಾಪನೋರ ಸೂನು(ಮಗ) ಮರುಳೇಶನು ದೀಪರಿಮ ನಾಮದಿಂದ ಉತ್ತರಕ್ಕೆ ನಡೆದನು. ಮತ್ತೆ ಮತಿಯ ಶಾಪಕ್ಕೆ ಗುರಿಯಾಗಿ ಮಾಸನೂರಿನ ಅಕ್ಷಯಾತ್ಮಕನ ದೇವಾಲಯದ ಮುಂದಿನ ಭಾಗದಲ್ಲಿನ ವೃಕ್ಷದಲ್ಲಿ ನಿದ್ರಿಸುತ್ತಿರುವ ಕುಣಿಗಳನ್ನು ಯಕ್ಷ ಮಿಥನವು ಭಕ್ಷಿಸುತ್ತಿತ್ತು. ಅವುಗಳನ್ನು ಕೊಂದು ಸಿದ್ಧೇಂದ್ರನು "ಕೊಲ್ಲಿಕಮ್ಮಾರನಿಂ ತಕ್ಷಣದಿ ಸುರಗಿ ಮೇಣ್ ಕರಕಠಾರಿಗಳೆಂಬುಭಯ ಪೆಸರಿನ"[೭] ಆಯುಧಗಳನ್ನು ಮಾಡಿಸಿ ಒಂದನ್ನು ಮಾಸನೂರು ಎಂಬೂರಿನ ದೊಡ್ಡಮಡುವಿನಲ್ಲಿ ಜೋಪಾನವಾಗಿಟ್ಟು, ಮತ್ತೆ ಅವುಗಳನ್ನು ಆಕಾಶಕ್ಕೆ ನೆಗೆದು ಅಲ್ಲಿಂದ ಉಜ್ಜೈನಿಗೆ ತರುತ್ತಾನೆ. ಅಲ್ಲದೆ ಆಯುಧಗಳನ್ನು ವಿಕ್ರಮಾರ್ಕಗೆ ಕೊಟ್ಟು ರಾಜಾಚರಣೆಯಿಂದಿರಲೂ ಉಪದೇಶಿಸುತ್ತಾನೆ. ಅಂದರೆ

ಹಾಲುಮತದವರು ರಾಜಕೀಯ ವ್ಯಾಪ್ತಿಯನ್ನು ಹೊಂದಿದ್ದರೆಂದು ತಿಳಿಸುತ್ತದೆ. ರೇವಣಸಿದ್ಧರಿಂದ ಅನೇಕ ವೃತ್ತಿ ಜಾತಿಗಳು ಹುಟ್ಟುತ್ತವೆಂದು ಹಾಲುಮತ ಪುರಾಣದಲ್ಲಿ ತಿಳಿದುಬರುವುದು. ಶಾಂತಮುತ್ತಯ್ಯನ ಮಕ್ಕಳು ಹನ್ನೆರಡು ವರ್ಷ ಕಂಬಿ ಹಾಲನ್ನು ಜನತೆಗೆ ಕೊಟ್ಟಿದ್ದಕ್ಕೆ 'ಸಿದ್ಧಿಸಲಿ ನೀನಂದ ನುಡಿಗಳವನಿಯೊಳೆಂದು'[೯೮] ಹಾರೈಸುತ್ತಾ ಶಿವನ ಸದ್ಭಕ್ತಿಯನ್ನು ಪಡೆಯಲು ಶಿವನ ಸುಲೀಲೆಗಳನ್ನು ವಿಸ್ತರಿಸಿ ಹೇಳಿ ಲಿಂಗದೀಕ್ಷೆಯನ್ನು ಪಡೆಯುವಂತೆ ಮಾಡುತ್ತಾನೆ.

ಶಾಂತಮುತ್ತಯ್ಯನಿಗೆ ಹಾಲುಮತದ ಬೆಳವಣಿಗೆಯ ಮಾರ್ಗ ಸೂಚಿಸುತ್ತಾನೆ. ನಂತರ ಬಿಜ್ಜಳನಲ್ಲಿಗೆ ಬಂದು ಸ್ವರವೆತ್ತಿ ದೇಹಿ ಎಂದು ಕೂಗುತ್ತಾನೆ. ಅದಕ್ಕೆ ಬಿಜ್ಜಳನು "ದೇಹಿಯಂದುಜ್ಜುಗಿಸಲರಸನವನಂ ಕಂಡು ಕಪಟದಿಂ ಸುಡುವಾನ್ನ ನೀಡಿಸಲ್ಕೆ"[೯೯] ರೇವಣಸಿದ್ಧರು ಆ ಎಂಜಲಿನ ಕೈಗಳಿಂದ ಅರಮನೆಯ ಕಂಬಿಗಳನ್ನು ಹಿಡಿಯುತ್ತಾರೆ. ಆಗ ಬೆಂಕಿಯಿಂದ ಆ ಕಂಬಗಳು ಉರಿಯುತ್ತವೆ. ಭೂಪತಿಯು ಬೆರಗಾಗಿ ಕ್ಷಮೆಯಾಚಿಸಿದ ನಂತರ ರೇವಣಸಿದ್ಧರು ಬೆಂಕಿಯನ್ನು ನಂದಿಸುವರು. ಅಲ್ಲದೆ ಪಡಿಯಕ್ಕಿಯಿಂದ ಪಾಕ ತಯಾರಿಸಿ ಅಪರಮಿತ ಸೇನೆಗೆ ಉಣಬಡಿಸುವರು. ಇಲ್ಲಿಂದ ಮುಂದೆ ರೇವಣರು ಕೋಲಾಪುರಕ್ಕೆ ಬರುತ್ತಾರೆ. ಅಲ್ಲಿದ್ದ ಸಿದ್ಧರನ್ನು ಜೈಯಿಸಿ ಗೋವುಗಳನ್ನು ರಕ್ಷಣೆ ಮಾಡುವರು. ಕುಟಿಲಸಿದ್ಧರು ಭಿಕ್ಷೆಗೆ ಬಂದ ರೇವಣಸಿದ್ಧರಿಗೆ ಕಠಾರಿಯಿಂದ ಇರಿಯುತ್ತಾರೆ. ಆಗ ಅದು ಮೆಲ್ಲನೆ ಕರುಗುತ್ತದೆ. ಇದನ್ನು ಕಂಡು ಸಿದ್ಧರು ಆಶ್ಚರ್ಯ ಪಡುವರು. ನಂತರ ರೇವಣರು ಕೊಲ್ಲಾಪುರ ಮಹಾಲಕ್ಷ್ಮಿಯ ಸನ್ನಿಧಿಗೆ ಹೋಗಿ ಬಂದರೆ ಗೋರಕ್ಷಗಳನ್ನು ರಕ್ಷಿಸುವುದಾಗಿ ಹೇಳಿದನು.

ಇತ್ತ ಬಿಜ್ಜಳನು ಮಾಸನೂರಿನ ಮಡುವಿನೊಳಿದ್ದ ಅತ್ಯುತ್ತಮ ಸುರಗಿಯಿದೆಂದು ಗೂಡಾಚಾರಗಳಿಂದ ತಿಳಿದುಕೊಳ್ಳುವನು. ಅದನ್ನು ಹೊರ ತೆಗೆಯಲು ಬಿಜ್ಜಳನು ಹನ್ನೆರಡು ಸಾವಿರ ವಧುಗಳನ್ನು ತಂದು ಬಲಿಯನ್ನು ಕೊಡಲು ಸಿದ್ಧನಾಗಿದ್ದನು. ಆಗ ರೇವಣರು ಬಂದು ಆ ಅಬಲೆಯರನ್ನು ಸೆರೆಯಿಂದ ಬಿಡಿಸಿದನು. ಇದರ ಉಪಕಾರಕ್ಕೆ ಬಿಜ್ಜಳನ ಮಗಳನ್ನು ವಿವಾಹವಾದನು. ಚೋಳ ಭೂಪನ ಸುತೆಯು ಗರ್ಭವತಿಯಾಗಿರುತ್ತಾಳೆ. ಮಣ್ಣಿನ ಕೆಲಸವನ್ನು ಮಾಡಲಾರದೆ ಬೇಸರದಿಂದ ಕುಳಿತಿರುತ್ತಾಳೆ. ಆಕೆಯನ್ನು ಕಂಡು ರೇವಣರು

"ಕರದಿಂದ ಗರ್ಭವಂ ತಂದು ಪಿಂಡವ ತೆಗೆದು
ತರುಣಿಗಪ್ಪಣೆಯನಿತ್ತಾ ಮೂರು ತಿಂಗಳದ
ವರಪಿಂಡಮಂ ಕೆರೆಯ ತಟದೊಳಗೆ ಹೂಳಿಟ್ಟು ಕೆಲಸಕನುವಾದ"[೧೦೦]

ಇಲ್ಲಿ ರೇವಣರು ಸಂಸಾರವನ್ನು ಹೊಂದಿದ್ದನ್ನು ತಿಳಿಸುತ್ತದೆ. ಆರು ತಿಂಗಳ ಬಳಿಕ ಕೆರೆಯನ್ನು

ಮುಗಿಸಿ ಧರಣಿಯಲ್ಲಿ ಅಡಗಿಟ್ಟ ಪಿಂಡವನ್ನು ತೆಗಿಸಿದಾಗ ರೇವಣಸಿದ್ಧರ ಪ್ರತಿರೂಪವೆಂಬಂತೆ ಆ ಶಿಶು ಜನರನ್ನು ಬೆರಗಾಗಿಸುತ್ತದೆ. ಈ ಶಿಶುವಿಗೆ ರುದ್ರಮುನಿಯೆಂದು ನಾಮಕರಣ ಮಾಡಿ ಮತ್ತೊಬ್ಬ ಸತಿಯಾದ ಬಿಜ್ಜಳನ ಕುವರಿಗೆ ಒಪ್ಪಿಸಿ "ವೀರಶೈವ ದೀಕ್ಷೆಯನಿತ್ತು ತತ್ವಮರ ತಿಳಿಸಿ ಮತ್ತಲಂದ ಸತಿಸುತರನು ಸಂತೈಸಿದನು"[೧೦೧] ಹೀಗೆ ರೇವಣಾರು ಚೋಳಭೂಪನ ಸುತೆಯ ಪಿಂಡವನ್ನು ಮಗುವಾಗಿಸಿ ಬಿಜ್ಜಳ ಸೂತೆಯ ಮಗನಾಗಿ ಮಾಡುವುದು ಎರಡು ದೇಶಗಳ ಸಾಮರಸ್ಯದ ಸಂಕೇತವಾಗಿರಬಹುದು. ಅಲ್ಲದೇ ರೇವಣರು ಹಾಲುಮತದ ಆರಾಧ್ಯ ದೇವ. ಈತನು ರಾಜರಲ್ಲಿ ಕೇಂದ್ರಿಕೃತವಾಗಿದ್ದ ಶೈವ ಪಂಥವನ್ನು ಆ ಪುತ್ರಿಯರನ್ನು ವಿವಾಹ ಮಾಡಿಕೊಳ್ಳುವುದರ ಮೂಲಕ ಶೈವೀಕರಣಗೊಂಡು ವೀರಶೈವ ಪಂಥಕ್ಕೆ ಬದಲಾಗುವ ಸೂಕ್ಷ್ಮತೆಯನ್ನು ಗಮನಿಸಬಹುದು. ಇದರಿಂದ ಬಹುತೇಕ ಕೆಳಸಮುದಾಯಗಳು ಮೇಲಸ್ಥರದ ಸಮುದಾಯಗಳ ಜೊತೆ ಲೀನವಾಗುವ ಸನ್ನಿವೇಶ ಬಹಳ ಸ್ಪಷ್ಟವಾಗಿ ಕಂಡುಬರುತ್ತದೆ.

ಆ ರಕ್ಕಸನನ್ನು ಮೂರು ಭಾಗ ಸೀಳಿಬರುವ ಶಾಂತಮುತ್ತಯ್ಯನಿಗೆ ರೇವಣರು "ಮೂರಡಿಯ ಕಂತೆಯನ್ನು ಮಾಡಿ ತಾರತಮ್ಯದಿ ಧರಿಸೆನಲ್ಕೆಗುರ್ವಾಜ್ಞೆಯಂ"[೧೦೨] ಮೀರದೆ ಶಾಂತಮುತ್ತ ಯ್ಯನು ಪ್ರಸಿದ್ಧಿ ಪಡೆಯಲಿಕ್ಕೆ ಕಾರಣರಾಗುತ್ತಾರೆ.

ಅವತರಿಸಿದ ರೇಣುಕನು ಭೂಮಿಯಲ್ಲಿ ಹಾಲುಮತದವರ ಮುಂದಿನ ಜೀವನಕ್ಕೆ ಭದ್ರಬುನಾದಿಯನ್ನು ಹಾಕಿದರು. ಭದ್ರವಾಗಿ ಭೂಮಿಯಲ್ಲಿ ನೆಲೆ ನಿಲ್ಲುವಂತೆ ರೇವಣಸಿದ್ಧರಾಗಿ ಮಹಿಮೆಯನ್ನು ಪ್ರದೇಶದಿಂದ ಪ್ರದೇಶಕ್ಕೆ ಅರುಹಿ ಸಮಾಜದಲ್ಲಿ ಇಂತಹ ಒಂದು ಸತ್ಕುಲವಿದೆಂದು ತೋರಿಸಿಕೊಟ್ಟಿದ್ದಾರೆ. ಯಾವಾಗ ಸಮಾಜದಲ್ಲಿ ದುರ್ಬಲರು, ಪ್ರಬಲರಿಂದ ರಕ್ಷಣೆ ಮಾಡಿಕೊಳ್ಳಲು ನಿಶಕ್ತರಾಗುವರೋ ಅಂತಹ ಸಂದರ್ಭದಲ್ಲಿ ಈ ರೀತಿಯ ವ್ಯಕ್ತಿಗಳು ಜನಿಸಿ ಮತ್ತೆ ಸಮಾಜವನ್ನು ಸುನೆಲೆಯಲ್ಲಿ ನಡೆಯುವಂತೆ ಮಾಡಿ ಹೋಗುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಇಂತಹ ಕಲ್ಯಾಣ ಕಾರ್ಯಕ್ಕೆ ಕಾನೂನು ಬೇಕಾಗುತ್ತದೆ. ಆದರೆ ಅಂದಿನ ಪರಿಸರದಲ್ಲಿ ಆಯಾ ಸಮುದಾಯದ ಪ್ರಬಲ ವ್ಯಕ್ತಿಗಳೇ ಅವತಾರಗಳನ್ನು ಧರಿಸಿ ಸಮಾಜಕಾರ್ಯವನ್ನು ನಿರ್ವಹಿಸುತ್ತಿದ್ದರೆಂದು ತಿಳಿದುಬರುತ್ತದೆ.

ರೇವಣಸಿದ್ಧರು ಲಿಂಗೋದ್ಭವರಾಗಿ ಜನಿಸಿದ್ದರಿಂದ ವೀರಶೈವ ಪಂಥದವರಾಗಲಿ ಇನ್ನೂ ಉಳಿದ ಶೈವ ಪಂಥದವರಾಗಲಿ ಆಯಾ ಪಂಥದ ಮೂಲ ಪುರುಷನೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಹಾಲುಮತದ ಪುರಾಣಗಳಲ್ಲಿ ರೇವಣಸಿದ್ಧರು ಯಾಕೆ ಲಿಂಗೋದ್ಭವದಿಂದ ಜನಿಸಿದರೆಂದು ತಿಳಿಸಿಕೊಡುತ್ತದೆ. ಪ್ರಾಣಿಗಳನ್ನು ಕಾಯಲು ದಂಡ, ಲಾಕುಳ, ಕಠಾರಿ ಸಮೇತವಾಗಿ, ರುದ್ರಾಕ್ಷಿ,

ವಿಭೂತಿ ಧರಿಸಿಕೊಂಡು ಅವತರಿಸಿರುತ್ತಾರೆ. ಅಂದರೆ ಪ್ರಾಣಿಗಳನ್ನು ಕಾಯುವ ಮೊದಲ ಮತವೆಂದರೆ "ಹಾಲುಮತ"ವೇ ಎಂದು ರೇವಣಸಿದ್ಧರು ಹಾಲುಮತದವರ ಪರಮಗುರುವೆಂದು ಖಚಿತವಾಗಿ ತಿಳಿಸಿಕೊಡುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಶರಣರ ಕಲ್ಯಾಣ ಕ್ರಾಂತಿಯ ಪ್ರಭಾವದಿಂದ ಬೇರೆ ಬೇರೆ ಜಾತಿ, ಮತ, ಸಂಪ್ರದಾಯಗಳ ಜನರು ವೀರಶೈವರಾದರು. ಇಷ್ಟಲಿಂಗಧಾರಣೆಯ ಸ್ವತಂತ್ರವಿದ್ದರಿಂದ ವೀರಶೈವ ಧರ್ಮ ವಿಶಾಲ ವ್ಯಾಪ್ತಿಯನ್ನು ಪಡೆಯಿತು. ಮಾನವನಿಗೆ ಎಲ್ಲಿ ಜೀವನದ ಸೌಲಭ್ಯಗಳು ಸರಳವಾಗಿ ಒದಗುತ್ತವೋ ಅಲ್ಲಿಗೆ ಪಲಾಯನ ಮಾಡುವ ಮನೋಭಾವವಿದೆ. ಹಾಗಾಗಿ ವೀರಶೈವಕ್ಕೆ ಅನೇಕರು ಮತಾಂತರ ಹೊಂದಿರುವುದು ಕಂಡುಬರುತ್ತದೆ.

ರೇವಣಸಿದ್ಧರು ವೀರಶೈವದವರಲ್ಲ ಎನ್ನುವುದಕ್ಕೆ ಕೆಲವು ಶಾಸನಗಳು ಆಕರ ಒದಗಿಸುತ್ತವೆ. ಕಪಟರಾಳ ಕೃಷ್ಣರಾಯನು ಶಿರಿವಾಳ ಶಾಸನದಲ್ಲಿ ಉಕ್ತನಾದ ರೇವಣಸಿದ್ಧರ ಕುರಿತು "ರೇವಣನೂ ಅವನ ತಂದೆ ಶಾಂತಿಮಯ್ಯ ಆಗಿನ ಕಾಲದಲ್ಲಿ ಶೈವಮತದವರಾಗಿದ್ದರು. ಆ ಕಾಲದಲ್ಲಿ ಶೈವ ಮತವೆಂದರೆ ಕರ್ನಾಟಕದಲ್ಲಿ ಲಾಕುಳ ಶೈವಮತವು ಪ್ರಬಲವಾಗಿತ್ತೆಂದೂ ಎಲ್ಲರಿಗೂ ಸಮ್ಮತವಾದ ವಿಷಯ, ಉಕ್ತ ಶಾಸನದ ರೇವಣನ ವರ್ಣನೆಯಿಂದ ಅವನು ಲಾಕುಳ ಶೈವನಾಗಿದ್ದನೆಂದು ಊಹಿಸಬಹುದು."[೧೦೩] ಎಂದು ಅಭಿಪ್ರಾಯಪಡುತ್ತಾರೆ.

ವಚನಯುಗಕ್ಕಿಂತ ಮುಂಚೆಯೇ ಶೈವಪಂಥವು ಭಾರತದೇಶದಲ್ಲಿ ಅಲ್ಲಲ್ಲಿ ಬೆಳೆದಿತ್ತು. ಕಾಶ್ಮೀರ, ತಮಿಳು ದೇಶದಲ್ಲಿ ಕಾಳಾಮುಖರು, ಲಕುಲೀಶರು, ಪಾಶುಪತರು ಮೊದಲಾದ ವಿಶಿಷ್ಟ ಶೈವರು ನೆಲೆಗೊಂಡಿದ್ದರೆಂದು ಅನೇಕ ಗ್ರಂಥಗಳಿಂದ, ಶಾಸನಗಳಿಂದ ಇತಿಹಾಸದಿಂದಲೂ ತಿಳಿದುಬರುತ್ತದೆ. ಇಂತಹ ಪಂಥಗಳಲ್ಲಿ ಕೆಲವರು ಮಾತ್ರ ವೀರಶೈವಕ್ಕೆ ಹೋಗಿರಬಹುದು. ಹಾಗೆಯೇ ಇತ್ತ ಸಿದ್ಧಮಂಕ ಚರಿತೆಯಲ್ಲಿ ಸಿದ್ಧರಾಮ ಪ್ರಮುಖರಾದರು, ರೇವಣರ ಸ್ಮರಣೆಯು ಕಂಡು ಬಂದಿದೆ. ಸಿದ್ಧರಾಮನ, ಸಿದ್ಧಮಂಕನ ಪರಮಗುರುವಾಗಿಯು ಕಂಡುಬರುತ್ತಾರೆ. ಹನ್ನೆರಡು ಸಾವಿರ ಕನ್ನೆಯರ ಭಿಕ್ಷೆ ಬೇಡಿಬಂದ ರೇವಣಸಿದ್ಧರು ಸೊನ್ನಲಿಗೆಯಲ್ಲಿ ಪಾದುಕೆಗಳನ್ನು ಕಳಚಿ, ಭೂಮಿಗೆ ನಮಸ್ಕರಿಸಿ ಇದು ತೀರ್ಥ ಕ್ಷೇತ್ರವೆಂದು ಭಾವಿಸುತ್ತಾರೆ. "ಈ ಸ್ಥಳವು ಲಿಂಗದ ಬೀಡು, ಮುಕ್ತಿಯ ಕ್ಷೇತ್ರ, ಇದು ಧರ್ಮದಾದಿ ಸೊನ್ನಲಿಗೆ"[೧೦೪] ಎಂದು ನಮಸ್ಕರಿಸುತ್ತಾನೆ. ಇಲ್ಲಿ ಸಹ ರೇವಣರು ಮೂಲ ವ್ಯಕ್ತಿಯಾಗಿ ಕಥೆಯ ಪೂರ್ವಸಿದ್ಧತೆಯನ್ನು ಮಾಡುತ್ತಾರೆ. ಅಂದರೆ ಹಾಲುಮತದವರ ಮೂಲಗುರು ರೇವಣರೆಂದು ಖಚಿತಪಡಿಸುತ್ತದೆ.

ಹೀಗೆ ರೇವಣಸಿದ್ಧರ ಕೃಪೆಯಲ್ಲಿ ಬೆಳೆದ ಹಾಲುಮತವು ಸಮಾಜದಲ್ಲಿ ಹೇಗೆ ನಿರ್ವಚನಗೊಂಡಿದೆ ಎಂದು ಗುರುರೇವಣರು ವೀಕ್ಷಿಸಲು ಭಿಕ್ಷೆಗೆ ಹೊರಡುವರು. ಈತನು ತಿಂಗಳ ಕೊನೆಯಲ್ಲಿ ಸೋಮವಾರ ಹಾಲಿನ ಭಿಕ್ಷೆಗೆ ಹೊರಡುವನು. ಅಂದರೆ ಈ ಸನ್ನಿವೇಶ ತಿಂಗಳ ಪೂರ್ತಿ ಆದ ಕೆಲಸವನ್ನು

ಕೊನೆಯಲ್ಲಿ ಕೂಡಿಸುವ ಲೆಕ್ಕಚಾರದಂತೆ ಕಂಡುಬರುವುದು. ಸಮುದಾಯದ ಬೆಳವಣಿಗೆಗೆ ಕಾರಣರಾದ ರೇವಣರು ಸಂಸ್ಕೃತಿಯನ್ನು ಪರೀಕ್ಷೆಗೆಂದು ಭಿಕ್ಷಯಾಟನೆ ಕೈಗೊಂಡಂತೆ ಕಾಣುವುದು. ಹಾಲುಮತ ಸಮುದಾಯದ ಸಂರಕ್ಷಕರಾಗಿಯು ಕಂಡುಬರುತ್ತಾರೆ. ಈತನ ಭಿಕ್ಷೆಯಾಟನೆಯೂ ತಮ್ಮ ಸಮುದಾಯಕ್ಕೆ ಮಾತ್ರ ಪರೀಕ್ಷೆ ಒಳಪಡಿಸಿದೆ, ಸಮಾಜದ ಎಲ್ಲ ಸಮುದಾಯಗಳ ಒಬ್ಬೊಬ್ಬರ ಮನೆಗೆ ಹೋಗಿ ಪರಿಶೀಲಿಸುವನು. ಮೊದಲು ಹಾರೂರ ಗುಂಡವ್ವನ ಮನೆಗೆ ಭಿಕ್ಷೆಗೆ ಹೋದರೆ ಆಕೆಯು ಹೀಗೆ ಹೇಳುವಳು. "ಕಡಿಯಾದ ಆಗಿನಿ ಮಡಿಯಾ ಉಟ್ಟನಿ ಮುಂದಿನ ಮನೆಯೊಂದು ಆಗಲೆ"[೧೦೫] ಮಹಿಳೆಯು ಪ್ರಕೃತಿಯ ನಿಯಮದಂತೆ ಮುಟ್ಟು ಆಗುವುದು ಸಹಜ. ಇದನ್ನೇ ಕಾರಣ ಮಾಡಿಕೊಂಡು ಭಿಕ್ಷೆ ನೀಡದಿರುವುದು ಎಷ್ಟು ಸರಿ. ಆದರೆ ಈ ರೀತಿಯಾಗಿ ಸಮಾಜವೇ ಆಕೆಯನ್ನು ಬೆಳೆಯುವಂತೆ ಮಾಡಿ ಮಡಿ-ಮೈಲಿಗೆಯೆಂದು ನಿಷೇಧವನ್ನು ಹಾಕಿದೆ. ಸ್ತ್ರೀಯು ಮುಟ್ಟಾದಾಗ ಭಿಕ್ಷೆಯನ್ನು ಹಾಕಬಾರದು. ಹಾಕಿದರೆ ಪಾಪ ಸುತ್ತಿಕೊಳ್ಳುತ್ತೆ, ಮಕ್ಕಳು ಆಗುವುದಿಲ್ಲವೆಂದು ನಂಬಿಕೆಯು ಗಾಢವಾಗಿದೆ. ಇಂದಿಗೂ ಈ ನಂಬಿಕೆಯನ್ನು ಜನರು ಕಾಯ್ದುಕೊಂಡು ಬಂದಿರುವುದು ವಿಷಾಧನೀಯ.

ಇತ್ತ ರೇವಣಸಿದ್ಧರು ರಡ್ಡೇರ ನೀಲವ್ವನ ಮನೆಗೆ ಭಿಕ್ಷೆಗೆ ಬರುತ್ತಾರೆ. ನೀಲವ್ವಳು ಚರಗಿ ಹಿಡಿದು ಹಾಲು ಕರೆಯಲು ಹೋಗುತ್ತಿರುತ್ತಾಳೆ. ಹಾಗಾಗಿ ಆಕೆ ಚರಗಿ ಕೈಯೋಳ ಹಿಡಿದೀನಿ ಕೈವೊಂದು ಖಾಲಿ ಇಲ್ಲ ಎಂದು ನುಡಿದಾಕ್ಷಣವೇ ಅದೇ ರೀತಿಯಾಗಲೆಂದು ಶಪಿಸಿ ಹೋಗುತ್ತಾರೆ. ಹೀಗಾಗಿ ರಡ್ಡೇರ ಮನೆಯಲ್ಲಿ ದನಕರುಗಳಿಗಿಂತ ಎಮ್ಮೆಗಳನ್ನು ಸಾಕುತ್ತಾರೆ. ಆಕಳು-ಹಸುವನ್ನು ಸಾಕಿದರೆ ವೃದ್ಧಿಯಾಗುವುದಿಲ್ಲ ಎಂದು ರೆಡ್ಡಿ ಜನರು ಹೇಳುವುದು ಕಂಡುಬರುತ್ತದೆ. ಇನ್ನೂ ಹಾಲುಮತದವರಲ್ಲಿ ಎಷ್ಟೋ ಜನರು ಎಮ್ಮೆಯನ್ನು ಸಾಕುವುದಿಲ್ಲ. ಕಾರಣವೆಂದರೆ ಮನೆತನದಲ್ಲಿ ಸಾಕುವ ನಡಾವಳಿ ಇಲ್ಲ, ಅವು ದಕ್ಕುವುದಿಲ್ಲವೆಂದು ತಿಳಿದುಬರುತ್ತದೆ. ಹೀಗೆ ರೇವಣಸಿದ್ಧರ ಶಾಪ ಮತ್ತೊಂದು ಕಾಲಕ್ಕೆ ನಂಬಿಕೆಯಾಗಿ ಮನೆತನದಿಂದ ಮನೆತನಕ್ಕೆ ಪರಿವರ್ತನೆ ಹೊಂದಿದೆ.

ತಗರ ಪವಾಡದಲ್ಲಿ ರೇವಣಸಿದ್ಧರು ಶಾಂತಮುತ್ತಯ್ಯನ ಗುರುವಾಗಿ ಕುರುಬರ ಪರಮಗುರುವಾಗಿ ಚಿತ್ರಣಗೊಂಡಿದ್ದಾರೆ. ಈ ಕೃತಿಯಲ್ಲಿ ರೇವಣಸಿದ್ಧರು ಮಾರ್ಗದರ್ಶನ ಮಾಡುವ ವ್ಯಕ್ತಿಯಾಗಿದ್ದಾನೆ. ಶಾಂತಯ್ಯನ ಪವಾಡಗಳಿಗೆ ಆಧಾರಸ್ತಂಭವಾಗಿ ನಿಲ್ಲುತ್ತಾನೆ.

"ಘನಗುರು ರೇವಣ್ಣನಡಿಯ ಪೂಜಿಪೆನೆಂದು
ಸುರಗಿ ಸಂಪಗೆ ಒಪ್ಪುತಿಹವು
ಅಪ್ಪ ಶಿವನ ಪಾದವನು ಪೂಜಿಪೆನೆಂದು
ಅಡಿಕೆ ಹೊಂಬಾಳೆ ಒಪ್ಪಿಹವು"[೧೦೬]

ಅಲ್ಲದೆ ಭೂಲೋಕದಲ್ಲಿ ಕೊಲ್ಲಾಪುರದಲ್ಲಿ ಮಾಯೆಯನ್ನು ಮೋಹಿಸಲು ಹೋಗಿ, ಅವಳು ಕೊಡುವ ವಿಷವ ಕುಡಿದು ಬದುಕಿದ ನವಕೋಟಿಸಿದ್ಧರು ಅವಳ ಮನೆಗೆ ನೀರು ಹೊರುವ ಸೇವಕರಾಗಿದ್ದಾರೆ ಎಂದು ನಾರದನ ಮಾತಿಗೆ ಶಿವನು ರೇವಣಸಿದ್ಧನ ಹೆಸರಿನಿಂದ ಕೊಲ್ಲಾಪುರದಲ್ಲಿ ಅವತರಿಸುತ್ತಾನೆ. ಹಾಗೂ ಮಾಯೆ ಕೊಟ್ಟ ಎಲ್ಲಾ ಕೊಡಗಳಲ್ಲಿರುವ ವಿಷವನ್ನು ಕುಡಿದು ಆಕೆಯ ಗರ್ವವನ್ನು ಅಳಿಸುತ್ತಾನೆ. ನಂತರ ಅವಳ ಸೇವಕರಾಗಿದ್ದ ಸಿದ್ಧರನ್ನು ಕುರಿಗಳಾಗಿ ಮಾಡುವನು. ದೇವರ ಹರಕೆಗೆ ಬಲಿಪಶುವಾಗಿರಿ ಎಂದು ಅವರಿಗೆ ಶಾಪವಿತ್ತನು. ಹೀಗೆ ಕುರಿಗಳನ್ನು ದೇವತೆಗಳ ಸರತ್ತಿನ ನಂತರ ರೇವಣರು ಕಾದು ತೊಗರೆಸೆ ಗ್ರಾಮದ ಆದಿಗೊಂಡನಿಗೆ ಕೊಟ್ಟು ಹೋಗುತ್ತಾರೆ.

ರೇವಣಸಿದ್ಧರು ಹಾಲುಮತೋತ್ತಜಕದಲ್ಲಿ ಶಾಪಗ್ರಸ್ತರಾಗಿ ನರಜನ್ಮ ಪಡೆದು ಭೂಮಿಯಲ್ಲಿನ ಸಮಸ್ಯೆ ಬಗೆಹರಿಸಿದರೆ, ತಗರ ಪವಾಡವು ನೇರವಾಗಿ ಶಿವನ ಕಳೆಯೆ ರೇವಣರಾಗಿ ಜನ್ಮ ಪಡೆಯುತ್ತಾರೆ. ಹಾಲುಮತೋತ್ತಜಕದಲ್ಲಿ ಮೂರೇಣಿನ ಕಂತೆಯನ್ನು ರೇವಣರು ಶಾಂತಮುತ್ತಯ್ಯನಿಗೆ ನೀಡಿದರೆ ತಗರ ಪವಾಡದಲ್ಲಿ ಬಸವಣ್ಣನವರು ಮೂರೇಣಿನ ಕಂತೆಯನ್ನು ಶಾಂತಯ್ಯನಿಗೆ ನೀಡುತ್ತಾರೆ. ಅಂದರೆ ೧೨ನೇ ಶತಮಾನದಲ್ಲಿದ್ದ ವೀರಶೈವ ಧರ್ಮಕ್ಕೆ ಹಾಲುಮತದವರು ಪರಿವರ್ತನೆಗೊಂಡಿರುವುದನ್ನು ತಗರ ಪವಾಡಕ್ಕೆ ಪರೋಕ್ಷವಾಗಿ ರೇವಣಸಿದ್ಧರು ಅಗೋಚರವಾಗಿಯೇ ಆರ್ಶೀವಾದ ನೀಡಿದ್ದಾರೆ. ಮುಂಚೆಯೇ ತಗರ ಪವಾಡ ಕಲ್ಯಾಣದಲ್ಲಿ ನಡೆಯುತ್ತದೆಂದು ಹೇಳಿರುತ್ತಾರೆ. ಶಾಂತಮುತ್ತಯ್ಯ ಸಂಪ್ರದಾಯಕ್ಕೆ ರೇವಣಸಿದ್ಧರು ಪ್ರಾಧಾನ್ಯತೆಯನ್ನು ತಂದುಕೊಟ್ಟರು. ಸಮಾಜದಲ್ಲಿನ ತಮ್ಮ ಅಸ್ಮಿತೆಯನ್ನು ಯಾವ ರೀತಿಯಲ್ಲಿ ಕಾಪಾಡಿಕೊಳ್ಳಬೇಕೆಂದು ರೇವಣರು ಸೂಕ್ಷ್ಮವಾಗಿ ಶಾಂತಮುತ್ತಯ್ಯನಿಂದ ಹೇಳಿಸುತ್ತಾರೆ. ಹೀಗೆ ರೇವಣಸಿದ್ಧರು ಅವತಾರ ಪುರುಷನಾಗಿಯೂ ಕುರುಬರ ಪರಮಗುರುವಾಗಿ ಸಧರ್ಮದಲ್ಲಿ ನಡೆಯುವಂತೆ ಬೋಧನೆ ಮಾಡಿದುದು ಕಂಡುಬರುತ್ತದೆ. ಕುರಿಗಳು ಹೇಗೆ ಜನಿಸಿದವು, ಅದರಿಂದ ಹೇಗೆ ಉಣ್ಣೆಯನ್ನು ಕತ್ತರಿಸಬೇಕು, ವ್ಯಾಪಾರ ಹೇಗೆ ನಿರ್ವಹಿಸಬೇಕೆಂದು ಸಂಸ್ಕೃತಿಯ ವಕ್ತಾರರಾಗಿ, ಆರ್ಥಿಕಾಭಿವೃದ್ಧಿಯ ಚಿಂತಕರಾಗಿಯೂ ಚಿತ್ರಣಗೊಂಡಿದ್ದಾರೆ.

ನಂತರ ಕುರುಬರ ಸಿದ್ಧವ್ವನ ಮನೆಗೆ ಬಂದರೆ "ಆಕೆಯು ಸರ್ವಕುಲದ ಹಿರಿಯಾ ಬಾ ನನ್ನ ಗುರು ರೇವಣಸಿದ್ಧನೆ ಬಾ"[೧೦೭] ಎಂದು ಕರೆಯುತ್ತಾಳೆ. ಆಗ ಸಿದ್ದವ್ವ ಮನೆಯನ್ನು ಸಾರಿಸಿ, ಮನ ಮೀಸಲು ಹಾಕಿ, ಮಡಿಯುಟ್ಟು ಕುಂಕುಮ ಧರಿಸಿ, ಹಲ್ಲಿಗೆ ಜಾಜೇಲಿ ಹಚ್ಚಿಕೊಂಡು ಚರಗಿಯಲ್ಲಿ ಹಾಲು ಕರೆದು ತಂದು ಕುಡಿಯಲು ಕೊಡುತ್ತಾಳೆ. ಇದ್ದರಿಂದ ಸಂತೃಪ್ತನಾದ ರೇವಣಸಿದ್ಧರು

"ನನಗೆ ಭಿಕ್ಷೆ ಕೊಟ್ಟರೆ ದೊಡ್ಡಿಯೂ ದೊಡ್ಡದಾಗಲೀ
ಒಂದಕೆರಡನಾಗಲೀ ಎರಡಕೆ ಹತ್ತನಾಗಲೀ

ಎರಡಕ ಹತ್ತನಾಗಲೀ ಹತ್ತಕ ಸಾವಿರವಾಗಲೀ

ಹಾಲದಾನಿವರ ಹಟ್ಟಾಗ ಮಜ್ಜಿಗೆ ದಾನಿವರ ಮನಿಯಾಗ

ಹಸುವಿಗೆ ಹಾಲ ಹಾಕ್ಯಾರೆ ಸಿಸುವಿಗೆ ಬೆಣ್ಣೊಂದು ಇಟ್ಟಾರೆ.

ಬಂಜಿ ತೊಟ್ಟಿಲು ಕಟ್ಟಲಿ ಬಾಣತಿ ಜೋಗಳ ಹಾಡಲೆ"[೧೦೮]

ಈ ರೀತಿಯಾಗಿ ಸಿದ್ದವ್ವನ ಕರ್ತವ್ಯಕ್ಕೆ ದನಗಳ ದೊಡ್ಡಿಯು ಹಿರಿದಾಗುವುದು, ಯಾವಾಗಲೂ ಹೈನು ಮನೆಯಲ್ಲಿ ಸಂಪದ್ಭರಿತವಾಗಿರುತ್ತದೆ. ಹಾಲು ಸಿದ್ಧವ್ವನ ಮನೆತನಕ್ಕೆ ಬೆಳಕಾಗಿ ಪ್ರತಿನಿಧಿಸುತ್ತದೆ. ಭಿಕ್ಷೆಯ ಸನ್ನಿವೇಶವು ಬೇರೆ ಸಮುದಾಯಕ್ಕಿಂತ ಹಾಲುಮತದ ಸಮುದಾಯ ನಿರ್ಮಲತೆಯನ್ನು ತೋರಿಸಲು ಕೈಗೊಂಡಿರುವರು.

ನಂತರ ಮಡಿವಾಳನ ಮನೆಗೆ ಹೋಗಿ ಕಂತೆ ಭಿಕ್ಷೆ ಬೇಡುತ್ತಾನೆ. ಆಗ ಮಡಿವಾಳನ ಮಡದಿ ನೀಲಮ್ಮ ಮರ ತುಂಬ ಮುತ್ತುರತ್ನ, ಜೋಳ ತಂದರು. ತೆಗೆದುಕೊಳ್ಳುವ ದಿನ ಆಗ ರೇವಣರು ಈ ರೀತಿಯ ಭಿಕ್ಷೆ ಬೇಡುವರು.

"ಹನ್ನೆರಡು ವರ್ಷಿನ ಕಂತೇನ ಗಂಜಿ ಮಾಡಲಿಬೇಕಯ್ಯ

ಇಪ್ಪತ್ತು ವರ್ಷಿನ ಕಂತೇನ ಗಂಜಿ ಮಾಡಲಿಬೇಕಯ್ಯ"[೧೦೯]

ಈ ಭಿಕ್ಷೆಯು ಬೆಡಗಿನ ವಚನದಂತೆ ಅರ್ಥಗರ್ಭಿತವಾಗಿದೆ. ಹನ್ನೆರಡು ವರ್ಷ ಕಂತೆ ತಂದರು ಒಪ್ಪುವುದಿಲ್ಲ. ಕಂತೆಯನ್ನು ಮಾಡುವಾಗ ಸುಣ್ಣ ಬೀಳಿಸಬಾರದು, ಭಟ್ಟಿ ಹಾಕಬಾರದು, ಉರಿಯನ್ನು ಕಟ್ಟಿಗೆಯಿಂದ ಹಚ್ಚಬಾರದು, ಹರಿಯುವ ನೀರು, ಸಾಬುನುನಿಂದ ತೊಳೆಯಬಾರದು, ಬಂಡೆಗೆ ಬಡಿಯಲಾರದ, ಕೈಯಲ್ಲಿ ಹಿಂಡಲಾರದಂತ ಕಂತೆ ಬೇಡುತ್ತಾರೆ. ಮಡಿವಾಳನು ಒಪ್ಪಿಕೊಂಡು ವಾರದ ನಂತರ ಬರುವುದಾಗಿ ಹೇಳಿ ಹೋಗುತ್ತಾರೆ. ಮಡಿವಾಳನ ಮುಖದಲ್ಲಿ ಕಳೆ ಕುಂದಿರುವುದನ್ನು ಕಂಡು ಮಡದಿ ನೀಲಮ್ಮ ಕಾರಣವೇನೆಂದು ಕೇಳುತ್ತಾರೆ. ಜಂಗಮ/ರೇವಣಸಿದ್ಧರ ಭಿಕ್ಷೆಯ ಬಯಕೆಯನ್ನು ಮಡದಿಗೆ ತಿಳಿಸುತ್ತಾನೆ. ಆಗ ನೀಲಮ್ಮ ಆಲೋಚಿಸಿ ಪತಿ ಮಡಿವಾಳನಿಗೆ ಈ ರೀತಿಯಾಗಿ

"ಎತ್ತಿ ಹಾಕಲಿ ಬೇಕಪ್ಪ ನನ್ನ ಕುತ್ತಗಿ ಕೊಯಲಿಬೇಕಲ್ಲ

ಒಂದಾ ತೆಲಿಯಾ ಎರಡ ಮಲಿಯಾ ಹೂಡ ಬಲಿಯಾ ಮಾಡಯ್ಯ

ಕಯ್ಯಾ ಕಾಲ ಕಡದ ನೀರು ಉರುವ ಕಟಗಿ ಮಾಡಯ್ಯ

ಉರುವ ಕಟಗಿ ಮಾಡೇ ನೀನು ಮೈಯಾ ಮ್ಯಾಲೀನ ಕೂದಲ

ಮೈಯಾ ಮ್ಯಾಲಿನ ಕೂದಲಕೊಂದು ಕಡ್ಡಿ ಮಾಡಲಿಬೇಕಯ್ಯ

ಕುತ್ತಿಗಿ ಕೊಯ್ದು ರಕ್ತನೆ ಅಳಿಯಾ ನೀರ ಮಾಡಯ್ಯ
ಅಂಗೈ ಬಂಡಿ ಮಾಡೋ ನೀನು ಮುಂಗೈ ಹಿಂಡಲಿ ಬೇಕಯ್ಯ
ತೆಲಿಯಾ ಮಿದುಡ ತಗದ ನೀನು ಹಚ್ಚು ಸಾಬನ ಮಾಡಲ್ಲ
ಹೂಡಾ ಬಲಿಯಾ ಮ್ಯಾಲೇನ ಡೊಕ್ಕಿ ಹಿಡಿಯುಬೇಕಯ್ಯ"[೧೧೦]

ಹೀಗೆ ಮಡದಿ ನೀಲಮ್ಮ ಮಡಿವಾಳನಿಗೆ ತನ್ನ ದೇಹವನ್ನೇ ಕಂತೆ ತಯಾರಿಸಲು ಉಪಯೋಗಿಸೆಂದು ಹೇಳುತ್ತಾಳೆ. ಜನ್ಮಕ್ಕಿಂತ ಭಿಕ್ಷೆಯನ್ನು ನೀಡುವುದು ಶ್ರೇಷ್ಠವೆಂದು ಮಡಿವಾಳನು ಕ್ರಮತಪ್ಪದೆ ಕಂತೆಯನ್ನು ತಯಾರಿಸಿ ಗಳಿಗೆ ಮಾಡಿ ಇಟ್ಟಿರುತ್ತಾನೆ. ಇತ್ತ ಕಡೆಯ ಸೋಮವಾರ ಬಂದ ರೇವಣರು ಮಡಿವಾಳನಿಗೆ ದಂಪತಿಗಳು ಸೇರಿ ಭಿಕ್ಷೆ ನೀಡಲು ಹೇಳುತ್ತಾನೆ. ಆದರೆ ಮಡಿವಾಳ ಮದುವೆಯಾಗಿಲ್ಲವೆಂದು ಸುಳ್ಳು ಹೇಳುತ್ತಾನೆ. ಆಗ ರೇವಣಸಿದ್ಧರು ಗಳಿಗೆಯನ್ನು ದೇವರ ಕೋಣೆಯಲ್ಲಿಟ್ಟು ಮಡದಿಯನ್ನು ಕೂಗಲು ಹೇಳುತ್ತಾನೆ. ಮಡಿವಾಳ ಜಗಲಿ ಮೇಲೆಯಿಟ್ಟು ಮಡದಿ ನೀಲಮ್ಮನನ್ನು ಕರೆದಾಗ ಆಕೆಯು ವಾರ ಹೊರಗಿನಿಂದ ಓ ಎಂದು ಧ್ವನಿಕೊಡುವಳು. ಹೀಗೆ ಮಡಿವಾಳ, ಮಡದಿ ನೀಲಮ್ಮ ಸೇರಿ "ಕಂತೆಯ ಭಿಕ್ಷೆ"[೧೧೧]ಯನ್ನು ರೇವಣರಿಗೆ ಅರ್ಪಿಸುತ್ತಾರೆ. ಇದಕ್ಕೆ ಪ್ರತಿಯಾಗಿ ರೇವಣರು ವರ ಕೇಳಲು ಹೇಳಿದಾಗ ಮಡಿವಾಳ ದಂಪತಿಗಳು ಸ್ವಾರ್ಥರಾಗದೆ ಹರಿಯುವ ನೀರು, ಕಣದಲ್ಲಿ ಜೋಳ, ಮನಿಗೊಂದು ರೊಟ್ಟಿ ತಪ್ಪದೆ ಸಿಗಲೆಂದು ಬೇಡುವರು. ರೇವಣಸಿದ್ಧರ ಆಶೀರ್ವಚನದಂತೆ ಹಾಲುಮತದವರ ಶುಭಕಾರ್ಯಕ್ಕೆ ಮಡಿವಾಳರು ಬೇಕೆ ಬೇಕು. ದೇವರನ್ನು ಕರೆತರುವಾಗ ನಡೆಮಡಿಯನ್ನು ಹಾಸಲಿಕ್ಕೆ ಬೇಕು. ಇವರೇ ತಮ್ಮಲ್ಲಿನ ವಸ್ತ್ರವನ್ನು ತಂದು ದೇವರಿಗೆ ನಡೆಮಡಿ ಹಾಸುವ ಪದ್ಧತಿಯೂ ತುಂಬ ವಿಶಿಷ್ಟವಾಗಿ ನಡೆಯುತ್ತದೆ. ಇದನ್ನು ಮಾಡುವ ಮಡಿವಾಳರು ಈ ಕೆಲಸ ಕೀಳೆಂದು ಭಾವಿಸದೆ, ದುಡ್ಡನ್ನು ಆಸೆ ಪಡೆದೆ, ನಿಸ್ವಾರ್ಥ ಸೇವೆಯನ್ನು ಮಾಡುವುದು ಕಂಡುಬರುತ್ತದೆ. ಇವರ ಕೆಲಸಕ್ಕೆ ಪ್ರತಿಫಲವಾಗಿ ಹಾಲುಮತದವರು ವರ್ಷಕ್ಕೆ ಇಂತಿಷ್ಟು ಭತ್ತ, ಬೆಲ್ಲವನ್ನು ಕೊಡುವ ಪದ್ಧತಿಯಿದೆ. ಆದರೆ ಆಧುನಿಕತೆಯ ಸೊಗಿನಲ್ಲಿ ಈ ರೀತಿಯ ಆಚರಣೆಗಳು ಕಣ್ಮರೆಯಾಗುತ್ತಿವೆ. ಜೊತೆಗೆ ವಸ್ತ್ರ ಹಾಸುವ ಕೆಲಸ ಕೀಳು ಎಂದು ಭಾವಿಸಿದ್ದಾರೆ. ಹಳ್ಳಿಗಳಲ್ಲಿ ಇದರ ಚಹರೆಯನ್ನು ಉಳಿಸಿಕೊಂಡು ಬಂದಿರುವುದು ಸ್ವಾಗತರ್ಹವಾದುದು.

ರೇವಣಸಿದ್ಧರು ಒಂದು ಪುರಾಣದಲ್ಲಿ ವಕ್ತಾರರಾಗಿ, ಸಂರಕ್ಷಣಕರರಾಗಿ, ಪರೀಕ್ಷಕರಾಗಿ ಚಿತ್ರಣಗೊಂಡರೆ ಮತ್ತೊಂದೆಡೆ ಸಂಪೂರ್ಣ ಸಮುದಾಯದ ಕರ್ತವ್ಯದ ಹೊಣೆಯನ್ನು ಹೊತ್ತ ವ್ಯಕ್ತಿಯಾಗಿ ಕಂಡುಬರುತ್ತಾರೆ. ಚನ್ನಬಸವ ಕವಿಯ ಹಾಲುಮತ ಪುರಾಣದಲ್ಲಿ ರೇವಣರು ೧೧೦ಲನೇ ಜಗದ್ಗುರು ಲಿಂಗಾವತಾರಿಗಳಾಗಿ ಉದ್ಭವಿಸುತ್ತಾರೆ. ಹಾಗೂ ಶಾಂತಮುತ್ತಯ್ಯನಿಗೆ ಲಿಂಗ ದೀಕ್ಷೆಯನ್ನು ದಯಪಾಲಿಸುತ್ತಾರೆ.

ಇಲ್ಲಿ ಬರುವ ಪ್ರತಿಯೊಂದು ಪಾತ್ರಗಳಿಗೂ ಬೆಂಗಾಲವಾಗಿ ನಿಲ್ಲುತ್ತಾರೆ. ಜೊತೆಗೆ ಕುರುಬರನ್ನು ವೀರಶೈವ ಧರ್ಮಕ್ಕೆ ಸೇರಿಸುವ ಹುನ್ನಾರ ಕಂಡುಬರುತ್ತದೆ. ರೇವಣಸಿದ್ಧರು ಭಿಕ್ಷೆಯನ್ನು ಕೈಗೊಂಡಿದ್ದರಿಂದ ಹಾಲುಮತದವರಲ್ಲಿ ಕೆಲವರು ಇದನ್ನು ವೃತ್ತಿಯಾಗಿಸಿಕೊಂಡಿದ್ದಾರೆ ಹಾಗೂ ಕಾಡುಸಿದ್ಧರು ಭಿಕ್ಷಾಟನೆಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಕಾಡುಸಿದ್ಧರು ಎಂಬ ಜನಾಂಗವೂ ಸಹ ಕುರುಬರು ಒಂದು ಪಂಗಡವೆಂದು ರೇವಣಸಿದ್ಧರ ಭಿಕ್ಷೆಯಾಟನೆಯ ಸನ್ನಿವೇಶದಿಂದ ತಿಳಿದುಬರುತ್ತದೆ. ಗುರುವಿನ ಮಾರ್ಗವನ್ನೇ ಅನುಸರಿಸಿದ ಇವರು ಚರಾಸ್ತಿಯನ್ನು ಹೊಂದಿದ, ಕುರಿಗಳನ್ನು ಕಾಯದೆ, ವ್ಯವಸಾಯವನ್ನು ಮಾಡದೇ ಭಿಕ್ಷೆಯನ್ನು ವೃತ್ತಿಯಾಗಿಸಿಕೊಂಡಿದ್ದಾರೆ.

ರೇವಣಸಿದ್ಧ ಮತ್ತು ಶಾಂತಮುತ್ತಯ್ಯರು ಶಿವಾಲಯಗಳ ಸಂದರ್ಶನಕ್ಕೆ ಹೊರಟಾಗ ದೈತ್ಯರಾದ ಮಂಡಾಸುರು ಅಡ್ಡಿಪಡಿಸುತ್ತಾನೆ. ದೈತ್ಯನನ್ನು ಕೊಂದು ಶಾಂತಯ್ಯನು ಗುರುವಿನಿಂದ ಮೂರುಡಿಯ ಕಂತೆಯನ್ನು ಪಡೆಯುತ್ತಾನೆ. ಈ ಮೂರುಡಿನ ಕಂತೆಯೂ ಸಾಹಸದ ಪ್ರತೀಕವಾಗಿ ದೊರೆಯುವ ಉಡುಗೊರೆಯಾಗಿತ್ತು ಎಂದು ತಿಳಿದುಬರುತ್ತದೆ. ಈ ದೈತ್ಯರೆ ಕುಟಿಲವೆಸಗಿದಕ್ಕೆ ಜಗತ್ತಿನಲ್ಲಿ ಹಟಮಾರಿಗಳಾಗಿ ಬಾಳಿರಿಯೆಂದು ಗಂಟೆಯನ್ನು ಹಿಡಿದು ನನ್ನ ನಾಮಸ್ಮರಣೆಯಿಂದ ಭಿಕ್ಷೆ ಬೇಡಿ ಕುಟಿಲ ನಟನೆಗಳಿಂದ ವರ್ತಿಸಿ ಅದೇ ನಿಮ್ಮ ವೃತ್ತಿ ಚಟುವಟಿಕೆಯಾಗಲೆಂದು, ಕಾಡಸಿದ್ಧರಾಗಿ ಪ್ರಸಿದ್ಧಿ ಪಡೆಯಿರೆಂದು ಆರ್ಶೀವಾದ ಮಾಡುವರು. ರೇವಣರ ಕೃಪೆಯಿಂದ ದೈತ್ಯರು ಕುರಿಯ ಜನ್ಮದಿಂದ ಪರಾಗಿ ಕಾಡುಸಿದ್ಧರಾಗುವ ಪರಿವರ್ತನೆಯನ್ನು ತಿಳಿಸುತ್ತದೆ. ಹೀಗೆ ಕಾಡಸಿದ್ಧರು ಶಾಪಕ್ಕೆ ತಕ್ಕಂತೆ ಅವರ ವೇಷ-ಭೂಷಣವು ವಿಚಿತ್ರವಾಗಿದ್ದು, ಅವರ ನಟನೆಯೂ ಕುಟಿಲತೆಯಿಂದಿರುವುದು ಕಂಡುಬರುತ್ತದೆ. ಒಂದು ಕಾಲಕ್ಕೆ ಶಾಪವಾಗಿದ್ದ ವರ್ಗ ಶಾಪಕೊಟ್ಟ ವ್ಯಕ್ತಿಯ ಸಮುದಾಯದ ಮತ್ತೊಂದು ಉಪಪಂಗಡವಾಗುವ ಸನ್ನಿವೇಶವನ್ನು ಕಾಣುತ್ತೇವೆ. ಶಾಪಕ್ಕೆ ವಿಶಾಪವನ್ನು ಸೂಚಿಸಿದ್ದಕ್ಕೆ ಆ ವ್ಯಕ್ತಿ ನೀಡಿದ್ದಕ್ಕೆ ಹಾಲುಮತ ಸಮುದಾಯದ ಋಣಕ್ಕಾಗಿ ಅವರಲ್ಲಿ ಸೇರುವ ರೂಢಿಯು ಕಂಡುಬರುತ್ತದೆ.

ಹೀಗೆ ರೇವಣಸಿದ್ಧರ ಅವತಾರವು ಹಾಲುಮತದ ಅಭಿವೃದ್ಧಿಯನ್ನು ಮಾಡುವುದು ಕಂಡುಬರುತ್ತದೆ. ಜನರನ್ನು ಪರೀಕ್ಷೆಗೆ ಒಡ್ಡಿದಾಗ ಸೋತವರು ಈ ಮತಕ್ಕೆ ಸೇವಕರಾಗುವ ಮತ್ತು ಗೆದ್ದವರು ಶ್ರೇಷ್ಠ ರೀತಿಯ ಸ್ಥಾನವನ್ನು ಪಡೆಯುವ ವರ್ಗಕ್ಕೆ ಸೇರುತ್ತಿದ್ದರೆಂದು ತಿಳಿಸಿಕೊಡುತ್ತದೆ. ಒಟ್ಟಾರೆ ತಮ್ಮ ಮತಭಾಂದವರಲ್ಲಿ ಧರ್ಮದ ನೆರಳಲ್ಲಿಯೇ ಬದುಕಬೇಕೆಂದು ಸಂದೇಶ ನೀಡುವ ಪ್ರಮುಖ ವ್ಯಕ್ತಿಯಾಗಿ ಕಂಡುಬರುತ್ತಾರೆ.

### ii. ಪದ್ಮಗೊಂಡ

ಹಾಲುಮತ ಪುರಾಣಗಳಲ್ಲಿ ರೇವಣಸಿದ್ಧರ ನಂತರ ಪದ್ಮಗೊಂಡನು ಅವತಾರ ಪುರುಷನಾಗಿ ಕಂಡುಬರುತ್ತಾನೆ. ಕುರುಬರ ಆದಿಗೊಂಡನ ಆರು ಜನ ಮಕ್ಕಳಲ್ಲಿ ಕೊನೆಯ ಮಗನಾಗಿ ಶಿವನ ತೇಜಸ್ಸು ಪದ್ಮಗೊಂಡನ ರೂಪದಲ್ಲಿ ಜನಿಸುತ್ತದೆ. ಕೆಲ ದಿನಗಳವರೆಗೆ ಪದ್ಮಗೊಂಡ ಮೃಡನಾಗಿ, ಸೋಮಾರಿತನದಿಂದ ಜೀವನ ಸಾಗಿಸುತ್ತಾನೆ. ಈತನು ಹಾಲುಮತ ಪುರಾಣಗಳಲ್ಲಿ ಬೇರೆ ಬೇರೆ ನಾಮಗಳಿಂದ ಪಾತ್ರ ನಿರ್ವಹಿಸುವುದು ಕಂಡುಬರುತ್ತದೆ. 'ಹಾಲುಮತ ಪುರಾಣದಲ್ಲಿ ಪದ್ಮಗೊಂಡನಾಗಿ ಇಬ್ಬರು ಹೆಂಡತಿಯನ್ನು ಪಡೆಯುತ್ತಾನೆ. ಹಿರಿಯವಳು ಕುರುಬರ ಸಿದ್ಧಮ್ಮಳಾದರೆ, ಕಿರಿಯವಳು ರಕ್ಕಸಿಯ ಸಾಕು ಮಗಳು ಚೆನ್ನಮ್ಮ. ಸಿದ್ಧಮ್ಮಳ ಮಕ್ಕಳು ಹತ್ತಿ ಕಂಕಣದವರು. ಚೆನ್ನಮ್ಮ ಮಕ್ಕಳು ಉಣ್ಣೆ ಕಂಕಣದವರೆಂದು ಹೆಸರು ಪಡೆಯುತ್ತಾರೆ.[೧೧೨] ಈತನ ಮಕ್ಕಳು ತೂಗಡ್ಡದ ಬಳಿ ಹಟ್ಟಿ ಹಾಕಿಕೊಂಡು ಸಿದ್ಧಮಂಕನ ತಪಸ್ಸಿಗೆ ಯಾರು ಭಂಗ ಮಾಡದಂತೆ ಕಾಯುವುದು ಕಂಡುಬರುತ್ತದೆ.

ಚನ್ನಬಸವ ಕವಿಯ ಹಾಲುಮತದ ಪುರಾಣದಲ್ಲಿ ಆದಿಗೊಂಡ ಮತ್ತು ಚುಂಚಲೆಯರ ಮಗನಾಗಿ ಶಿವಪದ್ಮನೆಂಬ ಅಭಿದಾನದಿಂದ ಜನಿಸುವನು. ರೇವಣಸಿದ್ಧರು ಚುಂಚಲೆಗೆ ನಿನ್ನ ಗರ್ಭದಲ್ಲಿ ಶಿವಸಂಭೂತನಾದ ಶಿಶುವು ಜನ್ಮ ಪಡೆಯುವುದು. ಅದು ಎಲ್ಲಾ ಸಾಮಾನ್ಯ ಮಕ್ಕಳಂತೆ ಇರದೆ ವಿಶಿಷ್ಟವಾಗಿ ಬೆಳೆಯುವುದೆಂದು ಹೇಳುತ್ತಾರೆ.

"ಪಂಚಶರನ ರೂಪ ಪಂಚವಕ್ತ್ರನ ತೇಜ । ಪಂಚಕರ್ಮಂಗಳ ದೂರ ॥

ಪಂಚವಾಯುಗಳ ಹಂಗಿಲ್ಲದ ಸುಕುಮಾರ । ಮಂಚದೋಳ್ ಪವಡಿಸಿಯಿರಲು ॥[೧೧೩]

ಯಾವ ಕಲ್ಮಶವಿಲ್ಲದೆ ರಕ್ತಸಿಕ್ತಗಳಿಂದ ಬೇರ್ಪಟ್ಟ ಸುಕುಮಾರನಿಗೆ ಜನ್ಮ ನೀಡುತ್ತಾಳೆ. ಈ ಪ್ರಸಂಗವು ಆದಿಪುರಾಣದಲ್ಲಿ ವೃಷಭನಾಥನ ಜನ್ಮದಂತೆ ಅಭಿವ್ಯಕ್ತಿವಾಗಿದೆ. ಚುಂಚಲೆಯ ಕನಸಲ್ಲಿ ಕಂಡದ್ದು ವಾಸ್ತವದಲ್ಲಿಯೇ ಆಗಿರುವ ಘಟನೆ. ಸಾಕ್ಷತ್ ದೇವತೆಗಳೆ ಬಂದು ಶಿಶುವಿಗೆ ಸಿರಿಸುಖ, ಸಂಪತ್ತು, ಹರಸೇವೆ, ಗುರುಸೇವೆ ಎಲ್ಲಾ ಶಾಸ್ತ್ರವಿದ್ಯೆಗಳು ಲಭಿಸಲೆಂದು ಆರ್ಶೀವಾದ ಮಾಡುತ್ತಾರೆ. ಚುಂಚಲೆಯು ಗರ್ಭಧರಿಸಿದರೂ ನೋವು ಅನುಭವಿಸದೆ, ಶಿವಪದ್ಮನು ಅಯೋನಿಜನಾಗಿ ಜನಿಸುವನು. ಈ ಕಲ್ಪನೆಯೂ ಆ ಶಿಶು ಹುಟ್ಟಿನಿಂದಲೇ ಶುದ್ಧತೆಯನ್ನು ಪಡೆದ ನಿರ್ಮಲ ವ್ಯಕ್ತಿಯೆಂದು ವ್ಯಕ್ತಪಡಿಸುತ್ತದೆ. ಹೀಗೆ ಅವತಾರ ಪುರುಷರು ಸ್ತ್ರೀಯ ಗರ್ಭದಲ್ಲಿ ನವಮಾಸ ಕಳೆದರು. ಭೂಲೋಕ ಸ್ಪರ್ಶ ಮಾಡುವುದನ್ನು ವಿಶಿಷ್ಟತೆಯಿಂದ ವರ್ಣಿಸುತ್ತಾರೆ. ಇದ್ದರಿಂದಲೇ ಇವರು ಅವತಾರ ಪುರುಷರಾಗುತ್ತಾರೆ. ನಂತರ ಸಾಮಾನ್ಯರಂತೆಯೇ ನಾಮಕರಣ, ಬಾಲ್ಯ, ಲಿಂಗೋಪದೇಶ ಮತ್ತು ಮದುವೆ ಕಾರ್ಯಗಳು ನಡೆಯುತ್ತವೆ. ಶಿವಪದ್ಮನಿಗೆ ರೇವಣಸಿದ್ಧರು ಜಿಂಕಾದೇವಿಯನ್ನು ಮೊದಲ ಹೆಂಡತಿಯಾಗಿ ವಿವಾಹ

ಮಾಡುತ್ತಾರೆ. ನಂತರ ಶಿವಪದ್ಮನಿಗೆ ಲಿಂಗದೀಕ್ಷೆಯನ್ನು ನೀಡುವರು. ತದನಂತರ ಗುರುವಿನ ಆದೇಶದಂತೆ ಕುರಿಗಳನ್ನು ಕಾಯಲು ಹೊರಡುವನು. ಹಾಗೂ ಶಿವನಿಂದ ವೀರೇಶ ಎಂಬ ಶಿಷ್ಯನನ್ನು ಪಡೆಯುತ್ತಾನೆ. ಕುರಿಗಳನ್ನು ಕಾಯ್ದುಕೊಂಡು ಕಾಡು-ಮೇಡು ಅಲೆಯುತ್ತಿರುವಾಗ ಬಂಕಾಪುರಕ್ಕೆ ಬರುವನು. ಅಲ್ಲಿ ವರಮುನಿಯ ನಿಂದನೆಯಿಂದ ಗಂಧರ್ವರು ಕಾಂಚಲಾಮರವಾಗಿ, ದೈತ್ಯನಾಗಿ, ಮತ್ತೊಬ್ಬ ಕಾಕನಾಗಿ ಜನ್ಮವನ್ನು ಪಡೆಯುತ್ತಾರೆ. ಈ ಶಾಪ ವಿಮೋಚನೆಯು

ಮರದ ಮೇಲಿನ ಕಾಕ ಮರಣವಂ ಪೊಂದಲು । ಮರನುರುಳ್ವದು ರಕ್ಕಸಿಯ ॥
ಹರಣವಳಿವುದಿದು ಶಿವಪದ್ಮನೆಂಬುವ । ಕುರಿಗಾಯ್ವ ಶರಣನಿಂದಹುದು ॥[೧೧೪]

ಈ ರೀತಿಯಾಗಿ ಶಿವಪದ್ಮನು ದೈತ್ಯರ ಸಂಹಾರಕ್ಕಾಗಿ ಬಂಕಾಪುರಕ್ಕೆ ಬರುವುದನ್ನು ತಿಳಿಸುತ್ತದೆ.

"ಮೇಲೆ ವಾಸಿಸುವ ಕಾಕನ ತರಿದರೆ ಮರ । ನೆಲಕುರುಳುವುದಾಗ ನನ್ನ ॥
ಬಲವಡಂಗುತ ಪ್ರಾಣ ಹಾರುವುದಿನಿತಲ್ಲ । ದಿಲ್ಲವೆನಗೆ ಮರಣವನು ॥[೧೧೫]

ಈ ರೀತಿಯಾಗಿ ತಿಳಿದ ಶಿವಪದ್ಮನು ಪರಮಾನ್ನ ಪಾಕವನ್ನು ಮರದಿಯಲ್ಲಿ ಎರಚುತ್ತಾ ಶವರಾಶಿಗಳ ನಡುವೆ ಅಡಗಿಕೊಂಡಿರುತ್ತಾನೆ. ದೈತ್ಯ ಕಾಕನು ಬಂದು ಹೆಣದ ರಾಶಿ ಮೇಲೆ ಕುಳಿತ ತಕ್ಷಣ ಕೊಲ್ಲುವನು. ಹೀಗೆ ಮೂವರು ಗಂಧರ್ವರು ವಿಶಾಪವನ್ನು ಪಡೆಯುತ್ತಾರೆ. ನಂತರ ಅವರ ಗುರುತಿಗಾಗಿ.

"ಧನುಜೆಯ ಶಿರದಿಂದ ಮಾಯಮೂರ್ತಿಯ ಮಾಡಿ। ಧನುಜೆ ಕೈಬೆರಳೆ ಹೆಗ್ಗಾಳಿ ॥
ಕರ್ನಿಕೆ ಕಹಳೆ ಬುರುಗುವ ಪೂರಿಯು ಘನಕ್ಕೊಡೆಯ ಡೊಳ್ಳು ಮಾಡಿ॥[೧೧೬]

ಕುರುಬರಿಗೆ ದೈತ್ಯರಿಂದ ಡೊಳ್ಳು ವಾದ್ಯವನ್ನು ಸಂಕೇತವಾಗಿ ನೀಡಿದ ಸಂಗತಿಯನ್ನು ವಿಶ್ಲೇಷಣೆ ಮಾಡುತ್ತದೆ. ರೇವಣಸಿದ್ಧರು ರಾಕ್ಷಸಿಯ ಸಾಕುಮಗಳಾದ ಚುಮಲಾದೇವಿಯನ್ನು ಶಿವಪದ್ಮನಿಗೆ ವಿವಾಹ ಮಾಡಿಸುತ್ತಾರೆ. ಚುಮಲಾಗೆ ಜನಿಸುವ ಮಗನೆ ರೇಣುಕನೆಂದು ಹೆಸರು ಪಡೆಯುವನು.

ಅಂತರ್‌ಜಾತಿ ವಿವಾಹವನ್ನು ಸ್ವೀಕರಿಸುವ ತಾತ್ತ್ವಿಕ ನೆಲೆಯಲ್ಲಿ ಶಿವಪದ್ಮರ ವಿವಾಹವು ಕಂಡುಬರುವುದು ಉಚಿತವಾಗಿದೆ. ಪರಿವರ್ತನೆಯ ಸಂಕರಶೀಲತೆಯನ್ನು ತಿಳಿಸುತ್ತದೆ. ಪದ್ಮಗೊಂಡನ ವಿವಾಹವೇ ಕುರುಬರಲ್ಲಿ ಎರಡು ಉಪಪಂಗಡಗಳಾದ ಹತ್ತಿಕಂಕಣ, ಉಣ್ಣೆಕಂಕಣಕ್ಕೆ ಕಾರಣವಾದರೆ ಮತ್ತೊಂದಡೆಯಲ್ಲಿ ಎರಡನ್ನು ಸಮ್ಮಿಲನಗೊಳಿಸುವ ವಿಶಿಷ್ಟ ಪಾತ್ರ ನಿರ್ವಹಿಸುವುದು ಕಂಡುಬರುತ್ತದೆ.

ಹಾಲುಮತೋತ್ತೇಜಕ ಪುರಾಣದಲ್ಲಿ ಪದ್ಮಗೊಂಡನು ಶಿವಪದ್ಮನಾಗಿ ಅವತರಿಸಿ, ನಂತರ ಬಾಳಭರಮ-ಸೂರದೇವಿಯರ ಗರ್ಭದಲ್ಲಿ ಶಿವಸಿದ್ಧ ಬೀರೇಶನಾಗಿ ಜನಿಸುವನೆಂದು ತಿಳಿದುಬರುತ್ತದೆ.

ಚುಂಚಲೆಯ ಗರ್ಭದಲ್ಲಿ ಕುಡುವಕ್ಕಲಿಗರ ಮಗನಾಗಿ ಶಿವಪದ್ಮ ಜನಿಸುವನು. ನಂತರ ಶಿವಪದ್ಮನಿಗೆ ಆದಿಗೊಂಡನ ಸಹೋದರಿಯ ಮಗಳಾದ ಜಂಕಾದೇವಿಯನ್ನು ಕೊಟ್ಟು ವಿವಾಹ ಮಾಡಿಸುವನು.

"ಸ್ನಾನವ ಮಾಡಿ ರೇವಣಸಿದ್ಧ ಶಿವನ ಸ
ಧ್ಯಾನದೋಳ್ಕೂತಿರಲ್ಕಾಗ ಪದ್ಮನು ಕಂಡು
ದೀನರಕ್ಷಕ ದೇವಯನನಿಷ್ಟ ಲಿಂಗಮಂ ಧರಿಸಿ ಶಿವಮಂತ್ರವನ್ನು
ಸಾನುರಾಗದಿ ಭೋಧಿಸೆನಲುಗ ಗುರುಸಿದ್ಧ
ಸೂನುವಿನ ನುಡಿಗೆ ತಲೆದೂಗಿ ಸಂಭ್ರಮದಿಂದ
ನ್ಯೂನಮಿಲ್ಲದೇ ಲಿಂಗಧರಿಸಿ ಪಂಚಾಕ್ಷರೀ ಮಂತ್ರಮಂ ಬೋಧಿಸಿದನು"[೧೧೭]

ದೀಕ್ಷೆ ಪಡೆದ ಶಿವಪದ್ಮನು ಕುರಿಯನ್ನು ಕಾಯುತ್ತಾ ಜೀವಿಸುವನು. ನಂತರ ಜಂಕಾದೇವಿಗೆ ಗಂಡುಮಗು ಜನಿಸುವುದು. ರೇವಣಸಿದ್ಧನೆಂದು ಹೆಸರು ಕರೆಯುತ್ತಾರೆ. ಶಿವಪದ್ಮನು ವ್ಯವಸಾಯದಿಂದ ಕುರಿಸಾಕಣೆಯನ್ನು ಕೈಗೊಳ್ಳುವನು. ಆದಿಗೊಂಡನ ಮಕ್ಕಳು ಕೆಲವರು ವ್ಯವಸಾಯ ಮಾಡಿದರೆ, ಶಿವಪದ್ಮ ಮಾತ್ರ ಕುರಿಕಾಯುದನ್ನು ತಿಳಿಸುತ್ತದೆ. ಉಳಿದ ಅಣ್ಣತಮ್ಮಂದಿರು ಶಿವಪದ್ಮನಂತೆ ವಿವರವಾಗಿ ಚರಿತ್ರೆಯನ್ನು ಹೊಂದಿಲ್ಲ. ಶಿವಪದ್ಮನ ವ್ಯಕ್ತಿತ್ವದ ವಿಕಾಸಕ್ಕೆ ನೆರವಿನ ವ್ಯಕ್ತಿಗಳಂತೆ ಕಂಡುಬರುತ್ತಾರೆ. ಹಾಗೂ ಅವರು ವಿರೋಧಿಸಿದಂತೆ ಶಿವಪದ್ಮನು ಪ್ರಖ್ಯಾತಿಯನ್ನು ಹೊಂದುವುದು ಕಂಡುಬರುತ್ತದೆ. ಎಲ್ಲಾ ಪುರಾಣಗಳಲ್ಲಿ ರೇವಣಸಿದ್ಧರೆ ಶಿವಪದ್ಮ/ಪದ್ಮಗೊಂಡನಿಗೆ ಎರಡನೆಯ ವಿವಾಹಕ್ಕೆ ಸಮ್ಮತಿಸುವರು. ಆದರೆ ಈ ಪುರಾಣದಲ್ಲಿ ಚುಮಲೆಯು ಸ್ವಂತ ನಿರ್ಧಾರ ಕೈಗೊಳ್ಳುವ ಪಾತ್ರವಾಗಿ ಬರುತ್ತಾಳೆ. ರಕ್ಕಸಿಯನ್ನು ಕೊಂದು ಆತನ ಜೊತೆ ಬರುತ್ತಾಳೆ. ಅಲ್ಲದೆ ಚುಮಲೆಯು ನೇರವಾಗಿ ಶಿವಪದ್ಮನಿಗೆ ಮದುವೆಯಾಗುವಂತೆ ಹೇಳುವಳು. ಆಗ ಶಿವಪದ್ಮನು

"ವನಿತೆ ಕ್ಕೇಳ್ಕುಲಹೀನಳಾದ ರಕ್ಕಸಿಯ ಬಳಿಯೊ
ಳನವರತ ಬಾಳ್ವ ನಿನ್ನ ವರಿಸಲೆಂತು ಬಿಡು
ಮನದಾಸೆ ಕಳಿ ತೀವ್ರ ಕೊಡುಯನಗನುಜ್ಞೆ ಯಂದೊರೆದಾನಾ ಶಿವಪದ್ಮನು"[೧೧೮]

ಇದಕ್ಕೆ ಪ್ರತಿಯಾಗಿ ಚುಮಲೆಯು ಈಗಾಗಲೇ ಆಗಿಹೋದ ನರರಾಕ್ಷಸರ ವಿವಾಹವನ್ನು ಪ್ರಸ್ತಾಪಿಸುವಳು. ಕೆಸರಿನಲ್ಲಿದ್ದ ಕಮಲವು ನೀರಿನಲ್ಲಿ ಮುಕ್ತಿ ಹೊಂದಿದಂತೆ, ಮಾಂಸದ ನಡುವೆ ಕ್ಷೀರವು ಪವಿತ್ರತೆ ಹೊಂದಿರುವಾಗೆ, ಕಸ್ತೂರಿಯು ಮೃಗದಲ್ಲಿದ್ದರೂ ಮೌಲ್ಯವನ್ನು ಹೊಂದಿದಾಗೆ, ನಿನ್ನ ಜೊತೆಗೆ ವಿವಾಹ ಮಾಡಿಕೊಂಡು ಕುಲಘನತೆಯನ್ನು ನಾನು ಪಡೆಯುತ್ತಾನೆಂದು ತಿಳಿಸುವಳು.

ವಿವಾಹಕ್ಕೆ ಸಂಬಂಧಿಸಿದಂತೆ ರಾಜಮನೆತನಗಳು ಎಷ್ಟೋ ಉರುಳಿ ಹೋಗಿವೆ. ನೂರಾರು ಜನರು ಪ್ರಾಣ ಕಳೆದುಕೊಂಡದ್ದುಂಟು. ಆದರೆ ಹಾಲುಮತ ಸಮುದಾಯವು ಅಂತಹ ವಿವಾಹವನ್ನು

ಸ್ವೀಕರಿಸುವುದು ವಿಶಿಷ್ಟ ಮತ್ತೇ ಸ್ವೀಕರಿಸಿದರು ಅದನ್ನು ಕೆಲವು ಅಂಶಗಳಿಂದ ದೂರವಿಟ್ಟಿರುವುದು ಸತ್ಯವಾಗಿದೆ. ಹಾಗಾಗಿ ಒಂದೇ ಸಮುದಾಯದಲ್ಲಿ ಉಪಪಂಗಡಗಳ ಬೆಳವಣಿಗೆಯೂ ಆಗಿದೆ. ಮುಂದೆ ಇದೇ ಪ್ರತ್ಯೇಕ ಆಚರಣೆ, ಸಂಪ್ರದಾಯವನ್ನು ಹೊಂದುತ್ತವೆ. ಹೀಗೆ ಪದ್ಮಗೊಂಡನು ಪರಜಾತಿಯ ಸ್ತ್ರೀಯನ್ನು ಯಾವುದೇ ತೊಡುರುಗಳಿಲ್ಲದೆ ಸ್ವೀಕರಿಸುತ್ತಾನೆ. ಒಂದು ವೇಳೆ ಸಮಾಜ ಸಮ್ಮಿತಸದಿದ್ದಾರೆ. ತಾನೇ ಆ ಸಮಸ್ಯೆಯನ್ನು ಪಂಗಡವಾಗಿಸುವುದರ ಮೂಲಕ ಸಮರ್ಥವಾಗಿ ನಿರ್ವಹಿಸುವನು. ಮತ್ತೊಂದು ಕಡೆ ಸಂಪೂರ್ಣವಾಗಿ ಬೆಂಬಿಲಸದಿದ್ದರು ಮಾನವೀಯ ಮೌಲ್ಯದಿಂದ ಸಂಸ್ಕೃತಿಯಲ್ಲಿ ಲೀನಗೊಳಿಸುವುದು ಕಂಡುಬರುತ್ತದೆ.

ಶಿವಪದ್ಮನು ದೈತ್ಯರನ್ನು ಕೊಂದು ಅವರ ದೇಹದಿಂದ ಮಾಡಿದ ಬಿರುದಾವಳಿಗಳನ್ನು ಬಂಕಾಪುರದ ಮರದಲ್ಲಿಟ್ಟು ಬಂಕಣ್ಣ ನೇಮಿಸುತ್ತಾನೆ. ಇಲ್ಲಿಗೆ ಶಿವಪದ್ಮನು ರೇವಣರ ಉಪದೇಶದಂತೆ ಕೈಲಾಸ ಹೋಗುವರು. ತದನಂತರ ಚಂಧಗಿರಿ ಅರಸ ನಿಲಂಕಾರ ಮಹಾರಾಜನ ಮಗ ಬರ್ಮದೇವನ ಮುತ್ರನಾಗಿ ಶಿವಸಿದ್ಧ ಬೀರೇಶನೆಂಬ ಅಭಿದಾನದಿಂದ ಭೂಮಿಯಲ್ಲಿ ಅವತರಿಸುವನು. ಇದು ಶಿವಸಿದ್ಧನು ಎರಡನೆಯ ಅವತಾರವಾಗಿದೆ. ಮೊದಲನೆ ಅವತಾರದಲ್ಲಿ ಪದ್ಮಗೊಂಡ ಅಥವಾ ಶಿವಪದ್ಮವಾಗಿ ಹಾಲುಮತದ ಕುಲಕಸುಬಗಳ ಉದ್ಧಾರವನ್ನು ಕಂಬಳಿಯು ಹಾಲುಮತದ ಪವಿತ್ರ ವಸ್ತುವಾಗುವಲ್ಲಿ, ಹಾಗೂ ಕುರುಬರಲ್ಲಿ ಹತ್ತಿಕಂಕಣ, ಉಣ್ಣೆಕಂಕಣಗಳ ವಿಭಾಗಕ್ಕೆ ಕಾರಣ ಮರುಷನಾಗುತ್ತಾನೆ. ಎರಡನೆಯ ಅವತಾರದಲ್ಲಿ ಶಿವಸಿದ್ಧ ಭೀರೇಶನಾಗಿ ಧಾರ್ಮಿಕ ಸ್ವತಂತ್ರ್ಯತೆಯನ್ನು ತಂದುಕೊಟ್ಟ ವ್ಯಕ್ತಿಯಾಗಿ ಬರುವನು.

ಹೀಗೆ ಪದ್ಮಗೊಂಡನು ಅವತಾರ ಮರುಷನಾಗಿ ಜನ್ಮ ಪಡೆದು ಸಮುದಾಯದ ಸಮಸ್ಯೆಗಳನ್ನು ತೀರ್ವಾನಿಸುವ ನ್ಯಾಯಾಪತಿಯಾಗಿ, ವೈಮನಸ್ಸುಗಳು ವೈವಾಹಿಕ ಸಂಬಂಧಿದಿಂದ ಕೊನೆಗೊಳ್ಳುತ್ತವೆಂದು ತಿಳಿಸುತ್ತಾನೆ.

**iii. ಸಿದ್ಧರಾಮ**

ಕುರುಬ ಜನಾಂಗದಲ್ಲಿ ಚಿರಪರಿಚಿತವಾದ ಹೆಸರು ಸಿದ್ಧರಾಮ. ರೇವಣಸಿದ್ಧರ ಚರಿತ್ರೆಗಿಂತ ಸಿದ್ಧರಾಮನ ಚರಿತ್ರೆಯನ್ನು ಎಲ್ಲರೂ ತಿಳಿದುಕೊಂಡಿರುತ್ತಾರೆ. ಏಕೆಂದರೆ ವೀರಶೈವ ಪಂಥವೂ ಸಿದ್ಧರಾಮನ ವ್ಯಕ್ತಿತ್ವದ ಕುರಿತು ಅನೇಕ ಕೃತಿಗಳು, ಮರಾಣಗಳು, ವಚನಗಳನ್ನು ರಚಿಸಿದ್ದಾರೆ. ಹಾಗಾಗಿ ಸಿದ್ಧರಾಮನು ಎಲ್ಲರಿಗೂ ತಿಳಿದಿರುವ ಹತ್ತಿರದ ವ್ಯಕ್ತಿಯಾಗಿದ್ದಾನೆ. ಮರಾಣಗಳಲ್ಲಿ ಸಿದ್ಧರಾಮನ ಬಗ್ಗೆ ತಿಳಿಸುವ ಕೃತಿಯೆಂದರೆ ಸಿದ್ಧಮಂಕ ಚರಿತೆ, ತದನಂತರ ಜನಪದ ಹಾಲುಮತ ಮಹಾಕಾವ್ಯ, ಗೊಲ್ಲಾಳೇಶ್ವರ ಮರಾಣದಲ್ಲಿ ಪ್ರಸ್ತಾಪವು ಕಂಡುಬರುತ್ತದೆ. ರಾಘವಾಂಕನು ಸಿದ್ಧರಾಮನ ಕುರಿತು

'ಸಿದ್ಧರಾಮ ಚರಿತೆ' ಎಂದು ಬರೆದಿದ್ದಾನೆ. ೧೨ನೇ ಶತಮಾನದಲ್ಲಿ ಸಿದ್ಧರಾಮನಿಗೆ ವಿಶಿಷ್ಟ ಸ್ಥಾನವಿತ್ತು. ಅದಕ್ಕಾಗಿ ಅನೇಕ ಕವಿಗಳ ಪುರಾಣ ವಸ್ತುವಾಗಿ ರಚನೆಯಾಗಿದ್ದಾನೆ. ರಾಘವಾಂಕನು ಸಿದ್ಧರಾಮ ಚರಿತೆಯಲ್ಲಿ ಕಾಯಕಯೋಗಿ, ಕರ್ಮಯೋಗಿ ಸಿದ್ಧರಾಮನೆಂದು ಹೇಳುತ್ತಾನೆ. ಪ್ರಭುಲಿಂಗ ಲೀಲೆಯಲ್ಲಿ ಸಿದ್ಧರಾಮನು ಮನೋಧರ್ಮವನ್ನು ಭವದಿಂದ ಬದಲಾಯಿಸಿ ಆಧ್ಯಾತ್ಮಿಕತೆ ಕಡೆಗೆ ಹೊರಳಿಸುವ ವಾಕ್ಚಾತುರ್ಯವನ್ನು ಉಪಯೋಗಿಸಿ ಭಕ್ತಿಯನ್ನು ಉಪದೇಶ ಮಾಡಿದ್ದಾರೆ. ಹೀಗೆ ಕವಿಗಳ ದೃಷ್ಟಿಯಲ್ಲಿ ಧ್ಯೇಯಗಳಿಗನುಗುಣವಾಗಿ ಒಂದೇ ಪಾತ್ರ ಬೇರೆ ಬೇರೆ ರೀತಿಯಲ್ಲಿ ನಿರೂಪಿಸಿದ್ದಾರೆ. ಅದೇ ರೀತಿಯಾಗಿ 'ಸಿದ್ಧಮಂಕ ಚರಿತೆ', 'ಹಾಲುಮತ ಪುರಾಣ' ಕೃತಿಗಳಲ್ಲಿ ಅವತಾರ ಪುರುಷರಾಗಿದ್ದಾರೆ. ಚಾರಿತ್ರಿಕತೆಯನ್ನು ಪಡೆದ ಸಿದ್ಧರಾಮನನ್ನು ಸಾಹಿತ್ಯದಲ್ಲಿ/ಪುರಾಣಗಳಲ್ಲಿ ಅವತಾರ ಪುರುಷನಾಗಿರುವುದು ವಿಶಿಷ್ಟತೆಯನ್ನು ಪಡೆದಿದೆ. ಜನಪದರು ಸಾಮಾನ್ಯ ವ್ಯಕ್ತಿತ್ವವುಳ್ಳವರನ್ನು ಒತ್ತಾಯ ಪೂರ್ವಕವಾಗಿ ಒಪ್ಪುವುದಿಲ್ಲ. ಆದರೆ ಅವರ ಮನಸ್ಸು, ಸಮಾಜ ಎರಡು ನೆಲೆಯಲ್ಲಿಯೂ ಜನಪ್ರಿಯತೆಯನ್ನು ಹೊಂದಿದ್ದಾರೆ ಮಾತ್ರ ಅವತಾರ ಸ್ಥಾನವನ್ನು ಪಡೆಯಲು ಸಾಧ್ಯ. ಆಗಾಗಿ ಸಿದ್ಧಮಂಕ ಚರಿತೆಯಲ್ಲಿ ಸಿದ್ಧರಾಮನು ಸಿದ್ಧಮಂಕನ/ಮರುಳಸಿದ್ಧನ ಪವಾಡ, ಮಹಿಮೆ ಮತ್ತು ಹೋರಾಟಕ್ಕೆ ಬೆಂಗಾವಲಾಗಿರುವನು.

ಸಿದ್ಧರಾಮನು ಪ್ರತ್ಯೇಕ ಪರಂಪರೆಯನ್ನು ಪಡೆದಿದ್ದ. ಅವನ ಪರಂಪರೆಯವರನ್ನು ಮಂಕೊಡೆಯರೆಂದು ಕರೆಯುತ್ತಾರೆ. ಹಾಲುಮತದ ಪುರಾಣಗಳಲ್ಲಿ ಸಿದ್ಧರಾಮ ಒಂದು ಕಡೆ ಕರ್ಮಯೋಗಿಯಾಗಿ ಬಂದರೆ, ಮತ್ತೊಂದು ಕಡೆ ಅನೇಕ ಸಮುದಾಯಗಳಿಂದ ತನ್ನ ಸಮುದಾಯದ ಸಂಕ್ರಮಣತೆಯನ್ನು ವಿರೋಧಿಸುವ ನಾಯಕನಾಗಿದ್ದಾನೆ. "ಕಪಿಲಸಿದ್ಧಮಲ್ಲನ ಮಹಿಮೆಯನೊಸೆದು ಬಣ್ಣಿಪೆನು ಜಗದೊಳು"[೧೧೯] ಕೈಲಾಸದಲ್ಲಿ ಶಾಪಯುಕ್ತವಾಗಿ ಮುದ್ದಗೊಂಡ, ಸುಗ್ಗವ್ವೆರು ನರಜನ್ಮವನ್ನು ಸೊನ್ನಲಾಪುರದಲ್ಲಿ ಪಡೆಯುತ್ತಾರೆ. ಇದರ ಶಾಪವಿಮೋಚನೆಯು ಶಿವನ ಸ್ವರೂಪದಲ್ಲಿನ ಅಂಶವು ಸಿದ್ಧರಾಮನಾಗಿ ಹುಟ್ಟುವುದರಿಂದ ಕಳೆಯುವುದೆಂದು ಶಿವ ಆದೇಶ ನೀಡಿರುತ್ತಾನೆ. ರೇವಣಸಿದ್ಧರು ಮುದ್ದಗೊಂಡ ದಂಪತಿಗಳಿಗೆ ಸಿದ್ಧರಾಮನು ಜನಿಸುವುದಾಗಿ ಹೇಳಿ, ಈತನ ಸ್ಥಳ ಪವಿತ್ರ, ಪ್ರಸಿದ್ಧಿಯನ್ನು ಪಡೆಯುತ್ತದೆಂದು ವಿವರಿಸಿ ಹೇಳುವರು. ಅಂತೆಯೇ ಸಿದ್ಧರಾಮ ಜನಿಸಿ ಶಿವನನ್ನು ಅರಸಿ ಶ್ರೀಶೈಲಕ್ಕೆ ಹೋಗುವನು. ಅಲ್ಲಿ ಮಲ್ಲಯ್ಯನ ದರ್ಶನ ಪಡೆದು ಮತ್ತೇ ಸೊನ್ನಲಿಗೆ ಬರುತ್ತಾನೆ. ಇಲ್ಲಿಂದ ಸಿದ್ಧರಾಮನು ಕರ್ಮಯೋಗಿ ಎನಿಸಿಕೊಳ್ಳುವನು. ಜಂಗಮತ್ವದಿಂದ ಬಳಲಿದ್ದ ಈತನು ಮತ್ತೆ ಸ್ಥಾವರವನ್ನು ಇಷ್ಟಪಡುವುದು ಸಂಕೇತವಾಗಿ ಮೂಡಿದೆ. ವೀರಶೈವ ಪಂಥದಿಂದ ಜಂಗಮತ್ವವನ್ನು ಎಲ್ಲ ವರ್ಗದವರು ಪಡೆದರು. ಇದು ಸಮಾಜದಲ್ಲಿ ಹೊರಗಿರುವ ಅಥವಾ ಶೂದ್ರರಿಗೆ ಸ್ವತಂತ್ರತೆಯನ್ನು ಕೊಡುವಲ್ಲಿ ಯಶಸ್ವಿಯಾಯಿತು. ಆದರೆ ಈಗಾಗಲೇ ಸಿದ್ಧ ಮಾದರಿಯನ್ನು ಅನುಸರಿಸಿದ ಕೆಲ

ವರ್ಗಗಳು ತಮ್ಮ ಕಾರ್ಯವನ್ನು ಹೀನಾವ್ಯವಸ್ಥೆಗೆ ಕಾಣುವಂತೆ ಮಾಡಿತು. ಇದರ ಬಿಸಿಯು ಕುರುಬ ವರ್ಗಕ್ಕೂ ಮುಟ್ಟಿರಬಹುದು. ಇವರು ವೀರಶೈವ ಪಂಥಕ್ಕಿಂತ ಮೊದಲೇ ಜಂಗಮಧಾರಿಯಂತೆ ಬದುಕಿ ಬಾಳಿದ ಸಮುದಾಯ. ಸ್ವತಂತ್ರ ಇಷ್ಟಲಿಂಗವನ್ನು ಹೊಂದುವ ರಭಸದಲ್ಲಿ ತನ್ನ ಬುನಾದಿಯು ನಡುಕವನ್ನು ಅನುಭವಿಸಿರಬಹುದು. ಆ ಕಾರಣಕ್ಕೆ ಸಿದ್ಧರಾಮನು ಅವತಾರವನ್ನು ಪಡೆದು ಸ್ಥಾವರವನ್ನು ನಿರ್ಮಿಸುವುದರ ಜೊತೆಗೆ ಕರ್ಮವೇ ಮುಖ್ಯವೆಂದು ಸಾರುವುದನ್ನು ತಿಳಿಸುತ್ತಾರೆ. ಸಿದ್ಧರಾಮನಿಗೆ ಇಹದಲ್ಲಿ ಧೂಳಿಮಾಕಾಳನೆಂದು ಕರೆಯುತ್ತಿರುತ್ತಾರೆ. ಈತನು ಮೊದಲು ಮೃಡನಂತೆ ಮಾಮರದ ಅಡಿಯಲ್ಲಿ ಶಿವನನ್ನು ಪೂಜೆ ಮಾಡುತ್ತಿರುತ್ತಾನೆ. ನಂತರ ಶ್ರೀಶೈಲಕ್ಕೆ ಹೋಗಿ ಮಲ್ಲಯ್ಯನ ದರ್ಶನದಿಂದ "ಬಲಿದು ಕುಂಡಲ ಕಂಥೆ ಲಾಕುಳಗಳನ್ನು"[೧೨೦] ಪಡೆದು ಸಮಾಜಕಲ್ಯಾಣ ಕಾರ್ಯಕ್ಕೆ ಅಣಿಯಾಗುತ್ತಾನೆ. ಅಲ್ಲದೆ ಗಿರಿಜೆಯು ಭಕ್ತಿಜ್ಞಾನ, ವೈರಾಗ್ಯವನ್ನು, ಉತ್ತಮ ರೀತಿಯಲ್ಲಿ ಬೋಧಿಸು, ಶಿವನ ಮಹಿಮೆಯನ್ನು ನಾಲ್ವತ್ತೆಂಟುಗಾವುದಲ್ಲಿ ಪಸರಿಸೆಂದು ಆದೇಶ ಮಾಡುವಳು. ನಂತರ ಸಿದ್ಧರಾಮನು ನಾನುಮೃತವುಂಡ ಬಾಮಿಗೆ ಜೇನಿಟ್ಟ ಪಾನೀಯವು ಸೊಗಸುವುದೆ ಎಂದು ನಿನ್ನ ಅವತಾರಗಳು ಅಪಾರ ಅವುಗಳನ್ನು ನಾನೊಬ್ಬ ಪ್ರಸಾರ ಮಾಡಲು ಹೇಗೆ ಸಾಧ್ಯವೆಂದು ಸಹ ಅಸಹಾಯಕತೆಯನ್ನು ತೋರಿಸುತ್ತಾನೆ. ಹೀಗೆ ಜಂಗಮವನ್ನು ತೊರೆದು ಸ್ಥಾವರ ಲಿಂಗವನ್ನು ನಿರ್ಮಿಸುವುದು ಕಂಡುಬರುತ್ತದೆ. ಶ್ರೀಶೈಲದಿಂದಲೇ ಮಲ್ಲಯ್ಯನನ್ನು ತಂದು ಸೊನ್ನಲಿಗೆಯಲ್ಲಿ ಸ್ಥಾಪಿಸುವನು.

ಇತ್ತ ಮರುಳಮಂಗನು ಸರವೂರಿನಿಂದಲೇ ಸಿದ್ಧರಾಮನಿಗೆ ಹಾಲು, ಮೊಸರು ನೈವೇಧ್ಯವನ್ನು ಅರ್ಪಿಸುತ್ತಾನೆ. ಆತನ ರಕ್ಷಣೆಗೆ ಸಿದ್ಧರಾಮನು ಹೆಗ್ಗಾಡನನ್ನು ಕಳುಹಿಸುತ್ತಾನೆ. ಮರುಳಮಂಕನು ಸಿದ್ಧರಾಮನನ್ನು ತನ್ನ ಸರುವುರಿಗೆ ಕರೆಯಿಸಿಕೊಂಡು ಕುಲವೈರವನ್ನು, ಕುಲಹೀನತೆಯನ್ನು ಕಳೆಯಲು ಬೇಡುತ್ತಾನೆ. ಅಂತೆಯೇ ಬಿಜ್ಜಳರಾಯನನ್ನು, ಬಸವಣ್ಣ, ಸಿದ್ಧರಾಮರು ಸೇರಿ ಮಂಕ ತಂದೆಯನ್ನು ಕಾವಲು ಕಾಯುತ್ತಿದ್ದ ಹೆಗ್ಗೊಂಡನಿಂದ ಕಂಬಳಿಯನ್ನು ಬಿಜ್ಜಳನಿಗೆ ಕೊಡುಸುತ್ತಾರೆ. ಇದು ಮತ್ತೆ ಕಲ್ಯಾಣದ ಪ್ರವೇಶದ ಸಂಕೇತವಾಗಿ ಮೂಡಿಬಂದಿದೆ.

ಸಿದ್ಧರಾಮನು ಕೆರೆ-ದೇವಾಲಯಗಳ ನಿರ್ಮಾಣವನ್ನು ಕಂಡು ಅಲ್ಲಮಪ್ರಭು ವಿರೋಧಿಸುತ್ತಾರೆ.

> "ಬಾಳಲಾಜಿದೆ ಸತಿಸುತರೊಲು ಭಯದೊಳು
> ಬಾಳಿಕೆಗಳ ಅಲೆಗಳೆದು
> ಕೋಳತಿಹೋದ ವಿಭೂತಿ ಮೂಜೆಗಳಿಂದ
> ಕಾಳ ಕೂಡಿದ ಸಿದ್ಧರಾಮ"[೧೨೧]

ಸಂಸಾರವನ್ನು ಹೊಂದದವರು ಭವದ ಭಯದಿಂದ ವಿಭೂತಿಯನ್ನು ಆಶ್ರಯಿಸಿದ ಕಾಳ ಸಿದ್ಧರಾಮನಿಂದ ನೀವುಗಳು ತಪ್ಪು ಮಾಡುತ್ತಿದ್ದರೆಂದು ಅವನ ಸೇವಕರನ್ನು ಬೈಯುತ್ತಾನೆ. ಹೀಗೆ

ಇವರಿಬ್ಬರಲ್ಲಿ ವಾಗ್ವಾದವುಂಟಾಗಿ ಅಲ್ಲಮನ ಧ್ಯೇಯವನ್ನು ಒಪ್ಪಿಕೊಳ್ಳುವನು. ಹಾಗೂ ಮಂಕತಂದೆಯ ತಪಸ್ಸಿನ ಬಲದಿಂದ ಇಡೀ ಕುರುಬ ಸಮುದಾಯವೇನ್ನೇ ಸಿದ್ಧರಾಮನು "ನಮ್ಮಂತೆ ಮಾಡುವೆ ನಡೆಯೆಂದ."[೨೨] ಇದು ಕಲ್ಯಾಣಕ್ಕೆ ಹೋಗುವುದು, ವಿಭೂತಿಯನ್ನು, ಲಿಂಗದೀಕ್ಷೆಯನ್ನು ಪಡೆಯುವುದು ಕುರುಬರು ವೀರಶೈವ ಪಂಥಕ್ಕೆ ಸೇರುತ್ತಿರುವ ಸೂಕ್ಷ್ಮತೆಯನ್ನು ತಿಳಿಸುತ್ತದೆ. ಮತ್ತು ಸಿದ್ಧರಾಮನು ಕುರುಬಗೌಡರನ್ನು ಕಲ್ಯಾಣದಿಂದ ಹೊರಹಾಕಲು ಕಾರಣ ಇವರು ಲಿಂಗಜಂಗಮಧಾರಿಗಳು, ಅಂಗವೇ ಲಿಂಗವೆಂದು ಪರಿಭಾವಿಸುವ ಶಿವನ ಪರಮಭಕ್ತರೆಂದು, ಅವರಿಗಾದ ಅಪಮಾನ, ಅಗೌರವ, ಸಂಘರ್ಷವನ್ನು ಊರ ಸಮಸ್ತ ಜನರ ಸನ್ನಿಧಿಯಲ್ಲಿ ಪರಿಹರಿಸುವ ವ್ಯಕ್ತಿಯಾಗಿ ಕಂಡುಬರುತ್ತಾರೆ. ಹೀಗೆ ಸಿದ್ಧರಾಮನು ಪರಮಗುರುವಾಗಿ, ಮಂಕ ತಂದೆಯೂ ಗುರುವಾಗಿ ಸಂಪ್ರದಾಯವನ್ನು ಬೆಳೆಸಿದನ್ನು ತಿಳಿಸುತ್ತದೆ.

**iv. ಬೀರಪ್ಪ**

ಹಾಲುಮತ ಸಮುದಾಯದಲ್ಲಿ ಪದ್ಮಗೊಂಡ, ಮಾಳಿಂಗರಾಯ, ರೇವಣಸಿದ್ಧ, ಶಾಂತಮುತ್ತಯ್ಯ ಮುಂತಾದ ಪ್ರಮುಖ ವ್ಯಕ್ತಿಗಳ ಚರಿತ್ರೆಯ ಪಟ್ಟಿಯಲ್ಲಿ ಬೀರಪ್ಪನು ಸಹ ಮುಖ್ಯವಾದವನು. ಹಾಲುಮತ ಪುರಾಣಗಳಲ್ಲಿ ಈತನನ್ನು ರೋಚಕವಾಗಿ ಚಿತ್ರಿಸಿದ್ದಾರೆ. ಈತನು ಅನೇಕ ಪ್ರದೇಶದಲ್ಲಿ ನಾನಾ ರೀತಿಯ ಹೆಸರುಗಳಿಂದ ಕರೆಯಲ್ಪಡುವ ಕುರುಬರ ಪ್ರಮುಖ ದೈವವಾಗಿದ್ದಾನೆ. ಈ ಸಮುದಾಯದಲ್ಲಿ ಈತನನ್ನು ಬೀರಲಿಂಗ, ಬೀರಪ್ಪ, ಬೀರಲಿಂಗೇಶ್ವರ, ಬೀರದೇವರು, ಲಿಂಗಬೀರಣ್ಣ ಎಂದು ಕರೆಯುತ್ತಾರೆ. ಇದೇ ರೀತಿ ಹಾಲುಮತ ಪುರಾಣಗಳಲ್ಲಿ, ಶಾಸನಗಳಲ್ಲಿ ಮತ್ತು ವಚನಗಳಲ್ಲಿಯೂ ಈತನ ಉಲ್ಲೇಖವನ್ನು ನೋಡುತ್ತೇವೆ. ಬೀರಪ್ಪನನ್ನು ಕೆಲವಡೆ ವೀರಯ್ಯ ಎಂಬುದಾಗಿಯೂ ಬಳಸಲಾಗಿದೆ. ಈ ಮೇಲಿನ ವ್ಯಕ್ತಿನಾಮಗಳು ಪ್ರಾದೇಶಿಕತೆಯ ಭಾಷಿಕ ವಿಶಿಷ್ಟತೆಯನ್ನು ಹೊಂದಿವೆ. ತಂದೆಗೆ ಪರ್ಯಾಯವಾಗಿ ಅಯ್ಯ, ಅಣ್ಣ, ಅಪ್ಪ ಎಂದು ಕರೆಯುತ್ತೇವೆ. ಆದೇ ರೀತಿ ಬೀರಲಿಂಗನನ್ನು ವಿಭಿನ್ನ ರೀತಿಯಲ್ಲಿ ಕರೆಯುವುದು ರೂಢಿ. ಹಾಲುಮತ ಪುರಾಣಗಳು, ಶಾಸನಗಳಲ್ಲಿ ಉಲ್ಲೇಖವಿರುವ ಕ್ರಮವಾಗಿ ಲಿಂಗಬೀರಣ್ಣ, ಬೀರದೇವರು ಎಂಬುದು ಇಂದಿನ ಬೀರಪ್ಪನ ಪರ್ಯಾಯ ರೂಪವಾಗಿದೆ. ಸಮುದಾಯಕ್ಕಾಗಿ ಜೀವನವನ್ನು ಮುಡಿಪಾಗಿಟ್ಟ ವ್ಯಕ್ತಿಯನ್ನು ಜನರು ಅವನನ್ನು ಅತಿಮಾನುಷದ ಕಲ್ಪನೆಯಿಂದ ಕಾಣುತ್ತಾರೆ. ಆಗಾಗಿ ಈ ಬೀರಪ್ಪ ವ್ಯಕ್ತಿಯಾಗಿ ಅತಿಮಾನುಷ ತಂತ್ರದಿಂದ ದೇವರಾಗಿ ಸಮಾಜದಲ್ಲಿ ಪ್ರಚಲಿತವಾಗುವುದು ಕಂಡುಬರುತ್ತದೆ. ವಾಸ್ತವದಲ್ಲಿ ಆಗಿಹೋದ ಲಿಂಗಬೀರಣ್ಣನನ್ನು ಜನಪದರು ಪೌರಾಣಿಕ ಪಾತ್ರವಾಗಿಸಿದ್ದು ವಿಷಾದ ಸಂಗತಿಯಾಗಿದೆ. ಈ ದೇವರ ಪಟ್ಟದ ಆರೋಪದ ಮುಖಾಂತರ ಲಿಂಗಬೀರಣ್ಣ ವ್ಯಕ್ತಿಯ ನೆಲೆಯಿಂದ ದೈವತ್ವದ ನೆಲೆಗೆ ಜಾರುವುದನ್ನು ನೋಡಬಹುದು. ಈ ಮೂಲಕ ದೇವತಾ ಮನುಷ್ಯನಾಗಿ

ಸಾಮಾನ್ಯ ವ್ಯಕ್ತಿಗಳು ಸಾಧಿಸಲಾರದ್ದನ್ನು ಈತನು ಸಾಧಿಸುತ್ತಾನೆ. ಹೀಗೆ ಪ್ರತಿಯೊಂದು ಗುಂಪಿನ ದೇವರನ್ನು ವಿವಿಧ ಹೆಸರಲ್ಲಿ ಕರೆಯುವುದು ರೂಢಿಯಾಯಿತು. ಅಲ್ಲದೆ ಬೀರಯ್ಯನನ್ನು ವೀರಶೈವದವರು ವೀರಯ್ಯನಾಗಿಸಿಕೊಳ್ಳುವುದನ್ನು ಸಿದ್ಧಮಂಕ ಚರಿತೆ, ತಗರ ಪವಾಡ, ಹಾಲುಮತ್ತೋತ್ತೇಜಕ ಪುರಾಣಗಳು ತಿಳಿಸುತ್ತವೆ. ಕನ್ನಡ ಭಾಷೆಯಲ್ಲಿ ತತ್ಸಮ-ತದ್ಭವಗಳಾಗಿ ಮಾಡುವ ಹಂತದಲ್ಲಿ 'ಬೀದಿ'-'ವೀದಿ'ಯಾಗುವಂತೆ 'ಬೀರ'ನು 'ವೀರ'ನಾಗಿ ರಚನೆಯಾಗಿರಬಹುದು. ಈ ಎಲ್ಲ ಲಕ್ಷಣದಿಂದ ನೋಡಿದರೆ ವೀರಯ್ಯ ಮತ್ತು ಬೀರಯ್ಯ ದೇವರು ಒಂದೇ ದೇಹದ ಎರಡು ದೇವರುಗಳೆಂದು ಗುರುತಿಸಬಹುದು. ಬೀರಪ್ಪನನ್ನು ಕುಲದೇವರಾಗಿ, ಮನೆ ದೇವರಾಗಿ, ಕುರುಬ ಜನಾಂಗದ ಮೇಲೆ ಸಾಕಷ್ಟು ಪ್ರಭಾವ ಬೀರಿರುವ ಪ್ರಮುಖ ದೇವರು ಇದಾಗಿದೆ. ಇಂದಿನ ಗುಡಿ-ದೇವಾಗಲಯಗಳೇ ಇದಕ್ಕೆ ಸಾಕ್ಷಿ. ಇದರಿಂದ ಕುರುಬರು ತಮ್ಮ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಿಗೆ ವಂಶಪರಂಪರ್ಯವಾಗಿ ಬೀರಪ್ಪನೆಂದು ಹೆಸರು ಇಡುತ್ತಾರೆ.

ಬೀರಪ್ಪನ ಬಗೆಗೆ ಅನೇಕ ಗ್ರಂಥಗಳಲ್ಲಿ ಉಲ್ಲೇಖ ಮಾಡಿದೆ. ಇದರಿಂದ ಬೀರನು ಪ್ರಾಚೀನ ದೇವರಾಗಿ ಮತ್ತು ವ್ಯಕ್ತಿಯಾಗಿರುವುದು ತಿಳಿಸುತ್ತದೆ. ಈತನು ಚಾರಿತ್ರಿಕ ವ್ಯಕ್ತಿಯಾಗಿ, ಶಿವಶರಣನಾಗಿ, ಪವಾಡ ಪುರುಷರಾಗಿ ವ್ಯಕ್ತಿತ್ವವನ್ನು ಅಭಿವ್ಯಕ್ತಪಡಿಸಿದ್ದಾನೆ.

> "ಪಂಡಿತರುಂ ವಿವಿಧಕಳಾ । ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
> ಕಂಡರ್ ಕೇಳ್ವೊಡೆ, ಗೊರವರ । ಡು(ದು)ಂಡುಚಿಯೇ
> ಬೀದಿವರೆಯೇ ಬೀರನಕತೆಯೇ"[೧೬]

ಎಂದು ಮಧುರ ಕವಿಯ ಬೀರನ ಕತೆಯಲ್ಲಿ ಹೇಳಲಾಗುತ್ತದೆ. ಮಧುರ ಕವಿಯು ಸು.೧೪೦೦ರಲ್ಲಿದ್ದ ಕವಿ. ಈತನ ಕಣ್ಣಿಗೆ ಬಿದ್ದ ಬೀರನ ಕಥೆಯು ಕೇಳಲು ಯೋಗ್ಯವಲ್ಲವೆಂದು ತಿಳಿಸುತ್ತದೆ. ಅದೇ ರೀತಿ ೧೨ನೇ ಶತಮಾನದಲ್ಲಿ ಬಸವಣ್ಣನವರು ಕ್ಷುದ್ರದೇವತೆಗಳನ್ನು ತೆಗಳುವ ಸಂದರ್ಭದಲ್ಲಿ ಬೀರನನ್ನು ಪ್ರಸ್ತಾಪಿಸಲಾಗುತ್ತದೆ.

> "ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ, ಕೆರೆ, ಬಾವಿ, ಹೂಗಿಡ ಮರಂಗಳಲ್ಲಿ,
> ಗ್ರಾಮ ಮಧ್ಯಗಳಲ್ಲಿ, ಚೌಪಥ ಪಟ್ಟಣ ಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ
> ಮನೆಯ ಮಾಡಿ, ಕಜ್ಜಿವೆಮ್ಮೆಯ, ಹಸಗೂಸು, ಬಸುಱು, ಬಾಣತಿ
> ಕುಮಾರಿ, ಕೊಡಗೂಸೆಂಬವರ ಹಿಡಿದು ತಿಂಬ, ತಿರುದುಂಬ
> ಮಾರಯ್ಯ, ಬೀರಯ್ಯ, ಕೇಚಗಾಮಿ, ಅಂತರ ಬೆಂತರ
> ಕಾಳಯ್ಯ, ದೊಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ
> ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ?"[೧೭]

ಹೀಗೆ ಉಲ್ಲೇಖಿಸುತ್ತಾ ಬೀರಯ್ಯನು ಕಿರುಕುಳ ಕೊಡುವ ದೇವನಾಗಿದ್ದ ಎಂದು ಹೇಳಲಾಗುತ್ತದೆ. ಈ ಕಿರುಕುಳ ಯಾವ ರೀತಿಯದು ಎಂದು ಸೂಕ್ಷ್ಮವಾಗಿ ಆಲೋಚಿಸಿದ್ದಾರೆ. ಬೀರಯ್ಯನು ತನ್ನ ಸಮುದಾಯವೇ ಶ್ರೇಷ್ಠ ಎಂಬ ಭಾವನೆಯಿಂದ ಇತರ ವರ್ಗಗಳ ಜೊತೆ ಸಂಘರ್ಷವನ್ನು ಮಾಡಿರಬಹುದು. ಏಕೆಂದರೆ ಬಸವಣ್ಣನವರು ೧೨ನೇ ಶತಮಾನದಲ್ಲಿ ಕೆಳವರ್ಗಗಳ ಮತ್ತು ಮಧ್ಯಮ ವರ್ಗಗಳ ಅಸ್ಮಿತೆಯನ್ನು ಕಾಪಾಡಿಕೊಳ್ಳುವುದಕ್ಕೆ ಮುಕ್ತ ಸ್ವತಂತ್ರ್ಯವು ಎಲ್ಲರಿಗೂ ಇದೆ ಎಂದು ತೋರಿಸಿಕೊಟ್ಟಿದ್ದಾರೆ. ಆ ಕಾರಣಗಳು ಬೀರಪ್ಪನು ೧೨ನೇ ಶತಮಾನದಲ್ಲಿದ್ದು ಒಬ್ಬ ಸಾಂಸ್ಕೃತಿಕ ನಾಯಕನೆಂದು ಖಚಿತ ಪಡಿಸುತ್ತದೆ. ಲಿಂಗಬೀರಣ್ಣನ ಜನನವು ರೋಚಕವಾಗಿ ಮೂಡಿಬಂದಿದೆ. ಭರಮ ದೇವರು ಅಥವಾ ಬಾಳಭರಮನ ಬಂಜೆತನವನ್ನು ಹೋಗಲಾಡಿಸಿದ ಮಹಾನ್ ಶಿಶುವಾಗಿ ಜನಿಸುತ್ತಾನೆ. ಈತನ ತಾಯಿಯೇ ಸೂರಮ್ಮದೇವಿ. ಸೋದರ ಮಾವ ಕಾಳಿನಾರಾಯಣ. ಕಾಳಿ ನಾರಾಯಣನ ಕುತಂತ್ರಕ್ಕೆ ಗರ್ಭದಿಂದಲೇ ಎದುರಾಗಿ ನಿಲ್ಲುವ ದಿಟ್ಟ ವೀರನೇ ಈ ಬೀರಲಿಂಗ. ಈತನನ್ನು ತಾಯಿಯಿಂದ ದೂರ ಮಾಡಿ ಅಡವಿ ಪಾಲು ಮಾಡಿದರು. ಮತ್ತೆ ಸಪ್ತ ಮಾತೃಕೆಯರ ಆರೈಕೆಯಲ್ಲಿ ಬೆಳೆದು ಚಿಗುರಿದ ಹಾಲುಮತದ ನಾಯಕ ಈ ಬೀರಲಿಂಗ ಚಿಕ್ಕನಿಂದಲೇ ದೈವದ ಅನುಗ್ರಹಕ್ಕೆ ಪಾತ್ರನಾಗಿರುತ್ತಾನೆ. ಅಲ್ಲದೇ ಈ ಶಿಶು ಸೂರಮ್ಮದೇವಿ ತಪಸ್ಸು ಮಾಡುವುದರ ಮೂಲಕ ಶಿವನಲ್ಲಿ ಮಕ್ಕಳ ಫಲವನ್ನು ಬೇಡುತ್ತಾಳೆ. ಆಗ ಶಿವನು ನಿನ್ನ ಗರ್ಭದಲ್ಲಿ ನಾನೇ ಅವತರಿಸಿ ಬರುವೇನೆಂದು ತಿಳಿಸುತ್ತಾನೆ.

"ಮೂರ ವರ್ಣದವನೇನ ಮೂರ ಹೆಸರಿನವನೇನ
ಹಣಿಯ ಬೆವರನಲ್ಲೇಳ ಹಣಿಯ ಬೆವರನಾದವ
ಪರಮೇಸೂರ ಹಣಿಯ ಬೆವರ ಲಿಂಗಬೀರಣ್ಣ ದೇವರ
ಲಿಂಗಬೀರಣ್ಣ ದೇವಕಿ ಹೆಸರ ಇಡಬೇಕಂದಾನ"[೧೨೫]

ಈ ರೀತಿಯಾಗಿ ಸೂರಮ್ಮದೇವಿಯ ಮಗ ಶಿವನ ಹಣೆ ಬೆವರಿನಿಂದ ಅಯೋನಿಜನಾಗಿ ಜನಿಸುತ್ತಾನೆ. ಹುಟ್ಟಿದ ಹನ್ನೆರಡು ದಿನದಲ್ಲಿ ತೊಟ್ಟಿಲಶಾಸ್ತ್ರವನ್ನು ಮುಗಿಸುತ್ತಾರೆ. ಹದಿಮೂರನೇ ದಿನ ಬೆಟ್ಟದ ಪಾಲು ಆಗುತ್ತಾನೆಂದು ಶಿವನು ವರ ನೀಡುತ್ತಾನೆ. ಬೀರಪ್ಪನು ಸಂಸಾರದಿಂದ ದೂರವಿದ್ದು ಸಮುದಾಯದ ಬೆಳವಣಿಗೆಗೆ ಬೆಟ್ಟವನ್ನು ಸೇರಿದವನೆಂದು ಕಂಡುಬರುತ್ತದೆ. ಮತ್ತೊಂದು ಪ್ರಮುಖ ಕಾರಣವೆಂದರೆ ಕಾಳಿನಾರಾಯಣನ ಸಹೋದರಮಾವನ ಸಂಬಂಧವನ್ನು ಬೆಳಸಲಿಕ್ಕೆ ಈತನು ಅರ್ಹನಾಗಿರುತ್ತಾನೆ. ಆ ಕಾರಣಕ್ಕೆ ಕಾಳಿನಾರಾಯಣನನ್ನು ಊರಿನಿಂದ ಕಾಡಿನಲ್ಲಿ ಜೀವಿಸುವಂತೆ ಆಗುತ್ತದೆ. ಈ ಸಂದರ್ಭದಲ್ಲಿ ಊರಿನಲ್ಲಿದ್ದ ವೀರಯ್ಯನು ಕಾಡಿಗೆ ಪಯಣ ಬೆಳೆಸಿದ್ದರಿಂದ ಬೀರಯ್ಯನು ಆಗಿರಲು ಸಾಧ್ಯವಿದೆ.

ಬೀರಪ್ಪನಿಗೆ ರೇವಣರು ಲಿಂಗವನ್ನು ಕಟ್ಟಿದರೆಂದು ಕೆಲವು ಕಡೆ ದೊರೆಯುತ್ತದೆ.

"ಬೀರದೇವರಿಗೆ ಲಿಂಗ ಕಟ್ಟಿದಂವ ನೀನೆ
ವೀರ ಹಾಲುಮತಕೆ ಗುರುವಾದವ ನೀನೆ
ವೀರತಪ್ಪ ದೈವ ತತ್ವಕ ನೀನೆ
ಹರಹರಿ ಮುನಿಗಳಿಗೆ ಗುರುವಾದಾವ ರೇವಣಸಿದ್ಧ ನೀನೆ"[೧೨೬]

ಹೀಗೆ ಜನಪದ ವಿದ್ವಾಂಸರು ಜನಪದ ಸಾಹಿತ್ಯದಲ್ಲಿ ಬೀರಪ್ಪನ ಬಗ್ಗೆ ಇರುವ ಗೀತೆಯನ್ನು ಹೇಳುತ್ತಾ ರೇವಣಸಿದ್ಧರು ಈತನಿಗೆ ಲಿಂಗಕಟ್ಟಿದರೆಂದು ತಿಳಿದುಬರುವುದು. ಹಾಲುಮತ ಪುರಾಣಗಳಲ್ಲಿ ಬರುವ ರೇವಣಸಿದ್ಧರಿಗೂ, ಬೀರಪ್ಪನಿಗೂ ಇರುವ ಸಂಬಂಧಕ್ಕೆ ಈ ದಾಖಲೆಗಳು ಪೂರಕ ಸತ್ಯವಾಗಿ ನಿಲ್ಲುತ್ತವೆ. ಬೀರಪ್ಪನು ಆರಾಧ್ಯ ದೇವವಾಗುವಲ್ಲಿ ಅನೇಕ ಪವಾಡಗಳನ್ನು ಮಾಡುವುದರ ಮೂಲಕ ತನ್ನ ಹೋರಾಟ ಮನೋಭಾವವನ್ನು ಕಂಡುಬರುತ್ತದೆ. ಈತನು ಪೂರ್ವದಲ್ಲಿ ವೀರೇಶನಾಗಿದ್ದು, ನಂತರದಲ್ಲಿ ಶಿವಸಿದ್ಧಬೀರೇಶನಾಗುವನೆಂದು ಪುರಾಣಗಳು ಹೇಳುತ್ತವೆ.

"ಇಂದುಧರ ಪದ್ಮನಿಗೆ ಪೇಳಿದಂ ಪುಳಕದಿಂ
ಹಿಂದೆ ಭಿಲ್ಲಾಸುರನ ನಾಶಗೈವದಕೆನ್ನ
ಕಂದ ವೀರೇಶನಂ ಭುವನಕ್ಕೆ ಕಳಿಸಲವ ಬೀರಾವತಾರ ಧರಿಸಿ
ಮಂದಮತಿಯಾದ ಖಳನ ಕೊಂದು ಕುರುಬರಂ
ಚಂದದಿಂದುದ್ಧರಿಸಿ ಬಂದನಿಲ್ಲಿಗೆ ಮರಳಿ
ಇಂದು ನೀ ಬರ್ಮನ ಮಡದಿ ಸುರಾವತಿಯ ಗರ್ಭಾಬ್ಧಿಯೊಳಗುದ್ಭವಿಸತು"[೧೨೭]

ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣ ಮತ್ತು ಚನ್ನಬಸವ ಕವಿಯ ಹಾಲುಮತ ಪುರಾಣಗಳಲ್ಲಿ ಬೀರಪ್ಪನ ಹುಟ್ಟು ವೀರೇಶ ಎಂಬ ಪಾತ್ರದಿಂದ ಆಯಿತು ಎಂದು ಹೇಳುತ್ತವೆ. ಆದರೆ ಜನಪದ ಹಾಲುಮತ ಮಹಾಕಾವ್ಯ ಮತ್ತು ಸುಕ್ಷೇತ್ರ ಹುಲಜಂತಿ ಮಹಿಮಾಂತಕ ಮಾಳಿಂಗರಾಯರ ಹಾಲುಮತ ಪುರಾಣಗಳಲ್ಲಿ ಬೀರಪ್ಪ ಶಿವನ ಹಣೆಯ ಬೆವರನಿಂದ ಜನಿಸಿದನೆಂದು ಹೇಳುತ್ತವೆ. ಇವೆರಡು ಹೇಳುವಂತೆ ವೀರೇಶ ಮತ್ತು ಬೀರಪ್ಪರವರು ಶಿವನ ಒಂದಾಂಶವೇ ಎಂದು ಕೊನೆಗೆ ತಿಳಿಸಿಕೊಡುತ್ತವೆ. ಬೀರಪ್ಪನ ವೈವಾಹಿಕ ಜೀವನವು ಹೋರಾಟಮಯವಾಗಿ ಚಿತ್ರಣಗೊಂಡಿದೆ. ಅಕ್ಕ ಮಾಯಮ್ಮಳ ಜೊತೆ ಸೇರಿ ಕಾಳಿನಾರಾಯಣನ ಮಗಳು ಕನ್ನಿಕಾದೇವಿಯನ್ನು ಮದುವೆಯಾಗುತ್ತಾನೆ. ಇಲ್ಲಿ ಬೀರಪ್ಪನು ಕಾಡಿನಲ್ಲಿ ಕುರಿಕಾಯುವ ವೃತ್ತಿ ಹೊಂದಿದ್ದನು. ಆದರೆ ಕಾಳಿನಾರಾಯಣ ಮಂದನ ಗಿರಿಯಲ್ಲಿ ಅರ್ಥಾತ್ ಸೌಲಭ್ಯವಿರುವ ನಗರದಲ್ಲಿ ವಾಸವಾಗಿದ್ದನು. ಬೀರಪ್ಪ ಕಾಡುಮೇಡು ಅಲೆಯುವ ವ್ಯಕ್ತಿಯಾಗಿದ್ದರಿಂದ ವಿವಾಹವನ್ನು ವಿರೋಧಿಸಿರಬಹುದು ಎಂದು ಕಾಣುತ್ತದೆ. ಆದರೆ ಬೀರಪ್ಪನು

ತಾಯಿ-ತಂದೆಯಿಂದ ದೂರವಾದ ಕಾರಣಕ್ಕೆ ಆಕೆಯನ್ನು ಮದುವೆಯಾಗುತ್ತಾನೆ. ಅಲ್ಲದೆ ಕಾಡು-ನಗರಗಳನ್ನು ವೈವಾಹಿಕ ಸಂಬಂಧದ ಮೂಲಕ ಪರಸ್ಪರ ಹತ್ತಿರವಾಗುವಂತೆ ಮಾಡುವ ತಂತ್ರವನ್ನು ಕಾಣುತ್ತೇವೆ. ಹಾಗೂ ಕಾಳಿನಾರಾಯಣನು ವಿಷ್ಣುವಾಗಿ, ಭಾಳಭರಮ ಬ್ರಹ್ಮನಾಗಿ ಕಂಡುಬಂದಂತೆ, ಬೀರಪ್ಪ ಶಿವನಾಗಿ ಬಂದು ಹಾಲುಮತದವರನ್ನು ಒಗ್ಗೂಡಿಸುವುದು ಕಂಡುಬರುತ್ತದೆ. ನಂತರ ಬೀರಪ್ಪನು ಬಾಲ್ಯದಲ್ಲಿ ಪವಾಡ ವ್ಯಕ್ತಿಯಾಗಿ ಬೆಳೆಯುವನು. ಸಾಕು ತಾಯಿ ಮಾಯವ್ವಳನ್ನು ಚೆಂಡು ಬೇಕೆಂದು ಹಠಮಾಡಿ ಕೇಳಿದಾಗ, ಆಕೆಯು ಪರಜನರೊಂದಿಗೆ ಆಡುವುದು ಬೇಡ ಎಂದು ಹೇಳುತ್ತಾಳೆ. ಇಲ್ಲಿ ಬೀರಪ್ಪನು ಪರರ ಜೊತೆ ಶಕ್ತಿ ಸಾಮರ್ಥ್ಯವನ್ನು ತೋರಿಸುವ ಹೋರಾಟಗಾರನಾಗಿ ಕಂಡುಬರುವನು. ಚೆಂಡಿನಿಂದ ಹೊಡೆತ ತಿಂದ ಲಿಂಗಬಸವನು ಮರಣ ಹೊಂದುವನು. ಆಗ ಬೀರಪ್ಪ ಆತನಿಗೆ ವಿಭೂತಿ ಹಚ್ಚಿ ಪ್ರಾಣ ಬರಿಸುತ್ತಾನೆ. ಈ ಮೂಲಕ ಬೀರಪ್ಪನು ಭಂಡಾರ ಸಂಸ್ಕೃತಿಯಿಂದ ವಿಭೂತಿ ಸಂಸ್ಕೃತಿಗೆ ಹೊರಳುವುದನ್ನು ತೋರಿಸಿ ಕೊಡುತ್ತದೆ.

> "ಬಲ್ಲವರು ಬೀರನಂ ಕರೆದು ಕೊಂಡವಸರದೊ
> ಳಲಿಂದ ಲಿಂಗಬಸವನು ಬಿದ್ದ ಸ್ಥಲಕ್ಕೆ ಬರಲು
> ಯಲ್ಲರರವಂತೆ ಭಸ್ಮವ ತಳೆದು ಪ್ರಾಣ ಪ್ರತಿಷ್ಠೆಯಂಗೈದನಾಗ"[೧೫]

ಹಾಲುಮತೋತ್ತೇಜಕ ಪುರಾಣವು ರಸ್ತಾಪುರ ಮತ್ತು ದಾವಣಗೆರೆ ಚನ್ನಬಸವ ಕವಿಗಳು ಒಂದೇ ವಸ್ತುವನ್ನು ಇಟ್ಟುಕೊಂಡು ಕೃತಿ ರಚಿಸಿದ್ದಾರೆ. ಇವರಿಬ್ಬರಿಗೂ ವೀರಶೈವ ಧರ್ಮದ ಪ್ರಭಾವ ಅಗಿದೆ ಎಂದು ಬೀರಪ್ಪನಿಗೆ ಭಸ್ಮಕೊಡುವುದರ ಮೂಲಕ ತಿಳಿಸಿಕೊಡುವುದು. ಬೀರಪ್ಪ ಮೂಲತಃ ಭಂಡಾರ ಪಂಥದವನು. ಹಾಗಾಗಿ ಮಾಳಿಂಗರಾಯನು ಈತನ ಮಾದರಿಯಲ್ಲಿ ಬಂದಿರುವುದನ್ನು ನೋಡಬಹುದು. ಬೀರಪ್ಪನು ಕುರಿಗಳನ್ನು ದ್ವಿಗುಣಗೊಳಿಸಲಿಕ್ಕೆ ಪವಾಡವನ್ನು ಮೆರೆಯುತ್ತಾನೆ. ಹೇಮಣ್ಣನ ಕುರಿಗಳಿಗೆ ಹಿರೆರೋಗ ಬಂದು ಸತ್ತುಹೋಗುತ್ತವೆ. ಅವುಗಳನ್ನು ಬದುಕಿಸುವುದಕ್ಕೆ ಹೇಮಣ್ಣನು ತನ್ನ ಮಗನನ್ನು ಬೀರಪ್ಪನಿಗೆ ಕೊಡುವನು. ಇದು ಒಂದು ಕಡೆ ಕುರಿಗಳ ಸಂಖ್ಯೆಯನ್ನು ಬೆಳೆಸಿದರೆ, ಮತ್ತೊಂದು ಕಡೆ ಬೀರಪ್ಪನ ಶಿಷ್ಯ ಬಳಗವನ್ನು ದ್ವಿಗುಣಗೊಳಿಸುವುದನ್ನು ತಿಳಿಸುವುದು.

ಹೀಗೆ ಬೀರಪ್ಪನು ಪವಾಡ ಪುರುಷನಾಗಿ, ಸಾಂಸ್ಕೃತಿಕ ವೀರನಾಗಿ ಶಾಶ್ವತ ಶಿಷ್ಯನನ್ನು ಪಡೆಯುವನು. ಮಾಳಿಂಗರಾಯನನ್ನು ಶಿಷ್ಯನಾಗಿ ಪಡೆಯುವುದರ ಮೂಲಕ ಎರಡು ವೃತ್ತಿಗಳನ್ನು ಸೇರಿಸುವನು. ಬೀರಪ್ಪನಿಂದ ಕುರಿಗಳು ಊರಿನ ಪರಿಸರಕ್ಕೆ ಧಾವಿಸಿದವು. ಅದರ ಜೊತೆಗೆ ಮಾಳಿಂಗರಾಯನು ಗೋವುಗಳನ್ನು ಸೇರಿಸಿದನು. ಹೀಗೆ ಇಬ್ಬರು ಹೈನುಗಾರಿಕೆಯ ವೃತ್ತಿಯನ್ನು ಸಮುದಾಯದ ವೃತ್ತಿಯಾಗಿಸಿಕೊಂಡದ್ದನ್ನು ಹೇಳುತ್ತಾರೆ.

ಒಟ್ಟಾರೆ ಬೀರಪ್ಪ ಮತ್ತು ಮಾಳಪ್ಪರು ಹಾಲುಮತ ಸಮುದಾಯದ ಸಾಂಸ್ಕೃತಿಕ ವೀರರಾಗಿ ಕಂಡುಬರುತ್ತಾರೆ. ಇವರು ಒಬ್ಬರನ್ನು ಬಿಟ್ಟು ಒಬ್ಬರು ಇಲ್ಲ ಎನ್ನುವುದಕ್ಕೆ ಆಚರಣೆ, ಉತ್ಸವಗಳು ನಿದರ್ಶನವಾಗಿವೆ.

### ೩. ಸಾಂಸ್ಕೃತಿಕ ವೀರರು

ನಮ್ಮ ಭಾರತದ ಸಂಸ್ಕೃತಿಯು ಅನೇಕ ವೀರರಿಂದ ಮತ್ತು ಕವಿಗಳಿಂದ ತುಂಬಿರುವ ದೇಶ. ಒಬ್ಬರು ಚರಿತ್ರೆಯನ್ನು ಕಲಾತ್ಮಕವಾಗಿ ಬರವಣಿಗೆಯಲ್ಲಿ ಕಟ್ಟಿಕೊಟ್ಟರೆ ಮತ್ತೊಬ್ಬರು ಸಾಹಸ-ಸಾಧನೆಗಳ ಮೂಲಕ ಕಟ್ಟಿಕೊಡುತ್ತಾರೆ. ಅಂದರೆ ಸಂಸ್ಕೃತಿಯ ಅಧ್ಯಯನದಲ್ಲಿ ವೀರರ ಚರಿತ್ರೆ ಮತ್ತು ಸಾಹಿತ್ಯ ಚರಿತ್ರೆಯೂ ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ. ಪುರಾಣಗಳಲ್ಲಿ ಬರುವ ವೀರರು ಸಾಹಿತ್ಯದ ರೀತಿಯಲ್ಲಿ ರಚನೆಯನ್ನು ಪಡೆದಿರುತ್ತಾರೆ. ಮುಂದೆ ಇವರೇ ಸಾಂಸ್ಕೃತಿಕ ವೀರರಾಗುತ್ತಾರೆ. ಸಾಂಸ್ಕೃತಿಕ ವೀರ ಪರಿಚಯವು/ಅಧ್ಯಯನವು ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಜನಾಂಗ/ಸಮುದಾಯವನ್ನು ಗುರುತಿಸುವಲ್ಲಿ ಬೇಕಾಗುತ್ತದೆ. ಈ ವೀರರೆ ಜನಾಂಗಗಳ ಸಂಸ್ಕೃತಿಯ ಪ್ರಚಾರಕರು. ಆದಿಮ ನೆಲೆಯಿಂದ ಇವತ್ತಿನವರೆಗೂ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿರುವುದು ಕಂಡುಬರುತ್ತದೆ. ಯುವ ಚರಿತ್ರಕಾರರು ಮಾಡದ ಮಹತ್ತ ಕಾರ್ಯವನ್ನು ಈ ಸಾಂಸ್ಕೃತಿಕ ವೀರರು ಮಾಡಿದ್ದಾರೆ. ಒಂದು ಕ್ಷೇತ್ರದಲ್ಲಿ ಮಾನವ ಕುಲದ ಶಾಸ್ತ್ರಕಾರರಾಗಿಯೂ, ಚರಿತ್ರೆಕಾರರಾಗಿಯೂ ತಮ್ಮ ಚಿಂತನೆಯನ್ನು ಅಭಿವ್ಯಕ್ತಪಡಿಸಿದ್ದಾರೆ. ಸಾಂಸ್ಕೃತಿಕ ವೀರರು ಸಮುದಾಯಗಳ ಸಂಸ್ಕೃತಿಯನ್ನು ಆರಾಧನೆಯ ಮೂಲಕ ಸಂರಕ್ಷಣೆ ಮಾಡುತ್ತಾ ಬಂದಿರುವುದು ಕಂಡುಬರುತ್ತದೆ.

ಈ ಸಾಂಸ್ಕೃತಿಕ ವೀರರು ಅನ್ಯ ರಾಜಕೀಯ ವೀರರಂತೆ ರಕ್ತದ ಕೋಡಿಯನ್ನು ಅರಸಿ ಚರಿತ್ರೆಯನ್ನು ಕಟ್ಟಿಲ್ಲ. ಭಿನ್ನವಾಗಿ ಕ್ಷೇತ್ರಪಾಲನೆಯ, ಸಂಸ್ಕೃತಿಯ ರಕ್ಷಕರಾಗಿಯೂ ಸಮುದಾಯದ ವಕ್ತಾರರಾಗಿ ಪವಾಡ ಮೆರೆಯುತ್ತಾ, ತಮ್ಮ ಸಮುದಾಯದ ಉಳಿವನ್ನು ಕಾಯ್ದುಕೊಂಡು ಬಂದಿದ್ದಾರೆ. ಪವಾಡಕ್ಕೆ ಮುಂದಿನ ಸಮುದಾಯದವರು ಕಾಲ್ಪನಿಕತೆಯ ನೆರಳಲ್ಲಿ ಚಾರಿತ್ರಿಕ ವ್ಯಕ್ತಿಯಾಗಿಸುವಲ್ಲಿ ಕಲ್ಪನೆಯನ್ನು ಅತಿ ಹೆಚ್ಚು ಬಳಸಿಕೊಂಡಿದ್ದಾರೆ. ಆದ್ದರಿಂದ ಇವರು ವಾಸ್ತವ ಜಗತ್ತಿಗಿಂತ ದೂರವಿದ್ದರೆಂದು ಪರಿಭಾವಿಸುವಂತೆ ಆಗಿದೆ. ಆದರೆ ಈ ಅಂತರವೇ ಸಮುದಾಯದ ವಾಸ್ತವತೆಯನ್ನು ಅರಿಯಲು ಪ್ರಮುಖ ವಸ್ತುವಾಗಿದೆ. ಅಹಿಂಸಾತ್ಮಕತೆಯಲ್ಲಿಯೇ ತಮ್ಮ ಚಿಂತನೆಯನ್ನು ಅರಳಿಸುವವರು ಕೆಲಕಡೆ ಅನಿವಾರ್ಯವಾದಲ್ಲಿ ಹಿಂಸೆಯನ್ನು ಮೆರೆದಿದ್ದಾರೆ. ಈ ಹಿಂಸೆಯು ಸಮುದಾಯವನ್ನು ಉಳಿಸಿಕೊಳ್ಳುವಲ್ಲಿ ಮಾಡಿದ ಮೊದಲ ರಾಜಕೀಯ ತಂತ್ರವಾಗಿರುವುದೇ ಹೊರೆತು, ಪ್ರಜ್ಞಾಪೂರ್ವಕ, ಉದ್ದೇಶಪೂರ್ವಕ ಹಿಂಸೆ ಸ್ವರೂಪದಲ್ಲ. ಉದಾಹರಣೆಗೆ ಮಾಳಪ್ಪನು ಬೇಟೆಗಾರರನ್ನು ಸೇಡಿನಿಂದ

ಕೊಲ್ಲುವುದು. ಈ ಹಿಂಸೆಯ ಹಿಂದೆ ಒಂದು ಕಥೆಯೇ ಅಡಗಿದೆ. ಕುರುಬರಾದ ಸೋಮರಾಯ ತುಕ್ಕಪ್ಪರಾಯರು ಅಣ್ಣತಮ್ಮಂದಿರು ದನಗಳನ್ನು ಕಾಯಲಿಕ್ಕೆ ಕಾಡಿಗೆ ಹೊರಟಾಗ ಸೋಮರಾಯನನ್ನು ಬೇಟೆಗಾರರು ಎದುರಿಸಿ ಎಲ್ಲಾ ದನಗಳನ್ನು ಕದ್ದುಕೊಂಡು ಹೋಗುವರು. ಇದಕ್ಕೆ ಪ್ರತಿಭಟನೆಯನ್ನು ಮಾಡಿದರು ಸೋಲುತ್ತೇನೆಂದು ಅರಿತ ಏಕಾಂಗಿ ಸೋಮರಾಯ ಬಾಣವನ್ನು ದೇಹಕ್ಕೆ ಚುಚ್ಚಿಕೊಂಡು ಸಾಯುತ್ತಾನೆ. ಇದರ ಪ್ರತಿರೋಧವಾಗಿಯೇ ಮಾಳಪ್ಪನು ಬೇಟೆಗಾರರನ್ನು ಕೊಲ್ಲುತ್ತಾನೆ. ಹೀಗೆ ವೀರರು ತಮ್ಮ ವ್ಯಕ್ತಿತ್ವ ಹರಣವನ್ನು ಮಾಡಿಕೊಳ್ಳಲಾರರು. ಕಾವ್ಯದಲ್ಲಿ ವಸ್ತುವಿನ ಜೊತೆಗೆ ಪಾತ್ರಗಳು ಬಹುಮುಖ್ಯವಾಗಿದೆ. ಇವು ಸಂಸ್ಕೃತಿಯೊಂದರ ವಿಶಿಷ್ಟತೆಯ ಕುರಿತು, ತನ್ನತನದ ಕುರಿತು, ಸಮುದಾಯದ ಅನನ್ಯತೆ ಕುರಿತು, ಅನ್ಯರಿಂದ ಬೇರ್ಪಡುವ ಕುರಿತು ಯಾವಾಗಲೂ ಚಿಂತನೆ ಮಾಡುತ್ತವೆ. ಇಂತಹ ಸಂಸ್ಕೃತಿಗಳ ಮುಖಾಮುಖಿಯಲ್ಲಿ ಸಾಂಸ್ಕೃತಿಕ ವೀರರು ಜಟಿಲತೆಯನ್ನು ಹೊಂದಿರುತ್ತವೆ.

ಸಂಸ್ಕೃತಿಯನ್ನು ಹೇಗಾದರೂ ಸಂದಿಗ್ಧ ಸ್ಥಿತಿಯಿಂದ ಕಾಪಾಡಲು ಆತುರಗೊಂಡಿರುತ್ತವೆ. ಸಾಂಸ್ಕೃತಿಕ ವೀರರು ಮೇಲ್ಜಾತಿಯವರು ಪೂಜಿಸುವ ಶಿಷ್ಟದೇವತೆಗಳಿಗಿಂತ ಕೆಳವರ್ಗದಲ್ಲಿ ಬರುವ ವೀರರು ಆರಾಧನೆಯಲ್ಲಿ ಮೊದಲ ಸ್ಥಾನ ಹೊಂದಿರುತ್ತಾರೆ. ಹಾಗೂ ಗ್ರಾಮದೈವಗಳಾಗಿಯೂ ಸ್ಥಾಪನೆಗೊಂಡಿರುತ್ತವೆ. ಅವರ ಸುತ್ತ ಸಂಪೂರ್ಣ ಚಾರಿತ್ರ್ಯವನ್ನು ಹೇಳುವ ಕೃತಿಗಳು ಸೃಷ್ಟಿಯಾಗಿವೆ. ರಾಜಕೀಯವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ತಮ್ಮನು ವೃದ್ಧಿಸಿಕೊಳ್ಳುವಲ್ಲಿ ಈ ಸಾಂಸ್ಕೃತಿಕ ವೀರರ ಪಾತ್ರ ಪ್ರಮುಖವಾಗಿದೆ. ಇವರು ಮೊದಲು ಚಾರಿತ್ರಿಕವಾಗಿ ಬಾಳಿದ ಜನರು, ಯಾವುದೋ ಕಾರಣಕ್ಕೆ ಸಮುದಾಯವನ್ನು ಉಳಿಸಿಕೊಳ್ಳಲು ಹೋರಾಟವನ್ನು ಮಾಡಿರಬಹುದು, ಅನ್ಯ ವೈರಿಗಳಹೋರಾಟದಿಂದ ಹತನಾಗಿರಬಹುದು. ಶೋಷಣೆಯನ್ನು ಪ್ರತಿರೋಧಿಸಿರಬಹುದು, ಸಂಸ್ಥೆಯಂತೆ ತನ್ನ ಮೂಲವನ್ನು ಕಾಪಾಡುವ ಸಂದರ್ಭದಲ್ಲಿ ಇವರು ವಿಶಿಷ್ಟವಾಗಿ ನಿಲ್ಲುತ್ತಾರೆ. ಹೀಗಾಗಿ ಇವರ ಆದರ್ಶಮಯದ ತತ್ತ್ವವೇ ಮುಂದಿನ ಜನರಲ್ಲಿ ಪುರಾಣವಾಗುತ್ತದೆ ಮತ್ತು ದೈವತ್ವವನ್ನು ಪಡೆಯುತ್ತದೆ. ಈ ಹಿನ್ನೆಲೆಯಲ್ಲಿ ಹಾಲುಮತ ಪುರಾಣಗಳಲ್ಲಿ ಅನೇಕ ಸಾಮಾನ್ಯ ಜನರು ಒಂದಿಲ್ಲೊಂದು ಕಾರಣಕ್ಕೆ ಸಾಂಸ್ಕೃತಿಕ ವೀರರ ಪಟ್ಟವನ್ನು ಧರಿಸಿದ್ದಾರೆ.

ಸಂಸ್ಕೃತಿಯನ್ನು ಅರಿಯುವಾಗ "ಒಂದು ಸಂಸ್ಕೃತಿ, ಸಾಮಾಜಿಕ, ಆರ್ಥಿಕ, ರಾಜಕೀಯ ಶಕ್ತಿ, ಅನ್ಯ-ದೇಶೀಯ ಸಂಸ್ಕೃತಿ, ಸಮಾಜಗಳ ಮೇಲೆ ಹಿಡಿತ, ಪ್ರಭುತ್ವ ಸಾಧಿಸುವಾಗ ಈ ರೀತಿಯ ಪರಿಕಲ್ಪನೆಗಳು ಹುಟ್ಟುತ್ತವೆ. ಇಲ್ಲೂ ಕೂಡಾ ಅಂತಿಮವಾಗಿ ರಾಜಕೀಯ ಸ್ವರೂಪವೇ ಮುಖ್ಯ ತನ್ನತನವನ್ನು ಅನ್ಯದಿಂದ ಬಿಡಿಸಿ, ಬೇರ್ಪಡಿಸಿ ತೋರಿಸುವಾಗ ಆಕ್ರಮಣಶೀಲತೆ ಅನಿವಾರ್ಯವಾಗಿ

ಬಿಡುವ ಸ್ಥಿತಿ ಇದು."[೧೨೯] ಸಾಂಸ್ಕೃತಿಕ ವೀರರಿಗೆ ಹೋರಾಟ ದಬ್ಬಾಳಿಕೆ ಅನಿವಾರ್ಯವೆಂದು ಕಂಡುಬರುತ್ತದೆ. ಸಮುದಾಯದ ಅಸ್ಮಿತೆಯನ್ನು ಕಾಪಾಡುವುದಕ್ಕೆ ಆಕ್ರಮಣಗಳು ಬೇಕೆ ಬೇಕು. ಸಮುದಾಯಗಳು ತಮ್ಮದಾಗಿರುವ ವಸ್ತುವಿನಲ್ಲಿ ಹೊಸತನವನ್ನು ಕಂಡುಕೊಳ್ಳದೆ, ಅನ್ಯದರಲ್ಲಿ ಹೊಸತನವನ್ನು ಹುಡುಕುವುದರಿಂದಲೂ ಸಂಸ್ಕೃತಿಯ ಸಂಘರ್ಷ ಏರ್ಪಡುತ್ತವೆ. ಇಂತಹ ಸಂದರ್ಭದಲ್ಲಿ ಯಾವುದನ್ನು ಸರಳತೆಯಿಂದ ಒಪ್ಪಿಕೊಳ್ಳುವುದಿಲ್ಲ. ಆಗ ಕೆಲವು ಪರಿಕಲ್ಪನೆಗಳು ಅಂಶವನ್ನು ಒತ್ತಿ ಹೇಳಿ ಸಮುದಾಯದಲ್ಲಿ ಸೇರಿಸುತ್ತವೆ. ಸಾಂಸ್ಕೃತಿಕ ವೀರರ ಪರಿಕಲ್ಪನೆಯೂ ಇದೇ ರೀತಿಯದು. ಧಾರ್ಮಿಕ ನೆಲೆಯ ದೃಷ್ಟಿಕೋನದಿಂದ ಅರ್ಥೈಸುವುದರ ಜೊತೆಗೆ ಮಾನವಕುಲಶಾಸ್ತ್ರದ ಅಧ್ಯಯನ ಮಾಡುವುದರಿಂದ ಸಾಂಸ್ಕೃತಿಕ ವೀರರು ಮಹತ್ವವನ್ನು ಪಡೆಯುತ್ತಾರೆ.

"ಕಾವ್ಯಲಯಗಳಲ್ಲಿ ಅಂತಸ್ಥ ನೆನಪುಗಳು, ಆಶಯಗಳು ಹೆಚ್ಚು ಶಕ್ತವಾಗಿರುತ್ತವೆ ಎಂಬ ಕಾರಣಕ್ಕೂ ಏನೋ, ಇಲ್ಲಿ ಆತ್ಮಕೇಂದ್ರಿತ ವಸ್ತುವನ್ನು ನಮ್ಮದೇ ಆದ ಶರತ್ತುಗಳ ಮೇಲೆ ಹೆಚ್ಚು ಅರ್ಥಪೂರ್ಣವಾಗಿ ಪರಿವರ್ತಿಸಲಾಯಿತು. ಪ್ರಕೃತಿದರ್ಶನ ಪಾಶ್ಚಿಮಾತ್ಯದಲ್ಲಿ ಪಾರ-ಚಾರಿತ್ರಿಕ ರೂಪಕದ ಎತ್ತರಕ್ಕೆ ಏರುವುದಿಲ್ಲ. ಆದರೆ, ನಮ್ಮಲ್ಲಿ ಪ್ರಕೃತಿ ದರ್ಶನದ ಅಂತಿಮ ಸಾರರೂಪಕ ಎಂದರೆ ಭೂಮಿ ಎಂಬ ತತ್ವ ಪ್ರತೀಕ. ಸಾಂಪ್ರದಾಯಕ ಭಾರತೀಯ ಚಿಂತನೆಯಲ್ಲಿ ದಟ್ಟವಾಗಿದ್ದ, ಅಂತರ್ಗತವಾಗಿದ್ದ ಲೋಕದರ್ಶನ ಕ್ರಮ ಮುಖ್ಯರಂಗಕ್ಕೇ ಬಂತು. ಈ ಅಂಶ ಕನ್ನಡಕ್ಕೆ ವಿಶಿಷ್ಟವಾದುದ್ದು"[೧೩೦] ಹೀಗೆ ಸಾಹಿತ್ಯವು ವಿಶ್ವಾತ್ಮಕ ನೆಲೆಯಲ್ಲಿ ಆ ದೇಶದ, ಆ ಜನಾಂಗದ, ಆ ಸಂದರ್ಭವನ್ನು ನಮಗೆ ತಿಳಿಸಿಕೊಡುವುದು. ನಿರಂತರವಾಗಿ ಈ ಮೂಲಕ ತನ್ನತನವನ್ನು ಉಳಿಸಿಕೊಳ್ಳುವುದರಲ್ಲಿಯೇ ಕಾರ್ಯಮಗ್ನವಾಗಿರುತ್ತದೆ.

ಕರ್ನಾಟಕದಲ್ಲಿ ಉಂಟಾದ ಸಾಮಾಜಿಕ ಹಾಗೂ ಧಾರ್ಮಿಕ ಚಳವಳಿ ನಮ್ಮ ಸಾಹಿತ್ಯದ ಮೇಲೆ ತುಂಬಾ ಪ್ರಭಾವ ಬೀರಿವೆ. ಅಂದರೆ ಕನ್ನಡ ಪ್ರಜ್ಞೆಗೆ ವ್ಯಕ್ತಿಯು ದೇಶಿ ಆಯಾಮದಲ್ಲಿ ತಾತ್ವಿಕ ರೂಪವನ್ನು ಅಭಿವ್ಯಕ್ತ ಪಡಿಸತೊಡಗಿರುವುದು ಕಂಡುಬರುತ್ತದೆ. ಈ ವಿಸ್ಮಯಕ್ಕೂ ಅನೇಕ ಜನಾಂಗಗಳು, ಸಮುದಾಯಗಳು ಮುಖ್ಯ ಕಾರಣವಾಗಿವೆ. ಸಮಾಜದಲ್ಲಿ ಅಲಕ್ಷಿತಗೊಂಡ, ಪುರೋಹಿತಶಾಹಿ, ಸಾಮಾಜಿಕ, ಧಾರ್ಮಿಕ ಹಾಗೂ ಬೌದ್ಧಿಕ ಕ್ಷೇತ್ರದಲ್ಲಿಯೂ ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದ ಮನಸ್ಸುಗಳಿಗೆ ಚೇತನ ತುಂಬಿದ್ದು ಅಭಿವ್ಯಕ್ತಿವೆಂಬ ಮಾಧ್ಯಮ. ಪುರೋಹಿತಶಾಹಿ ಹಾಗೂ ಜಾತಿ ರಾಜಕಾರಣದ ಭದ್ರಬಾಹುವಿನಿಂದ ಬಂದಿತವಾಗಿದ್ದ ಸಮುದಾಯಗಳು ತಿರುವನ್ನು ಪಡೆಯಲು ತವಕಿಸುವ ಸಮಯ. ಅಭಿವ್ಯಕ್ತಿ ಧ್ವನಿಯ ಮೂಲಕ ಕೆಳಸಮುದಾಯಗಳು ತಮ್ಮ ಸಾಮಾಜಿಕ ಹಾಗೂ ರಾಜಕೀಯ ಅಸ್ತಿತ್ವದ ಚರಿತ್ರೆಯನ್ನು ಕಟ್ಟುವುದು ಕಂಡುಬರುತ್ತದೆ. ಹೀಗೆ ಹಾಲುಮತ

ಪುರಾಣಗಳು ಕಲ್ಯಾಣದ ಆಲೋಚನೆಗಳಿಗೆ ಪ್ರತಿರೋಧವಾಗಿ ತನ್ನ ರಾಜಕಾರಣವನ್ನು ಸಾಂಸ್ಕೃತಿಕ ವೀರರ ಮೂಲಕ ಸ್ಥಾಪಿಸುವುದು ಕಂಡುಬರುತ್ತದೆ. ಇವರು ರಾಜಕೀಯ ವ್ಯವಸ್ಥೆಯನ್ನು ಮೌಖಿಕ ಕಥನಗಳ ಮೂಲಕ ಕಟ್ಟಿಕೊಡುವಲ್ಲಿ ಕನಸು, ಆಶಯಗಳು ಸಾಂಸ್ಕೃತಿಕ ರಾಜಕಾರಣ ಭಾಗವಾಗಿಯೇ ಇರುತ್ತವೆ. ಆದ್ದರಿಂದ ಜನಪದರು ಸೃಷ್ಟಿಸಿರುವ ಕಾವ್ಯಪುರಾಣಗಳು ಸಾಂಸ್ಕೃತಿಕ ವೀರರನ್ನು ನೇಮಿಸಿ ಆಡಳಿತ ನಡೆಸುವುದರ ಬಗೆ ಹಾಲುಮತ ಪುರಾಣಗಳಲ್ಲಿ ಬರುವ ಶಾಂತಮುತ್ತಯ್ಯ, ಮಾಳಿಂಗರಾಯ, ಗೊಲ್ಲಾಳೇಶ್ವರ ಮತ್ತು ಸಿದ್ಧಮಂಕರು ತಮ್ಮನ್ನು ತಾವು ತೊಡಗಿಸಿಕೊಂಡು ವಸ್ತುವನ್ನು ಹಾಲುಮತ ಪುರಾಣಗಳು ವಿಶ್ಲೇಷಣೆ ಮಾಡುವುದು ಕಂಡುಬರುತ್ತದೆ.

**i. ಶಾಂತಮುತ್ತಯ್ಯ**

ಕುರುಬ ಸಮುದಾಯದಲ್ಲಿ ಸಾಮಾಜಿಕ ಮತ್ತು ಧಾರ್ಮಿಕವಾಗಿ ಅಸ್ಮಿತೆಯನ್ನು ಕಾಪಾಡಿಕೊಂಡು, ಇಂದಿನ ದಿನಗಳಲ್ಲಿ ಪ್ರತ್ಯೇಕ ಪರಂಪರೆಯನ್ನು ಹೊಂದಿದ ವ್ಯಕ್ತಿ ಶಾಂತಮುತ್ತಯ್ಯ. ಈತನು ಪದ್ಮಗೊಂಡ ಮತ್ತು ಲಿಂಗಮ್ಮರ ಮಗನಾಗಿ ಜನಿಸುತ್ತಾನೆ. ಈತನ ಮುಖ್ಯ ಕೇಂದ್ರ ಸರೂರು. ರೇವಣಸಿದ್ದೇಶ್ವರ ಗುರುವಾಗಿ ಶಾಂತಮುತ್ತಯ್ಯನಿಂದ ಸಾಮಾಜಿಕ ಕಾರ್ಯಗಳನ್ನು ಮಾಡಿಸುವರು. ಈತನು ಕುರುಬ ಮತ್ತು ಲಿಂಗಾಯುತ ಸಮುದಾಯಗಳ ವರ್ಗ ಸಂಘರ್ಷವನ್ನು ಪ್ರತಿರೋಧದ ನೆಲೆಯಲ್ಲಿ ವ್ಯಕ್ತಪಡಿಸುವುದು ಕಂಡುಬರುತ್ತದೆ. ಪದ್ಮಗೊಂಡನು ರಾಕ್ಷಸಿಯ ಮಗಳಾದ ಸಿರಿವಂತೆಯನ್ನು ವಿವಾಹವಾಗುವುದರ ಮೂಲಕ ಶಾಂತಮುತ್ತಯ್ಯನು ಹೊರಗುಳಿಯುತ್ತಾನೆ. ಹೀಗೆ ಸಂಸಾರ/ ಕುಟುಂಬದಿಂದ ಹೊರ ಬಂದ ಎಲ್ಲ ವ್ಯಕ್ತಿಗಳು ಒಂದಿಲ್ಲೊಂದು ಮಾರ್ಗದಲ್ಲಿ ಸಮಾಜದ ಆಶಯವನ್ನು ಸರಿದೂಗಿಸುವ ಹೊಣೆಯನ್ನು ಹೊತ್ತಿರುವುದು ಕಂಡುಬರುತ್ತದೆ. ಕುಟುಂಬದಲ್ಲಿದ್ದು ಹೋರಾಟ ಮಾಡದೆ ಸಾಮಾಜಿಕ ಸಾಂಸ್ಥಿಕ ನೆಲೆಯಲ್ಲಿ ಮಾಡಿದರೆ ಸಿಗುವ ಗೌರವ, ಮರ್ಯಾದೆಗಳು ಇದಕ್ಕೆ ಪ್ರೇರಣೆ ಆಗಿರಬಹುದು. ಕುಟುಂಬದಿಂದ ಹೊರಬಂದರೂ ಆ ಕುಟುಂಬ ಸಮುದಾಯದ ಅನನ್ಯತೆಗಾಗಿಯೇ ಹೋರಾಟ ನಡೆಯುತ್ತದೆ. ಹೀಗೆ ಶಾಂತಮುತ್ತಯ್ಯನು ತೊಗರಸಿ ಗ್ರಾಮದಿಂದ ಕುರಿಗಳನ್ನು ಪಡೆದು ಸರೂರು ಸೇರಲು ಸಿರಿವಂತೆಯೇ ಈ ರೀತಿ ಕಾರಣಳಾಗುತ್ತಾಳೆ.

"ರಕ್ಕಸಿ ಕುಲದವಳೊಡನೆ ಭೋಜನ ಮಾಡೆ
ದಕ್ಕೊದೆ ತಿಂಬುವ ಅನ್ನ
ಅತ್ತಲು ಗುರು ನೀನೆ ಗತಿಯೆನುತಲಿ ಆಗ
ಚಿಕ್ಕಶಾಂತನು ಕಡೆಗಾದ."[೧೩೧]

ಕುಲಹೀನರ ಜೊತೆಯಲ್ಲಿ ಬಾಳುವುದು ಉಚಿತವಲ್ಲವೆಂದು ಹೇಳುತ್ತಾ, ಧರೆಯಲ್ಲಿ ಯಾರು ಧರ್ಮದ ನೆಲೆಯಲ್ಲಿ ಜೀವನ ನಡೆಸುವರೋ ಅವರಿಗೆ ಶಿವನ ದಯೆ ಲಭಿಸುವುದು ಎಂದು ಹೇಳುತ್ತಾನೆ. ತನ್ನ ಸಮುದಾಯಗಳಲ್ಲಿ ಆಗುವ ಸಾಮಾಜಿಕ ಪಲ್ಲಟಗಳನ್ನು ವಿರೋಧಿಸುವ ಮನೋಭಾವ ಇಲ್ಲಿ ವ್ಯಕ್ತವಾಗಿದೆ. ಇವರು ನಮ್ಮ ಜೊತೆಯಲ್ಲಿದ್ದರೆ ನಮ್ಮ ಕುಲ ಮೇಲಾದದ್ದು ಕೀಳು ಮಾಡಿದಂತೆ ಎಂದು ಭಾವಿಸುತ್ತಾನೆ. ಸಮಾಜದಲ್ಲಿನ ಅನೇಕ ವರ್ಗಗಳು ಕೊಡುಕೊಳ್ಳುವ ವ್ಯವಹಾರವನ್ನು ಮಾಡುವಲ್ಲಿ ತುಂಬಾ ಸ್ನೇಹಪರವಾಗಿರುತ್ತವೆ. ಆದರೆ ವಿವಾಹ ಮತ್ತು ಆಹಾರ ಪದ್ಧತಿಯಲ್ಲಿ ಅನ್ಯರಿಗೆ ಪ್ರವೇಶ ನೀಡದೆ ತಮ್ಮತನವನ್ನು ಕಾಪಾಡುವುದು. ಒಂದು ವೇಳೆ ಆಚಾತುರ್ಯ ನಡೆದರೆ ಅದು ಆ ಸಮುದಾಯಕ್ಕೆ ಬಿದ್ದ ಕೊಡಲಿ ಪೆಟ್ಟೆಂದು ಭಾವಿಸುತ್ತಾನೆ. ಇಂತಹ ಸಂದರ್ಭದಲ್ಲಿ ಸಾಮರಸ್ಯಗಳು ಕಳಚುವ ಸಾಧ್ಯತೆ ಹೆಚ್ಚು. ಒಂದು ಕಡೆ ವೈವಾಹಿಕ ಸಂಬಂಧವು ಮತ್ತೊಂದು ವರ್ಗದ ಹೆಣ್ಣನ್ನು ವರಿಸುವುದು ಶ್ರೇಷ್ಠವೆಂದು ಹೇಳುತ್ತದೆ. ಅದು ಆ ಹೆಣ್ಣು ಅನಾಥೆಯಾಗಿರಬೇಕು, ಯಾರ ಬೆಂಬಲವು ಇರಕೂಡದೆಂದು ತಿಳಿಯುತ್ತದೆ. ಅಂದರೆ ಮಾತೃ ಸಂಸ್ಕೃತಿಯನ್ನು ಕಳಚಿ ಪಿತೃ ಸಂಸ್ಕೃತಿಯನ್ನು ಸ್ಥಾಪಿಸುವುದರಲ್ಲಿ ಶಾಂತಯ್ಯನ ಧೋರಣೆ ಅನಾವರಣಗೊಂಡಿದೆ. ರಾಕ್ಷಸಿಯ ಮಕ್ಕಳು ಉಣ್ಣೆ ಕಂಕಣದವರಾಗಿ ಮಾನ್ಯತೆಯನ್ನು ಪಡೆದರು. ಕುರುಬರಲ್ಲಿಯೇ ಈ ಪಂಗಡ ಕೀಳೆಂದು ತಿಳಿಯುತ್ತದೆ. ಮತ್ತು ಉಣ್ಣೆಕಂಕಣದವರು ಅಲೆಮಾರಿ ಸಮುದಾಯದ ಜನರಾಗಿ ನಗರದಿಂದ ಹೊರಗುಳಿಯುವ ಸಾಧ್ಯತೆ ಇರುವುದು. ಜೊತೆಗೆ ಇವರು ಉಣ್ಣೆ ಕಂಕಣದವರೆಂದರೆ ಕಪ್ಪು, ಕೀಳು ಎನ್ನುವ ಮನೋಭಾವ ಹೊಂದಿದವರೆಂದು ಹತ್ತಿ ಕಂಕಣದ ಕುರುಬ ಸಮುದಾಯ ವೈವಾಹಿಕ ಸಂಬಂಧದ ನಿಷಿದ್ಧವನ್ನು ವಿಧಿಸಿದಂತೆ ಕಂಡುಬರುತ್ತದೆ. ೧೨ನೇ ಶತಮಾನದ ವಚನ ಚಳುವಳಿಯ ಪ್ರಭಾವದಿಂದ ಕುರುಬ ಸಮುದಾಯದ ವ್ಯಕ್ತಿ ಅಂತರ್ಜಾತಿ ವಿವಾಹವಾಗಿರಬಹುದು. ಅದನ್ನು ನೇರವಾಗಿ ಪ್ರತಿಭಟಿಸಿದ ಕುರುಬ ಸಮುದಾಯ ಆಚರಣೆಯ ವಿಧಿ-ವಿಧಾನಗಳನ್ನು ಹೇರಿ ಪ್ರತ್ಯೇಕವಾದ ಒಳಪಂಗಡವನ್ನು ರೂಪಿಸಿಕೊಂಡಿವೆ.

ಈ ಸಾಂಸ್ಕೃತಿಕ ವೀರರ ಕುರಿತು "ಡಾ. ಸಿದ್ಧಲಿಂಗಯ್ಯನವರು ಮಂಟೇಸ್ವಾಮಿ ಮಾದಪ್ಪರ ಬಗೆಗೆ ಹೇಳುವ ಮಾತು ನಮ್ಮೆಲ್ಲ ಜನಪದ ವೀರರಿಗೂ ಅನ್ವಯಿಸುವಂತಿದೆ. ಮಂಟೇಸ್ವಾಮಿ ಮಹಾದೇಶ್ವರರು ಕೀಳು ಜಾತಿಯಿಂದ ಬಂದರೂ ತಮ್ಮ ಜನರ ಬಿಡುಗಡೆಯ ಬಗ್ಗೆ ಅವರಿಗೆ ಏನೂ ಅನ್ನಿಸಲಿಲ್ಲ. ವೈಯಕ್ತಿಕ ಸಾಧನೆಯಿಂದ ಶ್ರೇಷ್ಠ ಆಧ್ಯಾತ್ಮ ಜೀವಿಗಳಾಗಿ ಜನರ ಮನ್ನಣೆ ಪಡೆದರು. ಆದರೆ ಅವರಿಗೆ ಯಾರೂ ಸುಲಭವಾಗಿ ಒಕ್ಕಲಾಗುವುದಿಲ್ಲ. ಒಕ್ಕಲಾಗುವವರೆಗೂ ಇವರು ಬಿಡುವುದಿಲ್ಲ. ಇದಕ್ಕೆ ಕಾರಣ ಸಾವಿರಾರು ವರ್ಷದಿಂದ ಸ್ವಾಭಿಮಾನ, ಗೌರವಗಳಿಲ್ಲದೆ ಇದ್ದ ಒಂದು ಸಮಾಜದಲ್ಲಿ ಹುಟ್ಟಿ ಬಂದ ಇವರು ಹಿಂದಿನ ಎಲ್ಲಾ ಗೌರವ ಮರ್ಯಾದೆಗಳನ್ನು ಮೇಲು

ಜಾತಿಯಿಂದ ಏಕಾಏಕಿ ಪಡೆಯುವ ಅಭಿಮಾನ ದಾಹಕ್ಕೆ ಒಳಗಾದರು"[೧೭೨] ಎಂದು ಹೇಳುತ್ತಾರೆ. ಹೀಗೆ ಹಾಲುಮತದಲ್ಲಿ ಉಣ್ಣೆ ಕಂಕಣ ಮತ್ತು ಹತ್ತಿಕಂಕಣದವರು ವೃತ್ತಿಯನ್ನು ಇಬ್ಭಾಗ ಮಾಡಿಕೊಂಡಿರುವುದು ಗಮನಿಸಬಹುದು. ಆದರೂ ಇವರು ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ನೊಂದ ಇಂತಹ ಸಹವರ್ಗದಲ್ಲಿನ ಅನ್ಯವರ್ಗಗಳು ಪ್ರತ್ಯೇಕ ಒಕ್ಕಲಾಗಲು ಪ್ರಯತ್ನಪಟ್ಟವು. (ಸಹವರ್ಗ ಹತ್ತಿಕಂಕಣ ಅನ್ಯವರ್ಗ-ಉಣ್ಣೆಕಂಕಣವೆಂದು ಭಾವಿಸಿದೆ) ಈ ರೀತಿಯಲ್ಲಿ ಶಾಂತಮುತ್ತಯ್ಯ ಸಾಂಸ್ಕೃತಿಕ ವೀರನಾಗಿ ರೂಪುಗೊಂಡಿದ್ದಾನೆ. ಅಷ್ಟಲ್ಲದೆ ರೇವಣಸಿದ್ಧರಿಂದ ಮೂರೇಣಿ ಕಂತೆಯನ್ನು ಸಾಹಸದ ಪ್ರತೀಕವಾಗಿ ಪಡೆದು ಮತ್ತಷ್ಟು ತನ್ನ ಪರಂಪರೆಯನ್ನು ಭದ್ರಗೊಳಿಸುವ ಪ್ರಯತ್ನ ಮಾಡುತ್ತಾನೆ. ರಾಜಕೀಯ, ಆರ್ಥಿಕ ಸ್ತರಗಳಿಗಿಂತ ಸಾಮಾಜಿಕ, ಧಾರ್ಮಿಕ ಸ್ತರಗಳಿಂದ ಮತ್ತೊಬ್ಬರನ್ನು ಹತೋಟಿಯಲ್ಲಿಡಬಹುದೆಂದು ಈ ಮೂಲಕ ಬೋಧಿಸುತ್ತಾನೆ.

ಈ ರೀತಿಯಾಗಿ ಶಾಂತಮುತ್ತಯ್ಯ ಒಡೆಯರ ಸ್ಥಾನವನ್ನು ಪಡೆದು ಇಡೀ ಸಮುದಾಯದ ಬಗೆಗೆ ನ್ಯಾಯ ತೀರ್ಮಾನ ಮಾಡುವ ಹಕ್ಕನ್ನು ಪಡೆಯುವುದರ ಮೂಲಕ ಸಾಂಸ್ಕೃತಿಕ ವೀರನ ಪಟ್ಟ ಧರಿಸಿರುವನು. ಅಂತೆಯೇ ಇಂದಿಗೂ ಆತನ ವಂಶಸ್ಥರು ಗುರು ಒಡೆಯರಾಗಿ ಕುರುಬ ಸಮುದಾಯದ ಶುಭ ಸಮಾರಂಭಗಳನ್ನು ನಿರ್ವಹಿಸುವ ಮುಖ್ಯ ನಾಯಕರಾಗಿರುವುದು ಕಂಡುಬರುತ್ತದೆ. ಕದನ, ಹೋರಾಟ ಮಾಡದೆ ತನ್ನ ಮತ್ತು ಸಮುದಾಯದ ಆಶೋತ್ತರವನ್ನು ಈಡೇರಿಸುವ ವಕ್ತಾರನಾಗಿ ಕಂಡುಬರುತ್ತಾನೆ.

**ii. ಸಿದ್ಧಮಂಕ**

ಸಿದ್ಧಮಂಕನು ಕಠಿಣ ತಪಸ್ವಿಯೆಂದು ಸಿದ್ದಿಮಂಕ ಚರಿತೆಯಲ್ಲಿ ಕಂಡುಬರುತ್ತದೆ. ಸಮುದಾಯದ ಉನ್ನತಿಗೆ ಆಯಾ ಜನರು ಆತ್ಮಬಲಿ, ನರಬಲಿ, ಸಾಹಸವನ್ನು ಮೆರೆದಿದ್ದಾರೆ. ಮತ್ತೊಂದು ಕಡೆ ಮನಸ್ಸಿನ ಶಕ್ತಿಯಿಂದ ಎಲ್ಲರನ್ನು ತಮ್ಮ ಕಡೆ ಸೆಳೆಯುತ್ತಾರೆ. "ನಮ್ಮ ದೇಶದಲ್ಲಿ ಮನೆದೇವರು, ಕುಲದೇವರು, ಗ್ರಾಮದೇವರು ಎಂದೂ ಜನ ಪೂಜೆ ಮಾಡುವುದನ್ನು ನೋಡಿದರೆ ಈ ದೇವರುಗಳು ಒಂದೊಂದು ಕಲ್ಪನೆಯ ಹಿನ್ನೆಲೆಯಲ್ಲಿ ಹೊರಹೊಮ್ಮಿರುವುದು ಗೋಚರವಾಗುತ್ತದೆ. ಒಂದೊಂದು ಸಣ್ಣ ಗುಂಪಿಗೂ ಒಬ್ಬ ದೇವರಿರುವುದನ್ನು ಭಾರತೀಯ ಸಮಾಜದಲ್ಲಿ ನಾವಿಂದಿಗೂ ನೋಡುತ್ತೇವೆ. ಹೀಗೆ ಗುಂಪಿನವರಿಗೆ ದೇವರುಗಳಾದವರು ಪ್ರಾಯಶಃ ಆಯಾ ಗುಂಪಿನವರ ಯಾವುದೋ ಕಾಲದ ಮುಖಂಡರಿದ್ದು, ಅಂದಿನ ಗುಂಪಿನ ಮೇಲೆ ಅವರು ಉಂಟು ಮಾಡಿದ ಪ್ರಭಾವದ ಕುರುಹುಗಳನ್ನು ಮುಂದಿನವರು ಪುರಾಣ ಮಾಡಿ, ಕತೆ ಮಾಡಿ ಬರೆದಿರುತ್ತಾರೆ."[೧೭೩] ಸಮುದಾಯದ ನಾಯಕರು ಎಂದಿಲ್ಲೊಂದು ಸಮಸ್ಯೆಯನ್ನು ಇಟ್ಟುಕೊಂಡು ತಮ್ಮ ಧೀರತನ ತೋರಿಸುತ್ತಾರೆ. ಆಗ ಅವರು ಆ

ಗುಂಪಿನ ಮುಖಂಡತ್ವದಿಂದ ಮತ್ತಷ್ಟು ಜವಾಬ್ದಾರಿಗಳನ್ನು ಪಡೆದ ವ್ಯಕ್ತಿಯಾಗುತ್ತಾನೆ. ಹಾಗಾಗಿ ಅವರ ಅಸ್ತಿತ್ವಕ್ಕಿಂತ ಸಮುದಾಯದ ಅಸ್ತಿತ್ವವೇ ಪ್ರಮುಖವಾಗಿರುತ್ತದೆ. ಅದಕ್ಕಾಗಿ ಎಂತಹ ಕಠಿಣ ಶಿಕ್ಷೆಯನ್ನು ಅನುಭವಿಸಲು ಸಿದ್ಧನಾಗಿರುತ್ತಾರೆ. ಇದೇ ರೀತಿ ಹಾಲುಮತದವರಲ್ಲಿನ ಹೋರಾಟದ ಮನೋಧರ್ಮದ ಅಂಶವನ್ನು ಸಿದ್ಧಮಂಕ ಚರಿತೆಯಲ್ಲಿ ಅಭಿವ್ಯಕ್ತ ಪಡಿಸಿದೆ. ಸಿದ್ಧರಾಮ ಪ್ರೇರಕನಾಗಿ ಕಂಡುಬಂದರೆ ಸಿದ್ಧಮಂಕನು ನಾಯಕನಾಗಿ ಕಂಡುಬರುತ್ತಾನೆ. ಈತನಿಂದಲೇ ಆ ಕೃತಿಯು ಶ್ರೇಷ್ಠತೆಯನ್ನು ಪಡೆಯುತ್ತದೆ. ಹೆಗ್ಗಗೌಡನು ವೃತ್ತಿಯ ಬೆಳವಣಿಗೆಯ ಮಾರ್ಗವನ್ನು ತಿಳಿಸಿಕೊಟ್ಟರೆ ಸಿದ್ಧಮಂಕನು ಆ ವೃತ್ತಿಯನ್ನು ಕಲ್ಯಾಣದಲ್ಲಿ ಅವಮಾನ ಮಾಡಿದ ಪ್ರತಿಕಾರಕ್ಕೆ ಸರವೂರಿನಲ್ಲಿ ಕಠಿಣ ತಪಸ್ಸನ್ನು ಕೈಗೊಳ್ಳುತ್ತಾನೆ. ಆತನ ರಕ್ಷಣೆಗೆ ಶಿವಭಕ್ತ ಕುಡಿಯೊಕ್ಕಲ ಮಗ ಹೆಗ್ಗಗೌಡನನ್ನು ಸಿದ್ಧರಾಮನು ನೇಮಿಸುತ್ತಾನೆ.

ಸಿದ್ಧಮಂಕನು ಮರುಳಮಂಕ, ಮಂಕಯ್ಯ, ಎಂಬ ಹೆಸರಿನಿಂದ ಗುರುವಿಗಾಗಿ ಮತ್ತು ಆ ಗುರುವಿನಿಂದ ಕಲ್ಯಾಣದ ಪ್ರವೇಶಕ್ಕೆ ಅವಕಾಶವನ್ನು ಕಾಯುತ್ತಿರುತ್ತಾನೆ. ಸಿದ್ಧಮಂಕನ ತಪವು ಮದ್ದು, ಮರ, ನಾರು, ಬೇರು, ಗುಟಿಕೆ ಕೊಂಬುಗಳಿಂದ ಮಾಟ–ಮಂತ್ರವನ್ನು ಮಾಡುವ ಸಿದ್ಧರಂತಲ್ಲ. ಈತನು ಧ್ಯಾನಾರೂಢನಾದ್ಧ ತಪಸ್ವಿಯಾಗಿ ಸಿದ್ಧರಾಮನಿಗೆ ಪ್ರಿಯವಾದ ಶಿಷ್ಯನಾಗುವನು. "ಸರವೂರದೊಳು ಕೋಡುಗಲ್ಲಿನ ಮೇಲಿಹನ ಜೋಡಿಯಿಲ್ಲವು ಮಂಕ ಕಂದ ಕೂಸನು ಎಂದು ಗಾಢ ತಪವು ಎಂದೆನುತ"[೧೩೪] ಕೋಡುಗೊಲ್ಲಿನ ಮೇಲೆ ಸೂಜಿಯೂರಿ, ಅದಕ್ಕೆ ತಲೆಹಚ್ಚಿ ಕಾಲು ಮೇಲೆಮಾಡಿ ಉಗ್ರ ತಪಸ್ಸು ಮಾಡುವುದು ಹಾಲುಮತ ಸಮುದಾಯದ ಪರವಾಗಿತ್ತು ಬದಲಾಗಿ ಸ್ವಾರ್ಥವಿರಲಿಲ್ಲವೆಂದು ತಿಳಿಸುತ್ತದೆ. ಹೀಗೆ ಮಂಕ ತಂದೆಯ ತಪಸ್ಸು ಅವನನ್ನು ರಕ್ಷಿಸಿಕೊಂಡಿದ್ದ ಹೆಗ್ಗೆಗೌಡನ ಅಭೀಷ್ಟೆಯನ್ನು ಪೂರೈಸುವುದಕ್ಕಾಗಿಯೇ ಆಗಿದೆ. ಸಿದ್ಧರಾಮ, ರೇವಣಸಿದ್ಧರು, ಅಲ್ಲಮ ಪ್ರಭು ಮತ್ತು ಬಿಜ್ಜಳ ಬಸವಣ್ಣನ ಜೊತೆ ಬರುವ ಪ್ರಸಂಗದಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ.

ಸಿದ್ಧಮಂಕನು ಕೋಡುಗಲ್ಲಿಗೆ ಬಂದ ಸಿದ್ಧರಾಮನಿಗೆ ಲಿಂಗನಿಷ್ಠೆಯ ಗುರುವೆ ನೀ ಕರಣಿಸೆಂದೆನುತ ಬೇಡಿಕೊಳ್ಳುವನು. ಹಾಗೂ ಕುರುಬರನ್ನು 'ಏಳು ಬೇಲಿಯನೆ ಕಳೆದು ಹೊರ ಹಾಕಿಯೆ ಮೂಲೆಗೆ ಮುಟ್ಟದವರ ಸಾಲಿಗೆ ತಂದು ಸಲಹಿದ ಬಳಿಕ ತನ್ನ ಪಾಲಿಸೆನುತಲೆಬಿಗಿದನು"[೧೩೫] ಈ ಹಿನ್ನೆಲೆಯಲ್ಲಿ ಕಲ್ಯಾಣದಲ್ಲಿ ಏಳುನೂರಿಪ್ಪತ್ತು ಅಮರಗಣಗಳು ಸಿದ್ಧರಾಮ, ರೇವಣಸಿದ್ಧ, ಬಸವಣ್ಣ, ಅಲ್ಲಮಪ್ರಭು, ಬಿಜ್ಜಳ ರಾಜನ ಸಮ್ಮುಖದಲ್ಲಿ ಹಾಲುಮತ ಸಮುದಾಯದ ಶ್ರೇಷ್ಠತೆಯ ತೀರ್ಮಾನವು ಆಗುವುದು. ಅಲ್ಲದೆ ಶಿವಭಕ್ತರಾದ ಕರ್ಮಿಗಳನ್ನು ಅನ್ಯರೆಂದು ಭಾವಿಸಿದಕ್ಕೆ ಬಿಜ್ಜಳನಿಗೆ ಬುದ್ಧಿಕಲಿಸಿ ಎನ್ನುವ ನುಡಿಯು ರಾಜಕೀಯ ವ್ಯವಸ್ಥೆಯನ್ನು ಹೆದರಿಸುವ ಸಾಮರ್ಥ್ಯ ಹಾಲುಮತ ಸಮುದಾಯದ

ವೀರ ಪುರುಷರು ಹೊಂದಿದ್ದರೆಂದು ಕಂಡುಬರುತ್ತದೆ. ಭಂಡಾರ ಸಂಸ್ಕೃತಿಯಿಂದ ವಿಭೂತಿ ಸಂಸ್ಕೃತಿಯಾಗಿ ಪರಿವರ್ತನೆಯಾಗುವುದನ್ನು ಸೂಚಿಸುತ್ತದೆ.

ಸಿದ್ಧಮಂಕ ಚರಿತೆಯಲ್ಲಿ ಹೆಗ್ಗಗೌಡನ ಜೊತೆ ಹಾಲುಮತ ಕುಲವನ್ನು ಬಹಿಷ್ಕರಿಸಲಾಗಿರುವ ಸನ್ನಿವೇಶ ಕಂಡು ಬರುವುದು. ಕುಲವು ಹೀನವಾಗಿರುತ್ತದೆ. ಆ ಕುಲಹೀನ ಆತನ ಮಕ್ಕಳಿಂದಲೇ ಸಿದ್ಧಮಂಕನು ಸಮುದಾಯದ ಪಾವಿತ್ರ್ಯ ಗೊಳಿಸುವುದು ತಿಳಿದುಬರುತ್ತದೆ. ಹಾಗೂ ಸತ್ತ ಕುರಿಯನ್ನು ಹಾಲಕಂಬಿಯಲ್ಲಿ ಹೊತ್ತು ತಂದ್ದರಿಂದ ಗುರುವಿಗೆ ಮಾಡಿದ ಅಪವಾದವೆಂದು ಹೆಗ್ಗಗೌಡನ ಮಕ್ಕಳಾದ ತೋಹಿನಮುತ್ತ, ಚೀನಿಮುತ್ತ, ಕಾಳಮಾದ ಮುತ್ತ, ರಾಮಮುತ್ತ, ಏಕಜಡೆಯ ಮಲ್ಲಮುತ್ತ, ಸೋಯಿಮುತ್ತರು ಗುರು ಮಂಕ ತಂದೆಯ ಸನ್ನಿಧಿಯಲ್ಲಿ ತಲೆಯನ್ನು ಖಡ್ಗದಿಂದ ಕತ್ತರಿಸಿಕೊಂಡರು. ಆಗ ಮಂಕಯ್ಯನು ಹನ್ನೆರಡು ತಲೆಯನ್ನು ಶರಣರಿಗೆ ಅರ್ಪಿಸಿದನು. ಮತ್ತೆ ದೇಹಕ್ಕೆ ಅಂಟಿಕೊಂಡು ಜೀವ ಪಡೆದವು. ಇಲ್ಲಿ ಮಂಕಯ್ಯನ ಅನುಯಾಯಿಗಳು ಧರ್ಮ ಸುಭಿಕ್ಷೆಗೆ ಶಿರಚ್ಛೇದನ ಮಾಡಿಕೊಳ್ಳುವುದನ್ನು ತಿಳಿಸುತ್ತದೆ. ಇಂತಹ ಉಗ್ರ ಶಿಕ್ಷೆಯಿಂದ ಮುಂದೆ ಯಾರು ಧರ್ಮಕ್ಕಾಗಲಿ, ಸಮಾಜಕ್ಕಾಗಲಿ, ಕುಲಕ್ಕಾಗಲಿ ದ್ರೋಹವನ್ನು ಮಾಡಬಾರದೆಂದು ಸಾರುತ್ತಾರೆ. ಹೀಗೆ ತಮ್ಮ ತಲೆಯನ್ನು ಅತ್ಯಂತ ಭಕ್ತಿಯ ಭಾವಾವೇಶದಿಂದ ತನ್ನ ಇಷ್ಟದೇವರಿಗೆ ತನ್ನನ್ನೇ ಅರ್ಪಿಸುವುದು ನರಬಲಿಯಾಗಿ ಗೋಚರಿಸದೆ, ಆತ್ಮದಾನದ ನೆಲೆಯಲ್ಲಿ ಮಹತ್ವವನ್ನು ಪಡೆಯುತ್ತದೆ. ಅಂತಹ ಬಲಿದಾನಕ್ಕೆ 'ವೀರರು' ಎಂಬುದು ಸೇರಿ ಸಂಸ್ಕೃತಿಯ ವಾಹಕರಾಗುವುದು ತಿಳಿದುಬರುತ್ತದೆ.

ಸಿದ್ಧಮಂಕನು ಮತ್ತೊಂದು ಮಹತ್ ಕಾರ್ಯವೆಂದರೆ ಸಿರಿವಂತೆಯಿಂದ ಸೃಷ್ಟಿಯಾದ ಉಣ್ಣೆಕಂಕಣದವರನ್ನು ಹಾಲುಮತದಲ್ಲಿ ಶ್ರೇಷ್ಠತೆ ಹೊಂದುವಂತೆ ಮಾಡುತ್ತಾನೆ. ಉಣ್ಣೆ ಕಂಕಣದವರನ್ನೇ ಕಲ್ಯಾಣದಿಂದ ಹೊರ ಹಾಕಿರಬಹುದೆಂಬ ಪ್ರಶ್ನೆಯುಂಟಾಗುತ್ತದೆ. ಏಕೆಂದರೆ ಕುರುಬ ಸಮುದಾಯದಲ್ಲಿನ ಹತ್ತಿಕಂಕಣದವರು ಉಣ್ಣೆಕಂಕಣದವರನ್ನು ಕೀಳೆಂದು ಭಾವಿಸಿ ನೋಡುತ್ತಿರುವಾಗ, ಅನ್ಯ ಮತದವರು ಶೋಷಣೆ ವಿರುದ್ಧ ಪ್ರತಿಭಟಿಸಿರುವುದು ಸಿದ್ಧಮಂಕನ ವ್ಯಕ್ತಿತ್ವದ ಮೂಲಕ ಅಭಿವ್ಯಕ್ತಗೊಂಡಿದೆ. ಸಿದ್ಧಮಂಕನ ತಪಸ್ಸಿನ ಹೋರಾಟವು ಕಲ್ಯಾಣದ ಪ್ರವೇಶಕ್ಕೆ ಸಿದ್ಧರಾಮನ ನುಡಿಗಳು ಸಮರ್ಥನೀಯವಾಗಿವೆ.

"ಸೋತು ಬಂದವಳೀತಗೆ ಒಬ್ಬ ರಾಕ್ಷಸಿ
ನೀತಿಯನಜಿಯದೆ ನಡೆದು
ಈತನಿಂದಪಕೀರ್ತಿ ಬಂದುದು ನಿಮ್ಮಿಂದ
ಲೀತಗಾಯಿತು ಮುಕ್ತಿಯೆಂದ"[೧೩೬]

ಸಿದ್ಧಮಂಕನಿಗೆ ಸಿದ್ಧರಾಮ, ಅಲ್ಲಮ, ರೇವಣಸಿದ್ಧರು ಗದ್ದುಗೆ ಕಂಬಳಿಯನ್ನು ನೀಡಿ ಆರ್ಶೀವಾದ ಮಾಡುತ್ತಾರೆ. ಈ ಮೂಲಕ ಹಿಂದೆ ಆದ ಪಾಪಕರ್ಮವು ಈತನಿಂದ ಶುದ್ಧವಾಗುವುದು. ಜೊತೆಗೆ ಹಾಲುಮತ ಗೌಡುರುಗಳಿಗೆ ಹೆಣ್ಣುಗಳನ್ನು ಕೊಡುಕೊಳ್ಳುವ ಸಂಬಂಧದಿಂದ ಕುಲಹೀನವು ದೂರವಾಗುವುದು. ಇದಕ್ಕಾಗಿ ನೀವುಗಳು (ಕುರುಬಗೌಡ್ರು) ನೆಂಟಸ್ಥಿಕೆ ಬೆಳೆಸುವಾಗ ಐದು ಹೊನ್ನು ತೆರ ನೀಡಿರಿ. ಈ ಐದರಲ್ಲಿ ಎರಡು ಹೊನ್ನು ಮಂಕ ತಂದೆಗೆ ಸಮರ್ಪಿಸಿರಿ ಎಂದು ಸಿದ್ಧರಾಮನು ವೈವಾಹಿಕ ಸಂಬಂಧದ ಮೂಲಕ ಒಳಪಂಗಡಗಳನ್ನು ಒಂದುಗೂಡಿಸುತ್ತಾನೆ. ಈ ರೀತಿಯಾಗಿ ಮಂಕ ತಂದೆಗೆ ಅರ್ಪಿಸುವ ಹೊನ್ನ ತೆರವುವನ್ನು ಕುಳದೆಜಿಗೆ ಎಂದು ಕರೆಯಲಾಗುತ್ತದೆ. ಹಾಗೂ ಮಂಕ ತಂದೆಗೆ ಮಾಹಿಮುತ್ತನು ಕಂಬಳಿಯನ್ನು ನೆಯ್ದು ಕೊಡುವನು. ಹೀಗೆ ಮಂಕಯ್ಯನು ಹತ್ತಿಕಂಕಣ ಮತ್ತು ಉಣ್ಣೆ ಕಂಕಣದ ನಡುವೆ ಬಾಂಧವ್ಯವನ್ನು ಬೆಳೆಸುವುದರ ಜೊತೆಗೆ ಹಾಲುಮತದ ಗೌಡರಿಗೆ ವಿಭೂತಿಯನ್ನು ಕೊಡುವನು. ಇದೆಲ್ಲ ನಮ್ಮ ಸೀಮೆಯೊಳಿಹುದೆಂದು ಲಿಂಗವಿತ್ತು ಮುದ್ರೆಯೊತ್ತಿದನು. ಆಗಾಗಿ ಮಂಕಯ್ಯನ ಸಂಪ್ರದಾಯವು ಕೆಲವೊಂದು ಪ್ರದೇಶದಲ್ಲಿ ಮಾತ್ರ ಬೆಳೆಯಿತು. ವಿವಾಹ ವಿಸ್ತಾರತೆಯನ್ನು ಹೊಂದಿಲ್ಲ. ಉದಾಹರಣೆಗೆ 'ಕಂಥೆ ಸೇವೆ'ಯು ಕುರುಬರೆಲ್ಲರು ಆಚರಿಸುವುದಿಲ್ಲ. ಸೀಮಿತ ಪ್ರದೇಶಕ್ಕೆ ಮಾತ್ರ ಇದು ಆಚರಿಸುವ ಪದ್ಧತಿಯಾಗಿದೆ. ಈ ಕಂತೆಯನ್ನು ಮೈಲಿಗೆ ಮಾಡಿದರೆ ಕುಲ ನಷ್ಟವಾಗುತ್ತದೆ ಎಂದು ಕಟ್ಟಳೆಯನ್ನು ವಿಧಿಸಿದ್ದರಿಂದಲೂ ಆಚರಣೆಯ ವಿಸ್ತಾರವು ಸೀಮಿತಗೊಂಡಿರಬಹುದು.

ಹೀಗೆ ಹೆಗ್ಗಗೌಡರು ಸಿದ್ಧರಾಮನನ್ನು ಪರಮಗುರುವಾಗಿ, ಮಂಕತಂದೆಯನ್ನು ಗುರುವಾಗಿಸುವುದರ ಮೂಲಕ ಸಿದ್ಧಮಂಕನು ಕುರುಬ ಕುಲವನ್ನು ಪವಿತ್ರವಾಗಿಸುವ ವೀರನಾಗಿ ಕಂಡುಬರುತ್ತಾನೆ.

**iii. ಮಾಳಿಂಗರಾಯ**

ಜನಪದ ಕಾವ್ಯಗಳು ಸಂಘರ್ಷದೊಳಗೆ ಮನುಷ್ಯನ ಅವನತಿಯನ್ನೆ ಒಂದು ಆದರ್ಶೀಕರಣ ಎಂದು ವ್ಯಕ್ತಪಡಿಸುತ್ತವೆ. ಇದು ಜನಪದರಲ್ಲಿ ಉಳಿದು ಬಂದ ಅಪರೂಪದ ಧ್ವನಿ. ಮಾನವನ ಜೀವಂತಿಕೆ ಹಾಗೂ ಸಮಷ್ಟೀ ಪ್ರಜ್ಞೆಯನ್ನು, ಸಮುದಾಯಗಳ ತಲ್ಲಣಗಳನ್ನು ನಾಯಕನ ವ್ಯಕ್ತಿತ್ವದ ಹಿನ್ನೆಲೆಯಲ್ಲಿಯೇ ಗುರುತಿಸುವ ಪ್ರಯತ್ನವನ್ನು ಜನಪದ ಕಾವ್ಯಗಳು ಮಾಡುತ್ತವೆ. ಜನಪದ ಕಾವ್ಯಗಳಲ್ಲಿ ವೀರರು ಅತಿಮಾನುಷ, ಅಲೌಕಿಕ ವ್ಯಕ್ತಿಗಳಾಗಿ ಇವರೇ ನಂತರ ವೀರರಾಗುತ್ತಾರೆ. ಸಮುದಾಯ ಅವರನ್ನು ಸಾಮಾಜಿಕ ನೆಲೆಯಲ್ಲಿ ವೀರಪುರುಷನಾಗಿ, ಧಾರ್ಮಿಕ ನೆಲೆಗಳಲ್ಲಿ ಆರಾಧ್ಯ ದೈವವಾಗಿರುವುದು ಕಂಡುಬರುತ್ತದೆ.

"ಒಂದು ಸಂಸ್ಕೃತಿ ಹಲವು ಬಗೆಗಳಲ್ಲಿ, ಹಲವು ನೆಲೆಗಳಲ್ಲಿ ಪ್ರಸರಣಗೊಂಡಾಗ ಅದಕ್ಕೊಂದು ಸಾಂಸ್ಕೃತಿಕ ದಾರಿ ಏರ್ಪಡುತ್ತದೆ. ಅದು ಪ್ರಾದೇಶಿಕ ಕೇಂದ್ರಗಳನ್ನು ಪಡೆಯುತ್ತ ರಾಷ್ಟ್ರೀಯ ಹೆದ್ದಾರಿಗೆ ಬರುವ ತವಕದಲ್ಲಿಯೂ ಈ ನಾಯಕರುಗಳು ಇರುತ್ತಾರೆ. ಹೀಗೆಂದು ಯಾವುದೇ ಒಂದು ಪ್ರದೇಶದಕ್ಕೆ, ಗಡಿಗೆ, ಒಂದು ಕಾಲಮಾನಕ್ಕೆ ಈ ಸಾಂಸ್ಕೃತಿಕ ನಾಯಕರನ್ನು ಫಿಕ್ಸ್ ಮಾಡುತ್ತಿಲ್ಲ. ವೇದ ಪುರಾಣಗಳ ಕಾಲದಿಂದಲೂ ಈ ಬಗೆಯ ಪ್ರಾದೇಶಿಕ ದೇವತೆಗಳು ಕಾಣಿಸಿಕೊಳ್ಳುತ್ತವೆ."[೧೩೭] ಎಂದು ಹೇಳುವಲ್ಲಿ ಸಂಸ್ಕೃತಿಯು ಶ್ರಮದಿಂದ ಉದಯಿಸಿದೆ. ಅದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಪಡೆಯುತ್ತಾ, ಅದರ ಸ್ವರೂಪವು ಬೇರೆಯದಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಕುರುಬ ಸಮುದಾಯದ ಮಾಳಿಂಗರಾಯನು ಮಹಾರಾಷ್ಟ್ರ ಮತ್ತು ಕರ್ನಾಟಕದ ಗಡಿಭಾಗಗಳಲ್ಲಿರುವ ಹಾಲುಮತದವರಿಗೆ ಪ್ರಮುಖ ದೈವವಾಗಿದೆ. ಈತನು ಮೂಲತಃ ಆಕಳುಗಳನ್ನು ಕಾಯುವ ವಂಶದವನು. ಬೀರಪ್ಪನನ್ನು ಗುರುವಾಗಿ ಪಡೆಯುವುದರ ಮೂಲಕ ಕುರಿ ಕಾಯುವ ವೃತ್ತಿಯನ್ನು ಅನುಸರಿಸುವನು. ಇವರಿಬ್ಬರ ಸ್ನೇಹವೂ ಎರಡು ವೃತ್ತಿಗಳ ಪರಸ್ಪರ ಸಂಗಮವನ್ನು ಏರ್ಪಡಿಸುತ್ತವೆ. ಒಂದು ಅಲೆಯುವುದನ್ನು ಪ್ರತಿಪಾದಿಸಿದರೆ ಮತ್ತೊಂದು ನೆಲೆಯೂರುವುದನ್ನು ಪ್ರತಿಪಾದಿಸುತ್ತದೆ. ಈ ಎರಡು ವೃತ್ತಿಗಳು ಸಮನಾಗಿ ಕಂಡರು ಬೇಟೆ ಸಂಸ್ಕೃತಿಯನ್ನು ಹತ್ತಿಕ್ಕುವುದರ ಮೂಲಕ ಪಶುಪಾಲನ ಸಂಸ್ಕೃತಿಯನ್ನು ಪ್ರತಿಪಾದಿಸುತ್ತವೆ. ಕುರಿಕಾಯುವ ವೃತ್ತಿಯಿಂದ ಇಲ್ಲಿ ಪ್ರಮುಖ ಸಂಸ್ಕೃತಿಯನ್ನು ಬೆಳೆಸುವುದು ಕಂಡುಬರುತ್ತದೆ. ಹೀಗೆ ಮಾಳಿಂಗರಾಯನು ಪಶುಪಾಲನ ಸಂಸ್ಕೃತಿಯನ್ನು ಗುರು ಲಿಂಗಬೀರಣ್ಣನಿಂದ, ರಾಜಕೀಯ ಸಂಸ್ಕೃತಿಯನ್ನು ತಂದೆಯರಿಂದ, ಸಿದ್ಧಿ ಸಂಸ್ಕೃತಿಯನ್ನು ಸೋನಾರ ಸಿದ್ಧರಿಂದ ಪಡೆಯುತ್ತಾನೆ. ಕುರುಬರು ಕುರಿ–ಗೋವುಗಳನ್ನು ಎಷ್ಟೇ ದೂರ ಮೇಯಿಸಲು ಹೊರಹೋಗಿದ್ದರೂ ತನ್ನ ಮೂಲ ಸಂಸ್ಕೃತಿಯನ್ನು ಬಿಡಬಾರದೆಂದು ಹೇಳುತ್ತದೆ. ಒಂದೇ ವೇಳೆ ಮರೆತರೆ ಕಠಿಣ ಶಿಕ್ಷೆಯನ್ನು ಅವರ ಗುರುಗಳು ಅಥವಾ ಸಮುದಾಯ ವಿಧಿಸುತ್ತಿತ್ತೆಂದು ತಿಳಿಸುವುದು. ಈ ರೀತಿ ಶಿಕ್ಷೆ ಕೊಡುವುದರ ಮೂಲಕ ಸಮುದಾಯದ ರಕ್ಷಣೆ ಮಾಡುವ ಜವಬ್ದಾರಿಯ ವ್ಯಕ್ತಿಯಾಗಿ ಮಾಳಿಂಗರಾಯನನ್ನು ಚಿತ್ರಿಸಲಾಗಿದೆ. ಮತ್ತು ದಿಲ್ಲಿ ಬಾದಶಹ ತನ್ನ ಮನೆಯಲ್ಲಿ ಕಂಬಳಿ ಗದ್ದಿಗೆ ನೀಡುತ್ತಾ, ಹರನಪೂರಾ ಪಟ್ಟಣವನ್ನು ಉಂಬಳಿಯಾಗಿ ಕೊಡುತ್ತಾನೆ. ಇದರಿಂದ ಮುಸ್ಲಿಂರು ಕುರುಬರ ಮಾಳಿಂಗರಾಯನಿಂದ ಪರಾಭವಗೊಂಡಿರಬಹುದೆಂದು ತಿಳಿಸುತ್ತದೆ. ಅದಕ್ಕೆ ಈ ಹರನಪೂರ ಪಟ್ಟಣವನ್ನು ಮಾಳಿಂಗರಾಯನು ನೆಲೆಯಾಗಿಸಿಕೊಂಡಿರುವುದನ್ನು ಪುರಾಣಗಳು ಪ್ರತಿಬಿಂಬಿಸುತ್ತವೆ. ಅಲ್ಲದೇ "ಬ್ರಹ್ಮ, ಶಿವ, ವಿಷ್ಣುಗಳು ಸೇರಿ ಮುಂದಿನ ದಿನಗಳಲ್ಲಿ ರಾಜಕೀಯ ದಾನ ಮಾಡ್ರಿ ಇಲ್ಲಿ"[೧೩೮] ಎಂದು ಹೇಳುವುದು. ಇವರು ರಾಜ್ಯಾಡಳಿತ ನಡೆಸಿದ್ದರೆಂದು ತಿಳಿದುಬರುತ್ತದೆ.

ಹೀಗೆ ಮಾಳಪ್ಪನು ಹರನಪೂರ ಪಟ್ಟಣವನ್ನು ಹನ್ನೆರಡು ವರ್ಷ ಆಳ್ವಿಕೆ ನಡೆಸಿದನು. ನಂತರ ತಂದೆಗೆ ವಚನವಿತ್ತಂತೆ ಬೇಡರನ್ನು ಕೊಂದುಹಾಕಿದನು. ಇದರ ನಂತರ ಲಿಂಗ ಬೀರಣ್ಣನ ಶಿಷ್ಯನಾಗಿ ಹೊಂದುವನು. ಇಲ್ಲಿಯವರೆಗೂ ಮಾಳಪ್ಪನು ರಾಜಕೀಯವಾಗಿ ಜೀವನ ನಡೆಸುತ್ತಾ ತಂದೆಯ ಆಜ್ಞೆಯನ್ನು ಪಾಲಿಸುತ್ತ ಹಾಲುಮತ ಸಮುದಾಯದ ರಕ್ಷಕನಾಗಿರುತ್ತಾನೆ. ಬೀರಲಿಂಗನ ಶಿಷ್ಯನಾದ ನಂತರ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ಪಡೆಯುತ್ತಾನೆ. ಗುರು ಶಿಷ್ಯರ ಸಂಬಂಧವನ್ನು ಪವಾಡಗಳ ಮೂಲಕ ಸ್ಪಷ್ಟಪಡಿಸುತ್ತಾನೆ. ಗುರು ಲಭಿಸಿದ ಪರವಾಗಿ ಇಡೀ ಸಿಡಿಯಾಣ ಗ್ರಾಮಕ್ಕೆ ದಾಸೋಹ ಮಾಡಿಸುತ್ತಾನೆ. ಇಂತಹ ಅಂಶಗಳು ಕುರುಬ ಸಮಾಜದ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಕಂಡುಬರುತ್ತದೆ. ಬೀರಣ್ಣದೇವರು ಮಾಳಪ್ಪನನ್ನು ಪ್ರತಿಕ್ಷಣ ಕ್ಷಣಕ್ಕೂ ಪರೀಕ್ಷೆಗೆ ಒಳಪಡಿಸುವುದರ ಮೂಲಕ  ಹಾಲುಮತ ಸಂಸ್ಕೃತಿಯನ್ನು ಗಟ್ಟಿಗೊಳಿಸುವುದು ವ್ಯಕ್ತವಾಗಿದೆ.

ಮಾಳಿಂಗರಾಯ ತಾಯಿ ಕಣಬಾಯಿಗೆ ಗುರುವಿನ ಬಗ್ಗೆ ಪ್ರಶಂಸೆಗೊಳಿಸುವಾಗ ಬೀರಪ್ಪನು ವಿಷದ ಮಳೆ, ನದಿಯ ರಭಸ, ಹಾವು, ಚೋಳುಗಳು ಮೈ ಮೇಲೆ ಹರಿದಾಡುವಂತೆ ಮಾಡಿದರು ಲೆಕ್ಕಿಸದೆ ಗುರುವಿನ ಬಗ್ಗೆ ಹೊಗಳುತ್ತಾನೆ. ನಂತರ ಹಾವು ಹಿಡಿದು ಕೊರಳಲ್ಲಿ ಹಾಕಿಕೊಳ್ಳುವುದು. ಚೇಳಿನಿಂದ ಉಂಗುರ ಮಾಡಿಕೊಳ್ಳುವುದು ಈ ರೀತಿಯ ಅಡ್ಡಿಗಳು ತನ್ನ ಉನ್ನತಿಯನ್ನು ಪರೀಕ್ಷಿಸಲು ಮಾಡಿದಂತಹ ಪರೀಕ್ಷೆಯಾಗಿದೆ. ಸಮಾಜದ ಅನ್ಯರನ್ನು ಲೆಕ್ಕಿಸದೆ ತನ್ನತನವನ್ನು ಬಿಟ್ಟುಕೊಡದ ಭಾವನೆಯನ್ನು ತಿಳಿಸುತ್ತದೆ. ಜೊತೆಗೆ ಕಣ್ಣಿಲ್ಲದ ನಾಗರಹಾವಿಗೆ ಕಣ್ಣುಕೊಡುವನು, ಸೆರೆಯಲ್ಲಿದ್ದ ಪಾಂಡವರ ಧರ್ಮರಾಯನನ್ನು ಬಿಡಿಸುವನು. ಹೀಗೆ ತಾವು ಸಂಚರಿಸಿದ ಪ್ರದೇಶಗಳಲ್ಲಿ ಕಲ್ಯಾಣ ಕಾರ್ಯವನ್ನು ಮಾಡಿ ನೆಲೆಸುವ ವೀರನಾಗಿ ಚಿತ್ರಣಗೊಂಡಿದ್ದಾನೆ. ಹೀಗೆ ಹುಲಜಂತಿಯಲ್ಲಿ ಬೀರಣ್ಣ ಮತ್ತು ಮಾಳಪ್ಪರು ಶಾಶ್ವತವಾಗಿ ನೆಲೆಯನ್ನು ಪಡೆಯುತ್ತಾರೆ. ಜೊತೆಗೆ ಅನೇಕರ ಸಹಾಯವನ್ನು ಪಡೆಯುವುದು ಕಂಡುಬರುವುದು. ಬೀರಣ್ಣ ಹುಲಿಗಿಣ್ಣ ಬೇಡುವುದು ಮಾಳಪ್ಪನ ಸಾಹಸದ ಪ್ರತೀಕವಾಗಿದೆ.

ಗುರುವಿನ ಬಯಕೆಯನ್ನು ಪೂರೈಸಲು ಮಾಳಪ್ಪನು ಪ್ರಾಣವನ್ನು ಪಣಕ್ಕಿಡುವ ವ್ಯಕ್ತಿಯಾಗಿದ್ದಾನೆ. ಗಂಗೀ ಮಾಳಮ್ಮನಿಂದ ಭಂಡಾರ ಮತ್ತು ಹುಲಿಗಳ ಇರುವಿಕೆಯನ್ನು ತಿಳಿದುಕೊಂಡು ಹೋಗುವನು. ಗುಹೆಯಲ್ಲಿನ ಹುಲಿ ಮರಿಗಳಿಗೆ ಕಣ್ಣ ಬೇನೆಯಿಂದ ಕಣ್ಣು ಕಾಣುಸುತ್ತಿರಲಿಲ್ಲ. ಅದೇ ಸಂದರ್ಭದಲ್ಲಿ ಸರ್ಪವು ಅವುಗಳನ್ನು ಕೊಲ್ಲಲು ಬರುತ್ತದೆ. ಸರ್ಪದಿಂದ ಹುಲಿಯ ಮರಿಗಳನ್ನು ಕಾಪಾಡಿ, ಭಂಡಾರದಿಂದ ಕಣ್ಣು ಕೊಡುತ್ತಾನೆ. ಹೀಗೆ ಮಾಳಪ್ಪನು ಹುಲಿಮರಿಯನ್ನು ತಂದು ಬೀರಣ್ಣ ಆಟದ ವಸ್ತುವಾಗಿ ಮಾಡುವುದರ ಜೊತೆಗೆ ಹುಲಿಜಂತಿಯ ಹೆಬ್ಬಾಗಿಲಿಗೆ ಹುಲಿಯ ಚಿತ್ರ ಬರೆಯಿಸುವನು.

ಹುಲಿಯನ್ನು ಪಡೆಯುವುದರ ಮೂಲಕ ವೀರಯೋಧನಾಗಿ ಚಿತ್ರಣಗೊಳ್ಳುವನು. ಹುಲಿಯು ಸಮುದಾಯದ ಬೌದ್ಧಿಕ ಮತ್ತು ದೈಹಿಕ ಬಲದ ಸಂಕೇತವಾಗಿ ಕಂಡುಬರುತ್ತದೆ.

ಮಾಳಿಂಗರಾಯನು ಬೀರಣ್ಣನ ಪರಮ ಭಕ್ತ ಹಾಗೂ ಜೊತೆಗೆ ಶಿಷ್ಯನಾಗಿದ್ದನು. ಮಾತೃ ಸಂಸ್ಕೃತಿಯ ಆರಾಧಕರಾಗಿದ್ದನೆಂದು ತಿಳಿದುಬರುವುದು. ಈತನ ಮನೆತನದ ದೇವತೆ ಇಜೇರಿ ಮಲಕವ್ವ ಇವರು ಪಶುಪಾಲನೆಯನ್ನು ಹೊಂದಿದ್ದರಿಂದ ಆ ದೇವತೆಯನ್ನು ಬುಟ್ಟಿಯಲ್ಲಿ ಹಾಕಿಕೊಂಡು ಹೋಗುತ್ತಿದ್ದರು.

"ಇಜೇರಿಯ ಮಲಕವ್ವನೇ ಮನಿಯ ದೇವರಿದ್ದಾಳ

ಗೋಪಾಳಪುಟ್ಟಿಯ ಒಳಗೇನೆ ಇಜೇರಿಯ ಮಲಕಟ್ಟನೆ

ಇಜೇರಿಯ ಮಲಕವ್ವನೆ ಗೋಪಾಳ ಪುಟ್ಟಿಯ ಒಳಗೇನ

ಗೋಪಾಳಪುಟ್ಟಿಯ ಒಳಗೇನೆ ತಾನೆ ಬರುತಾಳೇನಯ್ಯಾ"[೧೫]

ಮಾಳಿಂಗರಾಯನು ಮಾತೃ ಸಂಸ್ಕೃತಿಯ ಮೂಲದಿಂದ ಬಂದ ವ್ಯಕ್ತಿಯಾದುದ್ದರಿಂದ ಭಂಡಾರವೇ ಈತನಿಗೆ ಪ್ರಮುಖ ವಸ್ತುವಾಯಿತು. ಹಾಲುಮತದವರಲ್ಲಿಯೇ ಶಿವನನ್ನು ಆರಾಧಿಸಿದರೂ ಭಂಡಾರವೇ ಅವರ ದೈವಕ್ಕೆ ಸಮ. ಇದು ಮೂಲತಃ ಮಾತೃ ಸಂಸ್ಕೃತಿಯಿಂದ ಬಂದಿರುವಂತಹದ್ದು. ಕೆಲ ಕಾಲದ ನಂತರ ಅನ್ಯ ಪಂಥಗಳ ಗಾಢವಾದ ಸಂಪರ್ಕ ಹೊಂದಿದ್ದರಿಂದ ವಿಭೂತಿ ಸಂಸ್ಕೃತಿಯು ಹಾಲುಮತದವರಲ್ಲಿ ಬೆಳೆದಿರುವುದು ಕಂಡುಬರುತ್ತದೆ. ಭಂಡಾರ ಮತ್ತು ಕಂಬಳಿಯು ಮಾಳಿಂಗರಾಯನ ಪಂಥದವರ ಪ್ರಮುಖ, ಪಾವಿತ್ರ್ಯವನ್ನು ಹೊಂದಿದ ಸಾಮಾಗ್ರಿಗಳು. ಅವುಗಳಿಲ್ಲದೆ ಯಾವ ಕಾರ್ಯವೂ ಪೂರ್ಣಗೊಳ್ಳುವುದಿಲ್ಲ ಎಂದು ನಂಬಿದ್ದಾರೆ. ಸಂಸ್ಕೃತಿಯಲ್ಲಿ ಜನಾಂಗದ ಮುಖ್ಯಸ್ಥರು, ಹಿರಿಯರು, ವೀರರು ಲೌಕಿಕ ಜೀವನದಲ್ಲಿ ಪ್ರಭಾವಶಾಲಿ ವ್ಯಕ್ತಿಗಳಾಗಿ ಜೀವಿಸಿ, ಸತ್ತ ನಂತರವೂ ತಮ್ಮ ಪ್ರಭಾವವನ್ನು ಉಳಿಸಿಹೋಗಿರುತ್ತಾರೆ. ಅವರು ಭೌತಿಕವಾಗಿ ಅವನತಿ ಹೊಂದಿದ್ದರು. ಅವರ ಅಂತರಆತ್ಮ ಬದುಕಿರುವ ಸಮುದಾಯಕ್ಕೆ ಒಳಿತನ್ನು ಇಲ್ಲವೆ ಕೆಟ್ಟದನ್ನೂ ಮಾಡುವ ಶಕ್ತಿಯಿರುತ್ತದೆಂದು ನಂಬಿದ್ದಾರೆ. ವ್ಯಕ್ತಿ ಲೀನವಾದ ನಂತರ ಹಿರಿಯರ ಪೂಜೆಯೆಂದು ಸ್ಮರಿಸಿಕೊಳ್ಳುತ್ತಾ ಅವರಿಗೆ ಗೌರವವನ್ನು ಸೂಚಿಸುತ್ತಾರೆ. ಈ ರೀತಿಯಾಗಿಯೇ ವೀರ ಮಾಳಿಂಗರಾಯನ ಆರಾಧನೆಯು ಪ್ರಚಲಿತದಲ್ಲಿದೆ.

"ಪೂರ್ವಜರ ಸಂಪ್ರದಾಯದ ವಿಶೇಷ ಗುಣವೆಂದರೆ ಸತ್ತ ವ್ಯಕ್ತಿಗಳನ್ನು ಮನುಷ್ಯ ಮಾತ್ರದವರೆಂದು ಭಾವಿಸದೆ, ದೈವಾಂಶ ಸಂಭೂತರೆಂದೇ ಪರಿಗಣಿಸುವುದು. ಈ ರೀತಿಯ ಆರಾಧನಾ ಸಂಪ್ರದಾಯ ಕರ್ನಾಟಕದಲ್ಲಿಯೂ ಪ್ರಚಲಿತವಿರುವುದನ್ನು ನಾವು ಗಮನಿಸಬಹುದು. ಒಂದು ಕಾಲದಲ್ಲಿ ವೀರನಾಗಿ ಮೆರೆದು ಅಸಹಾಯ ಶೂರನೆನಿಸಿದ ಕುಮಾರರಾಮ, ತನ್ನ ಚಿಕ್ಕಮ್ಮನ

ಕುಹಕಕ್ಕೆ ಬಲಿಯಾದರೂ, ತನ್ನ ಆದರ್ಶವನ್ನೂ ಬಿಡದೆ ಮಡಿದ. ಆ ಕುಮಾರರಾಮನ 'ಪರನಾರೀ ಸೋದರತ್ವದ' ಆದರ್ಶವನ್ನು ಕಂಡು ಆಕರ್ಷಿತರಾಗಿ ಅವನಿಗೊದಗಿದ ದುರ್ಮರಣಕ್ಕೆ ಮರುಗಿದ ಬೇಡರ ಕುಲದ ಜನತೆ ಅವನನ್ನು ತಮ್ಮ ಕುಲದೇವತೆಯನ್ನಾಗಿಯೇ ಸ್ವೀಕರಿಸಿತು. ಕುರುಬ ಜನಾಂಗದವರಲ್ಲಿ ಪ್ರಚಲಿತದಲ್ಲಿರುವ ಬೀರ ದೇವರ ಆರಾಧನೆಯೂ ಸಹ ಇದೇ ರೀತಿಯ ವೀರನ ಆರಾಧನೆಯಲ್ಲಿಯೇ ಮೂಲವನ್ನು ಪಡೆದಿರಬೇಕು. ಕಳೆದ ಶತಮಾನದಲ್ಲಿ ಬ್ರಿಟಿಷರೊಂದಿಗೆ ಹೋರಾಡಿ, ತನ್ನ ಒಡನಾಡಿಗಳ ಕುಹಕ ತಂತ್ರದಿಂದ ಮರಣವನ್ನಪ್ಪಿದ ಸಂಗೋಳ್ಳಿರಾಯಣ್ಣ ಸತ್ತ ಕೆಲವೇ ದಿನಗಳಲ್ಲಿ ಮಕ್ಕಳಿಲ್ಲದವರಿಗೆ ಮಕ್ಕಳನ್ನು ದಯಪಾಲಿಸುವ ಸಂತಾನ ದೇವರಾದ ಎಂಬ ಅಂಶವನ್ನು ಗಮನಿಸಿದಾಗ, ಈ ರೀತಿಯ ಆರಾಧನೆಯ ಗಾಢ ಪ್ರಭಾವದ ಅರಿವಾಗುತ್ತದೆ."[೧೮೦] ಹೀಗೆ ಸಾಮಾನ್ಯ ವ್ಯಕ್ತಿಗಳು ದೇವರುಗಳಾಗಿ ಸ್ಮಾರಕಗಳಲ್ಲಿ ಆರಾಧನೆಯನ್ನು ಕ್ರಮಬದ್ಧವಾಗಿ ಪಡೆಯುವ ದೈವಗಳಾಗಿರುತ್ತವೆ. ಸತ್ತು ಹೋದ ವ್ಯಕ್ತಿಯ ಸಮಾಧಿಯೇ ಸ್ಮಾರಕವಾಗಿ ನಿರ್ಮಾಣಗೊಂಡು ನಿರ್ದಿಷ್ಟ ಸ್ಥಳದ ಮಾಹಿತಿಯನ್ನು ಒದಗಿಸುತ್ತವೆ. ಈ ಹಿನ್ನೆಲೆಯಲ್ಲಿ ಮಾಳಿಂಗರಾಯ ಮತ್ತು ಆತನ ತಂದೆಯ ಸಮಾಧಿಗಳು 'ಸಮಾಧಿಲಿಂಗ'ವೆಂದು ತಿಳಿದುಬರುವುದು. ಆತ್ಮಕ್ಕೆ ಸಮಾಧಿಯು ಸಂಕೇತವಾಗಿ ಆಚರಣೆಯ ಒಂದು ಭಾಗವಾಗಿದೆ. ಇಂದಿಗೂ ಕುರುಬ ಗುರು ಒಡೆಯರು ಸತ್ತ ನಂತರ ಆತನ ಸಮಾಧಿಯ ಮೇಲೆ ಕಲ್ಲಿನ ಸ್ಮಾರಕವನ್ನು ನಿರ್ಮಿಸುವ ರೂಢಿಯು ಇಂದಿಗೂ ಇದೆ. ಪ್ರತಿ ವರ್ಷಕ್ಕೊಮ್ಮೆ ಆ ಸಮಾಧಿಗೆ ಸುಣ್ಣ ಹಚ್ಚಿ, ಗಂಜಲ ಸಾರಿಸಿ ಪೂಜೆಯನ್ನು ಮಾಡುತ್ತಾರೆ. ಬಟ್ಟೆಯನ್ನು ಮನೆಯಲ್ಲಿ ಅವರ ಹೆಸರು ಹೇಳಿ ಏರಿಸಿ, ಲೋಭಾನ, ಧೂಪದಿಂದ ಆತ್ಮಗಳನ್ನು ಶಾಂತಿಗೊಳಿಸುವ ಪದ್ಧತಿಯೂ ಇತ್ತೀಚಿನ ದಿನಗಳಲ್ಲಿಯೂ ಕಂಡುಬರುತ್ತದೆ. ಇದೇ ರೀತಿಯಾಗಿ ಮಾಳಿಂಗರಾಯನು ಸಾಂಸ್ಕೃತಿಕ ನಾಯಕನಾಗಿ ಗೋವುಗಳನ್ನು ರಕ್ಷಣೆ ಮಾಡಿ ಪೀಳಿಗೆಯನ್ನು ಬೆಳೆಸುತ್ತಾನೆ. ಬೇಡರ ತಲೆಯನ್ನು ಬಲಿಕೊಟ್ಟು ತಮ್ಮ ಸಮುದಾಯದ ವೀರತ್ವವನ್ನು ತೋರಿಸುವಲ್ಲಿ ಮಾಳಿಂಗರಾಯ ಪ್ರಮುಖ ಪಾತ್ರ ವಹಿಸುತ್ತಾನೆ. ಯಾವ ಸಮುದಾಯವು ತನಗೆ ಉಪದ್ರವ ಕೊಡುತ್ತದೆಯೋ ಅದನ್ನು ತನ್ನಲ್ಲಿ ಸೇರಿಸಿಕೊಳ್ಳದೆ ಸಂಘರ್ಷಗಳು ನಡೆದಿರುವುದನ್ನು ತಿಳಿಸುತ್ತದೆ. ಕೆಲಕಡೆಗಳಲ್ಲಿ ವೀರ ಎಂಬುದು ಅವರು ಹೊಂದಿದ್ದ ಪ್ರಾಣಿಗಳಿಂದಲೂ ನಿರ್ಧರಿತವಾಗುತ್ತದೆ. ಅವು ವ್ಯಕ್ತಿಯ ಪರಾಕ್ರಮ, ಶಕ್ತಿ, ಸಾಮರ್ಥ್ಯದ ಪ್ರತೀಕವಾಗಿ ಕಂಡುಬರುತ್ತವೆ. ಟಗರು, ಕುದುರೆ, ನಾಯಿ, ಹುಲಿಗಳು ಕಾಳಗವನ್ನು ಮಾಡುವ ಪ್ರಾಣಿಗಳು. ಅಂದರೆ ತಮ್ಮತನವನ್ನು ಉಳಿಸಿಕೊಳ್ಳಲು ಇವುಗಳು ಹೋರಾಡುವ ಸಾಮರ್ಥ್ಯವನ್ನು ಹೊಂದಿವೆ. ಆದ್ದರಿಂದ ಇವುಗಳು ಆಯಾ ವ್ಯಕ್ತಿಗಳ ಮಾರ್ಬಲವನ್ನು ಸೂಚಿಸುವಲ್ಲಿ ಸಹಾಯಕವಾಗಿವೆ.

ಹುಲಿಯನ್ನು ತಂದು ಹುಲಿಯಗಿಣ್ಣವನ್ನು ಲಿಂಗಬೀರಣ್ಣನಿಗೆ ಅರ್ಪಿಸುವುದು. ಹುಲಿಮರಿಗಳ ಜೊತೆ ಆಟವಾಡುವುದು, ಅವುಗಳನ್ನು ತನ್ನ ಊರಿನ ಅಗಸಿಯ ಬಾಗಿಲಿನ ಸಂಕೇತ ಮಾಡಿಕೊಳ್ಳುವುದು ಸಾಹಸದ ಪ್ರತೀಕವೇ ಆಗಿದೆ. ಈ ಮೂಲಕ ತನ್ನ ಜನಾಂಗಕ್ಕೆ ನಿರ್ದಿಷ್ಟ ಸಂಸ್ಕೃತಿಯನ್ನು ನೀಡಿದ ವ್ಯಕ್ತಿಯಾಗಿ ಮಾಳಪ್ಪನು ಗುರ್ತಿಸಲ್ಪಡುತ್ತಾನೆ. ನಂತರ ವೀರನೆಂದರೆ ಕತ್ತಿ, ಗುರಾಣಿ ಹಿಡಿದು ಹೋರಾಡಿ ಮಡಿಯುವುದಾಗಲಿ, ಮತ್ತೊಬ್ಬರ ಜೊತೆಗೆ ಸಂಘರ್ಷ ಮಾಡುವುದರಿಂದ ವೀರ ಎನ್ನುವ ಪಟ್ಟ ಬರುವುದಿಲ್ಲ. ಬದಲಾಗಿ ಸಮುದಾಯದ ಜನತೆಯನ್ನು ಧಾರ್ಮಿಕ ನೆಲೆಯ ಕಡೆಗೆ ಪರಿವರ್ತನೆ ಮಾಡಿದವರು ಸಹ ಸಾಂಸ್ಕೃತಿಕ ವೀರರಾಗುವರೆಂದು ಮಾಳಿಂಗರಾಯನ ಧಾರ್ಮಿಕ ಹೋರಾಟದಿಂದ ಸ್ಪಷ್ಟವಾಗುತ್ತದೆ.

### iv. ಗೊಲ್ಲಾಳೇಶ್ವರ

ಗೊಲ್ಲಾಳೇಶ್ವರ ಪುರಾಣವು ಹಾಲುಮತವನ್ನು ಕುರಿತು ಹೇಳುವ ವಿಶಿಷ್ಟ ಕೃತಿಯಾಗಿದೆ. ಇದರ ಪರಿಸರವೂ ಬಿಜಾಪುರದ ಗೊಲಗೇರಿ ಗ್ರಾಮದ ವೀರನಾಯಕನಿಗೆ ಸಂಬಂಧಿಸಿದ ಕಾವ್ಯ ಈತನ ಬಗೆಗೆ ಅನೇಕ ಕವಿಗಳು ತಮ್ಮ ಕೃತಿಯಲ್ಲಿ ಉಲ್ಲೇಖಿಸುತ್ತಾರೆ. ಇದರಿಂದ ಆ ಉಲ್ಲೇಖಗಳಿಗೂ ಈಗ ದೊರೆತಿರುವ ಗೊಲ್ಲಾಳೇಶ್ವರ ಪುರಾಣದ ವಸ್ತುವಿಗೆ ತುಂಬಾ ಸಾಮೀಪ್ಯತೆ ಇದೆ. ಚಾರಿತ್ರಿಕವಾಗಿ ಬದುಕಿ ಬಾಳಿದ ಗೊಲ್ಲಾಳನು ಮೂಲತಃ ಕುರುಬ ಸಮುದಾಯದ ವ್ಯಕ್ತಿಯೆಂದು ಎಲ್ಲ ಕೃತಿಗಳಿಂದ ಕಂಡುಬರುತ್ತದೆ. ಹಾಲುಮತದಲ್ಲಿ ಬರುವ ಪ್ರತಿಯೊಬ್ಬ ವ್ಯಕ್ತಿಯು ವಿಭಿನ್ನ ರೀತಿಯಲ್ಲಿ ಸಾಂಸ್ಕೃತಿಕ ವೀರರಾಗಿ ರಂಜಿಸುತ್ತಾರೆ. ಶಾಂತಮುತ್ತಯ್ಯ ಹಾಲುಮತದಲ್ಲಿನ ಒಂದು ಸಂಪ್ರದಾಯವನ್ನು ಹುಟ್ಟು ಹಾಕಿದರೆ, ಮೈಲಾರಲಿಂಗ ಮತ್ತೊಂದು ರೀತಿಯಲ್ಲಿ ಹೋರಾಟ ಮಾಡಿ ಅಸ್ಮಿತೆಯನ್ನು ಕಾಯ್ದುಕೊಂಡ ವ್ಯಕ್ತಿಯಾಗಿ ಕಂಡುಬರುತ್ತಾನೆ. ಮೈಲಾರಲಿಂಗನ ವ್ಯಕ್ತಿತ್ವವು ಕುತಂತ್ರದಿಂದಲೇ ತಮ್ಮ ತನವನ್ನು ಉಳಿಸಿ–ಬೆಳೆಸಲು ಸಾಧ್ಯವೆಂದು ತೋರಿಸಿಕೊಟ್ಟರೆ, ಸಿದ್ಧಮಂಕ, ಶಾಂತಮುತ್ತಯ್ಯ, ಮಾಳಿಂಗರಾಯರು ಶುದ್ಧತ್ವದಿಂದ ಧರ್ಮ ಬೋಧನೆಯನ್ನು, ಹೋರಾಟವನ್ನು ಮಾಡುತ್ತಾರೆ. ಹಾಲುಮತ ಪುರಾಣಗಳಲ್ಲಿ ಮೂಲ ಪಂಗಡ, ಉಪಪಂಗಡಗಳಿಗೆ ಆಧ್ಯತೆ ಕೊಟ್ಟರೆ, ಗೊಲ್ಲಾಳಯ್ಯನ ಪುರಾಣದಲ್ಲಿ ಆ ತಾರತಮ್ಯವನ್ನು ಹೋಗಲಾಡಿಸುವ ಕಾರಣಕ್ಕಾಗಿಯೇ ರಚನೆಯಾಗಿದೆ ಎನ್ನುವಂತೆ ಕಂಡುಬರುತ್ತದೆ. ಗೊಲ್ಲಾಳನ ವ್ಯಕ್ತಿತ್ವವು ಸಂಪೂರ್ಣ ವೀರಶೈವದಿಂದ ಪ್ರಭಾವಗೊಂಡಿರುವುದನ್ನು ಈ ಕೃತಿಯು ಚಿತ್ರಿಸುತ್ತದೆ. ಸಿದ್ಧರಾಮನಂತೆಯೇ ಗೊಲ್ಲಾಳೇಶ್ವರ ಪುರಾಣವು ಆರಂಭಗೊಳ್ಳುವುದು ವಿಶೇಷ. ತದನಂತರ ಗುರುವಿಲ್ಲದೆ ಜೀವನ್ಮುಕ್ತಿ ಅಸಾಧ್ಯವೆಂದು ತೋರಿಸುತ್ತಾನೆ.

ಕಾಟಕೋಟನೆಂಬ ಕುರುಬನ ಮಗನೇ ಗೊಲ್ಲಾಳ. ಈತನು ಬಾಲ್ಯದಲ್ಲಿ ಮೃಡನಾಗಿ ಬೆಳೆಯುತ್ತಾನೆ. ಸುಗ್ಗಳೆಯು ಗೊಲ್ಲಾಳನ ತಾಯಿ. ಇತರ ಬಾಲಕರಿಗಿಂತ ವಿಚಿತ್ರ ವ್ಯಕ್ತಿತ್ವವನ್ನು

ಹೊಂದಿರುವ ಗೊಲ್ಲಾಳನು ಶ್ರೀಶೈಲಕ್ಕೆ ಹೋಗಿಬರುವವರಿಗೆ ಲಿಂಗ ತರಲು ಹೇಳುತ್ತಾನೆ. ಆದರೆ ಆ ಜಂಗಮರು ಮರಳಿ ಪರೀಕ್ಷೆಯಲ್ಲಿ ಬರುವಾಗ ಲಿಂಗ ತರದೆ ಬರುತ್ತಾರೆ. ಅಲ್ಲದೆ ಗೊಲ್ಲಾಳನಿಗೆ ಕುರಿ ಹಿಕ್ಕೆಯೆ ಲಿಂಗವೆಂದು ಹೇಳಿ ಪೂಜೆಯ ವಿಧಾನವನ್ನು ತಿಳಿಸಿ ಹೋಗುವರು. ಅವರ ಆದೇಶದಂತೆಯೇ ಇತ್ತ ಗೊಲ್ಲಾಳನು ನಿರ್ಮಲವಾಗಿ ಶ್ರದ್ಧಾಭಕ್ತಿಯಿಂದ ದಿನಾಲು ಕುರಿಯ ಹಾಲನ್ನು ಕುರಿಯ ಹಿಕ್ಕಿಯ ಲಿಂಗಕ್ಕೆ ಅರ್ಪಿಸುತ್ತಿರುತ್ತಾನೆ. ಇದನ್ನು ಕಂಡ ತಂದೆಯು ಆ ಲಿಂಗವನ್ನು ಕಾಲಿನಿಂದ ಒದೆಯುತ್ತಾನೆ. ಲಿಂಗಕ್ಕೆ ಅವಮಾನ ಮಾಡಿದಕ್ಕೆ ಗೊಲ್ಲಾಳ ತಂದೆಯ ಶಿರಚ್ಛೇದನ ಮಾಡುತ್ತಾನೆ. ಇಂತಹ ಭಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ವರ ಕೇಳಲು ಹೇಳುವನು. ಆಗ ಗೊಲ್ಲಾಳನು ತಂದೆಯ ಜೀವವನ್ನು ಕೊಡುವಂತೆ ಬೇಡಿಕೊಳ್ಳುವನು.

"ಗೊಲ್ಲಾಳ ಜನಕನಿಗಲ್ಲ ಪ್ರಾಣವನಿತ್ತು
ಮಲ್ಲಿಕಾರ್ಜುನ ಕರುಣದಲಿ
ಗೊಲ್ಲೇಶ್ವರಲಿಂಗ ದುರ್ಲಭ ನಿಜಗೆ
ದೊಲ್ಲಭನೆಂಬ ನಾಮವನು"[೧೯೧]

ಈ ಪದ್ಯವು ಗೊಲ್ಲಾಳನು ಮೃಡ ಭಕ್ತನಾದರು ಅಚಲ ನಂಬಿಕೆಯನ್ನು ಹೊಂದಿದ್ದ ದೃಢ ಮನಸ್ಸಿನ ವ್ಯಕ್ತಿಯಾಗಿ ಕಂಡುಬರುತ್ತಾನೆ. ರಾಘವಾಂಕನ ಸಿದ್ಧರಾಮ ಚಾರಿತ್ರ ಕೃತಿಯ ಪ್ರಭಾವವನ್ನು ಈ ಪುರಾಣಕಾವ್ಯದಲ್ಲಿ ಕಾಣುತ್ತೇವೆ. ಆದರೂ ಅಲ್ಲಿನ ಸಿದ್ಧರಾಮನ ವ್ಯಕ್ತಿತ್ವಕ್ಕಿಂತ ಗೊಲ್ಲಾಳಯ್ಯನ ವ್ಯಕ್ತಿತ್ವದ ನೆಲೆಯ ವಿಶಿಷ್ಟವಾಗಿದೆ. ಅಂದರೆ ಗೊಲ್ಲಾಳನು ತಂದೆಯ ಶಿರಚ್ಛೇದನ ಮಾಡಿ ಮತ್ತೆ ಶಿವನಿಂದ ತಂದೆಯ ಜೀವ ಪಡೆಯುವುದರ ಮೂಲಕ ವೀರಪುರುಷನಾಗಿ ಕಂಡುಬರುವನು. ಗೊಲ್ಲಾಳನು ಗೊಲ್ಗೇರಿಯಲ್ಲಿ ಐಕ್ಯನಾದ ನಂತರ ಆರಾಧನೆಯ ವ್ಯಕ್ತಿಯಾಗಿದ್ದಾನೆಂದು ಪುರಾಣದಲ್ಲಿ ಈ ರೀತಿಯ ಉಪಕಥೆಗಳಿಂದ ತಿಳಿದುಬರುತ್ತದೆ.ಈತನು ಭೂಮಿಯಲ್ಲಿ ಸ್ಥಾವರ ಲಿಂಗದ ಸ್ಥಾಪನೆಯನ್ನು ಮಾಡಿದ ಕಾರಣ ಈತನೇ ದೇವವನಾಗಿ ಪರಿವರ್ತನೆಯಾಗುವನು.

"ಕಂಬದ ನಾಮವಿದೆಂಬ ಮೇಗಣಗವಿ
ಯೆಂಬ ಬಗೆಯೂ ಪೇರ್ಚರವು
ಕುಂಭಗತಿ ಮಹತ್ತಿಂಬಿನಲೊಪ್ಪುವ
ನಂಬರ ಮಣಿತೇಜದಲಿ"[೧೯೨]

ಗೊಲ್ಲಾಳನ ಭಕ್ತರು ಗೊಲ್ಲಾಳಯ್ಯನ ಪುರಾಣವನ್ನು ಎಲ್ಲರಿಗೂ ತಿಳಿಸುತ್ತಿದ್ದರು. ಪುರಾಣ ಹೇಳುವುದಕ್ಕೆ ಕಂಬದ ಮನೆಯನ್ನು ಸಭೆಯಾಗಿಸಿಕೊಂಡಿದ್ದರು. ಅಲ್ಲಿಗೆ ಕುಂತಳದೇಶದ ಊರಿನ ಜನರು ಬಂದು ಸೇರುತ್ತಾ ಶಿವಸ್ಮರಣೆ ಮಾಡಲಾಗುತ್ತಿತ್ತು. ಕಂಬದ ಮನೆಯ ಮಲ್ಲಪ್ಪನು ಅಂದು

ಶಿವಪೂಜೆಯ ಜವಬ್ದಾರಿಯನ್ನು ಹೊಂದ್ದಿದ್ದನ್ನು ತಿಳಿಸುತ್ತದೆ. ಆದ ಕಾರಣ ಆತನ ಮನೆತನಕ್ಕೆ ಈ ರೀತಿಯ ಹೆಸರು ಬರಲು ಕಾರಣವಾಯಿತು.

"ಅಂದು ಕಂಬದ ದೇವರೆಂದು ವಂದಿಸಿ ಮುದ
ದಿಂದಲಿ ಕರೆಯೇ ಮಾಹತ್ತು
ಬಂದುದು ಯಿನಾಮವೆಂದುಸುರಿದರ
ನಂದದ ಚೆನ್ನಮಲ್ಲೇಶದೇವ"[೧೫೩]

ಹೀಗೆ ಗೊಲ್ಲಾಯ್ಯನ ಪುರಾಣವನ್ನು ಕಂಬದ ಮನೆಯವರು ಹೇಳಿಕೊಂಡು ಬರುತ್ತಿದ್ದರೆಂದು ತಿಳಿಸುತ್ತದೆ. ಆಗಾಗಿ ಕಂಬದ ಮಲ್ಲೇಶ ಎಂಬ ವ್ಯಕ್ತಿನಾಮ ಉಂಟಾಗುತ್ತದೆ. ಹೀಗೆ ಗೊಲ್ಲಾಳನು ದೇವರಾಗಿ, ವ್ಯಕ್ತಿಯಾಗಿ ಮತ್ತು ಮನೆತನದ ಹೆಸರಾಗಿಯು ಸಮಾಜದಲ್ಲಿ ಬಳಕೆಯಾಗುತ್ತದೆಂದು ತಿಳಿಸಿಕೊಡುತ್ತದೆ.

ಗೊಲ್ಲಾಳನು ಐಕ್ಯದ ನಂತರವು ಮಹಿಮೆಯನ್ನು ಹೊಂದಿದ್ದನೆಂದು ಈ ರೀತಿಯ ಕಥೆಗಳನ್ನು ಕೊಡಲಾಗಿದೆ. ಕಂಬನಾಮದ ಮನೆಯ ಮಲ್ಲಪ್ಪ ಮತ್ತು ಮಹದೇವಿಯರು ಶಿವಸ್ಮರಣೆಯ ಸಭೆಯನ್ನು ಪ್ರತಿವರ್ಷ ಮಾಡುತ್ತಾ ಬರುತ್ತಿದ್ದರಿಂದ ಗೊಲ್ಲಾಳ ಕುಂತಳದೇಶದ ಸಿರಿಮೊಗಮನೆಯಿದು ಎಂದು ಪ್ರೇಮದ ಶಿಷ್ಯನನ್ನಾಗಿ ಸ್ವೀಕರಿಸುವನು. ಜೊತೆಗೆ ಮಲ್ಲಪ್ಪನಿಗೆ ತನ್ನ ಧರ್ಮವನ್ನು ಎಲ್ಲರಿಗೂ ತಿಳಿಸುವಂತೆ ಜಂಗಮಾರ್ಚನೆ ಮಾಡುವಂತೆ ಹೇಳುತ್ತಾನೆ. ಹೀಗೆ ಮಲ್ಲಪ್ಪನು ಶಿವಪೂಜೆ, ಶಿವಯತಿ, ಶಿವಜ್ಞಾನ ಸದಾಚಾರ, ಶಿವತತ್ವ ಸದಾಚಾರ, ಶಿವತತ್ವ ಶಿವಗೋಷ್ಠಿ ಮಾರ್ಗ, ಶಿವನುಡಿ, ಶಿವಧ್ಯಾನ ಶಿವಮಂತ್ರವನ್ನು ಸದಾ ಜಪಿಸುವ ಶಿವಭಕ್ತನಾಗಿ ಕುಂತಳದೇಶದ ಮರನಗರದ ಸೀಮೆಯ ಪಳ್ಳಿವರ ಗ್ರಾಮದಲ್ಲಿ ಜೀವನ ನಡೆಸುತ್ತಾನೆ. ಆಗ ಗೊಲ್ಲಾಳನು ಪ್ರಸನ್ನನಾಗಿ

ಎಂಟು ದಿನಕೆ ನೀನೂಟವತಹದೆನ
ಗುಂಟಾದ ಭಕ್ತಿ ನೀನೆಂದು
ಘಂಟೆಯರಮಿಗಿಲೆಂಟೆಣಿಸಲಿ ಕರಿ
ಕಂಠತಾಭುಂಜಿಪನೆನಲು"[೧೫೪]

ಪಳ್ಳಿವರದಿಂದ ಗೋಲ್ಗೆರಿ ದೇವಸ್ಥಾನಕ್ಕೆ ಎಂಟು ದಿನಕ್ಕೊಮ್ಮೆ ಬರುವಂತೆ ಹೇಳುವನು. ನೀನು ಉಪವಾಸವಿದ್ದು ನನಗೆ ನೈವೇಧ್ಯವನ್ನು ತಂದು ಅರ್ಪಿಸು ಎಂದು ಆರ್ಶೀವಾದ ಮಾಡುವನು. ಆದ್ದರಿಂದ ಕುರುಬರಲ್ಲಿ ವಾರದ ಕುರುಬರು ಬೆಳೆಯುವುದಕ್ಕೆ ಕಾರಣ ಸೂಚಿಸುತ್ತದೆ. ಗೋಲೆಗೇರಿ ಲಿಂಗ ಪೂಜೆ ಪ್ರತಿ ಸೋಮವಾರ ನೇಮನಿತ್ಯದಿಂದ ನಡೆಯುವುದು. ಈ ರೀತಿಯ ಭಕ್ತಿಯನ್ನು ಕಂಡು ಊರಿನ

ಜನರೇ ಆಶ್ಚರ್ಯದಿಂದ ನೋಡುವ ವ್ಯಕ್ತಿಯಾಗುತ್ತಾನೆ. ಸೋಮಲಿಂಗ ಒಲಿದ ಕುಟುಂಬಕ್ಕೆ ಅಪವಾದವಿಲ್ಲವೆಂದು ಮಲ್ಲಪ್ಪನ ಕುಟುಂಬವು ತೋರಿಸಿಕೊಡುವುದು ಉಚಿತವಾಗಿದೆ.

ಗೊಲ್ಲಾಳನ ಪರಿಷೆಗೆ ಬೇರೆ ಬೇರೆ ಕಡೆಯಿಂದ ಜನರು ಬರುತ್ತಿದ್ದರು. ಈ ಸಂದರ್ಭವು ಶ್ರೀಶೈಲದ ಮಲ್ಲಿಕಾರ್ಜುನ ಪರಿಷೆ ಸ್ಥಾನವನ್ನು ಗೊಲ್ಲಾಳ ಪಡೆದದ್ದನ್ನು ತಿಳಿಸುತ್ತದೆ. ಮಲ್ಲುಗನೆಂಬನ ಸತಿ ಗೌರೆಯೆಂಬುವಳ ಭಕ್ತಿಯು ಗೊಲ್ಲಾಳೇಶ್ವರಗೆ ತೃಪ್ತಿ ತಂದಿರುತ್ತದೆ. ಒಂದು ದಿನ ಗೌರಿಯು ಅತ್ತೆಮಾವ, ಬಾವಂದಿರ ಹಿರಿಯಕ್ಕಗಳು ನಿಷ್ಠೆಯಿಂದ ಮೃತ್ಯುಂಜಯನಿಗೆ ಭಕ್ತಿಯನ್ನು ಸಲ್ಲಿಸುತ್ತಾರೆ. ತನುಮನಧನಗಳಿಂದ ಇವರು ಲಿಂಗಕ್ಕೆ ಎಣ್ಣೆಯಂತೆ ಅರ್ಪಿಸುವ ಸದ್ಕುಟುಂಬವಾಗಿರುತ್ತದೆ. ಹೀಗಿರುವಾಗ ಕಿರಿಯ ಸೊಸೆ ಪ್ರತಿನಿತ್ಯ ಲಿಂಗಕ್ಕೆ ನೈವೇದ್ಯ ಮಾಡುತ್ತಿರುತ್ತಾಳೆ. ಹೀಗೆ ಕೆಲ ದಿನ ನಡೆಯುತ್ತ ಹೋಗುತ್ತದೆ. ಆದರೆ ದಿನ ಕಳೆದಂತೆ ಗೌರಿಯ ಮೇಲೆ ಮನೆಯವರಿಗೆ ಸಂದೇಹ ಮೂಡುತ್ತದೆ. ಊರಿನ ಜನರು ಆಡಿಕೊಳ್ಳುತ್ತಿರುತ್ತಾರೆ.

"ಇರುಳಿವಳೆಲ್ಲಿಗೆ ಹೊರಡುವಳೆನುತಲಿ<br>
ಸರಿಏಡಿದೆಯಿದೆ ಹಳ್ಳವನು<br>
ನೆರೆದಾಟಿ ಲಿಂಗದ ವರಗುಡಿಗೆಯ್ದಲ್ಲಿ<br>
ಗರುವರು ಗಂಡ ಭಾವಿದರು"

ಇರುಳಲ್ಲಿ ನದಿದಾಟಿ ಲಿಂಗದ ಗುಡಿಗೆ ಹೋಗುವುದನ್ನು ಗಂಡ ಭಾವಂದಿರು ಹಿಂಬಾಲಿಸುತ್ತಾರೆ. ಎಂದೂ ಹೊರ ಹೋಗದ ಗೌರಿ ಯಾಕೆ ಹೀಗೆ ಮಾಡುತ್ತಾಳೆಂದು ಅನುಮಾನದಿಂದ ಕೇಳುತ್ತಾರೆ. ಆಗ ಗೌರಿಯು ಲಿಂಗವು ನಾನು ತೆಗೆದುಕೊಂಡು ಹೋದ ನೈವೇಧ್ಯವನ್ನು ಸ್ವೀಕರಿಸುವುದು ಎಂದು ಹೇಳುತ್ತಾಳೆ. ಆಕೆಯ ನುಡಿಗೆ ಆಶ್ಚರ್ಯಚಕಿತರಾಗಿ ಜೊತೆಯಲ್ಲಿ ಲಿಂಗದ ಗುಡಿಗೆ ಹೋಗುತ್ತಾರೆ. ದೂರ ನಿಂತುಕೊಂಡು ಅತ್ತೆ, ಮಾವ, ಗಂಡ, ಭಾವಗಳು ಗೌರಿಯ ಶುದ್ಧಭಕ್ತಿಯನ್ನು ಕಂಡು ಸಂತಸಗೊಳ್ಳುವರು. ಅಲ್ಲದೆ ಗೌರಿಯು ಪ್ರತಿನಿತ್ಯ ಲಿಂಗಪೂಜೆಗೆ ಸ್ವತಃ ಮನೆಯವರೆಲ್ಲಾ ಅನುಕೂಲ ಮಾಡಿಕೊಡುತ್ತಾರೆ. ಹೀಗೆ ಗೊಲ್ಲಾಳಯ್ಯನ ಮಹಿಮೆಯು ಸುತ್ತೇಳು ಸಮುದ್ರ, ಸಪ್ತ ದ್ವೀಪಗಳಲ್ಲಿ ಪ್ರಸಿದ್ಧಿ ಪಡೆಯುವುದು. ನಂತರ ಹುಲಿಗೇರಿಪುರ ಎಂಬಲ್ಲಿ ನಂದಿಯೆಂಬನ ಶಿವಭಕ್ತಿಯನ್ನು ಹೇಳುತ್ತದೆ. ಈತನು ಪ್ರತಿ ಅಮವಾಸ್ಯೆ ಹುಣ್ಣಿಮೆಯ ದಿನ ಗೊಲ್ಗೇರಿ ಲಿಂಗಕ್ಕೆ ಮಡಿಯಿಂದ ಮೀಸಲನ್ನವನ್ನು ತೆಗೆದುಕೊಂಡು ಬರುತ್ತಾನೆ. ಆಗ ತುಂಬಿ ಹರಿಯುವ ಕೃಷ್ಣಾನದಿಯು ಈತನಿಗೆ ದಾರಿಯನ್ನು ಮಾಡಿಕೊಡುತ್ತದೆ. ಈತನ ಭಕ್ತಿಗೆ ಮೆಚ್ಚಿ ಕನಸಿನಲ್ಲಿ "ನುಡಿದನೆಲೆಕಂದ ನೀನಿದ್ದೆಡೆಗೆಂದು ನಾಂಬಪ್ಪೆನು" ಎಂದು ಗೊಲ್ಗೇರಿ ಲಿಂಗವು ಹೇಳುತ್ತದೆ. ನಂತರ ಗೊಲ್ಗೇರಿ ಲಿಂಗವು ಹುಲ್ಗೇರಿ ಲಿಂಗವಾಗಿ ಹುಲಿಗೇರಿ ಪುರದಲ್ಲಿ ನೆಲೆಸುವುದು.

"ಕರಿಯ ಮಲ್ಲಿಗೆ ರಾಶಿಸುರವಿರೆ ಪರಿಮಳ
ಪೊರಸೂರೆ ಪುರದಗಲದಲ್ಲಿ
ಹಿರಿಯ ಪೂಜಾವಿಧಿ ವಿರೆಕಂಡು ನಂದಯ್ಯ
ಎರಗಿದ ಸಾಷ್ಟಾಂಗದಿಂದ"[೨೦೬]

ಈ ಪದ್ಯವು ಗೊಲ್ಲಾಳಯ್ಯನ ಭಕ್ತರು ಹೆಚ್ಚಿದಂತೆ ಆತನ ಆಲಯಗಳು ದ್ವಿಗುಣಗೊಳ್ಳುವುದನ್ನು ಹೇಳುತ್ತದೆ. ಗೋಲ್ಗೇರಿಯಂತೆ ಪುರಹುಲಿಗೇರಿಗೆ ಸಹ ಸದ್ಭಕ್ತರು ಅಮವ್ಯಾಸೆ ದಿನ ನೇಮನಿತ್ಯದಿಂದ ಬಂದು ನೈವೇದ್ಯ ಅರ್ಪಿಸುತ್ತಾರೆ. ರೇವಣಸಿದ್ಧರ ಆಗಮನದಿಂದ ಗೊಲ್ಲಾಳನ ಮಹಿಮೆಯು ಹರಕಂಚಿಪುರಕ್ಕೆ ಹೋಗುತ್ತದೆ. ಹರಕಂಚಿಪುರದ ಅರಸ ಸುರಾಜೇಂದ್ರ ಚೋಳ ರೇವಣಸಿದ್ಧರನ್ನು ಗುರುವಾಗಿಸಿಕೊಳ್ಳುವನು. ಹೀಗೆ ಗೊಲ್ಲಾಳೇಶ್ವರನು ಕುರುಬ ಸಮುದಾಯದ ದೈವನಾಗಿ ಬಿಜಾಪುರದ ಗೊಲ್ಗೇರಿಯಲ್ಲಿ ಇಂದು ಪ್ರಸಿದ್ಧಿಯನ್ನು ಪಡೆದಿದ್ದಾನೆ. ಈ ಮೂಲಕ ಗೊಲ್ಲಾಳನು ಸಾಂಸ್ಕೃತಿಕ ವೀರನಾಗಿದ್ದನೆಂದು ಗೊಲ್ಲಾಳಯ್ಯನ ಪುರಾಣವು ಸ್ಪಷ್ಟಪಡಿಸುತ್ತದೆ.

**v. ಅಮೋಘಸಿದ್ಧ**

ಹಾಲುಮತ ಸಮುದಾಯದ ಸಿದ್ಧಪುರುಷರಲ್ಲಿ ಅಮೋಘಸಿದ್ಧನು ಪ್ರಮುಖ ದೇವನಾಗಿ ಕಂಡುಬರುತ್ತಾನೆ. ಜನಪದ ಹಾಲುಮತ ಮಹಾಕಾವ್ಯದಲ್ಲಿ ಈತನ ಕುರಿತು ಮೊದಲು ಬಾಳಾಭರಮನ ಜೊತೆ ಕೊನೆಯಲ್ಲಿ ಮಾಳಿಂಗರಾಯನ ಜೊತೆ ಸಮೀಕರಿಸಲಾಗಿದೆ. ಬಾಳಭರಮ ಮತ್ತು ಅಮೋಘಸಿದ್ಧರು ಸಮಕಾಲೀನರೆಂದು ಈ ಪುರಾಣವು ತಿಳಿಸುತ್ತದೆ. ಶಿವನು ಕೈಲಾಸದಿಂದ ತಿಪರಂಗಿ ನಾಡಿನ ಅರಸನ ಏಳು ಜನ ಹೆಣ್ಣುಮಕ್ಕಳಲ್ಲಿ ಕೊನೆಯವಳಾದ ಕಮಳಾದೇವಿಯನ್ನು ರಹಸ್ಯವಾಗಿ ಮದುವೆಯಾಗುವನು. ತಿಪರಂಗಿ ಅರಸನು ಏಳು ಜನ ಮಕ್ಕಳನ್ನು ಒಂದೆ ಮನೆಯ ಏಳು ಜನ ಗಂಡುಮಕ್ಕಳಿಗೆ ಕೊಟ್ಟು ಮದುವೆ ಮಾಡಲು ತೀರ್ಮಾನಿಸುವನು. ಆದರೆ ಅವರುಗಳು ದೊರಕದೆ ಹೋದಾಗ ಆ ಏಳು ಮಕ್ಕಳನ್ನು ಸಮುದ್ರದಲ್ಲಿ ಮುಳುಗಿಸುತ್ತಾನೆ. ಅವರಲ್ಲಿ ಕೊನೆ ಕಮಲಾದೇವಿಯು ಈಜುತ್ತಾ ನೀರಿನಿಂದ ಪ್ರಾಣವನ್ನು ಉಳಿಸಿಕೊಳ್ಳುವಳು. ಆಗ ಅರಸನು ಏಳು ಅಂತಸ್ತಿನಲ್ಲಿ ಕಮಲಾದೇವಿಯನ್ನು ಕೂಡಿಯಾಕುತ್ತಾನೆ. ನಂತರದಲ್ಲಿ ಈಕೆಗೆ ಜಗತ್ತಿನಲ್ಲಿ ನನ್ನಂತಹ ಪ್ರತಿವ್ರತೆ ಯಾರು ಇಲ್ಲವೆಂಬ ಭಾವನೆ ಮೂಡುತ್ತದೆ. ಅದಕ್ಕಾಗಿ ಕಮಲಾದೇವಿಯನ್ನು ಊರಿನಲ್ಲಿ ಮೆರವಣಿಗೆ ಮಾಡಿದ್ದರೆಂದು ನಾರದನು ಪಾರ್ವತಿಗೆ ಚಾಡಿ ಹೇಳುವನು. ಆಗ ಪಾರ್ವತಿ, ಲಕ್ಷ್ಮೀ, ಸರಸ್ವತಿಯರು ಆಕೆಯ ಪಾತಿವ್ರತ್ಯ ಹಾಳು ಮಾಡಿಬರಲು ಶಿವನಿಗೆ ಒತ್ತಾಯಿಸುತ್ತಾರೆ. ಶಿವನು ಅವರ ಮಾತಿಗೆ ಒಪ್ಪಿ ಅರಸನ ನಾಡಿಗೆ ಬರುತ್ತಾನೆ. ನಂತರ ಮಗಳನ್ನು ತನಗೆ ಕೊಟ್ಟು ಮದುವೆ ಮಾಡಲು ಕೇಳುತ್ತಾನೆ. ಆಗ ಅರಸನು ನಿರಾಕರಿಸಿ ಶಿವನನ್ನು ಸನ್ಯಾಸಿಯೆಂದು ಜರಿಯುತ್ತಾನೆ. ಈ ಕಾರಣಕ್ಕೆ ಶಿವನು ಬುಡಬುಡಕನ ವೇಷ ಧರಿಸಿಕೊಂಡು ಬಂದು

ಕಮಲಾದೇವಿಗೆ ರೋಗವನ್ನು ಹಾಕುವನು. ಅದನ್ನು ಪರಿಹರಿಸುವ ಶಕ್ತಿಯಿದೆಂದು ಅರಸನ ಮನೆಗೆ ಬರುತ್ತಾನೆ. ಆದರೆ ಮದುವೆಯಾದ ಹೆಣ್ಣಿಗೆ ಮಾತ್ರ ಔಷಧಿಯನ್ನು ತಾನು ಕೊಡುತ್ತೇನೆಂದು ಹೇಳುವನು. ಈ ಸಮಸ್ಯೆ ಪರಿಹಾರ ಅರಸನಿಗೆ ಆಗ ಭಿತ್ತಿ ಆಗ ಬೆಳೆಯುವ ಗಿಡಕ್ಕೆ ಮದುವೆ ಮಾಡಲು ಹೇಳುವನು.

"ಬ್ಯಾನಿ ಚೊಕ್ಕನಾದವೆ ಲಗನೆ ಮಾಡಬೇಕಂದಾನ
ಹಸರು ಗಿಡದ ಸಂಗಟ ಲಗನ ಮಾಡಬೇಕಾಂದನ"[೧೪೮]

ಈ ರೀತಿಯಾಗಿ ಶಿವನು ಹಸುರ ಗಿಡದಲ್ಲಿದ್ದು ಕಮಲಾದೇವಿಯನ್ನು ವಿವಾಹವಾಗುತ್ತಾನೆ. ಮದುವೆ ಮುಗಿದ ನಂತರ ಕೋಲುಮಿಂಚು ಸುಳಿಯುವುದರ ಮೂಲಕ ಆಕೆಯು ಗರ್ಭಧರಿಸುವಳು. ಹೀಗೆ ಲೌಕಿಕವಾಗಿ ಮದುವೆಯಾಗದ ಹೆಣ್ಣು ಮಗು ಪಡೆದರೆ ಸಮಾಜದ ನಿಂದನೆಗೆ ಗುರಿಯಾಗಬೇಕೆಂದು ಕಮಲಾದೇವಿ ಆ ಮಗುವನ್ನು ಸೇವಕಿಯರಿಗೆ ಹೊರ ಒಗೆಯಲು ಹೇಳುತ್ತಾಳೆ. ಅದೇ ಸಂದರ್ಭದಲ್ಲಿ ಪಾರ್ವತಿಯು ಕೊರವಂಜಿ ವೇಷ ಧರಿಸಿಕೊಂಡು ಆ ಮಗುವನ್ನು ಬುಟ್ಟಿಯಲ್ಲಿಟ್ಟು ತರುವಾಗ ಶಿವನು ಹದ್ದಾಗಿ ಬಂದು ಹೋಯ್ದು ಕಮಲದ ಹೂವಿನಲ್ಲಿಡುವನು. ಈ ವಿಷಯವನ್ನು ಅರಿತ ಪಾರ್ವತಿಯೂ ಶಿವನ ಹಾದರ ಬಯಲು ಮಾಡುವಲ್ಲಿ ಸೋಲುತ್ತಾಳೆ. ಆ ಸಂದರ್ಭದಲ್ಲಿ ಪಾರ್ವತಿಯೂ ಗಾಬರಿಗೊಂಡು ಬೆವರುವಳು.

"ಮೈಯ್ಯ ಬೆವರ ಹೊಡದಾರ ಸವರಿ ತೆಗೆಯುತಾಳೇನ
ಮಣ್ಣು ತೆಗೆಯುತಾಳೇನ ಉಂಡಿ ಮಾಡು ತಾಳೇನ
ಗೊಂಬಿ ಮಾಡುತಾಳೇನ ಕೈಯಾಗ ಹಿಡಕೊಂಡು ಕುಂತಾಳ
ಅಗಮ ಹೆಚ್ಚಿಗಾದವ ಅಮುಸಿದ್ಧ ಹುಟ್ಯಾನಂದಾನ"[೧೪೯]

ಹೀಗೆ ಪಾರ್ವತಿಯ ಮೈ ಬೆವರಿನಿಂದ ಅಮುಸಿದ್ದ ಅರ್ಥಾತ್ ಅಮೋಘಸಿದ್ಧನು ಜನಿಸುತ್ತಾನೆ. ಮತ್ತೊಂದು ಕಡೆ ಕಮಲಾದೇವಿ ಮತ್ತು ಶಿವನ ಮಗನಾದ ಬಾಳಭರಮನು ಬೆಳೆಯುತ್ತಾನೆ. ಇಲ್ಲಿಗೆ ಬಾಳಭರಮನ ಜೊತೆ ಅಮೋಘಸಿದ್ಧನ ಪ್ರಸ್ತಾಪ ಕೊನೆಯಾಗುವುದು. ನಂತರ ಭಕ್ತಿಯ ಪರಾಕಷ್ಠೆಯ ಪರೀಕ್ಷೆಗಾಗಿ ಅಮೋಘಸಿದ್ಧನು ಕೈಲಾಸದಿಂದ ಮುಮ್ಮಟ್ಟಿ ಗಿರಿಗೆ ಬಂದು ನೆಲೆಸುವನು. ಮಾಳಿಂಗರಾಯ ಮತ್ತು ಅಮೋಘಸಿದ್ಧರು ಮಳೆಯನ್ನು ತರುವಲ್ಲಿ ತಾತ್ತ್ವಿಕ ವಾಗ್ವಾದವನ್ನು ನಡೆಸುವರು. ಅರಕೇರಿ, ಮಕಣಾಪುರ, ಬಿಜ್ಜಳಗುಂತಿಯಲ್ಲಿಯೂ ಅಮೋಘಸಿದ್ಧನ ಸಂಚಾರವನ್ನು ಜನಪದ ಹಾಲುಮತ ಮಹಾಕಾವ್ಯ ತಿಳಿಸುತ್ತದೆ. ಭೂಲೋಕಕ್ಕೆ ಬರುವುದರ ಮೂಲಕ ಮಾಳಿಂಗರಾಯನ ಜೊತೆ ಸಾಂಸ್ಕೃತಿಕ ಸಂಘರ್ಷವನ್ನು ನಡೆದಿರುವುದನ್ನು ತಿಳಿಯಬಹುದು. ಇವರಿಬ್ಬರು ಹಾಲುಮತದ ಸಾಂಸ್ಕೃತಿಕ ವೀರರು. ಆದರೆ ಹಾಲುಮತದವರ ಒಳಪಂಗಡಗಳಲ್ಲಿಯೇ ಸಾಮಾಜಿಕ ಸಂಘರ್ಷಗಳು ಇದ್ದವು ಎನ್ನುವುದಕ್ಕೆ

ಅಮೋಘಸಿದ್ಧನ ವೃತ್ತಾಂತವು ನಿದರ್ಶನವಾಗಿದೆ. ಇಲ್ಲಿ ಒಂದೇ ಪ್ರದೇಶದಲ್ಲಿ ಉನ್ನತ ವ್ಯಕ್ತಿಗಳು ಇರುವುದಕ್ಕೆ ಆಗುವುದಿಲ್ಲವೆಂದು ತಿಳಿಸುತ್ತದೆ. ಒಂದು ವೇಳೆ ವಾಸವಾಗಿದ್ದರೆ ಇಂತಹ ಸಂಘರ್ಷಗಳು ಸಹಜ ಎನ್ನುವುದು ಇಲ್ಲಿ ಖಚಿತವಾಗುತ್ತದೆ. ಅಮೋಘಸಿದ್ಧನು ಎಪ್ಪತ್ತೊಂದು ಮಠಗಳಿಗೆ ಒಡೆಯನಾದರೆ ಮಾಳಿಂಗರಾಯನು ಹುಲಜಂತಿಗೆ ಒಡೆಯನೆಂದು ಇವರ ಪವಾಡಗಳ ಮೂಲಕ ತಿಳಿದುಬರುತ್ತದೆ. ಮೊದಲು ಅಮೋಘಸಿದ್ಧನು ಮುಂದೆ ಹೋಗುವ ಎತ್ತುಗಳನ್ನು ಹಿಂದಕ್ಕೆ ಕರಿಯುತ್ತಾನೆ. ನಂತರ ಹಿಂದೆ ಬರುವ ಎತ್ತುಗಳನ್ನು ಕೈಮಾಡಿ ಮುಂದಕ್ಕೆ ಹೋಗುವಂತೆ ಮಾಳಿಂಗರಾಯನು ಮಾಡುತ್ತಾನೆ. ಎರಡನೆಯದಾಗಿ ಅಮೋಘಸಿದ್ಧ ಮಳೆಯನ್ನು ಕೈಲಾಸದಿಂದ ತರಿಸುವನು.

"ಕೈಯ ಮಾಡುತಾನೇನನ ಕಂಬಳಿ ಬೀಸುತಾನೇನ
ಕೋಲಮಿಂಚ ಹೊಡೆದಾವ ನಾಡಿಗ ಜಾಲ ಹಾಕ್ಲಾವ
ಭೂಮಿ ಬರಬೇಕಾಂದವ ಗೋರ ಮಳಿಯ ಹತ್ಯಾವ"[೧೫೦]

ಹೀಗೆ ಮಳೆಯನ್ನು ತರಿಸುತ್ತಾನೆ. ಆದರೆ ಮಾಳಿಂಗರಾಯ ಅದನ್ನು ಹಿಂದಕ್ಕೆ ಕಳಿಸುವನು. ಇವರಿಬ್ಬರು ಸಿದ್ಧ ಪುರುಷರೆಂದು ತಿಳಿಯುತ್ತದೆ. ಕೊನೆಗೆ ಅಮೋಘಸಿದ್ಧನೆ ಸೋತನೆಂದು ಮಾಳಪ್ಪಗೆ ತನ್ನ ವಿದ್ಯೆಯನ್ನು ಧಾರೆಯರಿಯುತ್ತಾನೆ ಮತ್ತು ಅಮೋಘಸಿದ್ಧನೆ ಮಾಳಪ್ಪನಿಗೆ ಮಳಿಯ ಕೀಲಿ, ಬಕ್ಕಸ ಭಂಡಾರ, ಬೆಳಿಯ ಕೀಲಿ, ಪ್ರಸಾದ ಗಂಟು ಕೈಲಾಸದಿಂದ ತಂದ ವಸ್ತುವನ್ನು ಕೊಡುತ್ತಾನೆಂದು ತಿಳಿದು ಬರುತ್ತದೆ. ಈ ಪ್ರಸಂಗವು ಸಂಪತ್ತನ್ನು ದೋಚುವುದರ ಮೂಲಕ ಅಸ್ತಿತ್ವವನ್ನು ಇಲ್ಲವಾಗಿಸುವುದು ಕಂಡುಬರುತ್ತದೆ. ಅಮೋಘಸಿದ್ಧನು ಮಾಳಪ್ಪನಿಂದ ಆತಿಥ್ಯ ಸ್ವೀಕರಿಸಿದ ನಂತರ ಐದು ಕುರಿಮರಿಯನ್ನು ಕೇಳುವನು.

"ಐದು ಕುರಿಯನಲ್ಲಪ್ಪ ಬೀಜದ ಮರಿಯ ಕೊಡಬೇಕ
ಐದು ಕುರಿಗೋಳಲ್ಲಪ್ಪ ಬೀಜದ ಮರಿಗೋಳು ಕೊಟ್ಟೇನ"[೧೫೧]

ಇದು ಮಾಳಿಂಗರಾಯನ ಸಂಪತ್ತನ್ನು ಕಡಿಮೆಗೊಳಿಸುವುದನ್ನು ಸೂಚಿಸುತ್ತದೆ. ಅಂದರೆ ಕುರಿಯ ಹಿಂಡಿನಲ್ಲಿ ಬೀಜಮರಿಗಳೆ ಮುಂದಿನ ಕುರಿಗಳ ಸಂತತಿಗೆ ಕಾರಣ. ಅಂತಹ ಕುರಿಗಳನ್ನು ಅಮೋಘಸಿದ್ಧನು ಬೇಡುವುದು ಕುತಂತ್ರವಾಗಿ ತೋರುತ್ತದೆ. ಜೊತೆಗೆ ಮಾಳಪ್ಪನು ಅಣ್ಣ ಜಕ್ಕಪ್ಪನ ಹತ್ತಿರ ಐದು ಬೀಜಮರಿಗಳನ್ನು ಪಡೆಯುವಂತೆ ಹೇಳುವನು. ಹೀಗೆ ಕುರಿಗಳನ್ನು ಪಡೆದ ಅಮೋಘಸಿದ್ಧನು ಕುರಿಗೊಳದೊಡ್ಡಿಯನ್ನು ಪ್ರತ್ಯೇಕವಾಗಿ ಮಾಡುತ್ತಾನೆ. ಅಲ್ಲದೆ ನಿಮ್ಮ ಅಪ್ಪಂದಿರಿಗೆ ನಾನೆ ಗುರುವಾಗಿದೆಂದು ಹೇಳುತ್ತಾನೆ. ನಂತರ ಪ್ರತ್ಯೇಕವಾಗಿರಿಸಿದ್ದ ಹತ್ತು ಕುರಿಗಳು ರಾತ್ರಿ ಹೊತ್ತು ಸಾಯುತ್ತವೆ. ಸತ್ತ ಕುರಿಗಳನ್ನು ಮಾಳಪ್ಪಗೆ ಬದುಕಿಸಲು ಕೇಳಿದಾಗ ನಿರಾಕರಿಸುವುದನ್ನು ಗಮನಿಸಿದರೆ ಮಾಳಪ್ಪನೆ ಅವುಗಳನ್ನು

ಸಾಯಿಸಿರಬಹುದೆಂದು ತಿಳಿದುಬರುತ್ತದೆ. ಈ ರೀತಿಯಾಗಿ ಮಾಳಪ್ಪನಿಂದ ಮೂರರ ಮುಂಗಡಿನ ಭೂತಾಳ ಸಿದ್ಧನ ಹತ್ತಿರ ಬಂದು ತಾನು ಸರ್ವವನ್ನು ಸೋತಿರುವುದಾಗಿ ಹೇಳಿಕೊಳ್ಳುತ್ತಾನೆ.

ನಂತರ ಕಲ್ಯಾಣಕ್ಕೆ ಹೋಗುತ್ತಿರುವಾಗ ನಡುವಟ್ಟಿ ಊರಿನ ಅರಸ ನಾಗರಾಯ ಕೆರೆಯನ್ನು ಕಟ್ಟಿಸುತ್ತಿರುತ್ತಾನೆ. ಅದು ಕಟ್ಟಿದ ಆರುತಿಂಗಳ ನಂತರ ಬೀಳುತ್ತಿರುತ್ತದೆ. ಆಗ ಅರಸ ಅಮೋಘಸಿದ್ಧನಿಗೆ ಏನು ಕಾರಣವೆಂದು ಕೇಳುತ್ತಾನೆ. ಕೆರೆಕಟ್ಟೆಯನ್ನು ನಿಲ್ಲಿಸಿದವರಿಗೆ ಮಗಳನ್ನು ಕೊಟ್ಟು ವಿವಾಹ ಮಾಡುತ್ತೇನೆಂದು ಸಾರುತ್ತಾನೆ. ಹೀಗಿರುವಾಗ ಅಮೋಘಸಿದ್ಧನು ಈ ನಡುವಟ್ಟಿ ಊರಿನಿಂದ ಹಾಯ್ದು ಹೋಗಿದಕ್ಕೆ ಕೆರೆಯ ಕಟ್ಟಡ ನಿಲ್ಲುತ್ತದೆ. ಆದರೆ ಅರಸನು ಮುದಕನಾಗಿರುವ, ಮುಂಗೈಗೆ ಜೋಳಿಗೆ ಹಾಕಿದವನಿಗೆ ಹೇಗೆ ಕೊಡುವುದು ಎಂದು ಯೋಚಿಸುತ್ತಾನೆ. ಆದರೂ ಪದ್ಮವತಿಯ ಒತ್ತಾಯಕ್ಕೆ ವಿವಾಹ ನಿಶ್ಚಿಯಿಸುವನು. ಇಲ್ಲಿ ಅಮೋಘಸಿದ್ಧನ ಪವಾಡ ಶಕ್ತಿಯನ್ನು ಮಾರ್ಮಿಕವಾಗಿ ತಿಳಿಸಲಾಗಿದೆ. ಕಮಲಾದೇವಿಯ ಮದುವೆಯಂತೆ ಇಲ್ಲಿ ಪದ್ಮಾವತಿಯ ಮದುವೆಯು ಅಮೋಘಸಿದ್ಧನು ಭೂತಾಳಸಿದ್ಧನ ಕೈಯಲ್ಲಿ ಕಳುಹಿಸಿದ ನಾಗಬೆತ್ತದ ಜೊತೆಗೆ ಮದುವೆ ಮಾಡುತ್ತಾರೆ. ವಿಶಿಷ್ಟವೆಂದರೆ ಭೂತಾಳ ಸಿದ್ಧನು ಮಾಡಿದ ಎಲ್ಲ ಅಡಿಗೆಯನ್ನು ಒಬ್ಬನೆ ಊಟಮಾಡುತ್ತಾನೆ. ಇದು ಅಮೋಘಸಿದ್ಧನ ಅಪ್ರತ್ಯಕ್ಷ ಪವಾಡವಾಗಿ ಗೋಚರಿಸುತ್ತದೆ. ಇಷ್ಟಲ್ಲದೆ ಇನ್ನೂ ಅನೇಕ ಪವಾಡಗಳನ್ನು ಮಾಡಿ ತೋರುವುದರ ಮೂಲಕ ಅಮೋಘಸಿದ್ಧನು ಮತ್ತೆ ಪೂರ್ವದಲ್ಲಿದ್ದ ಸ್ಥಾನವನ್ನು ಪಡೆಯುವುದು ಕಂಡುಬರುತ್ತದೆ. ಕುಂಬಾರ ಗುಂಡಯ್ಯನಿಗೆ ಮಕ್ಕಳ ಫಲಕೊಟ್ಟು ಮೊದಲು ಮಗನನ್ನು ಮಠಕ್ಕೆ ಬಿಡಲು ಆದೇಶ ಮಾಡುವನು.

"ಚೊಚ್ಚಲ ಮಗನಿಗ ತಂದಪ್ಪ ಮಠಕ ಬಿಡಬೇಕಾಂದಾರ
ಮುಮ್ಮೆಟ್ಟಿ ಗುಡ್ಡದಾಗಲ್ಲಪ್ಪ ಕೂಸಿನ ಬಿಡಬೇಕಾಂದರ"[೧೫೬]

ಶಿಷ್ಯರನ್ನು ಪವಾಡದ ಮೂಲಕ ಪಡೆಯುವುದನ್ನು ತಿಳಿಸುತ್ತದೆ. ಮಳಸಿದ್ಧಪ್ಪನೆ ಮುಮ್ಮೆಟ್ಟಿ ಗುಡ್ಡದ ಅಮೋಘಸಿದ್ಧನ ಶಿಷ್ಯನಾಗುತ್ತಾನೆ. ನಂತರ ಮಡಿವಾಳ ನೀಲಮ್ಮನ ಮಗನನ್ನು ಬದುಕಿಸಿ ಕೊಡುತ್ತಾನೆ.

ಪದ್ಮಾವತಿಯು ಅಮೋಘಸಿದ್ಧನಿಂದ ಪ್ರತ್ಯೇಕವಾಗಿ ಅರಿಕೇರಿಯಲ್ಲಿರುತ್ತಾಳೆ. ಮಳಸಿದ್ಧಪ್ಪನು ಅಮೋಘಸಿದ್ಧನಿಗೆ ಕೇಳುವ ಪ್ರಶ್ನೆಯು ಕುಲೋದ್ಧಾರಕ್ಕೆ ಸ್ವಂತ ಮಕ್ಕಳು ಮುಖ್ಯವೆಂದು ಹೇಳುತ್ತದೆ. ಪದ್ಮಾವತಿಗೆ ಮಕ್ಕಳಿಲ್ಲವೆಂದಾಗ ಅಮೋಘಸಿದ್ಧನು ಐದು ಉತ್ತತ್ತಿ ಹಣ್ಣನ್ನು ಮಳಸಿದ್ದಪ್ಪನ ಕೈಯಲ್ಲಿ ಕಳಿಸಿಕೊಟ್ಟನು. ಅವುಗಳಿಂದ ಪದ್ಮಾವತಿಯು ಅವಧೂತಸಿದ್ಧ, ಬಿಳಿಯಾಣಸಿದ್ಧ, ಮಲಕಾರಿಸಿದ್ಧಿ, ಹೆಣ್ಣುಮಗಳು ರೆಬಕವ್ವ ಮತ್ತು ಸಾಕುಮಗ ಮಳಸಿದ್ಧಪ್ಪ ಎಂಬ ಒಟ್ಟು ಐದು ಮಕ್ಕಳೆಂದು ಹೇಳಲಾಗಿದೆ ಹಾಗೂ ಮಳಸಿದ್ಧಪ್ಪನು ಗಂಗಿನಾಡ ಸೊನ್ನಲಗಿರಿಯ ಕಟಗರಗೇರಿಯಲ್ಲಿ ವಾಸವಾಗಿರುತ್ತಾನೆ. ಹೀಗೆ ಅಮೋಘಸಿದ್ಧನು ಮಾಳಿಂಗರಾಯನಿಗೆ ತನ್ನ ಶಕ್ತಿಯನ್ನು ಕೊಟ್ಟು ಮತ್ತೆ ಸರಿಸಮನಾಗಿ ನಿಲ್ಲುವ

ಅಂತರಶಕ್ತಿಯನ್ನು ಪಡೆಯುವುದು ಪುರಾಣಗಳಿಂದ ತಿಳಿದುಬರುತ್ತದೆ. ಆದರೂ ಅಮೋಘಸಿದ್ಧನು ಕುರುಬ ಜನಾಂಗದ ಮಹಾಪುರುಷನೆಂಬುದರಲ್ಲಿ ಎರಡು ಮಾತಿಲ್ಲ. ಈತನ ಮೂಲ ಸ್ಥಳ ಮುಮ್ಮೆಟ್ಟಗಿರಿ. ಇದು ವಿಜಾಪುರ ಜಿಲ್ಲೆಯ ಅರಕೇರಿ, ಜಾಲಗೇರಿ ಮತ್ತು ಸಿದ್ದಾಪುರ ಎಂಬ ಮೂರು ಗ್ರಾಮಗಳು ಸೇರುವ ಸ್ಥಳದಲ್ಲಿರುವ ಒಂದು ಚಿಕ್ಕ ಗುಡ್ಡ. ಈ ಗುಡ್ಡದ ಮೇಲೆ ಇರುವುದು ಅಮೋಘಸಿದ್ಧೇಶ್ವರ ದೇವಸ್ಥಾನ. ಈತನು ಲೋಕಕಲ್ಯಾಣಕ್ಕಾಗಿ ಕೈಲಾಸದಿಂದ ಬಂದ ವರಪುತ್ರನೆಂದು ತಿಳಿದುಬರುತ್ತದೆ.

"ಕೃತಯುಗದಲ್ಲಿ ಅಮರ ಋಷಿಯೆಂಬ ನಾಮವನ್ನು ಧರಿಸಿಕೊಂಡು ಶಿವರಾಯ ಮುಕ್ಕಣ್ಣನ ಸೇವೆಯಲ್ಲಿರುತ್ತಿದ್ದನು. ತ್ರೇತಾಯುಗದಲ್ಲಿ ಅಮರಸಿದ್ಧಯೋಗಿ ನಾಮವನ್ನು ಪಡೆದುಕೊಂಡು ಶಿವನ ಸೇವೆಯಲ್ಲಿ ಇರುತ್ತಿದ್ದನು. ದ್ವಾಪರ ಯುಗದಲ್ಲಿ ಅಮೋಗಿಸಿದ್ಧನೆಂಬ ಸಿದ್ಧಾಂತನಾಮದಿಂದ ಪಾರ್ವತಿ ಪರಮೇಶ್ವರನ ಇಚ್ಛಾಸೇವೆಯನ್ನು ಮಾಡಿ, ಪರಮೇಶ್ವರನ ಕಡೆಯಿಂದ ವರಹಗಳನ್ನು ಪಡೆದುಕೊಂಡು ದ್ವಾಪರ ಯುಗದಲ್ಲಿ ಅರಿಕೇರಿ ಗ್ರಾಮದಿಂದ ಮುಮ್ಮೆಟಕ್ಕೆ ಬಂದನು"[೧೫೩] ಹೀಗೆ ಅಮೋಘಸಿದ್ಧನು ಕಾಲದಿಂದ ಕಾಲಕ್ಕೆ ಅವತರಿಸಿದ ಮಹಾಪುರುಷನೆಂದು ಇದರಿಂದ ತಿಳಿದುಬರುತ್ತದೆ.

**೪. ಸಾಂಸ್ಕೃತಿಕ ಸಂಘರ್ಷ**

ಸಮಾಜವು ಅನೇಕ ಜಾತಿ, ವರ್ಗ, ಧರ್ಮಗಳು ಸೇರಿ ಒಂದು ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತದೆ. ಉತ್ಪಾದನಾ ಶಕ್ತಿಗಳು ಹಾಗೂ ಉತ್ಪಾದನಾ ಸಂಬಂಧಗಳಲ್ಲಿ ಆಗುವ ಬದಲಾವಣೆಗಳನ್ನು ಕಾಲುನುಕ್ರಮದಲ್ಲಿ ವಿವರಿಸುವುದೇ ಚರಿತ್ರೆ. ವ್ಯಕ್ತಿ ಆಹಾರಕ್ಕಾಗಿಯೆ ಅನೇಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರೂ ಸಂಸ್ಕೃತಿಯಂತಹ ಬೌದ್ಧಿಕ ಹಾಗೂ ಮಾನಸಿಕ ವಿಷಯದ ಬಗ್ಗೆ ತುಂಬ ಎಚ್ಚರವಹಿಸಿರುತ್ತದೆ. ಸಂಸ್ಕೃತಿಯ ಹೊಸ ಸಾಧ್ಯತೆಗಳನ್ನು ಉತ್ಪಾದನಾ ಸಾಮರ್ಥ್ಯದ ಹಿನ್ನೆಲೆಯಲ್ಲಿಯೇ ಕಂಡುಕೊಂಡಿದ್ದನ್ನು ಮರೆಯಬಾರದು. ಅಂದಿನಿಂದ ಇಂದಿನವರೆಗೂ ಕೋಟೆ ಕೊತ್ತಲುಗಳು, ರಾಜ್ಯಗಳ ವಿಸ್ತರಣೆ, ಸಂಪತ್ತನ್ನು ಸಂಗ್ರಹಿಸುವುದು ಸಂಘರ್ಷದಡಿಯಲ್ಲಿಯೆ ಬಂದಿದೆ. ಅನ್ಯ ಧರ್ಮದವರು ಮತ್ತೊಂದು ಧರ್ಮವನ್ನು ವಿರೋಧಿಸುವುದು, ಅವರ ಆಧ್ಯಾತ್ಮಿಕ ತತ್ವಗಳನ್ನು ಅಲ್ಲಗಳೆಯುವುದು ನಡೆಯುತ್ತಲೆ ಇದೆ. ನಯಸೇನ ತನ್ನ ಧರ್ಮ ಶ್ರೇಷ್ಠ ಎಂದು ಸಾರಲು ಕೆಳಸಮುದಾಯಗಳ ಧರ್ಮದ ಆಶಯವನ್ನು ಕನಿಷ್ಠವಾಗಿ ಕಂಡನು. ಹೀಗೆ ಧರ್ಮ-ಧರ್ಮಗಳ ಸಂಘರ್ಷವು ಚರಿತ್ರೆಯುದ್ಧಕ್ಕೂ ಕಾಣುತ್ತೇವೆ. ಕೆಲವರು ಅಗಾಧ ಉತ್ಪಾದನೆಯನ್ನು ಹೊಂದುವುದರ ಮೂಲಕ ಮತ್ತೊಬ್ಬರ ಉತ್ಪಾದನೆಗೆ ಅಡ್ಡಿಪಡಿಸುವುದು ಸಾಮನ್ಯವಾಗಿತ್ತು. ಈ ರೀತಿಯಾಗಿ ಲಭಿಸದ ಸೌಲಭ್ಯ ಮತ್ತೊಬ್ಬರಿಗೆ ಲಭಿಸಬಾರದೆಂದು ತೀರ್ಮಾನಿಸಿದ್ದರಿಂದ ಇಂತಹ ಸಂಘರ್ಷಗಳು ಭಿನ್ನ ಸ್ವರೂಪವನ್ನು ಪಡೆದವು.

ಚರಿತ್ರೆ "ಮನುಷ್ಯ ಸಮಾಜ ತನ್ನ ಭೌತಿಕ ವೈರುಧ್ಯಗಳನ್ನು ಮುಖ್ಯವಾಗಿ ಸಾಂಸ್ಕೃತಿಕ ಸಂಘರ್ಷಗಳ ರೂಪದಲ್ಲಿ ಪರಿಹರಿಸಿಕೊಳ್ಳುತ್ತಲೇ ಬಂದಿದೆ. ಹೇಗೆಂದರೆ ಎರಡು ಸಮುದಾಯ ವರ್ಗಗಳ ನಡುವಿನ ಸಂಘರ್ಷ ಈ ಎರಡು ದೈವಗಳ, ಸಾಂಸ್ಕೃತಿಕ ನಾಯಕರುಗಳ ಮಧ್ಯದ ವಿರಸಗಳಾಗಿ ಪರಿಣಮಿಸುತ್ತ ಬಂದಿದೆ."[೧೫೪] ಈ ಸಂಘರ್ಷಗಳಿಗೆ ಕಾರಣ ವೃತ್ತಿ, ಧಾರ್ಮಿಕ ಆಚರಣೆ, ವೈವಾಹಿಕ ಸಂಬಂಧಗಳು ಪ್ರಮುಖವಾಗಿ ಕಂಡುಬರುತ್ತವೆ. ಕೆಲವು ಸಮುದಾಯಗಳು ಬೇಟೆಯನ್ನು, ಪಶುಪಾಲನೆ, ಕಂಬಾರಿಕೆ, ಗಾಣಿಗ, ವ್ಯವಸಾಯ ವೃತ್ತಿಯನ್ನು ಹೊಂದಿದ್ದರು. ಇವರ ವೃತ್ತಿ ನಂತರ ಕುಲಕಸುಬುಗಳಾಗಿದ್ದು ವಿಶಿಷ್ಟವಾಗಿದೆ. ಈ ಎಲ್ಲ ಕಸುಬುಗಳು ಶ್ರಮಮೂಲ ಸಿದ್ಧಾಂತವನ್ನು ಪ್ರತಿಪಾದಿಸುವ ಚಿಂತನೆಯಲ್ಲಿ ಬರುತ್ತವೆ. ಈ ರೀತಿಯಾಗಿ ಆರಂಭಿಸಿದ ಸಮುದಾಯಗಳ ವೃತ್ತಿಯು ಬೇರೆ ಬೇರೆ ಉತ್ಪಾದನಾ ಸಂಬಂಧಗಳನ್ನು ಬೆಸೆಯುವ ಕೊಂಡಿಯಾದವು. ಇದರ ಮೂಲಕ ಮಾನವ ನರಬಲಿಯನ್ನು ತ್ಯಜಿಸಿ ಒಂದು ನಂಬಿಕೆಯ ಪ್ರಪಂಚವನ್ನು ನಿರ್ಮಿಸಿಕೊಂಡನು. ಅದೇ ಧಾರ್ಮಿಕ ಪ್ರಪಂಚ. ಇದನ್ನು ಕಾಪಾಡಲು ಅರ್ಥಾತ್ ತನ್ನ ವೃತ್ತಿಯನ್ನು ರಕ್ಷಣೆ ಮಾಡಲು, ಅನ್ಯರು ಬಂದು ಸೇರಿಕೊಳ್ಳದಂತೆ ಮಾಡಲು ಕೆಲವು ತಂತ್ರಗಳನ್ನು ಬಳಸಿಕೊಂಡವು. ಕುರಿಗಳನ್ನು ಕುರುಬರೇ ಕಾಯಬೇಕು, ಗಡಿಗೆಯನ್ನು ಕುಂಬಾರರೇ ಮಾಡಬೇಕು. ತಳವಾರರು ಊರಿನ ರಕ್ಷಣೆಯನ್ನು ಕಾಪಾಡಬೇಕೆಂದು ನಿಯಮಗಳನ್ನು ವಿಧಿಸಿಕೊಳ್ಳತೊಡಗಿದವು. ಆಗ ಉತ್ಪಾದನೆಯ ವ್ಯವಸ್ಥೆಯಲ್ಲಿ ಬಿರುಕು ಉಂಟಾಯಿತು. ಅಲ್ಲಿಯವರೆಗೂ ಬಂಧುತ್ವದಲ್ಲಿದ್ದ ಸಮುದಾಯಗಳು ಛಿದ್ರಗೊಂಡವು ಎನ್ನುಬಹುದು. ಉದಾಹರಣೆಗೆ ಕುರುಬರಿಗೂ ಬೇಟೆಗಾರರ (ಬೇಡರು) ನಡುವೆ ನಡೆಯುವ ಸಂಘರ್ಷ. ಈ ಸಂಘರ್ಷ ಏರ್ಪಡುವುದು ಸೋಮರಾಯ ಮತ್ತು ತುಕ್ಕಪ್ಪರಾಯನಲ್ಲಿನ ಗೋವುಗಳನ್ನು ಲೂಟಿ ಮಾಡುವುದಕ್ಕೆ ನಡೆಯುತ್ತದೆ. ಬೇಡರು ಸಂಗಮನಾಥನ ಮುರಿ ಸಮೀಪದಲ್ಲಿದ್ದ ಕಳ್ಳರ ಹಟ್ಟಿಯಲ್ಲಿ ವಾಸವಾಗಿರುತ್ತಾರೆ. ಇವರು ತುಕ್ಕಪ್ಪರಾಯ ಮತ್ತು ಸೋಮರಾಯರ ಪಶುಸಂಪತ್ತನ್ನು ಅಪಹರಿಸಲು ಯೋಚಿಸುತ್ತಾರೆ. ತುಕ್ಕಪ್ಪರಾಯ ಒಂಟಿಯಾಗಿರುವುದನ್ನು ಕಂಡು ಪಶುಸಂಪನ್ನು ಅಪಹರಿಸಲು ಹೊಂಚು ಹಾಕುತ್ತಾರೆ. ಬೇಡರು ಲೂಟಿಯನ್ನು ಮಾಡುವುದಕ್ಕೆ ಮೊದಲು ಸ್ನೇಹಪರವಾಗಿ ಬಂದು ಸೋಮರಾಯ ಮತ್ತು ತುಕ್ಕಪ್ಪರಾಯರ ಬಲವನ್ನು, ಸಾಮರ್ಥ್ಯವನ್ನು ಪರೀಕ್ಷಿಸುವವರು. ಬೇಡರು ಒಂದೇ ಹರಳನಲ್ಲಿ ಏಳ್ನೂರು ಬೆಳ್ಳಕ್ಕಿಯನ್ನು ಒಂದೇ ಸಾರಿಗೆ ಹೊಡೆಯುವ ವಿದ್ಯೆ ನಮ್ಮಲಿದೆಯೆಂದು ತೋರಿಸುತ್ತಾರೆ. ಅಲ್ಲದೆ ಸೋಮರಾಯನು ಒಂದೇ ಬಾಣದಿಂದ ಆ ಏಳ್ನೂರು ಬೆಳ್ಳಕ್ಕಿಯನ್ನು ಕೊಂದು ಪಶ್ಚಾತ್ತಾಪಗೊಂಡು ಮತ್ತೆ ಭಸ್ಮವನ್ನು ಹಾಕಿ ಜೀವದಾನ ಮಾಡುತ್ತಾನೆ. ಹೀಗೆ ಅಣ್ಣತಮ್ಮಂದಿರ ಸಂಯೋಗವನ್ನು ಬೇರ್ಪಡಿಸಿ ತುಕ್ಕಪ್ಪರಾಯನು ಹುತ್ತದ ಹತ್ತಿರದಲ್ಲಿ ಮಲಗಿರುವಾಗ ಏಳ್ನೂರು ಪಶುಗಳನ್ನು ಅಪಹರಿಸಿಕೊಂಡು ಹೋಗುತ್ತಾರೆ. ಇದನ್ನು ತಡೆಯಲಾಗದೆ ಅಸಹಾಯಕನಾಗಿ ಬೇಡರಿಂದ ಹತನಾಗುವುದಕ್ಕಿಂತ ನಾನು ಆತ್ಮಹತ್ಯೆ

ಮಾಡಿಕೊಳ್ಳುವುದು ಲೇಸು ಎಂದು ತುಕ್ಕಪ್ಪರಾಯ ಬಾಣದಿಂದ ಹಿರಿದುಕೊಂಡು ಸಾಯುವನು. ಈ ಸನ್ನಿವೇಶವು ಸಾವು ಬಂದರೆ ಸೋಲಿನ ಸಾವು ಆಗಿರಬಾರದು, ವೈರಿಗಳಿಂದ ಸಾವು ಪಡೆಯಬಾರದೆಂಬ ವೀರನ ಅಭಿಲಾಷೆಯು ಕಂಡುಬರುತ್ತದೆ. ಇದರ ಪ್ರತಿಕಾರಕ್ಕೆ ಮಾಳಪ್ಪನು

"ಬ್ಯಾಡರ್ನ ಹುಡಕ್ಯಾಡಿ ಚಂಡ ಕಡಿತೇವ ಕೂಗ್ಯಾಡೀ

ಚಂಡಿನ ಮೇಲೆ ಚಕ್ರಗಟ್ಟಿ ಕಟ್ಟಿತೆವೋ

ರುದ್ದರ ಗಟಿ ಮ್ಯಾಲ ಮಾಡೀ

ಆಗು ಹೋಗುವ ಭವಿಷ್ಯ ಹೇಳತೇವ ತಂದೀ"[೧೫೫]

ಈ ರೀತಿಯಾಗಿ ತಂದೆಯ ಬಯಕೆಯನ್ನು ಈಡೇರಿಸಿಕೊಳ್ಳುತ್ತಾನೆ. ಈ ಸಂಘರ್ಷವು ಉತ್ಪಾದನೆಯ ಕುರಿತು ನಡೆದ ಘಟನೆ. ಇದನ್ನು ವರ್ಗ ಸಂಘರ್ಷದ ನೆಲೆಯಲ್ಲಿ ಅಧ್ಯಯನ ಮಾಡಬಹುದು. ಮಾಳಪ್ಪನು ಬೇಡರನ್ನು ಕೊಲ್ಲುತ್ತೇನೆಂದು ಮಾಡಿದ ಪ್ರತಿಜ್ಞೆಯು ಅನ್ಯರು ತಮ್ಮ ವೃತ್ತಿಯನ್ನು ಕೈಗೊಳ್ಳಬಾರದೆಂದು ತಿಳಿಸಿಕೊಡುತ್ತದೆ. ಇದು ಈ ಸಮುದಾಯಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಕೆಳಸಮುದಾಯದ ಸಾಂಸ್ಕೃತಿಕ ನಾಯಕರು ಇದನ್ನು ಬೇರೆ ರೀತಿಯಲ್ಲಿ ಎದುರಿಸುವುದು ಕಂಡುಬರುತ್ತದೆ. ತುಕ್ಕಪ್ಪರಾಯನ ಮರಣದ ನಂತರ ಸೋಮರಾಯ ಲಿಂಗಮತವನ್ನು ಅನುಸರಿಸರಬಹುದು.

"ಹಾಲುಮತ ಬಿಟ್ಟು ಶಿವಮತ

ಹೊಂದ್ಯಾನ ಅಣ್ಣಾ

ತುಕ್ಕಪ್ಪರಾಯನ ಲಿಂಗ ಮಾಡೀ

ಮಾಯಾದ ಬಜಾರು ಯಾರಿಗೀ ಬಿಟ್ಟಿಲ್ಲ ತಮ್ಮಾ"[೧೫೬]

ಇಲ್ಲಿ ಸೋಮರಾಯನು ಅಣ್ಣನ ಸಾವಿಗೆ ಹೆದರಿ ಶಿವಮತವನ್ನು ಆಶ್ರಯಿಸಿರಬಹುದು. ಆದರೆ ವೀರನಾಯಕನ ಗುಣ ಹೊಂದಿದ ಮಾಳಿಂಗರಾಯನು ಹೋರಾಟದ ಮೂಲಕವೇ ತನ್ನ ಸಮುದಾಯದ ಹಠವನ್ನು ಮೇಲು ಮಾಡಿದ್ದಾನೆ. ಜೊತೆಗೆ ಚರಿತ್ರೆಯಲ್ಲಿ ಜಾತ್ರೆಗಳ ಮೂಲಕ ತನ್ನ ಮೂಲವನ್ನು ಉಳಿಯುವಂತೆ ಮಾಡಿದ್ದು ಕಂಡುಬರುತ್ತದೆ.

"ಆದಿಮ ಕೃಷಿಕ ಹೊಲೆಮಾದಿಗರು ಮತ್ತು ವಲಸೆಗಾರರು ಪಶುಪಾಲಕ ದ್ರಾವಿಡರ ಮಧ್ಯ ಸಂಘರ್ಷಕ್ಕಿಂತ ಸಮನ್ವಯೇ ಸಾಧಿತವಾಗಿ ದ್ರಾವಿಡ ಸಂಸ್ಕೃತಿಯೊಂದು ನಿರ್ಮಾಣವಾದುದರ ಮೂಲದಲ್ಲಿದ್ದ ಆರ್ಥಿಕ ಪ್ರೇರಣೆಗಳನ್ನು ತಿಳಿಯುವುದು ಅಗತ್ಯವಿದೆ. ಕೃಷಿಯಲ್ಲಿ ಅದ್ಭುತವಾಗಿ ಸಾಧನೆ ಮಾಡಿದ ಜನಕ್ಕೆ ಮಾರುಕಟ್ಟೆಯ ವ್ಯಾಪಾರ ಸೌಲಭ್ಯವನ್ನು ಒದಗಿಸಿಕೊಟ್ಟವರು ವಲಸೆಗಾರ

ದ್ರಾವಿಡರು. ಕೃಷಿಯ ಪ್ರಗತಿಯ ಲಕ್ಷಣಗಳನ್ನು ಅಮ್ಮನ ಪಂಥದ ಸರ್ವ ವ್ಯಾಪಕತೆಯಲ್ಲಿ ಕಲೆ, ವಿಜ್ಞಾನ, ತತ್ವಜ್ಞಾನಗಳಲ್ಲಿ ಪರೋಕ್ಷವಾಗಿ ಗುರುತಿಸಲು ಸಾಧ್ಯವಿದೆ. ಆದರೆ ಇವೆಲ್ಲ ದೇಶವ್ಯಾಪಿಯಾಗಿ ಹರಡಲು ವಲಸೆಗಾರ ದ್ರಾವಿಡರೇ ಕಾರಣರಾಗಿದ್ದಾರೆ. ವಲಸೆಗಾರ ದ್ರಾವಿಡರು ತಾತ್ಕಾಲಿಕವಾಗಿ ನೆಲೆನಿಂತು ತಮ್ಮ ವ್ಯವಹಾರ ವಹಿವಾಟುಗಳನ್ನು ನಡೆಸುತ್ತಿದ್ದ ಸಂದರ್ಭಗಳೇ ಜಾತ್ರೆಗಳಾಗಿದ್ದವು. ಬಹುಶಃ ಆರಾಧನೆಯ ಭಾಗವಾಗಿ ಅಲ್ಲದೆ ಈ ವ್ಯವಹಾರ ಸಫಲವಾಗಿದಿದ್ದ ಸ್ಥಿತಿ ಇತ್ತು. ಇದು ದ್ರಾವಿಡ ನಾಡುಗಳ ವಿಶಿಷ್ಟ ಲಕ್ಷಣಗಳೇ ಆಗಿತ್ತು."[೧೫೭] ವಲಸೆಗಾರರಾಗಿದ್ದ ಕುರುಬರು ಇಂತಹ ಸಂಘರ್ಷವನ್ನು ಪ್ರದೇಶದಿಂದ ಪ್ರದೇಶಕ್ಕೆ ಹೆದರಿಸುವ ಅನಿವಾರ್ಯತೆ ಇತ್ತು.

ವೃತ್ತಿ ಸಂಘರ್ಷಗಳು ಧಾರ್ಮಿಕ ಸಂಘರ್ಷಗಳನ್ನು ಒಳಗೊಂಡು ಅಲ್ಲಿಯು ತನ್ನ ಅಸ್ತಿತ್ವವನ್ನು ಸಮುದಾಯಗಳು ಸ್ಥಾಪಿಸಿದವು. ಶಾಂತಮುತ್ತಯ್ಯನು ಪದ್ಮಗೊಂಡನಿಂದ ಹೊರಬಂದು ಕುರಿಗಳನ್ನು ಕಾಯುತ್ತಿರುತ್ತಾನೆ. ರೇವಣಸಿದ್ಧರಿಂದ ಲಿಂಗದೀಕ್ಷೆ ಪಡೆದು ಶುಚಿತ್ವವನ್ನು ಹೊಂದಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಲು ಮುಂದುವರಿಯುತ್ತಾನೆ. ತೊಗರಿಸಿ ಬಿಟ್ಟು ಕಲ್ಯಾಣದ ಒಂದು ಯೋಜನ ದೂರದ ಸರೂರುರಲ್ಲಿ ನೆಲೆನಿಂತು ಹಾಲುಮತದ ತಾತ್ತ್ವಿಕತೆಯನ್ನು ಪ್ರಚಾರ ಮಾಡುವನು. ಕುರುಬಗೌಡರನ್ನು ಕಲ್ಯಾಣದಿಂದ ಹೊರಹಾಕಿದ ವಿಷಯವಾಗಿ ಧಾರ್ಮಿಕ ಸಂಘರ್ಷ ನಡೆದದ್ದು ಕಂಡುಬರುತ್ತದೆ. ಸತ್ತ ಕುರಿಯುನ್ನು ಹಾಲ ಕಂಬಿಯಲ್ಲಿಟ್ಟು ಹಾಲು ಮಾರುವುದು ಇನ್ನಿತರ ಶರಣರ/ ವೀರಶೈವ ಧರ್ಮಕ್ಕೆ ಮಾಡಿದ ಅಪಪ್ರಚಾರವೆಂದು ಭಾವಿಸಿ ಹನ್ನೆರಡು ವರ್ಷ ಹೊರಗೆ ಹಾಕುವ ರಾಜಕೀಯ ವ್ಯವಸ್ಥೆಯೂ ಹಾಲುಮತದವರ ಸಾಮಾಜಿಕ ಆಶಯಕ್ಕೆ ಮಾಡಿದ ಅವಮಾನವನ್ನು ವ್ಯಕ್ತಪಡಿಸುವುದು. ಇದನ್ನು ಶಾಂತಮುತ್ತಯ್ಯ ಸತ್ತ ತಗರಿಗೆ ಉತ್ಸವ ನಡೆಸುವುದು ಸಂಕೇತವಾಗಿದ್ದರೂ ಮತ್ತೊಂದು ಧರ್ಮದಲ್ಲಿನ ಸತ್ತಂತಿರುವ ತತ್ತ್ವವನ್ನು ತೋರಪಡಿಸುವುದಾಗಿದೆ. ಇಲ್ಲಿ ಶಾಂತಮುತ್ತಯ್ಯ ಪ್ರಾಣಿಯು ಸತ್ತಿದೆಂದು ನೇರವಾಗಿ ಹೇಳದೆ, ಕಲ್ಯಾಣದಲ್ಲಿನ ಧರ್ಮವು ಸತ್ತಿದೆ ಎಂದು ಹೇಳುವಂತಿದೆ. ಅದಕ್ಕಾಗಿ ನಿರ್ಜೀವಕ್ಕೆ ಜೀವಬಾರಬೇಕಾದರೆ ತಮ್ಮ ನಿರ್ಮಲ ಸಮುದಾಯದ ಬೆಂಬಲ ಮುಖ್ಯವೆಂದು ತಿಳಿಸುತ್ತದೆ.

ಹೀಗೆ ರಾಜಕೀಯ ಸಂಘರ್ಷ ಏಣಿಶ್ರೇಣೀಕರಣದಲ್ಲಿ, ಮಡಿ ಮೈಲಿಗೆಯನ್ನು ಮುಖ್ಯವಾಗಿಸಿಕೊಂಡಿತ್ತು. ಒಂದನ್ನು ಮತ್ತೊಂದು ನಿಕೃಷ್ಟವಾಗಿ ಕಾಣುವ ಮತ್ತು ಶೋಷಣೆ ಮಾಡುವ ಸಂಪ್ರದಾಯವು ರೂಢಿಯಾಯಿತು. ವಿಜಯನಗರದ ಸ್ಥಾಪನೆಯು ಮುಸ್ಲಿಂ ಸಂಸ್ಕೃತಿಯನ್ನು ನಾಶಗೊಳಿಸಲು ಉದಯಿಸಿದೆಂದು ಇತಿಹಾಸದಲ್ಲಿ ಓದುತ್ತೇವೆ. ಇದು ಹಿಂದೂ ಸಂಸ್ಕೃತಿಯನ್ನು ಸ್ಥಾಪನೆ ಮಾಡಲು ಮಾತ್ರ ಉದಯಿಸಿಲ್ಲ. ಅಲ್ಲಿನ ಪುರೋಹಿತಶಾಹಿಯನ್ನು, ಅದರ ಶೋಷಣೆಯ

ವ್ಯವಸ್ಥೆಯನ್ನು ವಿರೋಧಿಸಲು ಸ್ಥಾಪನೆಯಾಯಿತು. ಇದೇ ರೀತಿಯಲ್ಲಿ ಬ್ರಾಹ್ಮಣರು, ಲಿಂಗಾಯುತರು ಮುಂತಾದ ಪ್ರಬಲ ಸಮುದಾಯಗಳು ತಮ್ಮ ಸಂಸ್ಕೃತಿಯಡಿಯಲ್ಲಿ ಮತ್ತೊಂದು ಅಂದರೆ ಕೆಳಸಮುದಾಯವನ್ನು ಹತೋಟಿಯಲ್ಲಿಡಲು ಪ್ರಯತ್ನಿಸಿದಾಗ ಸಂಘರ್ಷಗಳಾದವು.

ಸಮಾಜದಲ್ಲಿ ಸಂಸ್ಕೃತಿಯನ್ನು ಒಂದು ಚೌಕಟ್ಟಿನಲ್ಲಿ ರೂಪಿಸಿ ಕಟ್ಟುನಿಟ್ಟಿನ ಕ್ರಮ, ಆಚರಣೆ, ಸಂಪ್ರದಾಯದ ನೆಲೆಯಲ್ಲಿ ಬದುಕುವುದನ್ನು ಹೇಳಿಕೊಟ್ಟಿತು. ಕೆಲವೊಂದು ಸಮುದಾಯಗಳು ಏಣಿಶ್ರೇಣಿಕರಣದಲ್ಲಿ ಮೇಲುಸ್ತರದಲ್ಲಿಯೂ ಬರದೆ, ಕೆಳಸ್ತರದಲ್ಲಿಯೂ ಸೇರದೆ ಅಂತರವನ್ನು ಅನುಭವಿಸುತ್ತವೆ. ಅಂತಹ ಸಮುದಾಯಗಳು ಪರಿವರ್ತನೆಯನ್ನು ಬಯಸುವುದು ಸಹಜ. ಅದೇ ಹಾದಿಯಲ್ಲಿ ಹಾಲುಮತವು ಕುರಿ ಕಾಯುವುದನ್ನು ಬಿಟ್ಟು ಕೃಷಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಈ ರೀತಿಯ ಪರಿವರ್ತನೆಯು ಆ ಸಮುದಾಯದ ಆಂತರಿಕ ಸ್ವಾಭಿಮಾನದ ಮನೋಸ್ಥಿತಿಯನ್ನು ಮೇಲ್‌ಸ್ತರದಲ್ಲಿರಿಸಲು ಕಂಡುಕೊಂಡ ಹಾದಿ. ಇಂತಹವುದರಲ್ಲಿ ಆ ಸಮುದಾಯದ ವೈಶಿಷ್ಟ್ಯವನ್ನು ಕಾಣಬಹುದು. ಹಾಲುಮತ ಸಾಂಸ್ಕೃತಿಕ ವೀರರ ವೃತ್ತಿಯು ಸ್ಥಾನಮಾನವನ್ನು ಶ್ರೇಷ್ಠ ಮಟ್ಟಕ್ಕೇರಿಸಿದ್ದನ್ನು ತಿಳಿಸುತ್ತದೆ. ಅನೇಕ ಸಂದರ್ಭದಲ್ಲಿ ಪ್ರತಿರೋಧಗಳೇ ಅಸ್ತಿತ್ವದ ಅಡಿಗಳಾಗುತ್ತವೆ. ಉದಾಹರಣೆಗೆ ತೂಗುಡ್ಡದಲ್ಲಿ ಮಂಕ ತಂದೆಯು ಕೈಗೊಂಡ ತಪಸ್ಸು. ಕುರುಬರನ್ನು ಕಲ್ಯಾಣದಿಂದ ಹೊರಹಾಕಿದ ಕಾರಣವಾಗಿ ಘೋರ ಪ್ರತಿಭಟನೆಯನ್ನು ಮಂಕ ತಂದೆಯು ಕೈಗೊಳ್ಳುವನು. ಕೋಡುಗಲ್ಲಿನ ಮೇಲೆ ಸೂಜಿಯೂರಿ, ಅದಕ್ಕೆ ತಲೆಹಚ್ಚಿ ಕಾಲು ಮೇಲೆ ಮಾಡಿ ಉಗ್ರ ತಪಸ್ಸು ಮಾಡುತ್ತಿರುವುದು ಅಹಿಂಸಾತ್ಮಕ ಪ್ರತಿಭಟನೆ. ಇಲ್ಲಿ ಹಾಲುಮತ ಸಮುದಾಯದ ಅಸ್ತಿತ್ವಕ್ಕೆ ಮರುಳಮಂಕನು ಒಂಟಿಯಾಗಿ ಇಡೀ ಕಲ್ಯಾಣವನ್ನೆ ಅಲುಗಾಡಿಸುವ ಧಾರ್ಮಿಕ ತಾತ್ವಿಕತೆಯ ವ್ಯಕ್ತಿಯಾಗಿ ನಿಲ್ಲುತ್ತಾನೆ. ತಗರ ಪವಾಡ ಮತ್ತು ಸಿದ್ಧಮಂಕ ಚರಿತೆಯಲ್ಲಿ ಹಾಲುಮತದವರನ್ನು ಸಮಾಜದಿಂದ ಹೊರಯಿಟ್ಟರೆಂಬ ಕಾರಣಕ್ಕೆ ಹೋರಾಟ ನಡೆಸಿದರೂ ಇವರಿಬ್ಬರ ಚಳವಳಿಯ ಮಾರ್ಗ ವಿಭಿನ್ನತೆಯನ್ನು ಪಡೆದಿದೆ. ಒಬ್ಬನು ಪವಾಡ ಮಾಡುವುದರ ಮೂಲಕ ಮಾನ್ಯತೆಯನ್ನು ಪಡೆದರೆ, ಇನ್ನೊಬ್ಬನು ಉಗ್ರ ತಪಸ್ಸಿನಿಂದ ಕಾರ್ಯಸಿದ್ಧಿಯನ್ನು ಮಾಡುತ್ತಾನೆ. ಇವರಿಬ್ಬರ ಸಂಘರ್ಷವು ಕಲ್ಯಾಣ ಸ್ಥಳಕ್ಕೆ ಸಂಬಂಧಿಸಿದ್ದು ಇನ್ನೂ ವಿಶೇಷ. ಹೀಗೆ ಸಾಂಸ್ಕೃತಿಕ ಸಂಘರ್ಷವು ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕತೆಯಲ್ಲಿ ಪರಿವರ್ತನೆ ಸಂಭವಿಸಿದಾಗ ಸಮಾಜದಲ್ಲಿ ಸಂಘರ್ಷ ಸಾಮಾನ್ಯವೆಂದು ಈ ಕಾವ್ಯ ಕೃತಿಗಳು ತಿಳಿಸಿಕೊಡುತ್ತವೆ.

ಹೀಗೆ ವರ್ಗ ಸಂಘರ್ಷಗಳು ಉತ್ಪಾದನಾ ವ್ಯವಸ್ಥೆಯ ಏಣಿಶ್ರೇಣಿಕರಣಗಳನ್ನು ವಿಂಗಡಿಸುವುದರ ಹಿನ್ನೆಲೆಯಲ್ಲಿ ಶ್ರೇಷ್ಠ ಸಮಾಜವನ್ನು ನಿರ್ಮಾಣ ಮಾಡುತ್ತವೆ. ಒಂದು ಮತ್ತೊಂದನ್ನು ಸದಾ

ಗಮನಿಸುತ್ತವೆ. ಎಂಬ ಕಾರಣಕ್ಕೆ ಪ್ರತಿಯೊಂದು ವರ್ಗಗಳು ತಮ್ಮ ಚೌಕಟ್ಟು ಮೀರುವ ಹಂತಕ್ಕೆ ಹೋಗುವುದಿಲ್ಲ ಎಂದು ತಿಳಿಯಬಹುದು. ಆಧ್ಯಾತ್ಮಿಕ, ಸೌಂದರ್ಯಾತ್ಮಕ ಕಾಳಜಿಗಳ ಜೊತೆ ಜೊತೆ ಮಾನವನು ಅಮೂರ್ತ ಮೌಲ್ಯಗಳ ಪ್ರತಿಪಾದನೆಯಲ್ಲಿ ಜೀವಿಸುತ್ತಾನೆ.

**೫. ಪ್ರಾಣಿ ಜಗತ್ತು**

ಜಗತ್ತಿನ ಉಗಮ ಪ್ರಾಣಿಯಿಂದಲೇ ಎಂದು ಡಾರ್ವಿನ್ನನ ವಿಕಾಸವಾದ ಮಂಡಿಸುತ್ತದೆ. ಏಕಾಣುಜೀವಿ ಅಮಿಬಾದಿಂದ ಹಿಡಿದು ಮಾನವನ ಬದುಕಿನ ಸುತ್ತಲಿನ ವಿಸ್ಮಯ ಪ್ರಪಂಚವನ್ನು ಪ್ರಾಣಿಯೆಂಬ ಪದದಿಂದಲೇ ಗುರುತಿಸುತ್ತೇವೆ. ಆದರೆ ಮನುಷ್ಯ ಪ್ರಾಣಿಯು ಪರಿಸರದಲ್ಲಿರುವ ಇತರ ಪ್ರಾಣಿಗಳಿಗಿಂತ ವಿಶಿಷ್ಟತೆಯಿಂದ ಜೀವನ ನಡೆಸುವುದು. ಜೊತೆಗೆ ಎಲ್ಲಾ ಪ್ರಾಣಿಗಳ ಮೇಲೆ ತನ್ನ ಹತೋಟಿಯನ್ನು ಸಾಧಿಸುವ ಸಾಮರ್ಥ್ಯ ಹೊಂದಿದ್ದಾನೆ. ಕ್ರಮೇಣ ಬುದ್ಧಿ ಬೆಳೆದಂತೆ ಸಮಸ್ಯೆಗಳು ಅವನನ್ನು ಕಾಡತೊಡಗಿದವು. ಅದರ ಪರಿಹಾರಕ್ಕೆ ತನ್ನ ಯುಕ್ತಿಯಿಂದ ಕೆಲವು ಪ್ರಾಣಿಗಳನ್ನು ಸಾಧುವಾಗಿಸಿಕೊಂಡರೆ, ಕೆಲವನ್ನು ತನ್ನ ಹತೋಟಿಯಲ್ಲಿಟ್ಟು, ಇನ್ನೂ ಕೆಲವು ಪ್ರಾಣಿಗಳನ್ನು ದೈವತ್ವಕ್ಕೇರಿಸಿ ಪೂಜ್ಯನೀಯವಾಗಿಸಿಕೊಂಡನು. ಹೀಗೆ ಭಾರತೀಯ ಪುರಾಣಗಳಲ್ಲಿ ಶಿವ, ವಿಷ್ಣು, ಬ್ರಹ್ಮರು ಕೂಡ ಪ್ರಾಣಿಗಳನ್ನು ವಾಹನವಾಗಿಸಿಕೊಂಡು ಆಧ್ಯಾತ್ಮಿಕ ಜಗತ್ತಿನಲ್ಲಿ ಗುರುತಿಸಿಕೊಳ್ಳುವುದು ಕಂಡುಬರುತ್ತದೆ. "ಶಿವ ಶೈವಾಗಮದ ಅಧಿಪತಿ. ಈತನ ಗಣ ಸಮೂಹದಲ್ಲಿ ಮಾನವ ಶರೀರ ಮತ್ತು ಪ್ರಾಣಿ ಮುಖ ಹೊತ್ತವರೇ ಹೆಚ್ಚು. ಶಿವನ ವಾಹನವಾದ ನಂದಿ ಶಿವಗಣಗಳಲ್ಲಿ ಅತ್ಯಂತ ಪ್ರಮುಖವಾದವನು. ಈ ಕಾರಣದಿಂದ ಶಿವಭಕ್ತರಿಗೆ ಹೆಚ್ಚು ಪೂಜನೀಯ."[೨೨೫] ಈಗಲೂ ಶಿವಾಲಯವಿದ್ದೆಡೆಯಲ್ಲಿ ನಂದಿಯ ವಿಗ್ರಹವನ್ನು ಕಾಣುತ್ತೇವೆ. ಪ್ರಾಣಿಗಳ ಚಿತ್ರದಿಂದ ಈ ದೇವಾಲಯ ಯಾವ ದೇವರನ್ನು ಸಂಕೇತಿಸುತ್ತದೆ ಎಂಬುದನ್ನು ಅರ್ಥೈಸಿಸಲು ಸುಲಭವಾಗಿದೆ. ವಿಷ್ಣು ಪುರಾಣಗಳಲ್ಲಿ ದಶಾವತಾರವನ್ನು ಪ್ರಾಣಿಗಳ ದೇಹದಲ್ಲೆ ಅವತರಿಸಿ ಪೂಜ್ಯನೀಯವಾಗಿದ್ದಾರೆ. ವಿಷ್ಣು, ಮತ್ಸ್ಯ ಕೂರ್ಮ, ವರಾಹ, ನರಸಿಂಹಾವತಾರದಲ್ಲಿ ಸಿಂಹದ ತಲೆ ಮನುಷ್ಯ ದೇಹವನ್ನು, ರಾಮಾಯಣದಲ್ಲಿ ಹನುಮಂತನು ಸಾಗರೋಲ್ಲಂಘನ ಸಂದರ್ಭದಲ್ಲಿ ವಾನರನಾಗಿ ಲಂಕದಹನ ಮಾಡಿದ್ದು, ಈ ಎಲ್ಲ ಅಂಶಗಳು ಮನುಷ್ಯನ ಭುಜಬಲವನ್ನು ಸದೃಢವೆಂದು ಸಾಧಿಸಿ ಮಾನವತ್ವವನ್ನು ದೈವತ್ವಕ್ಕೇರಿಸುವುದನ್ನು ಕಾಣುತ್ತೇವೆ.

"ಬ್ರಹ್ಮ ಪುರಾಣಕ್ಕೆ ಸಂಬಂಧಿಸಿದಂತೆ ಜಗತ್ತಿನ ಉತ್ಪತ್ತಿಯ ಮೂಲಪುರುಷನೇ ಅವನ ಮೊಮ್ಮಗನಾದ ಕಶ್ಯಪ. ಇವನ ಇಬ್ಬರು ಮಡದಿಯರಲ್ಲಿ ತಾಮ್ರಾದೇವಿಯ ಪುತ್ರಿಯರಿಂದ ಪಕ್ಷಿಸಂಕಲುಗಳು, ಕ್ರೋದಾದೇವಿಯ ಪುತ್ರಿಯರಿಂದ ಜಿಂಕೆ, ಕರಡಿ, ಐರಾವತ, ಕುದುರೆ, ವಾನರರು, ಲಾಂಗೂಲ(ಹರೀ), ಸಿಂಹ, ಚಿರತೆ, ವ್ಯಾಘ್ರ, ಆನೆ(ಮಾತಂಗಿ) ಮುಂತಾದ ಪ್ರಾಣಿಗಳು ಜನಿಸಿದ ಉಲ್ಲೇಖಗಳನ್ನು ಈ

ಪುರಾಣಗಳು ತಿಳಿಸುತ್ತವೆ."[೧೫೯] ಹೀಗೆ ಬ್ರಹ್ಮದೇವನು ಒಂದಾನೊಂದು ಕಾಲಕ್ಕೆ ಮೇಷವನ್ನು ವಾಹನವಾಗಿ ಬಳಸಿಕೊಂಡಿರುವುದು ಪುರಾಣಗಳಿಂದ ತಿಳಿದುಬರುತ್ತದೆ. ಇದೇ ರೀತಿಯ ಸಂಕೇತಗಳನ್ನು ಸಮಾಜದಲ್ಲಿನ ವರ್ಗ, ಸಮುದಾಯಗಳು ಆರೋಪಿಸಿಕೊಂಡಿವೆ. ವೀರಶೈವದವರು ನಂದಿಯನ್ನು ಶ್ರೇಷ್ಠ ಪ್ರಾಣಿಯೆಂದರೆ, ಗೌಳಿಗರು ಎಮ್ಮೆ, ಕೋಣವನ್ನು ಪವಿತ್ರವೆಂದು ಭಾವಿಸುತ್ತಾರೆ. ಮಡಿವಾಳರು ಕತ್ತೆಯನ್ನು ಲಕ್ಷ್ಮೀ ಎಂದು ಪೂಜಿಸುತ್ತಾರೆ. ಬೇಟೆಗಾರರು ಆತ್ಮರಕ್ಷಣೆಗಾಗಿ ಸಾಕಿದ ನಾಯಿಯನ್ನು ಶ್ರೇಷ್ಠವೆಂದು ಹೇಳುತ್ತಾರೆ. ಅದೇ ರೀತಿಯಾಗಿ ಕುರುಬ ಸಮುದಾಯವು ಸಹ ಕುರಿಗಳನ್ನು ಲಕ್ಷ್ಮೀಯೆಂದು ಭಾವಿಸಿ ಸಮಾಜದಲ್ಲಿ ಅದರ ಮೂಲಕ ಗುರುತಿಸಿಕೊಳ್ಳಲು ಇಚ್ಚಿಸುತ್ತಾರೆ. ಜೊತೆಗೆ ಈ ಪ್ರಾಣಿಗಳ ಸ್ವಭಾವಗುಣಗಳ ಮೂಲಕ ತಮ್ಮ ಒಳಿತು ಕೆಡುಕಿನ ನಿರ್ಣಯವನ್ನು ನಿರ್ಧರಿಸುತ್ತಾರೆ. ಮನುಷ್ಯನು ತಾಯಿಗರ್ಭದಿಂದ ಭೂಮಿಗಿಳಿದ ಆ ಕ್ಷಣದಿಂದ ಹಿಡಿದು ಶವಸಂಸ್ಕಾರದವರೆಗೆ ಪ್ರಾಣಿಗಳ ಬಳಕೆಯು ಕಂಡುಬರುತ್ತದೆ. ನಂತರ ಮೂರುದಿನದ ಪಿಂಡವು ಪ್ರಾಣಿ-ಪಕ್ಷಿಗಳ ಮೂಲಕವೇ ಮೋಕ್ಷಗೊಳ್ಳುವುದು ಎಂಬ ದೃಢನಂಬಿಕೆಯಿಂದಲೇ ಜನರು ಪುರಾಣಗಳಲ್ಲಿ ಪ್ರಾಣಿಗಳಿಗೆ ಪವಿತ್ರ ಸ್ಥಾನವನ್ನು ಕೊಟ್ಟಿದ್ದಾರೆ. ಒಂದು ಸಮುದಾಯದ ನಿರ್ದಿಷ್ಟ ಪ್ರಾಣಿ ಸಂಕೇತಗಳು, ವ್ಯಕ್ತಿ, ಸ್ಥಳ, ಘಟನೆಗಳ ಸುತ್ತ ಹೆಣೆದುಕೊಂಡಿರುತ್ತವೆ. ಪ್ರಾಣಿಗಳನ್ನು ಹಿಡಿದು ಪಳಗಿಸಿ ತನ್ನ ವೃತ್ತಿಗೆ ಪೂರಕವಾಗಿ ದುಡಿಸಿಕೊಳ್ಳತೊಡಗಿದರು. ಆದ್ದರಿಂದ ಅಭಿವೃದ್ಧಿಕಾರ್ಯಕ್ಕೆ ಬೇಕಾದ ಪ್ರಾಣಿಗಳ ಜನನವನ್ನು ಕೈಲಾಸದಿಂದ ಭೂಮಿಗೆ ಪರಿಚಯಿಸಲು ಪುರಾಣವನ್ನು ಆಯ್ದುಕೊಂಡರು. ಹಾಲುಮತ ಪುರಾಣಗಳು ಸಹ ಪ್ರಾಣಿಸಂಕೇತವನ್ನು ಬಳಸಿಕೊಳ್ಳುವಲ್ಲಿ ಪ್ರಾಮುಖ್ಯತೆಯನ್ನು ಹೊಂದಿವೆ. ಕುರುಬರು 'ಕುರಿ'ಯನ್ನು ಸಾಕಿ-ಸಲುಹಿದರ ಮೂಲಕ ತಮ್ಮ ಅಸ್ಮಿತೆಯನ್ನು ಸಮಾಜದಲ್ಲಿ ಉಳಿಸಿಕೊಂಡಿದ್ದಾರೆ. ಕುರಿ ಸಾಕಾಣಿಕೆಯು ಅವರ ಅಸ್ಮಿತೆಯನ್ನು ಕಾಪಾಡುತ್ತಾ ಆ ಸಮುದಾಯದ ಜೀವನ ಗತಿಗೆ ಆರ್ಥಿಕತೆಯನ್ನು ಒದಗಿಸಿದೆ. ಹಾಗೂ ಆಹಾರದ ದೃಷ್ಟಿಯಿಂದಲೂ ಜನಪ್ರಿಯತೆಯನ್ನು ಪಡೆದಿದೆ. ಕುರುಬರು "ಕುರಿ"ಗಳನ್ನು ಪಡೆಯುವ ಕಥೆಯು ಚಮತ್ಕಾರದಿಂದ ಕೂಡಿದೆ. ಕೈಲಾಸದಲ್ಲಿ ಶಿವಭಕ್ತ ಭೃಂಗಿಯನ್ನು ಕಂಡು ನಕ್ಕವರು ಭೂಮಿಯಲ್ಲಿ ಕುರಿಗಳಾಗಿ ಜನಿಸಿದವು ಎಂದು ಹೇಳಿದರೆ, ಮತ್ತೊಂದು ಪುರಾಣದಲ್ಲಿ ಜಾಬಾಲ ಮುನಿಯಾಗಿ ಹುಟ್ಟಿ ಯೋಗಭ್ಯಾಸದಿಂದ ತಪಸ್ಸನ್ನು ಮಾಡುವಾಗ ಆಕಸ್ಮಿಕ ದುರ್ಘಟನೆಗೆ ಬಲಿಯಾಗುತ್ತಾನೆ. ಜಾಜಾಲ ಮುನಿಯನ್ನು ಶಿಶುಹತ್ಯೆ ಅಪರಾಧಕ್ಕೆ ಅರಸನು ಶಿರಚ್ಛೇದನ ಮಾಡಿಸುತ್ತಾನೆ. ಆಗ ಆ ಜಾಬಾಲ ಮುನಿಯ ರಕ್ತ ಭೂಮಿಗೆ ಬೀಳಲು ಅನೇಕ ಕುರಿಗಳು ಉದ್ಭವಿಸುತ್ತವೆಂದು ಹೇಳುತ್ತದೆ.

"ತರುಳನಂ ಕೊಂದ ಫಲನೋಡೆಂದು ಕೋಪದಿಂ ಕತ್ತರಿಸಿಬಿಟ್ಟು ಶಿರವ
ಧರಣಿಗೆ ರುಧಿರ ಬೀಳಲದರೊಳಗೆ ತರತರದ

ಕುರಿಗಳುದ್ಭವಿಸಿ ಪೊರಪೊರಡಲಗಣಿತಮಾಗಿ

ಬೆರಗಾಗಿ ಭೂಪಾಲನವುಗಳಂ ಪೊರೆವದೆಂದುಸುರ್ದನಾ ರಾಹುತರ್ಗೆ"[೧೬೦]

ಹೀಗೆ ಕುರಿಗಳು ಒಬ್ಬ ಮುನಿಯ ಶಾಪವಿಮೋಚನೆಗೆ ದಾರಿಮಾಡಿಕೊಡುತ್ತವೆ. ಮತ್ತೊಂದು ಕಡೆ ಒಕ್ಕಲಿಗರನ್ನು ಕುರಿ ಕಾಯುವವರನ್ನಾಗಿಸುವುದನ್ನು ಹೇಳುತ್ತದೆ. ತಗರ ಪವಾಡದಲ್ಲಿ ಒಕ್ಕಲಿಗ ಆದಿಗೊಂಡನ ಮಕ್ಕಳಲ್ಲಿ ಕೊನೆ ಮಗ ಉಂಡಾಡಿ ಪದ್ಮಣ್ಣನನ್ನು ಕುರಿ ಕಾಯುವ ಕಾಯಕಕ್ಕೆ ನೇಮಿಸುವುದರಿಂದ ತಿಳಿಯುತ್ತದೆ. ತಂದೆ-ತಾಯಿ ಎಷ್ಟೇ ಹೇಳಿದರೂ ಕೇಳದ ಪದ್ಮಣ್ಣನು ಮುತ್ತುಕದ ಮರವನ್ನು ಕಡಿಯುತ್ತಾನೆ. "ಮುತ್ತುಕ ಕಡಿದನು ಹುತ್ತವನೊಡೆದನು ಮತ್ತಿರ್ಪ ತುರುಗಳ ಕಂಡ ನೇರಮೂಗನು ಮಾಡಿದ ಮೊನೆಯೊಳಗಿರ್ದ ತುರುವು ಭೋರೆನುತ ಬಾಯ್ದೆರೆಯೆ"[೧೬೧] ವ್ಯವಸಾಯದ ಜೊತೆಗೆ ಕುರಿ ಸಾಕಾಣಿಕೆಯ ಸಂಕರವನ್ನು ಕುರಿಗಳ ಆಗಮನವು ತಿಳಿಸಿಕೊಡುತ್ತದೆ. ಮತ್ತೊಂದು ಕಡೆ ಕುರಿಗಳು ಸಮಾಜದಲ್ಲಿನ ಜನರನ್ನು ಸಾಂಸ್ಕೃತಿಕವಾಗಿ ಸೇರುವ ಪ್ರತೀಕವಾಗಿಯೂ ಮೂಡಿಬಂದಿವೆ. ಜನಪದ ಹಾಲುಮತ ಮಹಾಕಾವ್ಯದಲ್ಲಿ ಕುರಿಗಳ ಜೊತೆಗೆ ಒಂದು ಆಕಳು, ಒಂದು ಎಮ್ಮೆಯನ್ನು ಮೇಯಿಸುವುದಕ್ಕೆ ಕುರುಬರ ಮಡ್ಡಪ್ಪನು ಗಾಣಿಗರ ಮಲ್ಲಪ್ಪಾಗೆ ತಿಳಿಸುತ್ತಾನೆ. ಗಾಣಿಗರು ಕುರುಬರಾಗುವುದನ್ನು ತಿಳಿಸುತ್ತದೆ.

"ಹತ್ತು ಎಮ್ಮಿಕಟ್ಟಿದ ಒಂದು ಆಕಳ ಕಟ್ಟಿಯ್ಯ

ಮರ್ತ್ಯಲೋಕದೊಳಗೇನ ಗಾಣಿಗ ಹೋಗಲಿಬೇಕಯ್ಯ

ಗಾಣಿಗ ಹೋಗಲಿಬೇಕಪ್ಪ ಗೌಳಿಗಿ ಆಗಲಿಬೇಕಪ್ಪ"[೧೬೨]

ತದನಂತರ ಕುರಿಯು ಮೇಷ ಎಂಬ ಶಿಷ್ಟ ಪದದಿಂದ ಪವಾಡಕ್ಕೆ ಅವಕಾಶ ಮಾಡಿಕೊಡುತ್ತದೆ. ಈ ಪವಾಡವೇ ಕುರುಬರು ಕುರಿಯನ್ನಿರಿಸಿ ಮಾಡುವ ಸಮುದಾಯಿಕ ಹೋರಾಟವಾಗಿದೆ. ಹೀಗೆ ಕುರಿಯು ಪುರಾಣಗಳಲ್ಲಿ ಒಂದು ಪ್ರಾಣಿಯಾಗಿ ಪರಿಚಯವಾಗದೆ ಹೋರಾಟ, ನ್ಯಾಯತೀರ್ಮಾನ, ಸಂಸ್ಕೃತಿಯ ಪವಿತ್ರತೆಗೆ ಹೆಸರುವಾಸಿಯಾಗಿ ನಿಲ್ಲುತ್ತದೆ. ಮಾಳಿಂಗರಾಯನ ಕಾವ್ಯದಲ್ಲಿ ದನಗಳು, ಕುರಿಗಳು, ಎಷ್ಟು ಮಹತ್ವ ಪಡೆದಿವೋ ಅಷ್ಟೇ ಕುದುರೆ ಮತ್ತು ಹುಲಿ ಪ್ರಾಣಿಗಳು, ನಾಗರಹಾವು ದೈವತ್ವವನ್ನು ಹೊಂದಿವೆ. ಮೊದಲು ಕುದುರೆಯು ಮಾಳಿಂಗರಾಯನ ಸವಾರಿಯಾಗಿ ಮಿಂಚುತ್ತದೆ. ಕುದುರೆಯೆಂದರೆ ಮಾಳಿಂಗರಾಯನೇ ಎಂದು ಗುರುತಿಸಲಿಕ್ಕೆ ಸಹಕಾರಿಯಾಗಿದೆ. ಲಿಂಗಬೀರಣ್ಣನು ಶಿಷ್ಯನನ್ನು ಪಡೆಯುವ ಸಂದರ್ಭದಲ್ಲಿ ಕುದುರೆಯ ಪ್ರಸ್ತಾಪ ಬರುತ್ತದೆ. ಈತನ ಶಿಷ್ಯನಾದ ಮಾಳಿಂಗರಾಯನನ್ನು ಗುರುತಿಸಲು ಶಿವನು ಈ ರೀತಿ ಹೇಳುತ್ತಾನೆ.

"ಜಕ್ಕಪ್ಪ ಮಾಳಪ್ಪನೆ ಹನ್ನೆರಡನೂರು ದಂಡೇನ

ಹನ್ನೆರಡುನೂರ ದಂಡೇನ ಕೆಂಪ ಕುದುರಿ ಮ್ಯಾಲೇನ

ಕೆಂಪು ಕುದರಿಯ ಮ್ಯಾಲೇನೆ ಜಕ್ಕಪ್ಪ ಇರುವುತಾನೇನ

ಬಿಳಿಯ ಕುದುರಿಯ ಮ್ಯಾಲೇನೆ ಮಾಳಪ್ಪ ಇರುತಾನಲ್ಲ

ಹಸರ ನೀಶಾನ ಇಟ್ಟಾವೆ ಹಸುರ ಥಾಲನಿದ್ದಾವೆ"[೧೩೩]

ಇದೇ ರೀತಿಯಾಗಿ ಮಾಳಿಂಗರಾಯನ ಕಾವ್ಯದಲ್ಲಿ ಕುದುರೆಯು ಹೋರಾಟದ ವಾಹನವಾಗಿ ಕಂಡುಬರುತ್ತದೆ. ಬೇಡರನ್ನು ಕೊಂದು ವಿಜಯಿಯಾಗಿ ಕುದುರೆ ಮೇಲೆ ಬರುವ ಮಾಳಿಂಗರಾಯನನ್ನು ಬೀರಪ್ಪನು ಶಿಷ್ಯನಾಗಿ ಪಡೆಯುವಲ್ಲಿನ ಪಾತ್ರ ಮುಖ್ಯವಾಗಿ ತೋರುತ್ತದೆ.

"ಎರಳಿಯಾಗಿ ಗುರು ಹಾಯ್ದನ

ಮಾಳಿಂಗರಾಯ

ಎರಳಿಗಿ ಗುರುಮಾಡೀ

ಎರಳಿ ಹೆಗ್ಗೇರಿ

ಕೆರೆಯಲ್ಲಿ ಜಿಗಿದು

ಮಾಳಪ್ಪ ತೇಜಿ

ಸಿಕ್ಕಾವ ಓಡೀ"[೧೩೪]

ಹೀಗೆ ಕುದುರೆಯು ಸಾಹಸವನ್ನು ತೋರಪಡಿಸುವ ವಾಹನವಾಗುವುದರ ಜೊತೆಗೆ ಗುರುಶಿಷ್ಯರ ಸಂಬಂಧವನ್ನು ಗಾಳಿವೇಗದಂತೆ ಬೆಸೆಯುವುದನ್ನು ತಿಳಿಸುತ್ತದೆ. ಮಾಳಿಂಗರಾಯನು ಕುದುರೆ, ಕುರಿ, ನಾಗರಹಾವು ಹುಲಿಯನ್ನು ಸಾಧುವಾಗಿಸುವ ಗುಣಶೀಲನೆಂದು ಪ್ರಾಣಿಗಳು ಮನುಷ್ಯನ ಸುದೀರ್ಘ ಜೀವನದಲ್ಲಿ ಸಂಸ್ಕೃತಿಯ ದ್ಯೋತಕವಾಗಿ ಮೂಡಿಬಂದಿವೆ.

ಹಾಲುಮತದ ಸಾಂಸ್ಕೃತಿಕ ನಾಯಕರ ಕೈಯಲ್ಲಿ 'ನಾಗರಬೆತ್ತ'ವಾಗಿ ಸರ್ಪವು ಸ್ಥಾನ ಪಡೆದಿದೆ. ಬಾಲ್ಯದಲ್ಲಿ ಮಾಳಪ್ಪನು ಹೋಗುವ ಸರ್ಪವನ್ನು ಹಿಡಿಯುವ ಪ್ರಸಂಗವು ಈತನನ್ನು ಪವಾಡ ಪುರುಷನಾಗಿ ಚಿತ್ರಿಸಲಾಗಿದೆ.

"ಎಡವಿ ಸಂಗ್ಯಾಬಿದ್ದ

ಹಾದಿ ಕೂಡೀ

ಹಾವು ಕಚ್ಚಿತವೂ ನೋಡಿ

ಹೋಗಿ ಹಿಡಿದಾನ

ಹಾವಿನ ಹೆಡೀ

ದಿಟ್ಟಾಗಿ ನಿಂತಾ

ದೀರುಳ್ಳ ಮಾಳಿಂಗರಾಯ

ಜಗಿದಾವು ಕಣ್ಣಾನ

ಕಿಡಿ ಕಿಡೀ॥"[೧೬೫]

ಇಲ್ಲಿ ಕಿಚ್ಚಿದ ಹುಡುಗನಿಂದ ವಿಷವನ್ನು ಹಿಂತೆಗೆಯಲು ಮಾಳಿಂಗರಾಯ ಸರ್ಪಕ್ಕೆ ಹೇಳುತ್ತಾನೆ. ಈ ದಿಟ್ಟತನವನ್ನು ಸರ್ಪವು ನೋಡಿ ಮಾಳಿಂಗರಾಯನ ಕೈಯಲ್ಲಿ ನಾಗಬೆತ್ತವಾಗುತ್ತದೆ. ಸತ್ತ ವ್ಯಕ್ತಿಯನ್ನು ಬದುಕಿಸಿದ ಕೀರ್ತಿಯು ಸರ್ಪದಿಂದ ಮಾಳಿಂಗರಾಯನಿಗೆ ದೊರೆಯುತ್ತದೆ.

ಬೀರಪ್ಪನ ಸವಾರಿಯಾಗಿ ಕುದುರೆ ಚಿತ್ರಿತವಾಗಿದೆ. ಹಾಗೂ ಮಾಯವ್ವ ಬೀರಪ್ಪನಿಗೆ ಆಟಕ್ಕೆ ಸೂತರತೇಜಿಯನ್ನು ಮಾಡಿಸುತ್ತಾಳೆ. ಕನ್ನಿಕಾ ಕಾಮವ್ವನನ್ನು ಮದುವೆಗೆ ಕುದುರೆಯ ಮೇಲೆ ಸಂಚಾರವನ್ನು ಕೈಗೊಳ್ಳುವುದು ರಾಜಕೀಯ ಹೋರಾಟದ ವಿಷಯವನ್ನು ತಿಳಿಸುತ್ತದೆ.

"ಮಡದಿನ ತರಬೇಕಾದರೆ ಸೂತರ ತೇಜಿ ಬೇಕವ್ವ

ಸೂತರ ತೇಜಿ ತಂದಾನೆ ಮಡದೀನ ತರತೀನಿ ಅಂದಾನ

ಬಡಗೇರ ಬಾಬಣ್ಣನ ಬಲ್ಲ ಸೂತರ ತೇಜಿ ಹೇಳವ್ವ"[೧೬೬]

ಮಾಯವ್ವಳು ಬಡಿಗೇರ ಬಾಬಣ್ಣನಿಂದ ಸೂತರ ತೇಜಿಯನ್ನು, ರಥವನ್ನು ಮಾಡಿಸಿ ಆದಿತ್ಯವಾರ ಅಮವ್ವಾಸೆಯೆಂದು ಸೂತರ ತೇಜಿಯನ್ನು ಕೊಟ್ಟು ಕಾಳಿನಾರಾಯಣನ ಮಗಳನ್ನು ತರಲು ಪ್ರೇರೆಪಿಸುತ್ತಾಳೆ. ಸಾಂಸ್ಕೃತಿಕ ನಾಯಕರು ಹೆಣ್ಣನನ್ನು ಕದ್ದು ತುರುವುದನ್ನು ಸಾಹಸವಾಗಿ ಪರಿಗಣಿಸುತ್ತದೆ. ಆದರೆ ಹೆಣ್ಣಿಗೆ ರಕ್ಷಣೆಯನ್ನು ಶೋಷಣೆಯ ರೀತಿಯಲ್ಲಿ ನೀಡುತ್ತಿರುವುದನ್ನು ಬೀರಪ್ಪನು ಮೀರುವುದನ್ನು ಸೂತರ ತೇಜಿಯ ಪ್ರಸಂಗವು ವಿವರಿಸುತ್ತದೆ. ಇಲ್ಲಿ ಪ್ರಾಣಿಗಳು ದೈವತ್ವದ ವಾಹನವಾಗುವುದರ ಜೊತೆಗೆ ಪ್ರಾಣಿಗಳೇ ದೈವತ್ವಕ್ಕೆ ಏರಿರುವುದು ಕಂಡುಬರುತ್ತದೆ. ಪ್ರಾಣಿಗಳು ಮೊದಲು ವ್ಯಕ್ತಿಗೆ ಶರಣಾದರೆ ನಂತರ ಆ ಪ್ರಾಣಿಗಳೇ ಮನುಷ್ಯರಿಂದ ಆರಾಧಿಸಲ್ಪಟ್ಟಿವೆ. ಈ ಪ್ರಾಣಿಗಳು ಎರಡು ಹಂತದಲ್ಲಿ ಕಾಣಿಸಿಕೊಳ್ಳುತ್ತವೆ. 'ಅತ್ಯುಪಯುಕ್ತ ಪ್ರಾಣಿಗಳು' ದೇವತೆಗಳಾಗಿದ್ದು ಒಂದು ಬಗೆಯಾದರೆ "ಭಯೋತ್ಪಾದಕ ಪ್ರಾಣಿಗಳು' ದೇವತೆಗಳಾಗಿ ನಿಂತದ್ದು ಇನ್ನೊಂದು ಬಗೆ. ಈ ದೇವತೆಗಳಿಗೂ ಒಕ್ಕಲು ಮಕ್ಕಳಿಗೂ ನಿಕಟವಾದ ಸಂಬಂಧವಿದೆ. ಭೌಗೋಳಿಕ ವಾತಾವರಣಕ್ಕೆ ಅನುಗುಣವಾಗಿ ತನ್ನ ಎತ್ತು-ಬಿತ್ತುವಿಕೆಯೊಂದಿಗೆ

ಬೆಳೆಗಳೊಂದಿಗೆ ಸಂಬಂಧವನ್ನು ಕಲ್ಪಿಸಿ ದೇವತಾ ಪ್ರಾಣಿಗಳನ್ನು ಆರಾಧಿಸುವುದು ಕಂಡುಬರುತ್ತದೆ. ಈ ಆರಾಧನೆಗೂ ಬೆಳೆಗಳಿಗೂ ನಿಕಟವಾದ ಸಂಬಂಧವಿದೆ."[೧೬೮]

ತೋಳ, ಹಾವು, ಹುಲಿ, ಕರಡಿ ಇವು ಭಯವನ್ನು ಹುಟ್ಟಿಸುವ ಪ್ರಾಣಿಗಳು. ನಂತರ ಮನುಷ್ಯನ ಭಯದಿಂದ ಭಕ್ತಿಯನ್ನು ಪಡೆಯುವ ಹಂತಕ್ಕೆ ತಲುಪಿದವು. ಹಾಲುಮತದವರು ಮೂಲತಃ ಕುರಿಗಾಹಿಗಳು. ಆದ್ದರಿಂದ ಹುಲಿ, ತೋಳಗಳ ದವಡೆಯಿಂದ ತಮ್ಮ ಕುರಿ ಸಂಪತ್ತನ್ನು ಕಾಪಾಡಲು ಹುಲಿಯನ್ನು ದೈವತ್ವಕ್ಕೇರಿಸಿ, ತೋಳವನ್ನು ಕಾಡಿಗೆ ಬಿಟ್ಟರು. ಅದೇ ರೀತಿ ಹಾವು ಮನುಷ್ಯನಿಗೆ ಅಪಾಯವನ್ನುಂಟು ಮಾಡುವ ಜಂತು. ಯಾವ ಪ್ರಾಣಿಯಿಂದ ತಮ್ಮ ಕುಟುಂಬಕ್ಕೆ ತೊಂದರೆ ಒದಗುತ್ತಿತ್ತೋ ಆ ಪ್ರಾಣಿಯನ್ನು ಪೂಜಿಸಿ ಅದರಿಂದಲೇ ಮುಕ್ತಿಯನ್ನು ಕಂಡುಕೊಳ್ಳುತ್ತಿದ್ದರು. ಅದಕ್ಕಾಗಿ ಹಾಲುಮತದ ಮಾಳಿಂಗರಾಯನು ಹುಲಿಯನ್ನು ಸಂಕೇತಿಕರಿಸಿಕೊಂಡಿದ್ದಾನೆ. ಹುಲಿ ಮೇಲ್ವರ್ಗದ ಪ್ರತೀಕವಾಗಿ ಕಂಡುಬರುವುದು. ಹುಲಿಯಿಂದಲೇ ತನ್ನ ಕಾರ್ಯ ಸಿದ್ಧಿಯನ್ನು ಕೈಗೊಳ್ಳುವನು.

"ಹುಲಿಯ ಬಾಯಿಲೇ

ವೇದ ಓದಿಸಿ

ತೋರಿದ ಅಪ್ಪ ಜನಕೋ

ವೇದ ಓದಿಸಿ

ಶ್ರವಣ ಮಾಡಿಸಿ

ತೋರಿದ ನಿಜ ಬೆಳಕೋ

ಪ್ರಾಂಥದೊಳು ಪ್ರಸಿದ್ಧ ಹುಲಜಂತೀ

ಮಾಳಿಂಗರಾಯನ ಸ್ಥಳಕೋ"[೧೬೯]

ಪಂಡಿತರಿಗೆ ಸೀಮಿತವಾಗಿದ್ದ ವೇದಗಳನ್ನು ತನ್ನ ಕ್ಷೇತ್ರದಲ್ಲಿ ತನ್ನ ಅಭಿಲಾಷೆಗೆ ತಕ್ಕಂತೆ ಓದಿಸುವ ಕ್ರಮವು ಆಳುವ ವರ್ಗವನ್ನು ಧಿಕ್ಕರಿಸುತ್ತದೆ. ನಂತರ ಮಾಳಿಂಗರಾಯನು ತನ್ನ ಸ್ಥಳದಲ್ಲಿ ಶೌರ್ಯದ ಕುರುಹಾಗಿ ಹುಲಿಯ ಅಗಸಿ ಬಾಗಿಲನ್ನು ಹೊಂದುತ್ತಾನೆ. ಹುಲಿಯಿಂದ ಕುರಿಗಳನ್ನು ಕಾಯಿಸುತ್ತಾನೆ. ಹೀಗೆ ಪ್ರಬಲರು ದುರ್ಬಲರನ್ನು ಹತ್ತಿಕ್ಕುವುದನ್ನು ಈ ಮೂಲಕ ಪ್ರತಿಭಟನೆಯನ್ನು ಮಾಡುವುದು ಕಂಡುಬರುತ್ತದೆ. ಸರ್ಪವು ಬೆತ್ತವಾಗುವಲ್ಲಿಯೂ ಮತ್ತೊಂದು ಸಮುದಾಯವನ್ನು ಹತೋಟಿಗೆ ತರುವ ಪ್ರತೀಕವಾಗಿ ಬಳಕೆಯಾಗಿದೆ. ಕುರಿಯು ಅತ್ಯುಪಯುಕ್ತವಾದ ಪ್ರಾಣಿಯಾದ್ದರಿಂದ ಸಾಕಾಣಿಕೆಗೆ ಆರಿಸಿಕೊಳ್ಳುವುದಕ್ಕೆ ಮುಖ್ಯವಾಗಿ ತೋರುತ್ತದೆ. ಪ್ರಾಣಿಗಳಿಂದ ಸಹಾಯವನ್ನು ಪಡೆದುಕೊಂಡ ಮನುಷ್ಯ

ವಿಧೇಯತೆಯನ್ನು ಭಕ್ತಿಯ ರೂಪದಲ್ಲಿ ಆರಾಧಿಸುತ್ತಿರುವುದು ಕಂಡುಬರುತ್ತದೆ. ಕಾಲಾಂತರದಲ್ಲಿ ಇಂತಹ ಆರಾಧನೆಗಳು ನಂಬಿಕೆ, ಸಂಪ್ರದಾಯ, ಆರಾಧನೆಯ ಭಾಗವಾಗಿ ಕಾಣಿಸಿಕೊಂಡವು. ನಾಗರಹಾವಿಗೆ ಜನಪದರು ನಾಗಪ್ಪ, ಭರಮಪ್ಪ, ಎಂದು ಪೂಜಿಸುವಲ್ಲಿ ನೋಡಬಹುದು.

ಕುರಿಯ ಸಂಕೇತವು ಹಾಲುಮತದವರ ಮೊದಲ ಮತ್ತು ಶ್ರೇಷ್ಠವೆಂಬುದನ್ನು ಪುರಾಣಗಳು ಹೇಳುತ್ತವೆ. ಜೀವನದ ಪ್ರವಾಹವನ್ನು ನಿಶಬ್ಧದಿಂದ ತೊಳಲಾಟದ ಕಡೆಗೆ ಕೊಂಡೊಯ್ಯುವ ಸಂಕೇತ. ಕಾಡಿನಲ್ಲಿ ಗಂಭೀರವಾಗಿದ್ದು ನಂತರ ನಾಡಿಗೆ ಚಲಿಸದ ಚಲನೆಯನ್ನು ಅರ್ಥಗರ್ಭಿತವಾಗಿ ಹೇಳುತ್ತದೆ. ಕುರಿಯು ಕೇವಲ ಪ್ರಾಣಿಯಾಗಿರದೆ, ಅದು ಕುರುಬರ ಮೂಲ ಕುಲಕಸುಬಾಗಿ, ತನ್ನ ಪರಿವಾರವನ್ನು ಸಾಕಿ ಸಲುಹುವ ಜೊತೆಗೆ, ಸಮಾಜದ ಇತರ ವರ್ಗಗಳಿಗೂ ಆಶ್ರಯ ಕೊಡುವುದು ಕಂಡುಬರುತ್ತದೆ. ಕುರಿಯು ಸಮಾಜದ ಎಲ್ಲ ಸಮುದಾಯಗಳನ್ನು ಬೆಸೆಯುವ ಕೊಂಡಿಯಾಗಿದೆ. ಹೇಗೆಂದರೆ ಮೊದಲು ದೇವಲೋಕದ ಜನರನ್ನು ಭೂಲೋಕದಲ್ಲಿ ಜನಿಸುವಂತೆ ಮಾಡುತ್ತದೆ. ಪ್ರತ್ಯೇಕವಾದ ಸಮುದಾಯದ ಉಗಮಕ್ಕೆ ಕಾರಣವಾಗುತ್ತದೆ. ತನ್ನ ಸಮುದಾಯದ ಜೊತೆಗೆ ಹಲವು ಸಮುದಾಯಗಳಿಗೆ ಆಶ್ರಯ ನೀಡುವ ಮಠವಾಗುತ್ತದೆ. ಆರ್ಥಿಕವಾಗಿ ಕುರುಬ ಮತ್ತು ಇತರ ವರ್ಗಗಳನ್ನು ಅಭಿವೃದ್ಧಿಪಡಿಸುತ್ತದೆ. ಉಣ್ಣೆಯ ತಯಾರಿಕೆ, ಉಣ್ಣೆಯನ್ನು ಕತ್ತರಿಸಲು ಕತ್ತರಿಯನ್ನು ಕಮ್ಮಾರನಿಂದ ಮಾಡಿಸುವುದು. ನೇಯ್ದು ಕಂಬಳಿಯನ್ನು ಮಾರಾಟ ಮಾಡುವವರಿಂದ ಮಾಡಿಸುವುದು, ಹೀಗೆ ಕುರಿಯು ಪ್ರತಿಯೊಂದು ಕುಟುಂಬವನ್ನು ಉದ್ಯೋಗದಲ್ಲಿ ತೊಡಗುವಂತೆ ಮಾಡುವುದು. ಉದಾ: ಮಾಳಿಂಗರಾಯನ ಕಾವ್ಯದಲ್ಲಿ ಬೀಜಗುತ್ತಿಯೆಂದು ಕುರುಬ ಕುಟುಂಬಗಳಿಗೆ ಐದು ಐದು ಕುರಿಗಳನ್ನು ಕೊಡುವುದು. ಈ ರೂಢಿಯೂ ಕುರುಬ ಸಮುದಾಯವು ಸಮಾಜದಿಂದ ಅವನತಿಯನ್ನು ಹೊಂದದಂತೆ ಕಾಪಾಡಿಕೊಂಡು ಬರುತ್ತಿದೆ. ಸಾಮಾನ್ಯ ಟಗರು ಶಿವಭಕ್ತರ ವ್ಯಕ್ತಿತ್ವ ಪರೀಕ್ಷೆಯ ವಸ್ತುವಾಗುತ್ತದೆ. ಮತ್ತು ಉನ್ನತ ವರ್ಗ ಸಂಘರ್ಷಗಳನ್ನು ಇತ್ಯರ್ಥ ಮಾಡುವ ನ್ಯಾಯ ಸಾಮರ್ಥ್ಯವನ್ನು ಪಡೆದಿರುವುದನ್ನು ನೋಡಬಹುದು. ಹೀಗೆ ಕುರಿಯು ಮೃಡ ಪ್ರಾಣಿಯಾಗಿರದೆ, ಸಾಂಸ್ಕೃತಿಕ ಅಂಶವನ್ನು ಹೊತ್ತು ತಲೆತಲಾಮಾರಿನಿಂದ ಅಸ್ತಿತ್ವವನ್ನು ಕಾಯ್ದುಕೊಂಡು ಬರುವುದನ್ನು ತಿಳಿಸುತ್ತದೆ.

**೬. ಸ್ತ್ರೀಪಾತ್ರಗಳು**

ಭಾರತೀಯ ಸಾಂಸ್ಕೃತಿಕ ಜೀವನದ ಮೇಲೆ ಗಾಢವಾದ ಪ್ರಭಾವ ಬೀರಿದ ವ್ಯಕ್ತಿ ಸಮುದಾಯದಲ್ಲಿ ಮಹಿಳೆಯ ಪಾತ್ರ ಅತಿ ಮುಖ್ಯವಾದುದು. ನಮ್ಮ ಪೌರಾಣಿಕ ನಾಯಕಿಯರು ತಮ್ಮ ಅನನ್ಯ ವ್ಯಕ್ತಿತ್ವದಿಂದ ಸಮಾಜದಲ್ಲಿ ಶ್ರೇಷ್ಠತೆಯನ್ನು ಪಡೆದುಕೊಂಡಿದ್ದಾಳೆ. ಇನ್ನು ಜನಪದ ಕಾವ್ಯಗಳಲ್ಲಿ ಹೆಣ್ಣಿಗೆ ಮಹತ್ವದ ಸ್ಥಾನವನ್ನು ಕೊಡಲಾಗಿದೆ. ಜೊತೆ ಜೊತೆಗೆ ಹೆಣ್ಣನ್ನು ಮಾಯೆ ಎಂದು ಸಹ ಹೇಳಲಾಗಿದೆ.

ಪುರುಷಪ್ರಧಾನದಿಂದ ರಚಿತವಾದ ಕಾವ್ಯಗಳೇ ಹೆಣ್ಣನ್ನು ಮಾಯೆ ಎಂದು ಹೇಳುತ್ತವೆ. ಹಾಗೂ ತಮಗೆ ಗೊತ್ತಿಲ್ಲದಂತೆ ಆಕೆಯನ್ನು ಶ್ರೇಷ್ಠವೆಂದು ಸಹ ಪ್ರತಿಪಾದಿಸಿರುವುದನ್ನು ಕಾವ್ಯಗಳಲ್ಲಿ ನೋಡಬಹುದು. ಪುರಾಣಗಳಲ್ಲಿ ಕಂಡುಬರುವ ಸೀತೆ, ದ್ರೌಪದಿ, ಸೂರ್ಪನಖಿ, ಮಂಡೋದರಿ, ಸುಭದ್ರೆ, ಕುಂತಿ, ಸಾವಿತ್ರಿ ಗಂಗೆ, ಗೌರಿ, ಊರ್ಮಿಳಾ, ಅಹಲ್ಯೆ ಹೀಗೆ ಅನೇಕರು ಜಾನಪದದ ಗರಡಿಯಲ್ಲಿ ಪುನರಾವರ್ತನೆಯಾಗುತ್ತಾ ಅವರ ವ್ಯಕ್ತಿತ್ವವನ್ನು ಉಳಿಸಿಕೊಂಡಿದ್ದಾರೆ. ಇವರುಗಳು ಪುರುಷ ಪ್ರಧಾನತೆಯಲ್ಲಿ ಶೋಷಣೆಗೆ ಒಳಗಾಗಿ ಅದನ್ನು ವಿರೋಧಿಸುವ ಮನೋಭಾವನೆಯನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಜನಪದ ಹಾಲುಮತ ಪುರಾಣಗಳಲ್ಲಿ ಸ್ತ್ರೀಯರ ಶೋಷಣೆ, ಆಕೆಯ ಶೀಲವನ್ನು ಕಾಪಾಡುವಲ್ಲಿ ರಾಜಕಾರಣದ ವ್ಯವಸ್ಥೆ, ಅದನ್ನು ಆಕೆ ವಿರೋಧಿಸುವ ದಿಟ್ಟತನ, ವ್ಯಕ್ತಿತ್ವವನ್ನು ಪರೀಕ್ಷೆಗೆ ಒಳಪಡಿಸುವುದು. ಈ ಅಂಶಗಳು ಆಕೆಯನ್ನು ನಿಸ್ಸಾಹಯಕಳನ್ನಾಗಿ ಮಾಡಿಬಿಟ್ಟಿವೆ. ಆದರೂ ಆಕೆ ಇಡೀ ಸಮಾಜವನ್ನು ಪ್ರತಿರೋಧಿಸುವ ನೆಲೆಯಲ್ಲಿಯೂ ಕಂಡುಬರುತ್ತಾಳೆ. ಹಾಗೂ ಪುರುಷರ ಉನ್ನತಿಯನ್ನು ಪಡೆಯುವುದಕ್ಕೆ ಸ್ತ್ರೀಯರ ಬೆಂಬಲ ಬೇಕೆಂದು ಹಾಲುಮತ ಪುರಾಣಗಳಲ್ಲಿನ ಸ್ತ್ರೀಪಾತ್ರಗಳು ಸೂಚಿಸುತ್ತವೆ. ಈ ಪುರಾಣಗಳಲ್ಲಿ ಒಂದು ಸಮುದಾಯದ ಸೃಷ್ಟಿಗೆ ಹೆಣ್ಣು ಪ್ರಮುಖ ಎಂದು ಹೇಳುತ್ತವೆ. ಅಂದು ಮಾತೃ ಪ್ರಧಾನ ವ್ಯವಸ್ಥೆಯಿತ್ತು ಎಂದು ಹೇಳುವುದಕ್ಕೆ ನಿದರ್ಶನ. ಶಿವಪಾರ್ವತಿಯರು ಭೂಲೋಕಕ್ಕೆ ಕುರಿಗಳನ್ನು ಕಾಯುವುದಕ್ಕೆ ಬರುವರು. ಅಲ್ಲಿ ವನಸೌಂದರ್ಯವನ್ನು ನೋಡಿ ಪಾರ್ವತಿಯು ಉದ್ವೇಗಗೊಂಡು ತನ್ನ ಎದೆಯ ಹಾಲಿನಿಂದ ಎರಡು ಗೊಂಬೆಗಳನ್ನು ಸೃಷ್ಟಿ ಮಾಡುವಳು.

"ಉಪ್ಪ ಉಂಡಿದ ಖಾಯದ ಹಾಲ ಮಣ್ಣಿಗೆ ಸುರುವಲಿಬಾರದ
ಮಣ್ಣ ಮಂಟಗಿ ಮಾಡೀನೆ ಗೊಂಬಿ ಮಾಡೀನಿ ಅಂದಾಳ"[೧೬]

ಪಾರ್ವತಿಯು ಮಣ್ಣಿನಿಂದ ಒಂದು ಹೆಣ್ಣುಗೊಂಬೆ ಮತ್ತೊಂದು ಗಂಡುಗೊಂಬೆ ಮಾಡಿ ಶಿವನಿಂದ ಜೀವ ತುಂಬುವಳು. ಸೃಷ್ಟಿಯ ರಚನೆಗೆ ಅಥವಾ ಸಮುದಾಯದ ರಚನೆಗೆ ಹೆಣ್ಣು ಗಂಡುಗಳ ಸಮಾನತೆಯನ್ನು ತಿಳಿಸುತ್ತದೆ. ಇಲ್ಲಿ ಸಮುದಾಯವು ಮೊದಲು ಹೆಣ್ಣಿಗೆ ಪ್ರಾಶಸ್ತ್ಯವನ್ನು ಕೊಡುತ್ತಿರುವುದು ಕಾಲಾಂತರದಲ್ಲಿ ನಾಶವಾಗಿದ್ದನ್ನು ತಿಳಿಸುತ್ತದೆ.

ಹಾಲುಮತ ಪುರಾಣಗಳಲ್ಲಿ ಪ್ರಮುಖವಾದ ಸ್ತ್ರೀಪಾತ್ರಗಳು ಬೇರೆ ಬೇರೆ ಉದ್ದೇಶದಿಂದ ಚಿತ್ರಿತವಾಗಿವೆ. ಪಾರ್ವತಿಯೂ ಸೃಷ್ಟಿ ರಚನೆಯ ಜವಾಬ್ದಾರಿಯನ್ನು ಹೊತ್ತರೆ, ಹಾಲುಮತ ಸಮುದಾಯದ ಒಳಪಂಗಡವನ್ನು ಹುಟ್ಟುಹಾಕುವಲ್ಲಿ ಪದ್ಮಗೊಂಡನ ಕಿರಿಯ ಹೆಂಡತಿ ಚೆನ್ನಮ್ಮ ಬರುತ್ತಾಳೆ. ಉಣ್ಣೆ ಕಂಕಣದ ಹುಟ್ಟಿಗೆ ಕಾರಣಕರ್ತಳಾಗಿ ಹಾಲುಮತ ಪುರಾಣಗಳಲ್ಲಿ ವಿವಿಧ ಹೆಸರುಗಳಿಂದ ಕಾಣಿಸಿಕೊಳ್ಳುತ್ತಾಳೆ. ಹಾಲುಮತ ಪುರಾಣದಲ್ಲಿ ಚೆನ್ನಮ್ಮಳಾಗಿ, ಹಾಲುಮತೋತ್ತೇಜಕ ಪುರಾಣ ಮತ್ತು ದಾವಣಗೆರೆ ಕವಿಯ

ಹಾಲುಮತ ಪುರಾಣದಲ್ಲಿ ಚುಮುಲಾದೇವಿಯಾಗಿ ಮತ್ತು ತಗರ ಪವಾಡದಲ್ಲಿ ಸಿರಿವಂತೆಯಾಗಿ, ಜನಪದ ಹಾಲುಮತ ಮಹಾಕಾವ್ಯದಲ್ಲಿ ಶಿವಲಿಂಗಮ್ಮಳಾಗಿ ವಿವಿಧ ನಾಮಧೇಯದಿಂದ ಪದ್ಮಗೊಂಡನ ಕಿರಿಯ ಹೆಂಡತಿಯಾಗಿ ಬರುವಳು. ಸಿದ್ಧಮಂಕ ಚರಿತೆಯಲ್ಲಿ ಹೆಗ್ಗೌಂಡನು ಪದ್ಮಗೊಂಡನ ಪಾತ್ರಕ್ಕೆ ಪರ್ಯಾಯವಾಗಿ ರಚನೆಯಾಗಿದೆ ಎಂದು ತಿಳಿದುಬರುತ್ತದೆ. ಆದರೆ ಗೌಡನ ಹೆಂಡತಿಯು ಊಳಿಗದವಳೆಂದು ಮಾತ್ರ ಪ್ರಸ್ತಾಪಿಸುತ್ತದೆ. ಆದರೂ ಈಕೆಯ ವೈವಾಹಿಕ ಸಂಬಂಧದಿಂದಲೇ ಹಾಲುಮತದವರಲ್ಲಿ ಉಣ್ಣೆಕಂಕಣ ರಚನೆಯಾಯಿತೆಂದು ಖಚಿತವಾಗಿ ಹೇಳುತ್ತದೆ. ಹೀಗೆ ಪದ್ಮಗೊಂಡನ ಕಿರಿಯ ಹೆಂಡತಿ ಒಳಪಂಗಡಗಳ ಸೃಷ್ಟಿಗೆ ಕಾರಣೀಕರ್ತಳಾಗಿ ಕಂಡುಬರುವಳು. ಜೊತೆಗೆ ಹಾಲುಮತ ಸಮುದಾಯದ ಕುಲವೃತ್ತಿ ಕುರಿ ಸಾಕಾಣಿಕೆಯ ಮೇಲ್ವಾಚರಕಿಯೆಂದು ಸೂಚಿಸುತ್ತದೆ. ಪುರುಷರಂತೆ ಸ್ತ್ರೀಯರು ಕುಲೋದ್ಧಾರಕ್ಕಾಗಿ ಕಾರ್ಯೋನ್ಮುಖಿಯಾಗಿದ್ದರೆಂಬುದನ್ನು ಈ ರೀತಿ ವ್ಯಕ್ತಪಡಿಸಲಾಗಿದೆ.

"ಸಿದ್ಧಮಂಕನು ತಪವಿಹ ಸುತ್ತಲು ಬಾಧೆ
ಹೊದ್ದದಂದದಿ ತೋಹನಿಕ್ಕಿ
ಅದ್ಭುತವೆಸೆವುತ ಸುತ್ತ ಪಹರಿಯಿಂದ
ಕಾದುಕೊಂಡಿರು ಕೇಳು ಮಗಳೆ"[೧೭]

ಇದು ಹೆಣ್ಣು ಸಮುದಾಯದ ರಕ್ಷಕಿಯೆಂದು ತೋರಿಸುತ್ತದೆ. ಮತ್ತೊಂದು ಕಡೆ ವಂಶಾವಳಿಯನ್ನು ಬೆಳೆಸುವ ವ್ಯಕ್ತಿಯಾಗಿ ಕಂಡುಬರುತ್ತಾಳೆ.

"ಕಂದಯ್ಯ ನಿನ್ನ ಚಿಕ್ಕ ಹೆಂಡತಿ ಸಿರಿವಂತೆ
ಗಂಡುಮಕ್ಕಳು ಮೂರುಮಂದಿ
ಉಣ್ಣೆಕಂಕಣದ ಕುರುಬರೆಂದು ಶಿವಪೇಳೆ
ಮುಂದಣ ಕುರುಹ ಪೇಳಿದನು"[೧೮]

ಈ ಪದ್ಯವು ಹಾಲುಮತಸ್ಥರು ಅಂತರ್ಜಾತಿ ವಿವಾಹವಾದರೆ ಅವರ ಮಕ್ಕಳು ಪ್ರತ್ಯೇಕ ಉಪ ಪಂಗಡಗಳೆಂದು ಆರೋಪಿಸಿಕೊಳ್ಳುತ್ತಿದ್ದರು. ಆ ಮೂಲಕ ಹಾಲುಮತ ಸಮುದಾಯದಲ್ಲಿ ವಿಭಿನ್ನವಾದ ಜೀವನ ಶೈಲಿಯನ್ನು ಪಡೆಯುತ್ತಿದ್ದಾರೆಂದು ಇದು ಸೂಚಿಸುತ್ತದೆ. ಇದೇ ಮುಂದೆ ಸಂಪ್ರದಾಯವಾಗಿ ಬೆಳೆಯುತ್ತಾ ಬಂದಿದೆ.

ಅಲ್ಲದೇ ಪದ್ಮಗೊಂಡನ ಹಿರಿಯ ಹೆಂಡತಿಯನ್ನು ಹಾಲುಮತ ಪುರಾಣಗಳಲ್ಲಿ ವಿವಿಧ ಹೆಸರುಗಳಿಂದ ಕರೆಯಲಾಗಿದೆ. ತಗರ ಪವಾಡದಲ್ಲಿ ಲಿಂಗಮ್ಮ, ಹಾಲುಮತೋತ್ತೇಜಕ ಹಾಗೂ ಹಾಲುಮತ ಪುರಾಣ

ಕೃತಿಯಲ್ಲಿ ಜಂಕಾದೇವಿಯೆಂದು ವ್ಯಕ್ತವಾಗಿದೆ. ಈಕೆಯು ಪಾತ್ರ ಪುರಾಣಗಳಲ್ಲಿ ಒಂದೇ ರೀತಿಯಾಗಿ ಕಂಡುಬರುತ್ತದೆ. ಹಾಗೂ ಈಕೆಯನ್ನು ಕುಲಸ್ತ್ರೀ, ಧರ್ಮಪತ್ನಿಯೆಂದು ಪ್ರಸ್ತಾಪಿಸುತ್ತವೆ. ಈ ಅಂಶದಿಂದ ಹಾಲುಮತದವರು ಅಂತರ್ಜಾತಿ ವಿವಾಹವನ್ನು ಒಪ್ಪಿಕೊಂಡರು ಹೊರಗಿನಿಂದ ಬಂದ ಸ್ತ್ರೀಗೆ ಆಯ್ಕೆಯ ಸ್ವತಂತ್ರಕೊಟ್ಟರೂ, ಆಕೆಯ ಧರ್ಮ ಒಪ್ಪಿ ಮದುವೆ ಮಾಡಿಸಿ ಸ್ತ್ರೀಯರಿಗೆ ಸರಿಸಮಾನ ಆಗುವುದಿಲ್ಲವೆಂದು ಬೆಡಗಿನ ವಿಚಾರವಂತಿಕೆಯಲ್ಲಿ ವ್ಯಕ್ತವಾಗಿದೆ. ಹೀಗೆ ಹಾಲುಮತ ಪುರಾಣದಲ್ಲಿ ಸ್ತ್ರೀಯರಿಗೆ ಒಂದು ಕ್ಷೇತ್ರದಲ್ಲಿ ಸ್ಥಾನಕೊಟ್ಟು ಮತ್ತೊಂದು ಕ್ಷೇತ್ರದಲ್ಲಿ ಕಸಿದುಕೊಳ್ಳುವುದು ಇಲ್ಲಿ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಕಾಳಿನಾರಾಯಣ ಮಗಳು ಕನ್ನಿಕಾದೇವಿ, ತಂಗಿ ಸೂರಮ್ಮದೇವಿಯ ಪಾತ್ರಗಳು ಮತ್ತಷ್ಟು ಸ್ಪಷ್ಟ ಪಡಿಸುತ್ತವೆ. ಕಾಳಿನಾರಾಯಣನು ಸೂರಮ್ಮದೇವಿಯ ಮದುವೆಯನ್ನು ತನ್ನ ಇಚ್ಛೆಯಂತೆ ಮಾಡುವನು. ಈ ಸನ್ನಿವೇಶದಿಂದ ಆಕೆಯು ಅಸಹಾಯಕ ಸ್ತ್ರೀಯಾಗಿ ಕಂಡುಬರುತ್ತಾಳೆ. ಅಲ್ಲದೆ ಪ್ರತಿಭಟಿಸಿದರೂ ಅದನ್ನು ಪುರುಷ ಪ್ರಧಾನ ವ್ಯವಸ್ಥೆಯು ತನ್ನಿಂದಲೇ ಈಕೆಗೆ ಪ್ರತಿಭಟಿಸುವ ಸಾಮರ್ಥ್ಯ ಬಂದಿದೆ ಎನ್ನುವಂತೆ ಅಭಿವ್ಯಕ್ತಪಡಿಸುತ್ತವೆ. ಸೂರಮ್ಮದೇವಿಯ ಅಣ್ಣ ಕಾಳಿನಾರಾಯಣನು ಗಂಡನಾದ ಬಾಳಾಭರಮನಿಗೆ ಬಂಜೆಯೆಂದು ನಿಂದಿಸಿ ಶಿವಪೂಜೆಯನ್ನು ಕಸಿದುಕೊಳ್ಳುತ್ತಾನೆ. ಇದನ್ನು ತಿಳಿದ ಸೂರಮ್ಮದೇವಿಯು ಈ ರೀತಿಯಾಗಿ ಪುರುಷ ವ್ಯವಸ್ಥೆಯನ್ನು ವಿರೋಧಿಸುವಳು.

"ಹರವಂದು ನಾಲಿಗಿ ಕಚ್ಯಾಲೆ ಕಣ್ಣು ತೆರದು ನಿಂತ್ಯಾಳ
ಕಟ್ಟಿದ ಮಂಡಿ ಬಿಚ್ಯಾಳ ಟೊಂಕಿಗೆ ಸೆರಗ ಸುತ್ಯಾಳ"[೨೨]

ಹೀಗೆ ಬಂಜೆಯೆಂಬ ಕಳಂಕಕ್ಕೆ ಗುರಿಯಾದ ಗಂಡನೀಗೋಸ್ಕರ ಕಠಿಣ ತಪಸ್ಸು ಮಾಡಿ ಮಕ್ಕಳನ್ನು ಪಡೆಯುವುದರಲ್ಲಿ ಸ್ತ್ರೀಯು ದಿಟ್ಟತನವನ್ನು ಹೊಂದಿದ್ದಾಳೆ. ಇದೇ ರೀತಿಯಾಗಿ ಕನ್ನಿಕಾದೇವಿಯ ಮದುವೆಯು ವೈಶಿಷ್ಟ್ಯದಿಂದಕೂಡಿದೆ. ಏಳು ಅಂತಸ್ತಿನಲ್ಲಿ ಕಾಳಿನಾರಾಯಣ ಮಗಳನ್ನು ಬಂದಿಸಿಟ್ಟರು ಆಕೆಯ ಮನಸ್ಸು ಮುಕ್ತತೆಯನ್ನು ಬಯಸುತ್ತದೆ. ಅರಮನೆಯಲ್ಲಿ ಕೂಡಿ ಹಾಕಿರುವ ಪ್ರಸಂಗವು ಪುರುಷರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೆಣ್ಣನ್ನು ಬಳಸಿಕೊಳ್ಳುತ್ತಿದ್ದರೆಂದು ವೇದ್ಯವಾಗುತ್ತದೆ. ಕಾಳಿನಾರಾಯಣ ಮತ್ತು ಲಿಂಗಬೀರಣ್ಣನವರ ಜಿದ್ದಾಜಿದ್ದಿಯಲ್ಲಿ ಕನ್ನಿಕಾದೇವಿಯ ಸ್ವತಂತ್ರ ಅಡಗಿರುವುದು. ಅದಕ್ಕಾಗಿ ಲಿಂಗಬೀರಣ್ಣನು ಹೆಣ್ಣನ್ನು ಹೊತ್ತು ತರುವುದರ ಮೂಲಕ ಹಂಬಲವನ್ನು ಈಡೇರಿಸಿಕೊಡುತ್ತಾನೆ. ಪುರುಷ ಸಾಮ್ರಾಜ್ಯವನ್ನು ಭದ್ರವಾಗಿ ಕಟ್ಟಲು ಹೆಣ್ಣೆ ಆಧಾರ. ಇಂತಹ ಆಧಾರಸ್ತಂಭವನ್ನು ಮಲೀನಗೊಳಿಸಿದರೆ ತಾನಾಗಿಯೇ ಸಾಮ್ರಾಜ್ಯ ಉರುಳುತ್ತದೆಂದು ತಿಳಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ಕನ್ನಿಕಾದೇವಿಯು ಇವರಿಬ್ಬರ ರಾಜಕೀಯ ಆಟಕ್ಕೆ ದಳದ ಕಾಯಿಯಂತೆ ಈಕೆಯನ್ನು ಬಳಸಿಕೊಳ್ಳಲಾಗಿದೆ. ನಂತರ ಹೆಣ್ಣಿಗೆ ಅಲ್ಪಮಟ್ಟಿಗೆ ಆಯ್ಕೆ ಸ್ವತಂತ್ರ ಕೊಡುವುದರ ಮೂಲಕ ಪುರುಷರು ಸಮರ್ಥರಂತೆ ಕಂಡುಬರುತ್ತಾರೆ.

ವಿಶೇಷವಾಗಿ ಹಾಲುಮತ ಪುರಾಣಗಳಲ್ಲಿ ಮನಸೆಳೆಯುವ ಸ್ತ್ರೀಪಾತ್ರವೆಂದರೆ ಮಾಯವ್ವ. ಬೀರಣ್ಣ ಮತ್ತು ಮಾಳಿಂಗರಾಯರಿಗಿಂತ ವಿಶಿಷ್ಟತೆಯನ್ನು ಹೊಂದಿದ ಪಾತ್ರವಿದು. ಯಾವುದೇ ಅಲೌಕಿಕವಾದ ಅಂಶಗಳನ್ನು ಈಕೆಯ ಜೊತೆ ಸಮೀಕರಿಸಿದೆ ಇರುವುದು ಕಾವ್ಯ ಈಕೆಗೆ ಕೊಟ್ಟ ನ್ಯಾಯವಾಗಿದೆ. ಈಕೆಗೆ ಮಗಳು, ಅಕ್ಕ, ತಾಯಿ, ಹೆಣ್ಣಿನ ತ್ಯಾಗ ಗುಣವನ್ನು ಸುಂದರವಾಗಿ ಅಭಿನಯಿಸಿದ ಕೀರ್ತಿ ದೊರೆಯುವುದು. ಎಲ್ಲ ಸ್ತ್ರೀ ಪಾತ್ರಗಳಿಗಿಂತ ಮಾಯವ್ವ ಸಂಪೂರ್ಣ ಅಧಿಕಾರ ಮತ್ತು ಆಯ್ಕೆಯ ಸ್ವತಂತ್ರ ಹೊಂದಿದ್ದಾಳೆ. ಧೀರತನ, ಛಲಗಾರಿಕೆ, ಸಂಘಟಿಸುವ ಮನೋಭಾವ ಜಾಣತನವು ಕಾವ್ಯದಲ್ಲಿ ಜವಾಬ್ದಾರಿಯುತವಾಗಿ ಮೈಬಿಚ್ಚಿಕೊಳ್ಳುತ್ತಾ ಹೋಗುವುದು. ಅನಾಥಳಾಗಿ ದೊರೆತ ಮಾಯವ್ವ ಕುರಿಗಳನ್ನು ಕಾಯುತ್ತಾ, ಬೀರಣ್ಣನ ಲಾಲನೆ ಪಾಲನೆಯಲ್ಲಿ ಮೈಮರೆತು ಹಾಲುಮತ ಸಮುದಾಯದಲ್ಲಿ ದೈವತ್ವಕ್ಕೇರಿದ ಮೊಟ್ಟ ಮೊದಲ ಸ್ತ್ರೀಪಾತ್ರವಾಗಿ ಕಂಡುಬರುವಳು. ಪುರುಷರಂತೆ ಸ್ತ್ರೀಯರು ಸಹ ದೈವಸಂಭೂತರೆಂದು ಮಾಯಮ್ಮಳ ಪಾತ್ರವು ಸೂಚಿಸುತ್ತದೆ. ಸ್ತ್ರೀಯು ಪುರುಷನ ಸಂಪತ್ತಿನಲ್ಲಿ ಅರ್ಧದಷ್ಟು ಪಾಲುದಾರರೆಂದು ಈ ಪಾತ್ರ ವ್ಯಕ್ತಪಡಿಸುತ್ತದೆ.

"ಕಾಡುರುದ್ರರ ಭೂಮ್ಯಾಗೆ ಭಾಗ್ಯಕಾಯುತಾಳೇನ
ಭಾಗ್ಯ ಕಾಯುತಾಳೇನೆ ಬದುಕ ಕಾಯುತಾಳೇನ
ಗಂಡನಿಲ್ಲದ ಬಾಲೇನ ಕುರಿಯಾ ಕಾಯುತಾಳೇನ"[೨೩]

ತಂದೆಯಿಂದ ಮಾಯವ್ವ ಏಳುನೂರು ಕುರಿಗಳನ್ನು ಪಡೆದು ಪ್ರತ್ಯೇಕ ಜೀವನವನ್ನು ನಡೆಸುವಳು. ಸ್ತ್ರೀಯು ಮದುವೆಯಾಗದಿದ್ದರೂ ದತ್ತು ಮಕ್ಕಳನ್ನು ಪಡೆದು ಜೀವನವನ್ನು ನಿಭಾಯಿಸಬಹುದೆಂದು ಮಾಯವ್ವ ಲಿಂಗಬೀರಣ್ಣನನ್ನು ಸಾಕುವಲ್ಲಿ ತಿಳಿದುಬರುತ್ತದೆ. ಹೆಣ್ಣು ಕೇವಲ ಭೋಗದ ವಸ್ತುವಲ್ಲ ಎಂದು ತಿಳಿಸುವುದು. ಈಗಾಗಲೇ ಸ್ತ್ರೀಯರು ಮದುವೆ, ಬಂಜೆ, ಪಾವಿತ್ರತೆಯ ಕಾಪಾಡುವಿಕೆಯ ಸಮಸ್ಯೆಯಿಂದ ಬೆಂದುಹೋಗಿದ್ದಾಳೆ. ಇವುಗಳಿಂದ ಮುಕ್ತಳಾಗಿ ಬದುಕುವ ಜೀವನ ಕಲೆಯನ್ನು ಮಾಯವ್ವಳ ಪಾತ್ರ ಪ್ರಮುಖವಾಗಿ ತಿಳಿಸುತ್ತದೆ.

ಮಾಳಪ್ಪನು ಇಬ್ಬರು ಹೆಂಡಿರನ್ನು ಹೊಂದಿರುವನು. ಎರಡನೆಯ ಹೆಂಡತಿ ಶರಣ ಈರಮ್ಮಳ ಪಾತ್ರವನ್ನು ವಿಶೇಷವಾಗಿ ಚಿತ್ರಿಸಲಾಗಿದೆ. ದೈವಕ್ಕೆ ಅಪವಾದ ಮಾಡಿದವರು ಶಿಕ್ಷೆಗೆ ಒಳಗಾಗುತ್ತಾರೆಂದು ಈರಮ್ಮಳ ಪಾತ್ರ ಸೂಚಿಸುತ್ತದೆ. ಶಿವನ ನೈವೇದ್ಯಕ್ಕೆ ನೀರು ತರಲು ಬಾವಿಗೆ ಹೋಗುವಳು. ಆಗ ಆಕೆಯು ಮೊದಲು ಮೂರು ಬೊಗಸೆ ನೀರನ್ನು ಕುಡಿದು ನಂತರ ಕೊಡಕ್ಕೆ ತುಂಬುವಳು. ಹೀಗೆ ನೀರು ಎಂಜಲು ಆಗುತ್ತದೆ. ಈ ಕಾರಣಕ್ಕೆ ಮಾಳಪ್ಪನು ಕೋರಿಕೆಯ ಹರಿಶ್ಚಂದ್ರರು ಕರಿಯ ಹೋಗ(ಸತ್ತ)ಬಿಟ್ಟಾನೆಂದು ಕೂಗಿ ಹೇಳುವನು. ಇದನ್ನು ಸತ್ಯವೆಂದು ತಿಳಿದು ಈರಮ್ಮ ಮಾಳಪ್ಪನಿಗೆ ಹೇಳದೆ ತವರಿಗೆ ಹೋಗುವಳು.

ಈ ರೀತಿಯಾಗಿ ಈರಮ್ಮ ಬಂದಿದ್ದಕ್ಕೆ ತಂದೆಯು ನಿರಾಕರಿಸುವರು. ಆಗ ಈರಮ್ಮಳು ಗಂಡನಮನೆಗೆ ಮತ್ತು ತಂದೆಯ ಮನೆಗೆ ಹೋಗದೆ

"ಬೆನ್ನ ಬಿಚ್ಚುತವೇನೆ ಮೂರ ಬಗಸಿ ನೀರೇನ
ಮೂರ ಬಗಸಿ ನೀರೇನ ಅಲ್ಲೇ ಬೀಳುತಾವೇನ
ಏನಮ್ಮವ್ವ ಈರಮ್ಮ ಐಕ್ಯನಾಗುತಾಳೇನ"[೧೬]

ಈ ರೀತಿಯಾಗಿ ಈರಮ್ಮಳು ಮಾಯವ್ವನಂತೆ ದಿಟ್ಟತನದಿಂದ ಜೀವನವನ್ನು ನಡೆಸಲು ಯಾವುದೇ ಭದ್ರತೆಯು ಇರಲಿಲ್ಲವೆಂದು ತಿಳಿಸುತ್ತದೆ.

ಹೀಗೆ ಹಾಲುಮತ ಪುರಾಣದಲ್ಲಿ ಬಹುಪತ್ನಿತ್ವದಿಂದ ಗಾಸಿಗೊಂಡಿದ್ದನ್ನು ಸಮಾಜ ಆಕೆಯನ್ನು ದೂರವಿಟ್ಟದ್ದನ್ನು ನಂತರ ಆಕೆಯು ಸ್ವತಂತ್ರಳಾಗಲು ಆತುರ ಪಡುವುದನ್ನು, ಕೊನೆಗೆ ಶೋಷಣೆಯ ವಿರುದ್ಧ ಪ್ರತಿಭಟಿಸಿ ಸಮಾಜದಲ್ಲಿ ಮಹತ್ವ ಪಡೆದಿರುವುದನ್ನು ಹಾಲುಮತ ಪುರಾಣಗಳಲ್ಲಿನ ಪ್ರತಿಯೊಂದು ಸ್ತ್ರೀಪಾತ್ರಗಳು ವ್ಯಕ್ತಪಡಿಸುತ್ತವೆ.

**ಕೊನೆ ಟಿಪ್ಪಣಿಗಳು**

೧. ತಗರ ಪವಾಡ ಪ್ರಸ್ತಾವನೆ, ಪುಟ-೩
೨. ಮಹಾಕಾವ್ಯ ಸ್ವರೂಪ ಡಾ. ಜಿ.ಎಸ್. ಶಿವರುದ್ರಪ್ಪ, ಪುಟ-೬೦
೩. ಅದೇ ಪುಟ-೬೬
೪. ಸಿದ್ಧಮಂಕ ಚರಿತೆ ಪ್ರಸ್ತಾವನೆ ಪುಟ-vii.
೫. ಅದೇ ಸಂ-೧, ಪ-೧೩೭
೬. ಅದೇ ಸಂ-೧, ಪ-೩೨
೭. ಅದೇ ಸಂ-೨, ಪ-೫೭
೮. ಅದೇ ಸಂ-೨, ಪ-೭೩
೯. ಅದೇ ಸಂ-೩, ಪ-೭೮
೧೦. ಅದೇ ಸಂ-೪, ಪ-೧೫೧
೧೧. ಅದೇ ಸಂ-೪, ಪ-೧೫೯
೧೨. ಅದೇ ಸಂ-೪, ಪ-೧೮೭
೧೩. ತಗರ ಪವಾಡ ಸಂ-೨, ಪ-೧
೧೪. ಅದೇ ಸಂ-೧, ಪ-೨೯
೧೫. ಅದೇ ಸಂ-೨, ಪ-೨೧
೧೬. ಅದೇ ಸಂ-೨, ಪ-೪೪

೧೭. ಅದೇ ಸಂ-೩, ಪ-೬೯
೧೮. ಅದೇ ಸಂ-೧, ಪ-೨೯
೧೯. ಅದೇ ಸಂ-೫, ಪ-೧೫
೨೦. ಅದೇ ಸಂ-೫, ಪ-೨೯
೨೧. ಅದೇ ಸಂ-೬, ಪ-೧೩
೨೨. ಅದೇ ಸಂ-೬, ಪ-೨೫
೨೩. ಅದೇ ಸಂ-೭, ಪ-೧೯
೨೪. ಅದೇ ಸಂ-೭, ಪ-೪೦
೨೫. ಅದೇ ಸಂ-೭, ಪ-೪೫
೨೬. ಹಾಲುಮತದ ಪುರಾಣವು (ಸಂ) ಬಸವಣೆಪ್ಪ ನೀಲಪ್ಪ ಹಳವಳ್ಳಿ ಸಂ-೧, ಪ-೩
೨೭. ಅದೇ ಸಂ-೧, ಪ-೧೨
೨೮. ಅದೇ ಸಂ-೧, ಪ-೨೧
೨೯. ಅದೇ ಸಂ-೧, ಪ-೩೪
೩೦. ಅದೇ ಸಂ-೨, ಪ-೧೭
೩೧. ಅದೇ ಸಂ-೩, ಪ-೭
೩೨. ಅದೇ ಸಂ-೩, ಪ-೧೨
೩೩. ಅದೇ ಸಂ-೪, ಪ-೩೪
೩೪. ಅದೇ ಸಂ-೫, ಪ-
೩೫. ಅದೇ ಸಂ-೫, ಪ-೧೩
೩೬. ಗೊಲ್ಲಾಳಯ್ಯನ ಪುರಾಣ ಸಂ-೪, ಪ-೧೫
೩೭. ಅದೇ ಸಂ-೬, ಪ-೧೭
೩೮. ಅದೇ ಸಂ-೬, ಪ-೬೧
೩೯. ಅದೇ ಸಂ-೭, ಪ-೯
೪೦. ಹಾಲುಮತೋತ್ತೇಜಕ ಪುರಾಣ ಸಂ-೧, ಪ-೧೧
೪೧. ಅದೇ ಸಂ-೯, ಪ-೧೬೨
೪೨. ಅದೇ ಸಂ-೧, ಪ-೧೩
೪೩. ಅದೇ ಸಂ-೧, ಪ-೧೦
೪೪. ಅದೇ ಸಂ-೨, ಪ-೧೬
೪೫. ಅದೇ ಸಂ-೪, ಪ-೩೮
೪೬. ಅದೇ ಸಂ-೫, ಪ-೫
೪೭. ಅದೇ ಸಂ-೫, ಪ-೧೦
೪೮. ಅದೇ ಸಂ-೫, ಪ-೩೯
೪೯. ಅದೇ ಸಂ-೬, ಪ-೪

೫೦. ಅದೇ ಸಂ-೭, ಪ-೪
೫೧. ಅದೇ ಸಂ-೭, ಪ-೧೦
೫೨. ಅದೇ ಸಂ-೭, ಪ-೧೬
೫೩. ಅದೇ ಸಂ-೭, ಪ-೨೧
೫೪. ಅದೇ ಸಂ-೭, ಪ-೪೮
೫೫. ಅದೇ ಸಂ-೭, ಪ-೫೬
೫೬. ಅದೇ ಸಂ-೮, ಪ-೪೩
೫೭. ಅದೇ ಸಂ-೯, ಪ-೩೦
೫೮. ಹಾಲುಮತದ ಪುರಾಣ ಚನ್ನಬಸವ ಕವಿ ದಾವಣಗೆರೆ, ಸಂ-೧, ಪ-೩೪
೫೯. ಅದೇ ಸಂ-೧೫, ಪ-೧೩೨
೬೦. ಅದೇ ಸಂ-೧೫, ಪ-೧೩೩
೬೧. ಅದೇ ಪ್ರಸ್ತಾವನೆ, ಪಟ-೪
೬೨. ಅದೇ ಸಂ-೨, ಪ-೪೫
೬೩. ಅದೇ ಸಂ-೨, ಪ-೧೩೧
೬೪. ಮಾಳಿಂಗರಾಯನ ಕಾವ್ಯ ಪ್ರಸ್ತಾವನೆ, ಪುಟ-೧೪
೬೫. ಅದೇ ಪುಟ-೮
೬೬. ಅದೇ ಪುಟ-೧೪
೬೭. ಅದೇ ಪುಟ-೧೭
೬೮. ಅದೇ ಪುಟ-೨೭
೬೯. ಅದೇ ಪುಟ-೪೧
೭೦. ಅದೇ ಪುಟ-೮೦
೭೧. ಜನಪದ ಹಾಲುಮತ ಮಹಾಕಾವ್ಯ, ಪುಟ-೧೧
೭೨. ಅದೇ ಪುಟ-೧೨೦
೭೩. ಅದೇ ಪುಟ-೧೯೪
೭೪. ಅದೇ ಪುಟ-೧೯೫
೭೫. ಅದೇ ಪುಟ-೨೦೦
೭೬. ಅದೇ ಪುಟ-೨೨೬
೭೭. ಅದೇ ಪುಟ-೨೩೩
೭೮. ಅದೇ ಪುಟ-೨೪೮
೭೯. ಅದೇ ಪುಟ-೨೭೧
೮೦. ಅದೇ ಪುಟ-೨೯೬
೮೧. ಅದೇ ಪುಟ-೨೯೮
೮೨. ಅದೇ ಪುಟ-೩೩೧

೮೩. ಅದೇ ಪುಟ-೩೩೬
೮೪. ಅದೇ ಪುಟ-೩೪೩
೮೫. ಅದೇ ಪುಟ-೩೪೯
೮೬. ಅದೇ ಪುಟ-೩೫೫
೮೭. ಅದೇ ಪುಟ-೩೬೩
೮೮. ಅದೇ ಪುಟ-೫೪೧
೮೯. ಅದೇ ಪುಟ-೫೭೯
೯೦. ಅದೇ ಪುಟ-೫೭೯
೯೧. ಅದೇ ಪುಟ-೫೯೪
೯೨. ಅದೇ ಪುಟ-೬೨೭
೯೩. ಕನ್ನಡ ರತ್ನಕೋಶ ಪುಟ-೧೭
೯೪. ಪಂಪ ಸಂಪುಟ ಆದಿ ಪುರಾಣ ಟಿ.ವಿ. ವೆಂಕಟಾಚಲಶಾಸ್ತ್ರಿ ಸಂ-೭, ಪ-೨೨
೯೫. ಹಾಲುಮತೋತ್ತೇಜಕ ಪುರಾಣ ಸಂ-೨, ಪ-೨
೯೬. ಅದೇ ಸಂ-೨, ಪ-೫
೯೭. ಅದೇ ಸಂ-೨, ಪ-೧೦
೯೮. ಅದೇ ಸಂ-೨, ಪ-೧೪
೯೯. ಅದೇ ಸಂ-೨, ಪ-೩೦
೧೦೦. ಅದೇ ಸಂ-೨, ಪ-೩೯
೧೦೧. ಅದೇ ಸಂ-೨, ಪ-೪೧
೧೦೨. ಅದೇ ಸಂ-೨, ಪ-೪೫
೧೦೩. ರೇವಣಸಿದ್ಧರು : ಒಂದು ಅಧ್ಯಯನ ಶಕುಂತಲಾ ಗೋಪಶೆಟ್ಟಿ, ಪುಟ-೪೪
೧೦೪. ಸಿದ್ಧಮಂಕ ಚರಿತೆ ಸಂ-೧, ಪ-೪೧
೧೦೫. ಜನಪದ ಹಾಲುಮತ ಮಹಾಕಾವ್ಯ - (ಸಂ) ವೀರಣ್ಣ ದಂಡೆ, ಪುಟ-೬೩೨
೧೦೬. ತಗರ ಪವಾಡ ಸಂ-೧, ಪ-೫೬
೧೦೭. ಜನಪದ ಹಾಲುಮತ ಮಹಾಕಾವ್ಯ ಪುಟ-೬೩೩
೧೦೮. ಅದೇ ಪುಟ-೬೩೪
೧೦೯. ಅದೇ ಪುಟ-೬೩೫
೧೧೦. ಅದೇ ಪುಟ-೬೩೮
೧೧೧. ಅದೇ ಪುಟ-೬೪೦
೧೧೨. ಹಾಲುಮತದ ಪುರಾಣವು, ಬಸವಣೆಪ್ಪ ನೀಲಪ್ಪ ಹಳ್ಳವಳ್ಳಿ, ಪುಟ-೪೭
೧೧೩. ಹಾಲುಮತದ ಪುರಾಣ, ಚನ್ನಬಸವಕವಿ ದಾವಣಗೇರಿ, ಸಂ-೩, ಪ-೧೩೦
೧೧೪. ಅದೇ ಸಂ-೮, ಪ-೧೯
೧೧೫. ಅದೇ ಸಂ-೮, ಪ-೩೪

೧೧೬. ಅದೇ ಸಂ-೮, ಪ-೪೮
೧೧೭. ಹಾಲುಮತೋತ್ತೇಜಕ ಪುರಾಣ ಸಂ-೪, ಪ-೪೮
೧೧೮. ಅದೇ ಸಂ-೬, ಪ-೩೩
೧೧೯. ಸಿದ್ಧಮಂಕ ಚರಿತೆ ಪ್ರಸ್ತಾವನೆ, ಪುಟ-xvi
೧೨೦. ಅದೇ ಸಂ-೩, ಪ-೮೮
೧೨೧. ಅದೇ ಸಂ-೩, ಪ-೮೮
೧೨೨. ಅದೇ ಸಂ-೪, ಪ-೩
೧೨೩. ಜನಪದ ಸಾಹಿತ್ಯ ದರ್ಶನ ೯, (ಸಂ) ಎಸ್.ಎಂ. ವೃಷಬೇಂದ್ರ ಸ್ವಾಮಿ, ಪುಟ-೧೮
೧೨೪. ಬಸವಣ್ಣನ ವಚನ ಸಂಪುಟ- (ಸಂ) ಎಂ.ಎಂ. ಕಲಬುರ್ಗಿ, ಪುಟ-೫೫೪
೧೨೫. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೨೭
೧೨೬. ಹೈದ್ರಾಬಾದ್ ಕರ್ನಾಟಕ ಜನಪದ ಸಾಹಿತ್ಯ, ಬಸವರಾಜ ಪೋಲಿಸ ಪಾಟೀಲ್, ಪುಟ-೩೦೮
೧೨೭. ಹಾಲುಮತೋತ್ತೇಜಕ ಪುರಾಣ, ಸಂ-೬, ಪ-೫೪
೧೨೮. ಅದೇ ಸಂ-೫, ಪ-೧೮
೧೨೯. ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ನಿಂಗಪ್ಪ ಮುದೇನೂರು, ಪುಟ-೩೫
೧೩೦. ಸಾಹಿತ್ಯ ಕಥನ, ಡಾ.ಡಿ.ಆರ್. ನಾಗರಾಜ್, ಪುಟ-೨೩೬
೧೩೧. ತಗರ ಪವಾಡ, ಸಂ-೩, ಪ-೩೨
೧೩೨. ಸಾಹಿತ್ಯಾಭಿವ್ಯಕ್ತಿಯಲ್ಲಿ ಸಾಮಾನ್ಯ ಮನುಷ್ಯ, (ಸಂ) ಜಿ.ಎಸ್. ಶಿವರುದ್ರಪ್ಪ, ಪುಟ-೮೪
೧೩೩. ಕಾಡುಗೊಲ್ಲ ಬುಡಕಟ್ಟು ವೀರರು ಮೀರಾಸಾಬಿಹಳ್ಳಿ ಶಿವಣ್ಣ, ಪುಟ-೧೦೦
೧೩೪. ಸಿದ್ಧಮಂಕ ಚರಿತೆ ಸಂ-೩, ಪ-೧೨೯
೧೩೫. ಅದೇ ಸಂ-೩, ಪ-೧೪೨
೧೩೬. ಅದೇ ಸಂ-೪, ಪ-೧೫೭
೧೩೭. ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ನಿಂಗಪ್ಪ ಮುದೇನೂರು, ಪುಟ-೮೦
೧೩೮. ಮಾಳಿಂಗರಾಯನ ಕಾವ್ಯ, ಪ್ರಸ್ತಾವನೆ, ಪುಟ-೧೪
೧೩೯. ಜನಪದ ಹಾಲುಮತ ಮಹಾಕಾವ್ಯ - ೩೪೦
೧೪೦. ಕರ್ನಾಟಕದ ವೀರಗಲ್ಲುಗಳು ಶೇಷಶಾಸ್ತ್ರ ಆರ್. ಪುಟ-೧೦
೧೪೧. ಗೊಲ್ಲಾಳಯ್ಯನ ಪುರಾಣ, ಸಂ-೭, ಪ-೬೪
೧೪೨. ಅದೇ ಸಂ-೮, ಪ-೨೧
೧೪೩. ಅದೇ ಸಂ-೮, ಪ-೩೨
೧೪೪. ಅದೇ ಸಂ-೮, ಪ-೪೭
೧೪೫. ಅದೇ ಸಂ-೮, ಪ-೭೦
೧೪೬. ಅದೇ ಸಂ-೮, ಪ-೯೪
೧೪೭. ಅದೇ ಸಂ-೮, ಪ-೧೦೮
೧೪೮. ಜನಪದ ಹಾಲುಮತ ಮಹಾಕಾವ್ಯ, ಪುಟ-೬೬

೧೪೯. ಅದೇ ಪುಟ-೭೪

೧೫೦. ಅದೇ ಪುಟ-೫೭೯

೧೫೧. ಅದೇ ಪುಟ-೫೮೨

೧೫೨. ಅದೇ ಪುಟ-೫೮೭

೧೫೩. ಕುರುಬರ ಗುರು ಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ(ಅಪ್ರಕಟಿತ), ಪುಟ-೨೩೦

೧೫೪. ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ನಿಂಗಪ್ಪ ಮುದೇನೂರು, ಪುಟ-೧೨೫

೧೫೫. ಮಾಳಿಂಗರಾಯನ ಕಾವ್ಯ, ಪುಟ-೪೧

೧೫೬. ಅದೇ ಪುಟ-೪೨

೧೫೭. ಜಾತ್ರೆಗಳು ಎಸ್.ಎಸ್. ಹಿರೇಮಠ, ಪುಟ-೪೯

೧೫೮. ಜಾನಪದ ಸಾಹಿತ್ಯ ದರ್ಶನ ಭಾಗ-೧೮, ಎಂ.ಎಸ್. ಇಮ್ರಾಪುರ, ಪುಟ-೮೨

೧೫೯. ಅದೇ ಪುಟ-೮೪

೧೬೦. ಹಾಲುಮತೋತ್ತೇಜಕ ಪುರಾಣ ಸಂ-೫, ಪ-೧೮

೧೬೧. ತಗರ ಪವಾಡ ಸಂ-೨, ಪ-೨೩

೧೬೨. ಜನಪದ ಹಾಲುಮತ ಮಹಾಕಾವ್ಯ ಪುಟ-೪೪

೧೬೩. ಅದೇ ಪುಟ-೪೦೫

೧೬೪. ಮಾಳಿಂಗರಾಯನ ಕಾವ್ಯ, ಪುಟ-೭೨

೧೬೫. ಅದೇ ಪುಟ-೧೯

೧೬೬. ಜನಪದ ಹಾಲುಮತ ಮಹಾಕಾವ್ಯ ಪುಟ-೨೭೫

೧೬೭. ಪುರಾಣ ಜಾನಪದ ಮತ್ತು ದೇಶಿವಾದ, ಡಾ.ಅರವಿಂದ ಮಾಲಗತ್ತಿ, ಪುಟ-೧೬೨

೧೬೮. ಮಾಳಿಂಗರಾಯನ ಕಾವ್ಯ, ಪುಟ-೮೩

೧೬೯. ಜನಪದ ಹಾಲುಮತ ಮಹಾಕಾವ್ಯ, ಪುಟ-೧೨

೧೭೦. ಸಿದ್ಧಮಂಕ ಚರಿತೆ ಸಂ-೨, ಪ-೭೬

೧೭೧. ತಗರ ಪವಾಡ, ಸಂ-೨, ಪ-೫೭

೧೭೨. ಜನಪದ ಹಾಲುಮತ ಮಹಾಕಾವ್ಯ, ಪುಟ-೧೨೫

೧೭೩. ಅದೇ ಪುಟ-೧೯೫

೧೭೪. ಅದೇ ಪುಟ-೫೦೫

# ಅಧ್ಯಾಯ : ಐದು

# ಹಾಲುಮತ ಪುರಾಣಗಳ ಸಾಂಸ್ಕೃತಿಕ ಅನನ್ಯತೆ

೧. ಆಚರಣೆ - ನಂಬಿಕೆಗಳು

i. ನಾಮಕರಣ

ii. ಕನ್ಯೆ ನೋಡುವುದು

iii. ನಿಶ್ಚಿತಾರ್ಥ

iv. ಮದುವೆ ಆಚರಣೆ

v. ಸುರಗಿ ಶಾಸ್ತ್ರ

vi. ಹಾಲಗಂಬ ಮತ್ತು ಐರಾಣಿ

vii. ಬಳೆ ಶಾಸ್ತ್ರ

viii. ಬಯ್ಕಿ ಬುತ್ತಿ ಮತ್ತು ಸೀಮಂತ ಕಾರ್ಯ

ix. ಲಕ್ಷ್ಮಿ ಪೂಜೆ

ನಂಬಿಕೆಗಳು

i. ಜೇನು ತಿನ್ನಿಸುವುದು

ii. ಕುರುಬರ ಹೇಳಿಕೆಗಳು

೨. ಧಾರ್ಮಿಕ ಮೌಲ್ಯಗಳು

i. ಲಿಂಗದೀಕ್ಷೆ

ii. ಕಂತೆ ಸೇವೆ

iii. ಮೇಷ ಪವಾಡ

iv. ಅಂಗ್ನಿಕುಂಡ

v. ಡೋಣಿ ಸೇವೆ

vi. ಹಾಲುಮತದ ಒಳಪಂಗಡಗಳು

೩. ಸಾಮಾಜಿಕ ಆಶಯಗಳು

೪. ಪುಣ್ಯ ಕ್ಷೇತ್ರಗಳು

i. ಸರೂರು

ii. ಹುಲಜಂತಿ

iii. ಗೊಲ್ಗೇರಿ

iv. ಬಂಕಾಪುರ

v. ಚಕೋರಿ ಹೊಳೆ

vi. ಮಾಸನೂರು

ಅಧ್ಯಾಯ : ಐದು

# ಹಾಲುಮತ ಪುರಾಣಗಳ ಸಾಂಸ್ಕೃತಿಕ ಅನನ್ಯತೆ

ಮಾನವ ಸಮಾಜ ಮತ್ತು ಸಂಸ್ಕೃತಿಗಳು ಪರಸ್ಪರ ಸಂಬಂಧವನ್ನು ಹೊಂದಿವೆ. ಸಮಾಜದಲ್ಲಿ ಅನೇಕ ರೀತಿಯ ಜೀವನವಿಧಾನವನ್ನು ಕಾಣುತ್ತೇವೆ. ಒಂದು ಸಮುದಾಯ ಕಾಡಿನಿಂದ ನಾಡಿಗೆ ಬರುವಾಗ ತನ್ನ ಜೀವನ ಕ್ರಮವನ್ನು ಬದಲಾಯಿಸಿಕೊಂಡರೆ, ಅದೇ ಸಮುದಾಯ ಮತ್ತೆ ಜೀವನ ನಿಭಾಯಿಸಲು ಕಾಡನ್ನು ಆಶ್ರಯಿಸಬೇಕಾಗುತ್ತದೆ. ಇಂತಹ ಮಾನವನ ಉಪಜೀವನದಲ್ಲಿ ಆತ ತನ್ನ ವ್ಯಕ್ತಿತ್ವದ ಚಹರೆಯನ್ನು ಸ್ವಲ್ಪ ಮಟ್ಟಿಗೆ ಪರಿವರ್ತಿಸಿಕೊಳ್ಳುವುದು ಸಹಜ. ಈ ಚಹರೆಯ ಸಂಕರದಿಂದ ಸಮಾಜ, ವ್ಯಕ್ತಿ, ಸಂಸ್ಕೃತಿ ಈ ಮೂರು ಅಂಶಗಳನ್ನು ಸರಿಯಾಗಿ ಅರ್ಥೈಸಲು ಕಷ್ಟಸಾಧ್ಯ. ಆದರೆ ಪ್ರತ್ಯೇಕ ಸಮುದಾಯಗಳ ಆಚರಣೆ, ನಂಬಿಕೆ, ಸಂಪ್ರದಾಯಗಳಿಂದ ವ್ಯಕ್ತಿಗತವಾದ ಅನನ್ಯತೆಯನ್ನು ಕಂಡುಹಿಡಿಯಬಹುದು. ಆದಕ್ಕಾಗಿ ಸಮುದಾಯದಲ್ಲಿನ ಜಾತಿ, ಕುಟುಂಬ, ಆಚರಣೆಗಳ ವಿಧಿ ವಿಧಾನಗಳು ಪ್ರಮುಖ ಆಕರವಾಗಿ ನಿಲ್ಲುತ್ತವೆ. ಅವರ ಆಚರಣೆಗಳೇ ಲೋಕರೂಢಿಗಳಾಗುವ ಸಾಮರ್ಥ್ಯವನ್ನು ಹೊಂದುತ್ತವೆ. ಮಾನವನು ಸಂಗಜೀವಿ. ಆದ್ದರಿಂದ ತನಗೆ ಸರಳವೆನಿಸಿದ ಸಂಕೇತಗಳನ್ನು ಬಳಸಿಕೊಂಡು ಜೀವನವನ್ನು ಕಟ್ಟುವಲ್ಲಿ ಯಶಸ್ವಿಯಾಗಿರುವನು. ಈ ಸಂಕೇತಗಳು ಮನುಷ್ಯನಲ್ಲಿರುವ ಮೃಗೀಯತೆಯನ್ನು ನಾಶಗೊಳಿಸಿ ಮಾನವೀಯತೆಯಿಂದ ಬಾಳಲು ಪ್ರೋತ್ಸಾಹಿಸುತ್ತವೆ. ಇದೇ ಮನುಷ್ಯನ ವ್ಯಕ್ತಿತ್ವವನ್ನು ಉನ್ನತ ಮಟ್ಟಕ್ಕೇರಿಸುವ ಮಾರ್ಗವಾಗಿದೆ. ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಮಹತ್ಕಾರ್ಯವು ಕಾಲದ ಪರಿಮಿತಿಯನ್ನು ಒಳಗೊಂಡಿದೆ. ಸಂಸ್ಕೃತಿ ರೂಪಿಸಿಕೊಂಡ ಲೋಕರೂಢಿಗಳು ಏಕವ್ಯಕ್ತಿಯ ಕಾಳಜಿಯನ್ನು ಮಾತ್ರ ಬಯಸದೆ ಸಂಪೂರ್ಣ ಸಮುದಾಯದ ಜವಾಬ್ದಾರಿಯನ್ನು ಹೊರುವವು. ಹೀಗೆ ರಚನೆಯಾದ ರೂಢಿ ಸಂಪ್ರದಾಯಗಳು ಸಮಾಜದಿಂದ ಸಮಾಜಕ್ಕೆ, ಜಾತಿಯಿಂದ ಜಾತಿಗೆ, ಪರಿಸರದಿಂದ ಪರಿಸರಕ್ಕೆ ವೈವಿಧ್ಯತೆಯಿಂದ ಕೂಡಿರುತ್ತವೆ. ಇದರಿಂದ ಪ್ರತಿಯೊಂದು ಜನಾಂಗ ಪ್ರಾಚೀನ ಸಂಸ್ಕೃತಿ, ಆಚಾರ ವಿಚಾರ, ಆಹಾರ, ವಿವಾಹ, ವ್ಯವಹಾರಗಳಿಂದ, ಧಾರ್ಮಿಕ ಅಂಶಗಳಿಂದ ನೀತಿ ನಿಯಮಗಳನ್ನು ವಿಶಿಷ್ಟತೆಯಿಂದ ನಡೆಸಿಕೊಂಡು ಬಂದಿವೆ. ಮನುಷ್ಯ ಈ ಚೌಕಟ್ಟಿನಿಂದ

ಹೊರಹೋಗಿ ಜೀವಿಸಲು ಸಾಧ್ಯವಿಲ್ಲ. ಮೆದುಳು, ಮನಸ್ಸು, ಕಣ್ಣು, ಕರಳುಗಳಲ್ಲಿ ಹೇಗೆ ಉಸಿರು ಅನುಭವವಾಗಿರುತ್ತದೆಯೋ ಹಾಗೆಯೇ ಸಂಸ್ಕೃತಿಯು ಪ್ರತಿಯೊಂದು ಅಂಶಗಳಲ್ಲಿ ಅಡಗಿರುತ್ತದೆ. ಈ ಸಂಸ್ಕೃತಿಯೇ ಕಾಲಕ್ಕೆ ಸಿಲುಕಿ ಸಾವಯವಗೊಂಡು, ಒಳ ಸಂಘರ್ಷದಿಂದ ಮುಕ್ತವಾಗಿ ಸಾಮಾಜಿಕ ವ್ಯವಸ್ಥೆಯನ್ನು, ಶುದ್ಧತೆಯನ್ನು ಪಡೆಯುತ್ತದೆ. ಆಗ ಮನುಷ್ಯನು ಒಂದು ವ್ಯಕ್ತಿಯಾಗಿ ನೆಲೆಯೂರುವನು.

ಸಂಸ್ಕೃತಿಯನ್ನು ಅಧ್ಯಯನ ಮಾಡಲು ಸಮುದಾಯಗಳಲ್ಲಿನ ಕುಟುಂಬ, ವ್ಯಕ್ತಿಗಳಲ್ಲಿನ ಆಚರಣೆಯನ್ನು ಸಾಂಸ್ಕೃತಿಕ ಅನನ್ಯತೆಯು ತಿಳಿಸಿಕೊಡುತ್ತದೆ. ಈ ಅಧ್ಯಯನದಲ್ಲಿ ಸಂಸ್ಕೃತಿಯು ಜನರ ಜೀವನ, ಆಚರಣೆ ಸಂಪ್ರದಾಯಗಳ ದಾಖಲೆಯಾಗಿದೆ. ಅನೇಕ ವರ್ಷಗಳಿಂದ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳುವಲ್ಲಿ ರೂಪಿಸಿಕೊಂಡ ನಿಯಮಗಳೇ ಸಂಸ್ಕೃತಿ. ಸಂಸ್ಕೃತಿಯ ವಿಶಿಷ್ಟ ಆಚರಣೆಗಳು ಮತ್ತೊಂದು ಸಮುದಾಯದ ಸಂಸ್ಕೃತಿಯಿಂದ ಹೇಗೆ ಭಿನ್ನ, ಎಷ್ಟು ಮಹತ್ವ ಪಡೆದಿದೆ, ಏನೆಲ್ಲಾ ಸಂಘರ್ಷಗಳನ್ನು ಮಾಡಿ ತನ್ನತನವನ್ನು ಉಳಿಸಿಕೊಂಡಿತು ಎಂದು ಸಾಂಸ್ಕೃತಿಕ ಅನನ್ಯತೆಯು ತಿಳಿಸಿಕೊಡುತ್ತದೆ.

''ಒಂದು ಸಂಸ್ಕೃತಿಯ ಶಿಷ್ಟ ಮತ್ತು ಪರಿಶಿಷ್ಟಗಳು ಆ ಸಂಸ್ಕೃತಿಯು ಎದುರಿಸುತ್ತಿರುವ ಬಿಕ್ಕಟ್ಟುಗಳ ಮೂಲಕ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಾ ಹೋಗುತ್ತದೆ. ಬಿಕ್ಕಟ್ಟುಗಳು ಸಾಮಾನ್ಯವಾಗಿ ಅನ್ಯಸಂಸ್ಕೃತಿಯ ಪ್ರಭಾವದಿಂದ ಕಾಣಿಸಿಕೊಳ್ಳುತ್ತವೆ. ಅಥವಾ ಅದರ ಒಳಗಿನ ಭಿನ್ನ ನಡಾವಳಿಗಳ ಮೂಲಕ ಪ್ರಕಟವಾಗುತ್ತವೆ. ಅಂಥ ಬಿಕ್ಕಟ್ಟಿನ ಅಥವಾ ಸಂಘರ್ಷದ ಸಂದರ್ಭಗಳಲ್ಲಿ ಸಂಸ್ಕೃತಿಯು ತನ್ನ ಬಿರುಕುಗಳನ್ನು ಮುಚ್ಚಿಕೊಳ್ಳಲು ಗರಿಷ್ಟ ಮಟ್ಟದಲ್ಲಿ ಪ್ರಯತ್ನಿಸುತ್ತದೆ. 'ತನ್ನದು' ಎಂಬುದನ್ನು ಉಳಿಸಿಕೊಳ್ಳಲು ಬಗೆ ಬಗೆಯ ತಂತ್ರಗಳನ್ನು ಪ್ರಯೋಗಿಸುತ್ತ ಹೆಣಗಾಡುತ್ತದೆ. ಅಂತರ್ಜಾತಿಯ ಮದುವೆಗಳ ಸಂದರ್ಭದಲ್ಲಿ ಮತ್ತು ಸಾವಿನ ಸಂದರ್ಭದಲ್ಲಿ ಸಂಸ್ಕೃತಿ ಇಕ್ಕಟ್ಟಿಗೆ ಸಿಲುಕಿ ತತ್ತರಿಸುವುದನ್ನು ನೋಡಬಹುದಾಗಿರುತ್ತದೆ. ಅಂತರ್ಜಾತಿಯ ಮದುವೆಯಲ್ಲಿ ಹೊರಗಿನ ಜಾತಿಯ ವ್ಯಕ್ತಿಯ ಒಳಪ್ರವೇಶದಿಂದ ಸಾಂಸ್ಕೃತಿಕ ಅಸಮತೋಲನ ಕಾಣಿಸಿಕೊಂಡರೆ, ಸಾವಿನ ಸಂದರ್ಭದಲ್ಲಿ ಒಳಗಿನ ವ್ಯಕ್ತಿಯ ನಿರ್ಗಮನದಿಂದ ಅಸಮತೋಲನ ಉಂಟಾಗುತ್ತದೆ.'' ಈ ಹಿನ್ನೆಲೆಯಲ್ಲಿ ಸಮುದಾಯದಲ್ಲಿ ಆಚರಣೆ-ನಂಬಿಕೆಗಳು ವ್ಯತ್ಯಾಸದಿಂದ ಕೂಡಿರುವುದಕ್ಕೆ ಮುಖ್ಯವಾಗಿ ವೈವಾಹಿಕ ಸಂಬಂಧವೆಂದು ತಿಳಿಯುತ್ತದೆ. ಇದರ ಜೊತೆಗೆ ಪರಿಸರದಿಂದಲೂ, ವೃತ್ತಿಯನ್ನು ಕೈಗೊಳ್ಳುವುದರಿಂದಲೂ ಸಂಸ್ಕೃತಿಯು ವಿಭಿನ್ನವಾಗಿ ಕಂಡುಬರುತ್ತದೆ. ಕುರುಬರಲ್ಲಿಯೂ ಸಹ ಅನೇಕ ಆಚರಣೆ-ನಂಬಿಕೆಗಳು ಉಂಟಾಗಲು ಮುಖ್ಯ ಕಾರಣವೇ ಮದುವೆ ಆಗಿದೆ. ಇಂತಹ ವೈವಾಹಿಕ ಸಂಬಂಧಗಳೇ ಕುರುಬರಲ್ಲಿಯೂ ಒಳಪಂಗಡಗಳ ಹುಟ್ಟಿಗೆ ಕಾರಣವಾಯಿತು. ಆದ್ದರಿಂದಲೇ ಹಾಲುಮತದವರಲ್ಲಿ ಸಂಪ್ರದಾಯಗಳ ವೈರುದ್ಯಗಳು ಕಂಡುಬರುತ್ತವೆ. ಇವೇ ಈ ಸಮುದಾಯದ ಮೌಲ್ಯಗಳಾಗಿಯೂ ಪರಿವರ್ತನೆಯಾಗಿವೆ. ''ಕಾಲ ಮತ್ತು ಸ್ಥಳವು ವ್ಯಕ್ತಿ ಅಥವಾ ಸಮುದಾಯದ ಆಶೋತ್ತರಗಳಿಗೆ ಅನುಗುಣವಾಗಿಯೇ ಮೈ ಪಡೆಯುವ ಹಾಗೆ,

ಸಮುದಾಯದ ಆಶೋತ್ತರಗಳು ಕಾಲ ಮತ್ತು ಸ್ಥಳದ ಪ್ರೇರಣೆ ಪಡೆಯುತ್ತವೆ. ಹಾಗಾಗಿ ಸಾಂಸ್ಕೃತಿಕ ಅನನ್ಯತೆಯನ್ನು ಪುರುಷೋತ್ತಮ ಬಿಳಿಮಲೆ ಅವರು ಈ ರೀತಿ ಹೇಳುತ್ತಾರೆ.

* ಸಂಸ್ಕೃತಿಯೊಂದಕ್ಕೆ ಪ್ರತ್ಯೇಕ ಅಸ್ತಿತ್ವವಿರುತ್ತದೆ. ಅಂಥ ಅಸ್ತಿತ್ವಕ್ಕೆ ಕಾರಣಗಳು ಹಲವಿರುತ್ತವೆ.
* ಪ್ರತ್ಯೇಕ ಅಸ್ತಿತ್ವವಿರುವುದರಿಂದಲೇ ಅದು ಇತರ ಸಂಸ್ಕೃತಿಗಿಂತ ಭಿನ್ನವಾಗಿರುತ್ತದೆ.
* ಈ ಭಿನ್ನತೆಯು ಸಂಸ್ಕೃತಿಯೊಂದರ ವಿಶೇಷಾಂಶಗಳ ಪ್ರಕಟಣೆಯಲ್ಲಿ ಎದ್ದು ಕಾಣುತ್ತದೆ."[೨]

ಹಾಗೆಯೇ ''ಯಾವುದೇ ಒಂದು ಸಂಸ್ಕೃತಿಗೆ ಪ್ರತ್ಯೇಕ ಅಸ್ತಿತ್ವವಿದ್ದು, ಅದು ಇತರ ಸಂಸ್ಕೃತಿಗಳಿಗಿಂತ ಭಿನ್ನವಾಗಿ, ತನ್ನದೆ ಆದ ವಿಶಿಷ್ಟಾಂಶಗಳನ್ನು ಪ್ರಕಟಪಡಿಸಿದರೆ ಅದನ್ನು ಆಯಾ ಸಂಸ್ಕೃತಿಯ 'ಅನನ್ಯತೆ' ಎಂದು ಕರೆಯಬಹುದು."[೩] ಹೀಗೆ ಕಾಲ, ಸ್ಥಳ, ವ್ಯಕ್ತಿಯ ಆಶೋತ್ತರಗಳು, ನಂಬಿಕೆ, ಆಚರಣೆಗಳು ಸಂಸ್ಕೃತಿಯ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿರುತ್ತವೆ.

ಇಲ್ಲಿ ಮನುಷ್ಯನು ಕಾಲದ ಪರಿಮಿತಿಯಲ್ಲಿ ತನ್ನ ತನವನ್ನು ಸ್ಥಾಪಿಸಲು ಭೂತವನ್ನು ಆಶ್ರಯಿಸುತ್ತಾನೆ. ಅಂದರೆ ಈಗಾಗಲೇ ರಚನೆಯಾಗಿರುವ ಗ್ರಂಥಗಳು, ಆಚರಣೆಗಳು ಮನುಷ್ಯನ ಸಂಸ್ಕೃತಿಯನ್ನು ಅರಿಯಲು ಸಹಾಯಕವಾಗಿವೆ. ಈ ಪ್ರಕ್ರಿಯೆಯಲ್ಲಿಯೇ ಹಾಲುಮತ ಪುರಾಣಗಳೂ ಸಹ ತನ್ನ ಸಂಸ್ಕೃತಿಯನ್ನು ಭೂತದಿಂದ ವರ್ತಮಾನಕ್ಕೆ ಯಾವ ರೀತಿಯಾಗಿ ರವಾನಿಸುತ್ತಾ ವೈಶಿಷ್ಟ್ಯವನ್ನು ಕಾಪಾಡಿಕೊಂಡುಬಂದಿವೆ ಎಂದು ಈ ಪುರಾಣಗಳು ಸ್ಪಷ್ಟಪಡಿಸುತ್ತವೆ.

**೧. ಆಚರಣೆ-ನಂಬಿಕೆಗಳು**

ಹಾಲುಮತದವರು ಆಚರಣೆಗಳಿಗೆ ತುಂಬಾ ಮಹತ್ವ ಕೊಡುತ್ತಾರೆ. ಏಕೆಂದರೆ ಹಲವಾರು ವರ್ಷಗಳಿಂದ ತಮ್ಮ ಬಂಧುಗಳನ್ನು ಭೇಟಿಯಾಗಲು ವೃತ್ತಿಯು ಪ್ರತಿಕೂಲವಾಗಿರುತ್ತದೆ. ಅದಕ್ಕಾಗಿ ಅವರು ತಮ್ಮ ಸುಖ ಸಂತೋಷಗಳನ್ನು ಸಾಮೂಹಿಕವಾಗಿ ಹಂಚಿಕೊಳ್ಳಲು ಬಯಸುವರು ಚಿಕ್ಕ ಪುಟ್ಟ ಕಾರ್ಯವನ್ನು ವೈಭವೀಕರಿಸಿಕೊಂಡು ಆಚರಿಸುವ ರೂಢಿಯನ್ನು ಇಟ್ಟುಕೊಂಡಿದ್ದಾರೆ. ಕೆಲವೊಂದು ಸಾರಿ ಅನೇಕ ಘಟನೆಗಳ ಹಿಂದೆ ಮಹತ್ವದ ತಾತ್ವಿಕ ಅಂಶ ಅಡಗಿರುತ್ತದೆ. ಏನೆಂದರೆ ಪುರಾಣಗಳಲ್ಲಿ ಒಬ್ಬ ವ್ಯಕ್ತಿಯನ್ನು ಕೊಲ್ಲಲು ಹುಟ್ಟಿಕೊಂಡ ತಂತ್ರವು ಕಾಲಾಂತರದಲ್ಲಿ ಆಚರಣೆ ನಂಬಿಕೆಯಾಗಿ ಚಲಾವಣೆಯಲ್ಲಿರುತ್ತದೆ. ಹಾಲುಮತ ಪುರಾಣಗಳಲ್ಲಿ ಇಂತಹ ಕೆಲವು ಸನ್ನಿವೇಶಗಳನ್ನು ಕಾಣುತ್ತೇವೆ. ಕಾಳಿನಾರಾಯಣಯೆಂಬ ವ್ಯಕ್ತಿಯು ವೈಷ್ಣವ ಪಂಥವನ್ನು ತಿಳಿಸಿಕೊಡುವನು ಈತನ ತಂಗಿ ಸೂರಮ್ಮದೇವಿಯನ್ನು ಭಾಳಭರಮ ಎಂಬ ಶಿವ ಭಕ್ತನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಆದರೆ ಬಾಳಭರಮನು ಕಾಳಿನಾರಾಯಣನಿಗಿಂತ ನಿರ್ಮಲವಾದ ಭಕ್ತಿಯನ್ನು ಶಿವನಿಗೆ ಅರ್ಪಿಸುವವನು. ಆಗ ಶಿವ ಕಾಳಿನಾರಾಯಣನನ್ನು ಅಲ್ಲಗಳೆದು ಭರಮನ ಪೂಜೆಯನ್ನು ಸ್ವೀಕರಿಸುವನು. ಇದನ್ನೇ ಕಾಳಿನಾರಾಯಣನು ವಂಶಪಾರಂಪರ್ಯದ ದ್ವೇಷವಾಗಿಸಿಕೊಳ್ಳುವನು. ತಂಗಿಯು ಗರ್ಭವತಿಯಾದಾಗ ಹೊಟ್ಟೆಯಲ್ಲಿಯೇ ಶಿಶುವನ್ನು ಕೊಲ್ಲಲ್ಲು ಶತಪ್ರಯತ್ನ ನಡೆಸುವನು. ಈ ಸನ್ನಿವೇಶವು ಮಹಾಭಾರತದ ಕೃಷ್ಣನ ತಂತ್ರವನ್ನು ಬಳಸಿಕೊಂಡಿದೆಂದು ತಿಳಿದುಬರುತ್ತದೆ. ಅಲ್ಲಿ ಕೃಷ್ಣನು ಸುಭದ್ರೆಯ ಗರ್ಭದಲ್ಲಿ ಬೆಳೆಯುವ ವೀರ ಅಭಿಮನ್ಯುವಿಗೆ

ಕೌರವರ ಚಕ್ರವ್ಯೂಹವನ್ನು ಒಳ ಹೋಗಿ ಬೇದಿಸಲು ಮಾತ್ರ ತಿಳಿಸಿ, ಹಿಂದೆ ಬರುವ ಮಾರ್ಗವನ್ನು ಹೇಳುವುದಿಲ್ಲ. ಹಾಗೂ ಕಂಸನು ಕೃಷ್ಣನನ್ನು ಕೊಲ್ಲಲು ದೇವಕಿಯನ್ನು ಸೆರೆಮನೆಯಲ್ಲಿಟ್ಟಿರುತ್ತಾನೆ. ಅದೇ ರೀತಿ ಹಾಲುಮತ ಪುರಾಣಗಳಲ್ಲಿ ಸಹೋದರ ಮಾವನೇ ಸ್ವತಃ ಸಹೋದರಿಯ ಮಗನನ್ನು ಕೊಲ್ಲಲು ವಿಷ ಪ್ರಾಶನವನ್ನು ತಂಗಿಗೆ ಉಣ್ಣಿಸುವನು. ಈ ತಂತ್ರವನ್ನು ಪುರಾಣಕಾರನು ಹೇಳಿರುವ ಉದ್ದೇಶವೆಂದರೆ ಮಹಾಭಾರತದಂತೆ ಈ ಹಾಲುಮತ ಪುರಾಣಗಳು ಶ್ರೇಷ್ಟತೆಯನ್ನು ಹೊಂದಿವೆಂದು ತಿಳಿಸುವುದಾಗಿತ್ತು. ಕಂಸನು ಕೃಷ್ಣನನ್ನು ಕೊಲ್ಲದೆ ಜೀವ ಕಳೆದುಕೊಂಡನು. ಆದರೆ ಕೃಷ್ಣನು ಅಭಿಮನ್ಯುವನ್ನು ಕೌರವರಿಂದ ಹತನಾಗುವಂತೆ ಮಾಡಿ ಜಗತ್ತಿನಲ್ಲಿ ದೇವರ ಪಟ್ಟಧರಿಸಿದನು. ಅದೇ ರೀತಿ ಇಲ್ಲಿ ಕಾಳಿನಾರಾಯಣನು ತನ್ನ ಮಾನ ಮರ್ಯಾದೆ ಉಳಿಸಿಕೊಳ್ಳಲು ಲಿಂಗ ಬೀರಣ್ಣನನ್ನು ಸಾಯಿಸಲು ಮಾಡಿದ ತಂತ್ರಗಳೇ ಇಂದು ಆಚರಣೆಯಾಗಿವೆ.

ಸಮುದಾಯಗಳು ನಡೆದು ಬಂದ ರೀತಿ, ನೀತಿ ಆಚರಣೆಯು ಪದ್ಧತಿಯಾಗಿ ಆಯಾ ಜನಾಂಗದ ಪುರಾಣ ಕೃತಿಗಳಲ್ಲಿ ಅಭಿವ್ಯಕ್ತಿಗೊಂಡಿವೆ. ಇದು ಸಮಾಜದ ಸಂಸ್ಕೃತಿಯ ಬೆಳವಣಿಗೆಗೆ ಪ್ರೇರಣೆ ನೀಡುತ್ತ ಬಂದಿವೆ. ಏಕ ಸಂಸ್ಕೃತಿಯಾಗಿ ಬೆಳೆದು ಒಟ್ಟಾರೆ ಮಾನವ ಸಂಸ್ಕೃತಿಯನ್ನು ನಿರೂಪಿಸುವ ಸಾಮರ್ಥ್ಯ ಪುರಾಣಕ್ಕಿದೆ. ಭಾರತ ದೇಶ ಬಹು ಸಂಸ್ಕೃತಿಯ ಕುಸುಮವನ್ನು ಜೋಪಾನವಾಗಿ ಕಾಯ್ದುಕೊಂಡು ಬಂದಿದೆ. ಆದ ಕಾರಣ ಪ್ರತಿಯೊಂದು ಜನಾಂಗದ ಸಂಸ್ಕೃತಿಯು ವಿಶಿಷ್ಟತೆಯಿಂದ ಕೂಡಿರುತ್ತದೆ. ಜನಪದರ ಆಶ್ರಯದಲ್ಲಿ ಮೌಖಿಕ ಸಂಸ್ಕೃತಿಯಾಗಿ, ಪುರಾಣಗಳಲ್ಲಿ ಪ್ರಮುಖ ವಸ್ತುವಾಗಿ ಆಚರಣೆಗಳು ಕಂಡುಬರುತ್ತವೆ. ಆದ್ದರಿಂದ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಲಿಖಿತ ದಾಖಲೆಗಳ ಜೊತೆಗೆ ಪ್ರಸ್ತುತ ಜೀವನದಲ್ಲಿ ಆಚರಣೆಯ ಪದ್ಧತಿಯನ್ನು ಅವಲೋಕಿಸುವುದು ಉಚಿತ. ಸಮಾಜದಲ್ಲಿ ಮತ್ತೆ ಮತ್ತೆ ಸಂಸ್ಕೃತಿಯನ್ನು ಕಾಪಾಡಲು ನೀತಿ ನಿಯಮಗಳ ಸೃಷ್ಟಿಯೂ ಆಗುತ್ತಲೆ ಇರುತ್ತವೆ. ಈ ಅಂಶಗಳಿಂದ ಸಮುದಾಯಗಳು ಜೀವನ ಕ್ರಮದಲ್ಲಿ ಭಿನ್ನತೆಯನ್ನು ಹೊಂದಿರುತ್ತವೆ. ಸಮುದಾಯಗಳ ಆಶೋತ್ತರಗಳನ್ನು ಹತೋಟಿಯಲ್ಲಿಡಲು ಕೆಲವು ನಿಷಿದ್ಧಗಳನ್ನು ಸೃಷ್ಟಿಸುವುದು ಸಮಾಜದ ವೈಜ್ಞಾನಿಕತೆಯು ಹೌದು. ಹೀಗೆ ಸಮಾಜ ಅನೇಕ ರೀತಿಯ ಪರಿಕಲ್ಪನೆಯನ್ನು ಹೊಂದುವುದರಿಂದ ಅರ್ಥವಂತಿಕೆಯು ಸಹ ವಿಶಾಲವಾಗಿರುತ್ತದೆ. ಸಮಾಜದಲ್ಲಿ ಅನೇಕ ಜಾತಿ-ಜನಾಂಗಗಳು ಒಂದೇ ಪ್ರದೇಶದಲ್ಲಿ ವಾಸಿಸುತ್ತಿದ್ದರೂ, ಅವರ ಆಚರಣೆಗಳು ವೈರುದ್ಯದಿಂದ ಕೂಡಿರುತ್ತವೆ. ಎಲ್ಲ ಜಾತಿ ಸಮುದಾಯಗಳಿಗೂ ಆಯಾ ಜನಾಂಗದ ಆಚರಣೆ ಪದ್ಧತಿಗಳೆ ಪವಿತ್ರ ಮತ್ತು ಶ್ರೇಷ್ಠತೆಯನ್ನು ಪಡೆದಿರುತ್ತವೆ. ಸಂಘಟನೆಯ ಮಾದರಿಯಲ್ಲಿ ಭಿನ್ನ ಭಿನ್ನ ಸಮುದಾಯಗಳು ಜೀವಿಸುತ್ತಿದ್ದರೂ ಆಚರಣೆಗಳು ಮಾತ್ರ ಏಕರೀತಿಯಾಗಿಲ್ಲ. ಮತ್ತೊಂದು ಸಮುದಾಯದ ಆಚರಣೆಯನ್ನು ಒಪ್ಪಿದರೂ ತಮ್ಮದಾಗಿಸಿಕೊಳ್ಳುವುದಕ್ಕೆ ಪ್ರಯತ್ನಿಸಿಲ್ಲ ಎಂಬ ಪ್ರಶ್ನೆಗಳು ಯೋಚನಾರ್ಹವಾಗಿವೆ. ಅಂತಹ ಸಂದರ್ಭದಲ್ಲಿ ಸರಿ ಉತ್ತರವನ್ನು ಕಂಡುಕೊಳ್ಳಲು ಆ ಸಮುದಾಯದಲ್ಲಿನ ಆಚರಣೆ, ನಂಬಿಕೆಗಳು ಯೋಗ್ಯವಾದ ದಾರಿಯನ್ನು ತೋರಿಸುತ್ತವೆ. ಆದಕಾರಣ ಆಯಾ ಸಮುದಾಯಗಳ ಸಂಸ್ಕೃತಿಯನ್ನು ಗರ್ಭೀಕರಿಸಿಕೊಂಡಿರುವ ಆಕರ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಮತ್ತು ಪ್ರಸ್ತುತ ಸಮುದಾಯದ ಆಚರಣೆಗಳನ್ನು ತಿಳಿಸುವುದು ಮುಖ್ಯ.

ಮನುಷ್ಯನು ಭಾಷೆಯ ಸ್ಥಗಿತ ನೆಲೆಯನ್ನು ಮೀರಿದರೂ ಸಂಸ್ಕೃತಿಯ ತುಡಿತದಲ್ಲಿ ಸ್ಥಿರತೆಯನ್ನು ಕಾಯ್ದುಕೊಳ್ಳುವನು. ಭಾಷೆಯ ಮೂಲಕ ಸಂಸ್ಕೃತಿಯು ನಂತರ ಸ್ಥಿರತೆಯನ್ನು ಪಡೆಯುತ್ತದೆ. ಸಮಾಜದೊಳಗಿರುವ ಕ್ರೂರತೆಯನ್ನು ಮೀರಿ ಮನುಷ್ಯ ಸಂವೇದನೆಗಳು ಸಂಸ್ಕೃತಿಯಲ್ಲಿ ಬಿಂಬಿತವಾಗಿರುತ್ತವೆ. ಮೃಗಸ್ಥಿತಿ ಮೀರಬೇಕೆಂಬ ಅಭಿಲಾಷೆಯಿಂದಲೇ ಆಚರಣೆಗಳು ಸಂಸ್ಕೃತಿಯಲ್ಲಿ ರೂಪ ಪಡೆದಿವೆ.

ಈ ಆಚರಣೆಗಳಿಗೆ ಪುರಾಣ ಮಾಧ್ಯಮವನ್ನು ಬಳಸಿಕೊಂಡಿದ್ದರಿಂದ ಮೂಲದಲ್ಲಿನ ಆಚರಣೆಗೂ ಇವತ್ತಿನ ಆಚರಣೆಗಳಿಗೂ ವ್ಯತ್ಯಾಸವನ್ನು ಕಂಡುಕೊಳ್ಳಲು ಸಾಧ್ಯ. ಸ್ಥಿರೀಕರಣಗೊಂಡ ಆಚರಣೆ ಭಾಷೆಯ ಸರಳತೆಯಿಂದ ಸಾಂಸ್ಥಿಕ ರೂಪಪಡೆಯುವಂತಾಯಿತು. ನಂತರ ಇವುಗಳು ಸಂಭ್ರಮಿಸುವ ಹಬ್ಬ-ಹರಿದಿನಗಳು, ನಂಬಿಕೆ, ಆಚರಣೆಯಾಗಿ ಸಾಮಾಜಿಕ ಆಶಯವನ್ನು ಪಡೆದವು.

i. ನಾಮಕರಣ

ಹುಟ್ಟಿದ ಮನುಷ್ಯ ಜಾತಿಯೆಂಬ ಸಂಕೋಲೆಯನ್ನು ಅವರು ಜನಿಸಿದ ಸಮುದಾಯದ ಆಶ್ರಯದಲ್ಲಿ ಪಡೆಯುತ್ತದೆ. ಪ್ರತಿಯೊಂದು ಜೀವಾತ್ಮವೂ ತಾಯಿಯ ಗರ್ಭದಿಂದ ಭೂಸ್ಪರ್ಶ ಮಾಡಲು ಹುಟ್ಟುವೆಂಬುದು ಸೇತುವೆಯಾಗಿದೆ. ಜನಿಸಿದ ಮಗುವಿಗೆ ಪರಿಸರಕ್ಕೆ ತಕ್ಕಂತೆ ನಾಮಕರಣದ ವ್ಯವಸ್ಥೆಯನ್ನು ಪಡೆಯುವುದು ಎಲ್ಲ ಪ್ರಾಣಿ, ಪಕ್ಷಿಗಳಿಗಿಂತ ಮಾನವನಿಗೆ ವಿಶಿಷ್ಟ ರೀತಿಯಲ್ಲಿ ಲಭಿಸಿದ ಸೌಲಭ್ಯವೇ ಈ ನಾಮಕರಣ. ಜನಿಸಿದ ಮಗು ಹೆಣ್ಣಾಗಲಿ, ಗಂಡಾಗಲಿ ಈ ಸಮಾರಂಭದಿಂದ ಅವರಿಗೆ ಭೂಮಿಯಲ್ಲಿ ಒಂದು ರೀತಿಯ ಪೌರತ್ವವನ್ನು ಕೊಡಲಾಗುತ್ತದೆ. ಇಂತಹ ನಾಮಕರಣದ ಆಚರಣೆಯು ಕೇವಲ ಒಂದು ಜೀವಿಯ ಜನ್ಮವಾಗಿರದೆ ಇಡೀ ಸಮುದಾಯದ ಒಲವು, ಆಶಯ ಮತ್ತು ವ್ಯವಸ್ಥೆ ಎಂಬ ರೀತಿಯಲ್ಲಿ ಜನಾಂಗಗಳು ಎಚ್ಚರಿಕೆಯಿಂದ ಆಚರಿಸುತ್ತವೆ. ಮೊದಲು ಮಾನವ ಅಲೆಮಾರಿಯಾಗಿದ್ದರಿಂದ ನಾಮಕರಣ ಆಚರಣೆಗೆ ಅಷ್ಟು ಮಹತ್ವ ಕೊಟ್ಟಿರಲಿಲ್ಲ ಅನಿಸುತ್ತದೆ. ಯಾವಾಗ ಮನುಷ್ಯ ಇತರರಿಗಿಂತ ತಾನು ಭಿನ್ನವೆಂದು ಭಾವಿಸಿದನೊ ಅಂದಿನಿಂದ ಈ ಆಚರಣೆಯು ಸಂಪ್ರದಾಯವಾಗತೊಡಗಿತು. ಅಷ್ಟೇ ಅಲ್ಲದೆ ದೈವಿ ಶಕ್ತಿಯನ್ನು ಈ ಆಚರಣೆಯ ಮೂಲಕ ಸ್ಮರಿಸುವ ಸೂಕ್ಷ್ಮಜ್ಞಾನವನ್ನು ಸಂಭ್ರಮ ಸಡಗರದಿಂದ ನಡೆಸಲು ಮುಂದಾದರು ಹಾಗೂ ಪುರಾಣ ಪಠ್ಯಗಳು ನಾಮಕರಣವನ್ನು ವೈಭವೀಕರಿಸುವ ಹಂತಕ್ಕೆ ಕೊಂಡೊಯ್ದವು. ಈ ಪ್ರಕ್ರಿಯೆ ಮನುಷ್ಯನಿಗೆ ಮಾತ್ರ ಸೀಮಿತವಾಗಿರದೆ ಊರು, ಸ್ಥಳ, ವ್ಯಕ್ತಿಗಳಿಗೂ ಅನ್ವಯಿಸುವುದು. ಜೊತೆಗೆ ವೃತ್ತಿಯಿಂದ ಜನರನ್ನು ಬೇರೆ ಬೇರೆ ಸಮುದಾಯದಲ್ಲಿ ಜೀವಿಸಲು ಇದು ಪ್ರೇರೇಪಿಸುತ್ತದೆ. ಈ ರೀತಿಯ ನಾಮಕರಣ ಶಾಸ್ತ್ರದಿಂದ ಕುರುಬ ಸಮುದಾಯವು ಹೊರತಾಗಿಲ್ಲ. ಆದ್ದರಿಂದ ಕುರುಬರು ನಾಮಕರಣ ಆಚರಣೆಯನ್ನು ದೈವದ ನೆಲೆಯಲ್ಲಿ ಕಾಣುತ್ತಾರೆ. ಹಾಲುಮತ ಪುರಾಣಗಳಲ್ಲಿ ಬರುವ ವೀರನಾಯಕರುಗಳ ನಾಮಕರಣವು ಹಾಲುಮತ ಸಮುದಾಯದ ಬೆಳವಣಿಗೆಯನ್ನು ತಿಳಿಸಿಕೊಡುತ್ತದೆ. ಇಲ್ಲಿ ಬರುವ ಸಿದ್ಧರಾಮ, ಸಿದ್ಧಮಂಕ, ಪದ್ಮಗೊಂಡ, ಲಿಂಗಬೀರಣ್ಣ, ಮಾಳಿಂಗರಾಯ, ಗೋಲ್ಲಾಳೇಶ್ವರ, ಸ್ತ್ರೀ ಪಾತ್ರಗಳಾದ ಮಾಯವ್ವ ಜಿಂಕಾದೇವಿ, ಕನ್ನಿಕಾಮಾಲೆ, ಸೂರಮ್ಮದೇವಿ ಈ ಪಾತ್ರಗಳಲ್ಲಿ ನಾಮಕರಣವು

ಪುರುಷಕೇಂದ್ರಿತವಾಗಿಯೇ ಆಚರಣೆಯ ರೂಪ ಪಡೆಯುತ್ತದೆ. ಇಲ್ಲಿ ಸ್ತ್ರೀ ಪಾತ್ರಗಳು ಜನಿಸಿದಾಗ ನಾಮಕರಣ ವೈಭವಯುತವಾಗಿ ನೆರವೇರುವುದಿಲ್ಲ. ಇದಕ್ಕೆ ಕಾರಣ ಪುರಾಣಕಾರರು ವೀರಪುರುಷನನ್ನು ಕೇಂದ್ರವಾಗಿಸಿಕೊಂಡಿದ್ದರಿಂದ ಎಂದು ಊಹಿಸಬಹುದು. ಆದರೂ ಸಂಪ್ರದಾಯ ಬದ್ಧವಾದ ಆಚರಣೆಯನ್ನು ಮಾಡಿಕೊಂಡು ಬಂದಿರುವುದು ತಿಳಿದು ಬರುತ್ತದೆ.

ಹಾಲುಮತ ಪುರಾಣಗಳಲ್ಲಿ ಜನಿಸಿದ ವೀರಪುರುಷರ ನಾಮಕರಣವು ಸಾಂಸ್ಕೃತಿಕ ಮಹತ್ವವನ್ನು ಹೇಳುತ್ತದೆ. ಲಿಂಗಬೀರಣ್ಣನ ನಾಮಕರಣವು ಹುಟ್ಟಿನ ಮಹತ್ವವನ್ನು ತಿಳಿಸುತ್ತದೆ. ಬಾಳಭರಮನ ಬಂಜೆತನವನ್ನು ಹೋಗಲಾಡಿಸಲು ಸೂರಮ್ಮದೇವಿಯು ತಪಸ್ಸುಮಾಡುವಳು. ಆ ತಪಸ್ಸಿಗೆ ಶಿವನು ಮೆಚ್ಚುತ್ತಾನೆ. ಶಿವನ ಬೆವರಿನ ಹನಿಯಿಂದ ಲಿಂಗ ಬೀರಣ್ಣ ಜನಿಸುತ್ತಾನೆ. ಅದಕ್ಕೆ ಲಿಂಗಭೀರಣ್ಣ ಎಂದು ಕರೆಯುತ್ತಾರೆ. ನಾಮಕರಣಕ್ಕೆ ಸುತ್ತ ಮುತ್ತಲಿನ ಮುತ್ತೈದೆಯರನ್ನು ಕರೆಯಿಸುತ್ತಾರೆ. ತವರ ಮನೆಯಿಂದ ಮಗುವಿನ ತಾಯಿ ತೊಟ್ಟಿಲನ್ನು, ಜವಳಿಯನ್ನು ಸಹೋದರ ಮಾವನ ಕೂಡ ತರಿಸಿಕೊಳ್ಳುವಳು. ಮಗು ಹುಟ್ಟಿದ ಹನ್ನೆರಡನೆಯ ದಿವಸಕ್ಕೆ ಶುಭಮುಹೂರ್ತ ನೋಡಿ ನಾಮಕರಣ ಮಾಡುವರು. ನಾಮಕರಣದ ದಿವಸ ಮನೆಯನ್ನು ಗೋಮಯದಿಂದ ಸಾರಿಸಿ ಸ್ವಚ್ಛಗೊಳಿಸುತ್ತಾರೆ. ಮನೆಯನ್ನು ಶೃಂಗರಿಸಿ, ಮೃಷ್ಟಾನ್ನವನ್ನು ತಯಾರಿಸುವರು. ತಾಯಿ ತೌರಿನಿಂದ ತಂದ ತೊಟ್ಟಿಲಿಗೆ ಪೂಜೆ ಮಾಡಲು ಗ್ರಾಮದಲ್ಲಿನ ಮುತ್ತೈದೆಯರನ್ನು ಕರೆಸುತ್ತಾರೆ. ಈ ಮುತ್ತೈದೆಯರಿಗೆ ಉಡಿಯನ್ನು ತುಂಬಿ ನಾಮಕರಣ ಕಾರ್ಯಕ್ಕೆ ಅನುವು ಮಾಡಿಕೊಡುವರು. ಮುಖ್ಯವಾಗಿ ನಾಮಕರಣ ಕಾರ್ಯಕ್ಕೆ ಬೇಕಾದ ವಸ್ತುವೆಂದರೆ ನವಧಾನ್ಯಗಳಿಂದ ತಯಾರಿಸಿದ ಗುಗ್ಗರಿಯನ್ನು ತೊಟ್ಟಿಲದ ಕೆಳಗೆ ಇಡುವ ಪದ್ಧತಿಯಿದೆ. ಇದು ನವ ಮಾಸ ಗರ್ಭದಲ್ಲಿದ್ದು ಯಾವ ತೊಂದರೆಯಿಲ್ಲದೆ ಭೂಮಿಯ ಬೆಳಕನ್ನು ಕಂಡಿರುವುದರ ಪ್ರತಿಯಾಗಿ ಚಿತ್ರಿಸಿದ್ದಾರೆ. ನಂತರ ಶಿಶುವಿಗೆ ಸೋದರ ಮಾವ, ಸೋದರ ಅತ್ತೆಯಾಗುವವರು ಮನೆದೇವರ ಹೆಸರನ್ನು ಐದು ಬಾರಿ ಹೇಳಿ ಕೊನೆಗೆ ನಿಜವಾದ ಹೆಸರನ್ನು ಕಿವಿಯಲ್ಲಿ ಕರೆಯುವುದರ ಮೂಲಕ ಆ ಮಗುವನ್ನು ತಮ್ಮ ಮನೆಯ ಸದಸ್ಯನನ್ನಾಗಿ ಮಾಡಿಕೊಳ್ಳುತ್ತಾರೆ. ತೊಟ್ಟಿಲಿನಲ್ಲಿ ಗಾದಿಯನ್ನು ಹಾಸಿ, ತೊಟ್ಟಿಲಿನ ನಾಲ್ಕು ಮೂಲೆಗೆ ಮಂಡಾಳನ್ನು ಬಟ್ಟೆಯಲ್ಲಿ ಕಟ್ಟಿ ಇಟ್ಟಿರುತ್ತಾರೆ. ಈ ಆಚರಣೆಯು ಪೂರ್ವದಿಂದಲೂ ನಡೆದುಬಂದಿದೆ ಎಂಬುದಕ್ಕೆ ಹಾಲುಮತ ಪುರಾಣಗಳಲ್ಲಿ ಮಾಹಿತಿ ದೊರೆಯುವುದು. ಧರ್ಮದೇವ ಮತ್ತು ಸುರಾವತಿಯ ಮಗನಾಗಿ ಶಿವನು ಅವತಾರ ಪಡೆಯುವನು. ಇತ್ತ ಕಾಳಿನಾರಾಯಣ ಸೋದರ ಮಾವನು, ತಂಗಿಯ ಮಗನು ನನಗೆ ಮುಂದೆ ಅವಮಾನವನ್ನು ತರುವನೆಂದು ಭವಿಷ್ಯನೋಡಿ ತಿಳಿದುಕೊಳ್ಳುವನು.

ಆದ್ದರಿಂದ ಶಿಶುನ್ನು ತೊಟ್ಟಿ ಸಹಿತ ಕಾಡಿಗೆ ಕಳುಹಿಸಿ ಆಳುಗಳಿಗೆ ಕೊಲ್ಲಲು ಆಜ್ಞೆ ಮಾಡುವನು. ಇತ್ತ ಸುರಾವತಿಗೆ ಮಗುವಿನ ಜಾತಕದಲ್ಲಿ ದೋಷವಿದೆ ನಿನ್ನ ಅಣ್ಣ ಸಾಯುತ್ತಾನೆಂದು ಜೋತಿಷ್ಯರ ವೇಷದಿಂದ ಬಂದು ಆಕೆಯ ಮನಸ್ಸನ್ನು ಬದಲಾಯಿಸುವನು. ಅಣ್ಣ ಶ್ರೋಯೋಭಿವೃದ್ಧಿಗಾಗಿ ಸುರಾತಿಯು ಮಗುವನ್ನು ಕಾಡಿಗೆ ಬಿಡಲು ಒಪ್ಪುವಳು.

ತೊಟ್ಟಿಲ ಶಾಸ್ತ್ರವು ಮಗು ಹೊಸ ಜೀವನಕ್ಕೆ ಪಾದಾರ್ಪಣೆ ಮಾಡುವ ಹಂತವನ್ನು ಹೇಳುತ್ತದೆ. ಕಾಳಿನಾರಾಯಣನ ಕುತಂತ್ರಕ್ಕೆ ಲಿಂಗ ಬೀರಣ್ಣನನ್ನು ಸೇವಕರು ಕಾಡಿನಲ್ಲಿ ಕಂಚಿನ ಆಲದಮರದ ಮೇಲೆ ತೊಟ್ಟಿಲು ಇಟ್ಟು ಬರುತ್ತಾರೆ. ಆ ಸಂದರ್ಭದಲ್ಲಿ ಶಿವನು ತೊಟ್ಟಿಲ ರಕ್ಷಣೆಗೆ ಏಳು ಹೇಡಿ ಸರ್ಪವನ್ನು, ಹಸಿವು ತಡೆಯಲು ಜೇನು ತುಪ್ಪವನ್ನು, ಇಂಪಾಗಿ ಜೋಗಳ ಪದ ಹಾಡಲು ಗಿಳಿಗಳನ್ನು ನೇಮಿಸುತ್ತಾನೆ. ಈ ರಕ್ಷಣೆಯ ವಸ್ತುಗಳು ಹಾಲುಮತದವರು ನಾಮಕರಣ ಮಾಡುವ ಶಾಸ್ತ್ರದಲ್ಲಿನ ಆಚರಣೆಯಾಗಿ ಕಂಡುಬರುತ್ತದೆ.

ಬಂಗಾರದ ಹಲಗಿ ಕೊಟ್ಟಾನೆ ಲ್ಯಾಯದ ಪಡಿಸಾಲಿ ಒಳಗೇನ
ಲ್ಯಾಯದ ಪಡಸಾಲಿ ಒಳಗೇನೆ ತೊಟ್ಟಿಲ ಕಟ್ಟುತಾರೇನ
ತೊಟ್ಟಿಲ ಕಟ್ಟುತಾರೇನೆ ಅತ್ತಿಯ ಮನಿಯ ಸೊಸ್ತೇರ
ಅತ್ತಿಯ ಮನಿಯ ಸೊಸ್ತೇರೆ ತೌರಮನಿಯ ಹೆಣ್ಣುಮಕ್ಕಳ
ಒಕ್ಕಳ ಗುಗ್ಗರಿ ಹಾಕ್ಯಾರೆ ತಾವ ಕರಸುತಾರೇನೆ
ಹೊನ್ನಿನ ಬಿಂದಿಗಿ ತಂದಾರೆ ಮಣ್ಣಿನ ಬಿಂದಿಗಿ ತಂದಾರೆ
ನೆಲ್ಲಕ್ಕಿ ನೆಲಗಡಲೇನೆ ಕೊನಿವಂದು ಬಾಳಿ ಹಣ್ಣೇನ
ಉತ್ತತ್ತಿ ಉರಿಗೊಬ್ಬರ ಉಡಿಯಕ್ಕಿ ಸಾಮನ ತಂದಾರ
ಕಡವ ಕಬ್ಬ ತಂದಾರೆ ಒಡಿದ ಟೆಂಗ ತಂದಾರೆ
ವಾರಿಗ ನಾರ್‍ಯಾರ ಸಂಗಾಟಿ ಗಂಗೀನ ಮಿನಿಲಾಕ ಹೋದರೆ
ಗಂಗಿನ ಮಿನಿಲಾಕ ಹೋಗ್ಯಾರೆ ಕಲ್ಲಕಟ್ಟಿದ ಬಾಂಯೇನೆ"

ತೊಟ್ಟಿಲ ಶಾಸ್ತ್ರವನ್ನು ಮಗು ಪಡೆದ ಹನ್ನೆರಡನೆ ದಿನದಲ್ಲಿ ಮಾಡುತ್ತಾರೆ. ಈ ಸಮಾರಂಭಕ್ಕೆ ಹೆಣ್ಣಿನ ತವರು ಮನೆಯ ಸದಸ್ಯರ ಜೊತೆಗೆ ಗಂಡನ ಮನೆಯವರು ಸೇರುತ್ತಾರೆ. ತೊಟ್ಟಿಲನ್ನು ಬಂಗಾರದಷ್ಟೇ ಬೆಲೆ ಬಾಳುವ ಕಟ್ಟಿಗೆಯಿಂದ ಮಾಡಿಸುತ್ತಾರೆ. ಈ ಕಾರ್ಯವನ್ನು ನಡುಮನೆಯಲ್ಲಿ ತೊಟ್ಟಿಲಿಟ್ಟು ಹೂಗಳಿಂದ ಅಲಂಕರಿಸುತ್ತಾರೆ. ತೊಟ್ಟಿಲ ಕಾರ್ಯಕ್ಕೆ ಏನು ಬೇಕು? ತೊಟ್ಟಿಲನ್ನು ಹೇಗೆ ತಯಾರಿಸಬೇಕು. ಹಾಗೂ ತೊಟ್ಟಿಲಿಗೆ ಯಾವ ಯಾವ ಚಿತ್ರ, ಪಕ್ಷಿಗಳನ್ನು ಮಾಡಿಸುತ್ತಿದ್ದರು ಎಂದು ತಿಳಿದು ಬರುತ್ತದೆ. ತೊಟ್ಟಿಲನಲ್ಲಿ ಶಾಸ್ತ್ರಕ್ಕಿಂತ ಮೊದಲು ಬಾಣಂತಿಯಿಂದ ಗಂಗೆ ಪೂಜೆ ಮಾಡಿಸುತ್ತಾರೆ. ಈ ಕಾರ್ಯಕ್ಕೆ ಅತ್ತಿ ಮನಿಯ ಸೊಸೆಯಂದಿರ ಜೊತೆಗೆ ತವರುಮನಿಯ ಹೆಣ್ಣುಮಕ್ಕಳು ಭಾಗವಹಿಸುತ್ತಾರೆ. ಮುತ್ತೈದೆಯರು ಸೇರಿ ಮನೆಯಲ್ಲಿ ಒಕ್ಕಳ ಗುಗ್ಗರಿ ಮಾಡಿ ಮಣ್ಣಿನ ಮಡಿಕೆಯಲ್ಲಿ ಬಾವಿಯ ನೀರನ್ನು ಪೂಜೆ ಮೂಡಿ ತರಿಸುತ್ತಾರೆ. ನಂತರ ತಂದ ಗಂಗೀ ನೀರನ್ನು ತೊಟ್ಟಿಲ ಕೆಳಗೆ ದುಂಡಾಗಿ ಅಕ್ಕಿ ಹಾಕಿ ಅದರ ಮೇಲೆ ಮಡಿಕೆ (ಕೊಡ)ಯನ್ನು ಇಡುತ್ತಾರೆ. ಬಾಣಂತಿಗೆ ನೆಲ್ಲಕ್ಕಿ, ನೆಲಗಡ್ಲೆ, ಉತ್ತತ್ತಿ ಉರಿಗೊಬ್ಬರಿಯನ್ನು ಉಡಿ ತುಂಬುವರು. ಈ ರೀತಿಯಾಗಿ ಮಾಡುವ ಕಾರ್ಯಕ್ಕೆ ''ಗಂಗಿ ಮಾಡುವುದು'' ಎಂದು ಹೇಳುತ್ತಾರೆ. ಸೂರಮ್ಮನಿಂದ ದೂರವಾದ ಬೀರಣ್ಣನನ್ನು ಮಾಯವ್ವ ಮಗನಾಗಿ ಬೆಳೆಸುತ್ತಾಳೆ. ಕಾಡಿನಲ್ಲಿ ಕುರಿಗಳನ್ನು ಮೇಯಿಸುತ್ತಾ ಮಾಯವ್ವ ಹೋಗುವಾಗ

"ಕುರಿಯಾ ಸುತ್ತುವ ಯಾಳ್ವಾದಗೆ ಕಂದನ ಶಬುದೊಂದು ಆದಾವ
ಕಂದನ ಶಬುದೊಂದು ಆದಾವೆ ಬಾಲಾನ ಶಬುದೊಂದು ಆದಾವ"[೫]

ಕಂದನ ಆಳು ಧ್ವನಿ ಕೇಳಿ ಮರಬಳಿ ನಿಲ್ಲುತ್ತಾಳೆ. ಮರದ ಮೇಲೆ ನೋಡಿದರೆ ತೊಟ್ಟಿಲಿರುವುದು ಕಂಡುಬರುತ್ತದೆ. ಈ ತೊಟ್ಟಿಲ ರಕ್ಷಣೆಗಾಗಿ ಶಿವನು ಇರುವೆಗಳನ್ನು, ಏಳುಹೆಡಿ ಸರ್ಪ, ಜೋಗಳ ಪಾಡುವುದಕ್ಕೆ ಗಿಳಿಗಳನ್ನು ನೇಮಿಸಿರುತ್ತಾನೆ. ಹಾಗಾಗಿ ಮಾಯವ್ವ ತೊಟ್ಟಿಲಿರುವ ಮರವನ್ನು ಮುಟ್ಟಲು ಹೋದರೆ ಇರುವೆ ಕಡಿಯುವುದಕ್ಕೆ ಬರುತ್ತವೆ. ಆಗ ಮಾಯವ್ವ ನೇಮ-ನಿತ್ಯದಿಂದ ಜಳಕಮಾಡಿ. ಸೋಮವಾರ ಸಕ್ಕರೆಯನ್ನು ಹಂಚುವುದಾಗಿ ಹೇಳುತ್ತಾಳೆ. ನಂತರ ಬಿಸಿಲಿನಿಂದ ರಕ್ಷಣೆ ಮಾಡಿದ ಸರ್ಪವು ಚಾಜಿ ಕೊಡಲು ಕೇಳಿದಾಗ,

"ಲ್ಯಾಯದ ಪಡಸಾಲಿ ಒಳಗೇನೆ ನಾಗರಗದ್ದಗಿ ಕೊಟ್ಟೇನ
ನಾಗರಗದ್ದಗಿ ಕೊಟ್ಟೇನ ಏಳಿ ಸುಳ್ಳಿ ಹಾಕಪ್ಪ
ಏಳಿ ಸುಳ್ಳಿ ಹಾಕಪ್ಪ ಮಸ್ತಕ ಮ್ಯಾಲ ತಗಿಯಪ್ಪ"[೬]

ಎಂದು ಮಾಯವ್ವಳು ಬೀರಣ್ಣನ ತೊಟ್ಟಲ ಗದ್ದುಗೆಯಾಗುವಂತೆ ಸರ್ಪಕ್ಕೆ ಬೇಡುತ್ತಾಳೆ. ನಂತರ ಜೋಗುಳ ಹಾಡಿದ ಗಿಣಿರಾಮಗೆ ನಮ್ಮ ತಮ್ಮನನ್ನು ನಗಿಸುತ್ತಾ ತೊಟ್ಟಿಲ ಮೇಲೆ ಕುಳಿತಿರುವಂತೆ ಹೇಳುತ್ತಾಳೆ. ಹೀಗೆ ಬೀರಪ್ಪನನ್ನು ಸಂರಕ್ಷಣೆ ಮಾಡಿದ ಕಾವಲುಗಾರರಿಗೆ ಮಾಯವ್ವಳು ತೊಟ್ಟಿಲಿನಲ್ಲಿ ಶಾಶ್ವತವಾಗಿರುವ ಸ್ಥಾನವನ್ನು ಒದಗಿಸುತ್ತಾಳೆ. ಆದ್ದರಿಂದ ಕುರುಬರು ತೊಟ್ಟಿಲನ್ನು ಕೊಡುವ ಸಂದರ್ಭದಲ್ಲಿ ಬಡಿಗೇರನಿಗೆ ಹೇಳಿ ತೊಟ್ಟಿಲು ಮಾಡಿಸುವುದು ರೂಢಿ. ತೊಟ್ಟಿಲಿಗೆ ಒಳ್ಳೆಯ ಕಟ್ಟಿಗೆಯಿಂದ ಹಲಗೆ ಮಾಡಿಸಬೇಕು. ತೊಟ್ಟಿಲಿನ ನಾಲ್ಕು ಮೂಲೆಗೂ ಗಿಳಿಗಳನ್ನು ಕೆತ್ತಿಸಿಟ್ಟಿರುತ್ತಾರೆ.

"ತೌರ ಮನಿಗಲವ್ವ ತೊಟ್ಟಿಲಲಿಂದ ಕಳಸೇನ
ತೊಟ್ಟಿಲ ಮ್ಯಾಲ ನೋಡವ್ವ ಗಿಳಿಯ ಹಿಂಡ ಕಳಸೇನ"[೭]

ಹೀಗೆ ಗಿಳಿಗಳಿಗೆ ಮಗುವನ್ನು ನಗಿಸುವ ವೃತ್ತಿಯನ್ನು ವಹಿಸುವುದು ಕಂಡುಬರುತ್ತದೆ. ಈ ಪದ್ಧತಿಯನ್ನು ತೊಟ್ಟಿಲು ಬಟ್ಟಲು ಕೊಡುವುದು ಎಂದು ಇಂದು ಆಚರಿಸುತ್ತಾರೆ. ನಂತರ ಮಗುವಿಗೆ ಮೂರು ತಿಂಗಳಲ್ಲಿ ಕಿವಿ ಚುಚ್ಚುವುದು. ಕೊರಳಿಗೆ ಲಿಂಗದಕಾಯಿ ಹಾಕುವುದು. ತೋಳಿಗೆ ಬಂದಿ. ಮುಂಗೈಗೆ ಬೆಳ್ಳಿ ಉಂಗುರಗಳ ಸರಪಳಿಯನ್ನು ಕೊಡುತ್ತಾರೆ.

"ಮೂರು ತಿಂಗಳಾದುವೆ ಕಾಲಿಗಿ ಹಾಲಗಡಗ ಹಾಕ್ಯಾರ
ಕೊರಳಿಗ ಸರಗಿ ಹಾಕ್ಯಾರೆ ತೋಳಿಗ ನಾಗಮುರಿ ಹಾಕ್ಯಾರ
ತೊಡುವ ಅಂಗಿ ತೊಡಸ್ಯಾರೆ ಕುತನಿ ಕುಲಾಯಿ ಕಟ್ಯಾರ
ಕಣ್ಣಿಗಿ ಕಾಡಿಗಿ ಹಚ್ಚ್ಯಾರೆ ಎಣ್ಣಿ ಹಚ್ಚಿ ಎರದಾರ"[೮]

ಈ ರೀತಿಯಾಗಿ ಶಿಶುವಿಗೆ ಬೆಳ್ಳಿಯ ಆಭರಣಗಳನ್ನು ಹಾಕುತ್ತಾರೆ. ಕಿವಿ ಚುಚ್ಚುವುದನ್ನು ವೈಜ್ಞಾನಿಕವಾಗಿ ನೋಡಬಹುದು. ಎಳೆ ಮಕ್ಕಳು ಇರುವಾಗ ಮಕ್ಕಳು ಕರ್ಕಶ ಶಬ್ದಕ್ಕೆ ಅಂಜದಿರಲು ಕಿವಿಯ ನರವನ್ನು ನೋಡಿ ಚುಚ್ಚುತ್ತಾರೆ. ಹೀಗೆ ಮಾಡದಿದ್ದರೆ ಮಗುವಿಗೆ ಎಳಲು ರೋಗ

(ಪಾರ್ಶ್ವವಾಯು) ಬರುತ್ತದೆಂದು ನಂಬಿದ್ದಾರೆ. ಹಾಗಾಗಿ ಪ್ರತಿಯೊಂದು ಮಗುವಿಗೂ ಕಿವಿಯನ್ನು ಬಂಗಾರದ ತಂತಿಯಿಂದ ಚುಚ್ಚುವುದು ಕಂಡುಬರುತ್ತದೆ. ಹೀಗೆ ತೊಟ್ಟಿಲ ಶಾಸ್ತ್ರದಲ್ಲಿ ಮುತ್ತೈದೆಯರು ತಯಾರಿಸಿದ ಒಕ್ಕಳ ಗುಗ್ಗುರಿಯನ್ನು ನೆರೆದ ಜನರಿಗೆ ಬೀರಿ ತಾಯಿ-ಮಗುವಿಗೆ ಆಶೀರ್ವಾದಿಸುತ್ತಾರೆ. ಈ ಒಕ್ಕಳ ಗುಗ್ಗುರಿಯನ್ನು ಹಂಚುವುದು ಎಂದರೆ ತಾಯಿಯ ಕರುಳು ಬಳ್ಳಿಯನ್ನು ಹರಿದುಕೊಂಡು ಜನಿಸುವ ಮಗುವು ಇಲ್ಲಿಂದ ಸಮಾಜದ ಒಡಲಿಗೆ ಸೇರುತ್ತದೆಂದು ಸೂಚಿಸುತ್ತದೆ.

**ii. ಕನ್ಯೆ ನೋಡುವುದು**

ಹಾಲುಮತ ಪುರಾಣಗಳಲ್ಲಿ ಕನ್ಯೆ ನೋಡುವ ಶಾಸ್ತ್ರವು ಎರಡು ರೀತಿಯಲ್ಲಿ ವ್ಯಕ್ತವಾಗಿದೆ. ಒಂದು ಪುರುಷರೇ ಹೆಣ್ಣಿಗೆ ಗಂಡನ್ನು ತರುವುದು, ಮತ್ತೊಂದು ಸ್ತ್ರೀಯರು ಗಂಡಿಗೆ ಹೆಣ್ಣನ್ನು ತರುವುದು. ಆದರೂ ಇವೆರಡರಲ್ಲಿ ಪುರುಷನ ನಿಯಮವೇ ಕೊನೆಯೆಂದು ಹೇಳುತ್ತವೆ. ಸೂರಮ್ಮದೇವಿಗೆ ಗಂಡು ಹುಡುಕುವಾಗ ಪುರುಷನ ತೀರ್ಮಾನವೇ ಅಂತಿಮವೆಂದು ಈ ರೀತಿಯಾಗಿ ವ್ಯಕ್ತಪಡಿಸಿದ್ದಾರೆ.

"ಬಸವಣ್ಣ ಹೋದ ಮನಿಯಾಗೆ ಕನ್ಯಾ ತಗಿಬೇಕಂದಾರ
ಕನ್ಯಾ ತಗಿಬೇಕಂದಾರೆ ಗಟ್ಟಿ ಮಾಡಬೇಕಂದಾರ
ಗಟ್ಟಿ ಮಾಡಬೇಕಂದಾರ ಹಾಲಗಡಬ ಉಂಡೇವ
ಹಿಂತ ಮಾತನಾಡೇವ ಕೈಲಾಸ ಬಿಟ್ಟು ಇಳದೇವ"[೯]

ಬ್ರಹ್ಮ, ವಿಷ್ಣು, ಶಿವ ಅವರು ಬಾಳಬರಮನಿಗೆ ಹೆಣ್ಣು ನೋಡಲು ಕೈಲಾಸದಿಂದ ಭೂಮಿಗೆ ಬರುತ್ತಾರೆ. ಅಲ್ಲಿ ಕಾಳಿನಾರಾಯಣ ಮನೆಯ ಮುಂದೆ ಬಸವಣ್ಣ (ಎತ್ತು) ನಿಂತಾಗ ಆ ಮನೆಯ ಹೆಣ್ಣನ್ನು ತರುವರು. ಹೀಗೆ ಹಾಲುಮತದವರು ಕೃಷಿ ಮೂಲದವರೆಂದು ಸೂಚಿಸಲು ಬಸವಣ್ಣನ್ನು ಮಂಚೂಣಿಯಲ್ಲಿ ತಂದಿದ್ದಾರೆ. ಜೊತೆಗೆ ಹಾಲುಮತದವರೆಂದು ತೋರಿಸಲು 'ಹಾಲಗಡಬು' ಊಟವನ್ನು ಮಾಡುವುದರ ಮೂಲಕ ವ್ಯಕ್ತಪಡಿಸುತ್ತಾರೆ. ಅಲ್ಲದೆ ಆ ಮನೆಯ ಯಜಮಾನನಿಗೆ 'ಇಳಿಯಾ' (ವೀಳೆದೆಲೆ) ಕೊಟ್ಟು ಕನ್ಯಾ ನಿಶ್ಚಯಿಸುವುದು ರೂಢಿಗತವಾಗಿ ಬಂದಿರುವುದನ್ನು ತಿಳಿಸುತ್ತದೆ. ಈ ಪದ್ಧತಿಯು ಮದುವೆ ಕಾರ್ಯನಿರ್ವಹಿಸುವುದಕ್ಕೆ ಹೆಣ್ಣು ಪ್ರಮುಖವಾಗಿ ಬೇಕಾಗಿದ್ದರೂ ತೀರ್ಮಾನ ತೆಗೆದುಕೊಳ್ಳುವಲ್ಲಿ ಪುರುಷನೇ ಬೇಕೆಂದು ಹೇಳುತ್ತದೆ. ಮತ್ತೊಂದು ಕಡೆಯಲ್ಲಿ ಹೆಣ್ಣಿನ ತೀರ್ಮಾನ ಸಮಂಜಸವೆಂದು ಮೇಲುನೋಟಕ್ಕೆ ಸೂಚಿಸುತ್ತದೆ. ಮಾಯವ್ವಳು ಲಿಂಗ ಬೀರಣ್ಣನ ಮದುವೆ ಸಂದರ್ಭದಲ್ಲಿ ಈ ರೀತಿಯ ಸಂಭಾಷಣೆಯನ್ನು ನೋಡುತ್ತೇವೆ.

"ಕನ್ಯಾ ನೋಡಿ ಬಂದೇನೆ ಹಾಲಗಡಬು ಉಂಡೇನ
ಹಾಲಗಡಬು ಉಂಡೇನೆ ಕನ್ಯಾಗಟ್ಟಿ ಮಾಡೀನಿ
ಒಲ್ಲೇನಕ್ಕ ಒಲ್ಲೇನೆ ನಾಡ ಮ್ಯಾಲಿನ ನಾರ್‍ಯಾರ
ನಾಡ ಮ್ಯಾಲಿನ ನಾರ್‍ಯಾರೇ ಅಕ್ಕನಂಗೇ ಕಂಡಾರ"[೧೦]

ಈ ಪದ್ಯವು ಕುರುಬರು ತಮ್ಮ ತಮ್ಮ ಸಹೋದರ ಸೊಸೆಯರಿಗೆ ಮೊದಲ ಆದ್ಯತೆ ಕೊಡುತ್ತಿದ್ದರು ಎಂದು ತಿಳಿಸುವುದು. ಈ ಮೂಲಕ ಸಗೋತ್ರ ವಿವಾಹ ಸಲ್ಲದು ಎಂದು ತಿಳಿಸುತ್ತದೆ. ಇಲ್ಲಿ ಬೀರಪ್ಪನು ಸಹೋದರ ಸೊಸೆಯನ್ನು ಮದುವೆ ಆಗಲು ಸಂಪ್ರದಾಯ ಬದ್ಧವಾಗಿ ಹೋಗುವುದಿಲ್ಲ. ಆದರೂ ಮಾಯವ್ವಳು ಸೂತರ ತೇಜಿಯನ್ನು ಸಂಪ್ರದಾಯಬದ್ಧವಾಗಿ ಮಾಡಿಕೊಟ್ಟು ಲಿಂಗ ಬೀರಣ್ಣ ಮತ್ತು ಕನ್ನಿಕಾದೇವಿಯರ ಮದುವೆಯ ಆಚರಣಾ ಪದ್ಧತಿಯನ್ನು ಮೀರದಂತೆ ನೋಡಿಕೊಳ್ಳುತ್ತಾಳೆ. ಇದು ಹಾಲುಮತ ಸಮುದಾಯದವರು ಮದುವೆಗೆ ನೀಡಿದ ಮಹತ್ವವನ್ನು ತಿಳಿಸುವುದು.

**iii. ನಿಶ್ಚಿತಾರ್ಥ**

ಕನ್ಯೆಯನ್ನು ನೋಡಿದನಂತರ ಒಪ್ಪಿಗೆಯನ್ನು ಸಾರ್ವಜನಿಕವಾಗಿ ತಿಳಿಯಪಡಿಸುವ ಒಂದು ಸಭೆಯ ಕಾರ್ಯವೇ ನಿಶ್ಚಿತಾರ್ಥವೆಂದು ಹೇಳಬಹುದು. ಜನಪದರು ಈಗಿನಂತೆ ಕಾನೂನು ದಾಖಲೆಯನ್ನು ಮಾಡುತ್ತಿರಲಿಲ್ಲ. ಆದರೂ ಸಮಾಜದ ಹಿರಿಯರ ಸಮ್ಮುಖದಲ್ಲಿ ಒಪ್ಪಿಗೆಯನ್ನು ಪಡಯುತ್ತಿದ್ದದುಂಟು. ಹಾಗೆಯೇ ನಿಶ್ಚಿತಾರ್ಥವು ಗಂಡು ಹೆಣ್ಣು ಒಪ್ಪಿಕೊಂಡಿರುವುದನ್ನು ಸಮಾಜಕ್ಕೆ ತಿಳಿಯಪಡಿಸುತ್ತದೆ. ಇಲ್ಲಿ ಕಂಬಳಿಯ ಬಳಕೆಯು ಮುಖ್ಯವಾಗಿದೆ. ಕಂಬಳಿಯನ್ನು ಗಂಗೆದಿಕ್ಕಿಗೆ (ಉತ್ತರಾಭಿಮುಖವಾಗಿ) 'ಕರಿ' ಬರುವಂತೆ ಹಾಸುತ್ತಾರೆ. ಅದರ ಮೇಲೆ ಅಕ್ಕಿಯನ್ನು ಚೆಲ್ಲಿ, ಐದು ಗುಂಪುಗಳನ್ನು ಕನ್ಯೆಯ ಮುಂದೆ ಇಡುತ್ತಾರೆ. ಇದನ್ನು ಮಹಿಳೆಯರು ಮದುವೆಯಾಗುವ ಹೆಣ್ಣಿಗೆ ಮಾಡುತ್ತಾರೆ. ಇತ್ತ ಹೊರಗಡೆ ಊರಿನ ಕುಲದೈವದವರು ಕಂಬಳಿಯನ್ನು ಹಾಸಿ ಅದರ ಮೇಲೆ ತಮ್ಮ ಬಣದಲ್ಲಿರುವ ಮನೆತನಗಳಿಗೆ ಎಲೆ ಅಡಿಕೆಯನ್ನು ಇಡುತ್ತಾರೆ. ಜೊತೆಗೆ ಕಂಬಳಿಯ ಮೇಲೆ ಅಕ್ಕಿಯ ಹಸೆಯನ್ನು ಬರೆಯುತ್ತಾರೆ. ಹೀಗೆ ಎಲೆ ಅಡಿಕೆಯನ್ನು ಪೂಜಿಸಿದ ನಂತರ ಸಕ್ಕರೆಯನ್ನು ಗಂಡಿನ ಕಡೆಯವರು ಹೆಣ್ಣಿನ ಕಡೆಯವರು ಸೇರಿ ಸಮವಾಗಿ ಹಂಚಿಕೊಂಡು ಬಾಯಿಯನ್ನು ಸಿಹಿ ಮಾಡಿಕೊಳ್ಳುವುದರ ಮೂಲಕ ಸರ್ವಸಮ್ಮತಿಯನ್ನು ನೀಡುತ್ತಾರೆ. ಇಡೀ ಸಮುದಾಯವೇ ಆ ಕ್ರಿಯೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತದೆ. ಈ ಮೂಲಕ ನಿಶ್ಚಿತಾರ್ಥದಿಂದ ಹೆಣ್ಣು ಗಂಡುಗಳು ಹಿರಿಯರ ನಿಯಂತ್ರಣಕ್ಕೆ ಒಳಪಡುತ್ತಾರೆ. ಇಲ್ಲಿಯೇ ಮದುವೆ ದಿನವನ್ನು ನಿಶ್ಚಯಿಸುತ್ತಾರೆ. ಹಾಲುಮತದ ಸಮುದಾಯದಲ್ಲಿ ಹೆಚ್ಚಾಗಿ ಗಂಡಿನ ಕಡೆಯವರು ಅಧಿಕಾರವನ್ನು ಪಡೆಯುತ್ತಾರೆ. ಹೆಣ್ಣಿನ ಬಾಂಧವರು ಮಗಳನ್ನು ಧಾರೆಯಿರಿಯುವುದು ಮಾತ್ರ ಜವಾಬ್ದಾರಿಯಾಗಿರುತ್ತದೆ.

**iv ಮದುವೆ ಆಚರಣೆ**

ಮದುವೆ ಬದುಕಿನ ಅನಿವಾರ್ಯ ಪದ್ದತಿ. ಮನುಷ್ಯನಾಗಿ ಜನ್ಮತಾಳಿದ ಮೇಲೆ ಮದುವೆಯನ್ನು ಮಾಡಿಕೊಂಡರೆ ಮುಕ್ತಿಯೆಂದು ಗೃಹಸ್ಥಾಶ್ರಮವು ತಿಳಿಸಿಕೊಂಡುತ್ತದೆ. ಗಂಡು-ಹೆಣ್ಣು ಮದುವೆಯಾಗದಿದ್ದರೆ ಅಪಮೌಲ್ಯಕ್ಕೆ ಒಳಗಾಗುವರು ಎಂದು ಜಾನಪದ ಹಾಲುಮತ ಮಹಾಕಾವ್ಯದಲ್ಲಿ ತಿಪೇರಸನು ಏಳು ಜನ ಹೆಣ್ಣುಮಕ್ಕಳನ್ನು ಸಾಯಿಸುವ ಸಂದರ್ಭದಲ್ಲಿ ಕಂಡುಬರುತ್ತದೆ. ಆದಕಾರಣ ಸಮಾಜದ ಮೊಟ್ಟಮೊದಲ ಆಚರಣೆಯಲ್ಲಿ ಮದುವೆಯು ಪ್ರಮುಖ ಸ್ಥಾನ ಪಡೆದಿದೆ. ಮದುವೆಯು

ಮನುಷ್ಯನ ವಿಕಾಸಕ್ಕೆ, ಸಂತತಿಯನ್ನು ಮುಂದುವರೆಸುವುದಕ್ಕೆ ಅವಶ್ಯವಾಗಿದೆ. ಇದು ಕೇವಲ ವಿಭಿನ್ನ ದೇಹಗಳ ಸಂಗಮವಾಗದೆ ವಿಕಾಸ ಶೀಲತೆಯ ಸಂಸ್ಕೃತಿಯ ಲಕ್ಷಣವಾಗಿದೆ. ಜನಪದ ಸಮಾಜವು ಸಮಷ್ಠಿ ಪ್ರಜ್ಞೆಯನ್ನು ಕಾಪಾಡಲು ಮದುವೆ ಎಂಬುದನ್ನು ರೂಢಿಸಿಕೊಂಡಿದೆ. ವ್ಯಕ್ತಿಯ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೆ ಇಲ್ಲಿ ಬೆಲೆಯೇ ಇರುವುದಿಲ್ಲ. ಹೊರುತು ಸಾಮಾಜಿಕವಾದ ಅಪೇಕ್ಷೆಯನ್ನು ಹೊಂದಿರುತ್ತದೆ. ವ್ಯಕ್ತಿ ತನ್ನತನವನ್ನು ನಿಗ್ರಹಿಸಿ ಪಾಪ-ಪುಣ್ಯದ ನಡುವೆ ಜೀವನವನ್ನು ಈ ಮೂಲಕ ನಡೆಸುತ್ತಿದ್ದಾರೆ. ಹುಟ್ಟು ಆಕಸ್ಮಿಕವಾಗಿದ್ದರೂ ಮದುವೆ ನಿಶ್ಚಿತವಾಗಿ ನಡೆಯುವ ಒಂದು ಆಚರಣೆ. ಇದು ಮನುಷ್ಯನ ಜೀವನದಲ್ಲಿ ಸುಖವನ್ನು ತಂದುಕೊಡುವ ಅವಕಾಶವೆಂತಲು ಹೇಳುತ್ತಾರೆ. ಈ ಮದುವೆ ಭೂಲೋಕದ ಜನರಿಗೆ ಮಾತ್ರ ವಿಧಿಸುವ ಅವಕಾಶವಲ್ಲ. ಕೈಲಾಸದ ಶಿವ-ಪಾರ್ವತಿ, ವಿಷ್ಣು-ಲಕ್ಷ್ಮೀ, ಬ್ರಹ್ಮ-ಸರಸ್ವತಿ ಮುಂತಾದವರ ವಿವಾಹದ ಪಟ್ಟಿಯನ್ನೇ ಕಥೆಯಾಗಿಸಿಕೊಂಡದ್ದನ್ನು ಗಮನಿಸಿದರೆ ಸಮಾಜವು ಮದುವೆಗೆ ಎಷ್ಟು ಮಹತ್ವವನ್ನು ನೀಡಿದ್ದರೆಂದು ಕಂಡುಬರುತ್ತದೆ. ಮದುವೆಯ ಕುರಿತು ಜನಪದರು ಈ ರೀತಿ ಪದವನ್ನು ಹೇಳುತ್ತಾರೆ.

ಬಂಧು ಬಳಗಕೂಡಿ ಮಂದಿ ಮಕ್ಕಳ ಕರಿಸಿ
ಮದವಿ ಮಾಡ್ಯಾರ ಮಗಳೀಗಿ| ಸಾಕ್ಷಾತ
ಸಿರಿಗೌರಿನ ಕೊಟ್ಟ ಶಿವನೀಗೆ|| ೧೧

ಮದುವೆ ಎಂಬುದು ಹೆಣ್ಣು ಗಂಡುಗಳನ್ನು ಬೆಸುವ ಕೊಂಡಿಯಾಗುವುದರ ಜೊತೆಗೆ ಎಲ್ಲ ಬಂಧು ಬಳಗವನ್ನು ಕೂಡಿಸುವ ಸಮಾರಂಭವಾಗಿರುತ್ತದೆ. ಈ ಮೂಲಕ ಎಷ್ಟೋ ವೈಯಕ್ತಿಕ ದ್ವೇಷಗಳ ರಾಜಿಯಾಗುವ ವೇದಿಕೆಯು ಆಗಿರುತ್ತವೆ. ಹಾಗಾಗಿ ಜನಪದರು ಮದುವೆ ಕಾರ್ಯವನ್ನು ದೇವಕಾರ್ಯವೆಂದು ಮನಪೂರ್ವಕವಾಗಿ ಹೇಳುತ್ತಾರೆ. 'ಸಾವಿರ ಸುಳ್ಳು ಹೇಳಿ ಮದುವೆ ಮಾಡು' ಎಂಬ ಮಾತು ಈ ಹಿನ್ನೆಲೆಯಲ್ಲಿಯೇ ರಚನೆಯಾಗಿರಬಹುದು. "ಮದುವೆ ಮಾಡಿದ್ದರಿಂದ ಇವತ್ತು ದೀಪ ಉರಿಯುತ್ತಿದೆ" ಎನ್ನುವುದು ಮದುವೆಯಿಂದ ಮಾನವ ಕುಲಕೋಟಿ ಬೆಳೆಯುತ್ತದೆಂದು. ಸೂಕ್ಷ್ಮವಾಗಿ ತಿಳಿಸಿಕೊಡುತ್ತದೆ. ಕೆಲವೊಂದು ವೇಳೆ ಮದುವೆಗಳಿಂದ ಸಾಮಾಜಿಕ ವರ್ಗ ಸಂಘರ್ಷಗಳನ್ನು ಸಹ ಸಮಾಜವು ಎದುರಿಸಬೇಕಾಗುತ್ತದೆ. ಹಾಗೆಂದ ಮಾತ್ರಕ್ಕೆ ಮದುವೆಯನ್ನು ಯಾರು ಕೀಳಾಗಿ ಅರ್ಥೈಸುವುದಿಲ್ಲ. ಇದನ್ನು ದೇವರು ಸ್ವರ್ಗದಲ್ಲೇ ಮದುವೆ ನಿಶ್ಚಿಯಿಸಿರುತ್ತಾನೆಂದು ಬ್ರಹ್ಮಗಂಟು, ಕಂಕಣಬಲ ಹೀಗೆ ಅನೇಕ ರೀತಿಯಲ್ಲಿ ಕರೆಯುತ್ತಾರೆ.

ಹಾಲುಮತದವರು ಸಮಾಜದಲ್ಲಿ ವಿಭಿನ್ನಸಂಸ್ಕೃತಿಯನ್ನು ಹೊಂದಿದ್ದಾರೆ. ಮೊದಲಿಗೆ ಮದುವೆಯ ಸಂಪ್ರದಾಯದಿಂದ ಇದನ್ನು ತಿಳಿಯಬಹುದು. ಕುರುಬರು ಇತರರು ಸಮಾಜದ ಮದುವೆಗೆ ನೀಡುವ ಮಹತ್ವವನ್ನೇ ನೀಡುತ್ತಾರೆ. ಆದರೆ ಇವರಲ್ಲಿ ಮದುವೆ ಎಂಬುದರಿಂದಲೇ ಕುರುಬರ ಅಥವಾ ಹಾಲುಮತದ ಹುಟ್ಟು ಸಹ ರೂಪಿತಗೊಂಡಿರುವುದು ವೈಶಿಷ್ಟ್ಯತೆಯನ್ನು ತಿಳಿಸುತ್ತದೆ. ಕೈಲಾಸದಲ್ಲಿ ಶಿವನ ಒಡ್ಡೋಲಗದಲ್ಲಿ ಭೃಂಗಿಯನ್ನು ನೋಡಿ ಅಪಹಾಸ್ಯದಿಂದ ನಗುವುದಕ್ಕೆ ಗಂಧರ್ವರು ಭೂಲೋಕದಲ್ಲಿ ಮುದ್ದವ್ವೆ ಮುದ್ದುಗೊಂಡರಾಗಿ ಜನ್ಮ ತಾಳುತ್ತಾರೆ. ಮುದ್ದವ್ವೆ ಮುದ್ದುಗೊಂಡರ ವಿವಾಹ ರೇವಣಸಿದ್ದರ ಕೃಪೆಯಿಂದ ನೆರವೇರುವುದು. ಇಲ್ಲಿಂದಲೇ

ಕುರುಬರ ಸಂತತಿಯು ದ್ವಿಗುಣಗೊಳ್ಳುವ ಮಾದರಿಯು ಕಂಡುಬರುತ್ತದೆ. ತದನಂತರ ಈ ದಂಪತಿಗಳ ಮಗನೇ ಆದಿಗೊಂಡ ಈಕೆಯು ಹೆಂಡತಿ ಸುಗ್ಗಳೆ. ಇವರಿಬ್ಬರೂ ಹಾಲುಮತಪುರಾಣಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕಾಣಿಸಿಕೊಳ್ಳುವರು. ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಅವರು ಸಂಪಾದಿಸಿದ 'ಹಾಲುಮತ ಪುರಾಣವು' ನಲ್ಲಿ ಆದಿಗೊಂಡ-ಸುಗ್ಗಳೆ, 'ತಗರ ಪವಾಡ'ದಲ್ಲಿ ಆದಿಗೊಂಡ-ಮಲ್ಲಮ್ಮರಾಗಿ ಕಂಡುಬರುತ್ತಾರೆ. ಇವರ ಮಗನೇ ಉಂಡಾಡಿ ಪದ್ಮಣ, ಈತನು ಸಹ ಹಾಲುಮತ ಪುರಾಣದಲ್ಲಿ ವಿವಿಧ ನಾಮಾಂಕಿತನಾಗಿ ಉಲ್ಲೇಖಗೊಂಡಿರುವನು.

ಹಾಲುಮತದವರು ಉಣ್ಣೆ ಕಂಕಣ, ಹತ್ತಿಕಂಕಣವೆಂದು ಪ್ರತ್ಯೇಕ ಒಳಪಂಗಡಗಳನ್ನು ಹೊಂದಿದ್ದಾರೆ. ಈ ಎರಡು ಪಂಗಡಗಳು ಪುರಾಣ ಮೂಲಕವೇ ಪ್ರಸಿದ್ಧಿಯನ್ನು ಪಡೆಯುತ್ತವೆ. ಈ ಎರಡು ಪಂಗಡಗಳ ಹುಟ್ಟಿಗೆ ಮದುವೆ ಮೂಲ ಕಾರಣವಾಗಿದೆ. ಮೂಲತಃ ಕುರಿಕಾಯುವ ವೃತ್ತಿಯನ್ನು ಹೊಂದಿದ್ದ ಕುರುಬರು ಉಣ್ಣೆ ಕಂಕಣವಾಗಿ ಗುರುತಿಸಿಕೊಂಡಿರುವುದು ಸಾಧನೆಯ ಮುಖಾಂತರವೇ ಆಗಿದೆ. ತಂದೆ ತಾಯಿ, ಅಣ್ಣಂದಿರುಗಳಿದ್ದ ಬೈಯಿಸಿಕೊಂಡು ಹೊಲ ಉಳಲು ಬಂದ ಪದ್ಮಗೊಂಡಿನಿಗೆ ಕುರಿಗಳು ವರ ಪ್ರಸಾದವಾಗಿ ದೊರೆಯುತ್ತವೆ. ಅವುಗಳನ್ನು ಕಾಯುವುದಕ್ಕೆ ಕಾಡಿಗೆ ಹೋಗಿ ಅನ್ನ ನೀರಿಗೆ ಪರಿತಪಿಸುವನು. ನಂತರ ಶಿವ ಪ್ರತ್ಯಕ್ಷನಾಗಿ ಬೆಂಕಿಯನ್ನು ತರಲು ರಾಕ್ಷಸಿಯ ಮನೆಗೆ ಕಳಿಸುವನು. ಅಲ್ಲಿದ್ದ ರಾಕ್ಷಸಿಯ ಸಾಕು ಮಗಳು ಸಿರಿವಂತೆಯಿಂದ ಬೆಂಕಿ ಪಡೆದು ತನ್ನ ಆಹಾರದ ದಾಹವನ್ನು ನೀಗಿಸಿಕೊಳ್ಳುವನು. ಈ ಘಟನೆಯು ಸಿರಿವಂತೆಯನ್ನು ವಿವಾಹವಾಗುವ ಸಂದರ್ಭವನ್ನು ತಂದೊಡ್ಡುವುದು. ದಟ್ಟ ಅರಣ್ಯದಲ್ಲಿ ಕುರಿ ಕಾಯುವ ಪುರುಷನಿಗೆ ಆಹಾರ ತೃಷೆಗಳನ್ನು ದೂರಮಾಡಲು, ಆಹಾರ ತಯಾರಿಸಲು ಹೆಣ್ಣಿನ ಅನಿವಾರ್ಯತೆ ಇತ್ತು. ಅದಕ್ಕಾಗಿ ಪುರಾಣಕಾರನು ಕಾಡಿನಲ್ಲಿ ವಿವಾಹ ಸನ್ನಿವೇಶವನ್ನು ತಂದಿರುವುದು ಉಚಿತವಾಗಿದೆ. ಆದರೆ ಈಕೆ ರಾಕ್ಷಸಿಯ ಮಗಳು. ಜೊತೆಗೆ ಪದ್ಮನಿಗೆ ಈಗಾಗಲೇ ವಿವಾಹವಾಗಿರುತ್ತದೆ. ಮತ್ತೊಂದು ವಿವಾಹಕ್ಕೆ ಶಿವನಿಂದಲೇ ಅನುಮತಿಯನ್ನು ಪಡೆದಿರುವುದು ಕಂಡುಬರುತ್ತದೆ. ಕುರುಬರು ಕುರಿಕಾಯುವ ವೃತ್ತಿಹೊಂದಿದರಿಂದ ತಮ್ಮ ಜೊತೆಗೆ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗಲು ಆಗುವುದಿಲ್ಲ. ಅಂತಹ ಸಂದರ್ಭದಲ್ಲಿ ಇವರು ಪರ ಊರಿನಲ್ಲಿ ಅಪರಿಚಿತರಾಗಿರುವುದರಿಂದ ಮರುವಿವಾಹವೂ ಜರುಗುತ್ತಿರಬಹುದು. ಇಂತಹ ವಿವಾಹಗಳನ್ನು ಅವರು ಪ್ರತ್ಯೇಕವಾಗಿರಿಸುವ ಸಂಪ್ರದಾಯವನ್ನು ರೂಢಿಸಿಕೊಂಡರು. ಇದೇ ಉಣ್ಣೆಕಂಕಣದ ಉದ್ಭವಕ್ಕೆ ಕಾರಣವಾಗಿರಬಹುದು. ಬಹುಪತ್ನಿತ್ವವನ್ನು ಸಮ್ಮತಿಸಿದ ಕುರುಬರು ಬೇರೆ ಸಮುದಾಯದ ಹೆಣ್ಣನ್ನು ತಮ್ಮವಳಂತೆ ಮಾಡಿಕೊಳ್ಳುವುದು ತುಂಬಾ ಸುಂದರವಾಗಿ ಪುರಾಣಗಳಲ್ಲಿ ವ್ಯಕ್ತವಾಗಿದೆ. ಸಿದ್ಧಮಂಕ ಚರಿತೆಯಲ್ಲಿ ರಾಕ್ಷಸಿಯ ಮಗಳು ಸಿರಿವಂತೆ ಊಳಿಗದವಳಾಗಿರಲು ಶಿವನು ಕಳುಹಿಸಿಕೊಡುವನು. 'ತಗರ ಪವಾಡ'ದಲ್ಲಿ ಸಿರಿವಂತೆಯು ಮಡದಿಯ ಸ್ಥಾನವನ್ನು ಪಡೆಯುತ್ತಾಳೆ. ಸಾಕ್ಷಾತ್ ಶಿವನ ಸ್ವರೂಪನಾದ ವೀರಬೀರಯ್ಯ ಇವರ ಮದುವೆಯನ್ನು ನಿಶ್ಚಯಿಸುವನು.

''ಕಂದಯ್ಯ ನಿನ್ನ ಚಿಕ್ಕ ಹೆಂಡತಿ ಸಿರಿವಂತೆ
ಗಂಡುಮಕ್ಕಳು ಮೂರುಮಂದಿ

ಉಣ್ಣೆಕಂಕಣದ ಕುರುಬರೆಂದು ಶಿವ ಪೇಳಿ
ಮುಂದಣ ಕುರುಹ ಪೇಳಿದನು''[೧೨]

ಸಿರಿವಂತೆಯೂ ಪದ್ಮಗೊಂಡನ ಎರಡನೇಯ ಹೆಂಡತಿಯ ಸ್ಥಾನವನ್ನು ಪಡೆಯುವುದರ ಮೂಲಕ ಕುಲಬಾಂಧವಳಾಗುವುದು ಕಂಡುಬರುತ್ತದೆ. ಬಸವಣ್ಣೆಪ್ಪ ನೀಲಪ್ಪಹಳವಳ್ಳಿ ಅವರು ಸಂಪಾದಿಸಿದ 'ಹಾಲುಮತ ಪುರಾಣ'ದಲ್ಲಿ ಪದ್ಮಣ್ಣನ ಹೆಂಡತಿ ಚೆನ್ನಮ್ಮ (ಸಿರವಂತೆ)ಳ ಮದುವೆಯೂ ಸಂಪ್ರದಾಯ ಬದ್ಧವಾಗಿ ನೆರವೇರುವುದು. ಇಲ್ಲಿ ಉಣ್ಣೆ ಕಂಕಣ ಯಾಕೆ ಹುಟ್ಟಿತೆಂದು ತಿಳಿಸಿಕೊಡುತ್ತದೆ. ಕಾಡಿನಲ್ಲಿ ದೊರೆಯುವ ಈ ಚೆನ್ನಮ್ಮಳಿಗೆ ಕಾಡಿನಲ್ಲಿಯೇ ವಿವಾಹ ಏರ್ಪಡಿಸುತ್ತದೆ. ಅಲ್ಲಿ ನಗರದ ಯಾವ ಸೌಲಭ್ಯವಾಗಲಿ, ಮದುವೆಗೆ ಬೇಕಾದ ಸಾಧನವಾಗಲಿ ದೊರೆಯುವುದಿಲ್ಲ. ಆದಕಾರಣ ಇರುವ ವಸ್ತುಗಳನ್ನೇ ಉಪಯೋಗಿಸಿಕೊಂಡು ವಿವಾಹ ಪೂರ್ಣಗೊಳ್ಳುವುದು.

ಕುರಿಯ ಉಣ್ಣೆಯ ಪಿರಕಿ ಹುರಿಯ ದಾರವ ಮಾಡಿ|
ಅರಸಿ ನಾಡವಿಯೋಳಿರಲು||
ಕರಕೆ ಕಂಕಣ ಕಟ್ಟಿ ಸುರ ದೇವತೆಗಳು|
ಆರ್ಥಿಯಲಿ ಮದುವೆ ಮಾಡಿ||[೧೩]

ಅರಣ್ಯದಲ್ಲಿ ನಡೆಯುವ ಮದುವೆಯಾದ್ದರಿಂದ ಕುರಿಯ ಉಣ್ಣೆಯಿಂದ ಕಂಕಣವನ್ನು ತಯಾರಿಸಿ, ಕುರಿಯ ಹಾಲಿನಲ್ಲಿಯೇ ಅದ್ದಿ ಕೈಗೆ ಕಟ್ಟುವುದರ ಮೂಲಕ ಮದುವೆ ಕಾರ್ಯ ಆರಂಭವಾಗುವುದು. ಹತ್ತಿಯ ದಾರ ದೊರೆಯದಿದ್ದರಿಂದ ಉಣ್ಣೆಯ ದಾರವೇ ಕಂಕಣವಾಯಿತು. ಹಾಗಾಗಿಯೇ ಇವರ ಪದ್ಧತಿಯು ಭಿನ್ನತೆಯನ್ನು ಹೊಂದಿದೆ. ಕೈಗೆ ಕಟ್ಟುವ ಕಂಕಣದ ಕಾರ್ಯ ಹೊರತು ಪ್ರತ್ಯೇಕ ಆಚರಣೆಯಿಂದ ಗುರುತಿಸಲು ಆಗುವುದಿಲ್ಲ.

ಚೆನ್ನಮ್ಮಳು ಉಣ್ಣೆ ಕಂಕಣದ ಮೂಲ ಸ್ತ್ರೀಯಾಗಿ ಕಂಡುಬರುತ್ತಾಳೆ. ತದನಂತರ ಈಕೆಯೇ ಕುರಿ ಕಾಯುವುದರ ಜೊತೆಗೆ ಕಂಬಳಿಯನ್ನು ನೇಯ್ದು ಸಂಪೂರ್ಣ ಅಧಿಕಾರವನ್ನು ಪಡೆಯುತ್ತಾಳೆ. ಆದ್ದರಿಂದ ಉಣ್ಣೆ ಕಂಕಣದವರೇ ಕಂಬಳಿಯ ತಯಾರಕರೆಂದು ಖಚಿತವಾಗಿ ತಿಳಿಸಿಕೊಡುತ್ತದೆ.

ಕುರುಬರ ಮದುವೆಯಲ್ಲಿ ಮೊದಲು ಸಹೋದರಿಯ ಮಗಳಿಗೆ ಪ್ರಾಮುಖ್ಯತೆ ಕೊಡುವರು. ಸಹೋದರಿಯ ಮಗಳನ್ನು ಸಹೋದರ ಮಗನು ಮದುವೆಯಾಗಲು ಅವಕಾಶವಿರುತ್ತದೆ. ಈ ರೀತಿಯ ಮದುವೆಗಳು ಇಂದಿಗೂ ನಡೆಯುವುದು ಕಂಡುಬರುತ್ತದೆ. ಆದ್ದರಿಂದ ಎಷ್ಟೇ ಅಪರಿಚಿತರಾದವರೆಂದು ನೆಂಟಸ್ಥಿಕೆ ಮಾಡಿದರು, ಕಳ್ಳು ಬಳ್ಳಿ ಸಂಬಂಧವು ಬೆಸೆದು ಕೊಂಡಿರುತ್ತದೆ. ಅದಕ್ಕಾಗಿ ಕುರುಬರ ಜಿಡ್ಡು ಎಲ್ಲಿ ಹೋದರೂ ಅಂಟಿಕೊಂಡಿರುತ್ತದೆಂದು ನಂಬಿಕೆಯಿದೆ. ಅಷ್ಟು ವಿಶಾಲವಾಗಿ ಕುರುಬರು ಸಂಬಂಧ ಬೆಳೆಸುವಲ್ಲಿ ನಿಸ್ಸೀಮರೆಂದು ಆದಿಗೊಂಡನ ಮಗ ಪದ್ಮಗೊಂಡನಿಗೆ ಸಹೋದರತ್ತೆಯ ಮಗಳಾದ ಜಂಕಾದೇವಿಯನ್ನು ಕೊಟ್ಟು ಮದುವೆ ಮಾಡುವುದು ತಿಳಿಸುತ್ತದೆ. ಮೊದಲಿಗೆ ಹೆಣ್ಣು ಕೇಳಲು ತಾವೇ ನೇರವಾಗಿ ಹೋಗುವುದಿಲ್ಲ, ಆ ಹೆಣ್ಣಿನ ಕಡೆಯ ಹಿರಿಯರಿಗೆ ಗಂಡಿನ ಕಡೆಯ ಹಿರಿಯರು ಹೆಣ್ಣು ಕೊಡಿಯೆಂದು ಕೇಳುತ್ತಾರೆ. ಒಪ್ಪಿಗೆಯಾದ ನಂತರ ''ನಿಶ್ಚಿತಕಾರ್ಯ''ವೆಂದು ಮಾಡುವರು. ಈ ಕಾರ್ಯದಲ್ಲಿ ಮದುವೆ

ಗಂಡಿಗೆ ವರೋಪಚಾರವೆಂದು ಧನ-ಕನಕವನ್ನು ಆಪೇಕ್ಷಿಸುತ್ತಾರೆ. ಅದೇ ರೀತಿ ಹೆಣ್ಣಿನ ಕಡೆಗೂ ಬಂಗಾರ, ಒಡವೆ-ವಸ್ತ್ರವನ್ನು ಕೊಡಲೇ ಬೇಕು. ಈ ಪದ್ಧತಿಯೂ ಹೆಣ್ಣು-ಗಂಡಿನ ನಡುವೆ ಅಂತರವನ್ನು ದೂರಮಾಡಲು, ಎರಡು ಕಡೆಯ ನೆಂಟರು ಪರಿಚಯವಾಗುವ ಪೂರ್ವ ವೇದಿಕೆಯಾಗಿರುತ್ತದೆ. ಒಂದು ವೇಳೆ ಸಹೋದರ ಸಂಬಂಧಬಿಟ್ಟು ಹೊರಗಡೆಯ ಸಂಬಂಧವಾದರೆ ಮೊದಲು ಬೆಡಗನ್ನು ಕೇಳುತ್ತಾರೆ. ಇವರಿಬ್ಬರ ಬೆಡಗುಗಳು ಒಂದೇ ಆದರೆ ಸಹೋದರರಾಗುತ್ತಾರೆ. ಭಿನ್ನವಾಗಿದ್ದರೆ ನೆಂಟಸ್ಥಿಕೆಯನ್ನು ಬೆಳೆಸುತ್ತಾರೆ. ಆಗ ವೀಳ್ಯದ ಶಾಸ್ತವನ್ನು ಮಾಡಲು ಒಪ್ಪಿಗೆ ನೀಡುತ್ತಾರೆ. ಈ ನಿಶ್ಚಿತವನ್ನು ಮಾಡುವ ಕಾರ್ಯಕ್ಕೆ 'ವೀಳ್ಯೆದಶಾಸ್ತ್ರ'ವೆಂದು, ಇಳೆಯು ಎಂದು ಸಹ ಹಳ್ಳಿಯಲ್ಲಿ ಕರೆಯುತ್ತಾರೆ. ಈ ಶಾಸ್ತ್ರದಲ್ಲಿ ಎರಡು ಮನೆತನದ ಕಟ್ಟೆಮನೆಯವರ ಪಾತ್ರ ಪ್ರಮುಖವಾಗಿರುತ್ತದೆ. ಎರಡು ಮನೆ-ಮನಗಳ ನಡುವೆಯಾದ ಮದುವೆ ಒಪ್ಪಂದವನ್ನು ಮತ್ತೆ, ಆ ಕುಲಬಾಂಧವರ ಮಧ್ಯೆ ನಡೆಸುವುದರ ಮೂಲಕ ಹೆಣ್ಣು-ಗಂಡಿಗೆ ದಂಪತಿಗಳಾಗುವ ಪರವಾನಿಗೆಯನ್ನು ದೈವವು ನೀಡುತ್ತದೆ. ಕಟ್ಟೆಮನೆಯವರನ್ನು ಹಾಲುಮತದವರು ದೈವವೆಂದು ಸಾಮೂಹಿಕವಾಗಿ ಗೌರವಿಸುತ್ತಾರೆ. ಹೀಗೆ ಬಹಿರಂಗವಾಗಿ ನಡೆಯುವ ಕಾರ್ಯವು ಬಹುಪತ್ನಿತ್ವವನ್ನು ತಡೆಗಟ್ಟುವಲ್ಲಿ ಸಹಾಯಮಾಡುತ್ತದೆ. ನಿಶ್ಚಿತ ಕಾರ್ಯಕ್ಕೆ ಬೇರೆ ಬೇರೆ ಊರುಗಳಿಂದ ತಮ್ಮ ಕುಲಬಾಂಧವರನ್ನು ಆಹ್ವಾನಿಸಿರುತ್ತಾರೆ. ಒಂದು ವೇಳೆ ರಹಸ್ಯವಾದ ಸಂಗತಿಗಳಿದ್ದರೆ ನೇರವಾಗಿ ತಿಳಿಸುವುದರ ಮೂಲಕ ಮುಂದೆ ಆಗಬಹುದಾದ ಅಪಾಯವನ್ನು ತಡೆಯಲು ಇಂತಹ ಕಾರ್ಯಗಳು ಮುಖ್ಯಸ್ಥಾನವಹಿಸುತ್ತವೆ. ಇದನ್ನು ನಿಶ್ಚಿತಾರ್ಥ ಭಾಗದ ಕೊನೆಗೆ ಸೇರಿದೆ.

**v. ಸುರಗಿ ಶಾಸ್ತ್ರ**

ಮದುವೆ ಸಮಾರಂಭದಲ್ಲಿ ಮದುಮಕ್ಕಳಿಗೆ ಬಹಿರಂಗ ಅಭ್ಯಂಜನವನ್ನು ಮಾಡಿಸುತ್ತಾರೆ. ಇದು ನಡೆದನಂತರ ಅವರು ಮಡಿಯಾಗಿ ಮಾಂಗಲ್ಯವನ್ನು ಕಟ್ಟಲು, ಕಟ್ಟಿಸಿಕೊಂಡು ಶುದ್ಧವಾಗುತ್ತಾರೆ. ಮದುವೆ ಕಾರ್ಯಕ್ಕಾಗಿ ಊರಿನ ಐದು ಜನರನ್ನು ನೇಮಿಸುತ್ತಾರೆ. ಆರಂಭದಿಂದ ಕೊನೆಯವರೆಗೂ ಈ ಐದು ಜನರೆ ಕಾರ್ಯವನ್ನು ಪೂರ್ಣಗೊಳಿಸಬೇಕು. ಈ ಐದು ಮಂದಿಯಲ್ಲಿ ಕಳಸವನ್ನು ಹಿಡಿಯಲು ಹೆಂಗಸನ್ನು ಆಯ್ಕೆ ಮಾಡುವರು ಇನ್ನುಳಿದ ನಾಲ್ವರು ಗಂಡಸರಾಗಿರುತ್ತಾರೆ. ಈ ನಾಲ್ವರು ಮಣ್ಣಿನ ಮಡಿಕೆಯನ್ನು ಹೊತ್ತುಕೊಂಡು ಬಾವಿ ಅಥವಾ ಕೆರೆಯ ನೀರನ್ನು ಪೂಜೆಮಾಡಿ ಮಡಿಯಿಂದ ತರುತ್ತಾರೆ. ತಂದು ನಾಲ್ಕು ದಿಕ್ಕಿಗೆ ಚೌಕಾಕಾರವಾಗಿಟ್ಟು, ಹತ್ತಿಯ ದಾರವನ್ನು ಐದು ಸುತ್ತು ನಾಲ್ಕು ಮಡಿಕೆಗೆ ಬರುವಂತೆ ಸುತ್ತುತ್ತಾರೆ. ನಂತರ ಮದುಮಕ್ಕಳನ್ನು ಮತ್ತು ಅವರ ಜೊತೆಗಿನ ಸಂಗಡಗತ್ತಿಯರನ್ನು ಒನಕೆ ಮೇಲೆ ಕೂಡಿಸಿ ನೀರನ್ನು ಹಾಕುತ್ತಾರೆ. ಆ ದಾರದ ಒಳಗೆಯೇ ಅವರ ಬಟ್ಟೆಯನ್ನು ಬಿಡಿಸಿ ಹೊಸ ಬಟ್ಟೆಯನ್ನು ಬದಲಾಯಿಸುತ್ತಾರೆ. ಈ ಸುರಿಗಿ ಸುತ್ತುವ ಶಾಸ್ತವು ಅನಾದಿ ಕಾಲದಿಂದಲೂ ಹಾಲುಮತ ಸಮುದಾಯದಲ್ಲಿತ್ತು ಎಂದು ಪುರಾಣಗಳು ತಿಳಿಸುತ್ತವೆ. ಹೆಣ್ಣನ್ನು ಕದ್ದು ತಂದು ಮದುವೆಯಾಗುವುದು ಗಂಡಿನ ಪೌರುಷವನ್ನು ಎತ್ತಿಹಿಡಿಯುತ್ತದೆ. ಈ ರೀತಿಯಾಗಿ ತಂದ ಹೆಣ್ಣನ್ನು ದಾರದ ಚೌಕಟ್ಟಿನಲ್ಲಿಟ್ಟು ಮದುವೆಯಾಗುವುದನ್ನು

ಮಸುಕು ಮಸುಕಾಗಿ ತಿಳಿಸಿಕೊಡುವುದು. ಹಾಲುಮತೋತ್ತೇಜಕ ಪುರಾಣದಲ್ಲಿ ಸುರಿಗೆಯ ಕುರಿತು ಈ ರೀತಿಯಾಗಿ ವಿವರಿಸಿದ್ದಾರೆ.

'ಸುರಿಗೆಯ ಸುತಿ ತೈಲಾರ್ಶಿನವ ಪಚ್ಚೆ ಪನ್ನೀರಿನಿಂ
ಸದಮಲ ಸ್ನಾನಮಂಗೈಸಿ ಕಂಕಣಗಟ್ಟಿ
ಮದನಾರಿಯಂ ಸ್ಮರಿಸಿ ಭಸಿತಮಂ ತಳೆದು ಚಂದ್ರದ ಬೊಟ್ಟನಿಟ್ಟು
ಮಂಗಲಸೂತ್ರಮಂ ಧರಿಸಿ ಶಾಸಿಯದಳಿಯಿಸಿದ ದಯೆಯೊಳು'[೧೫]

ಎಂದು ಹೇಳುತ್ತಾ ಈ ವಿವಾಹವನ್ನು ಗಂಧರ್ವ ವಿವಾಹವೆಂದು ಕರೆಯುತ್ತಾರೆ. ಈ ವಿವಾಹವು ಪುರುಷನ ಭುಜಬಲ ತೋರಿಸುವ ಆಚರಣೆಯಾಗಿ ತಿಳಿದುಬರುತ್ತದೆ.

ಸುರಗಿ ಶಾಸ್ತ್ರವು ಶಿವ ಪಾರ್ವತಿಯರೇ ಬಂದು ಹಾಲುಮತ ದವರಿಗೆ ತಿಳಿಸಿಕೊಟ್ಟ ಮೊದಲ ಶುಭಕಾರ್ಯವೆಂದು ಭಾವಿಸಿದ್ದಾರೆ. ಪದುಮಗೊಂಡ ಮತ್ತು ರಾಕ್ಷಸಿಯ ಆಶ್ರಯದಲ್ಲಿ ಬೆಳೆದ ಶಿವಲಿಂಗಮ್ಮರ ವಿವಾಹದಿಂದ ಈ ಶಾಸ್ತ್ರವು ಭೂಸ್ಪರ್ಶವನ್ನು ಹೊಂದುವುದು. ಸುರಗಿಯನ್ನು ಹೇಗೆ ಮಾಡಬೇಕೆಂದು ಇಲ್ಲಿ ತಿಳಿಸಲಾಗಿದೆ.

''ನಾಲ್ಕು ಮೂಲಗಲ್ಲೇಳ ನಾಲ್ಕು ಮಗಿಯ ಇಟ್ಟಾರ
ನಾಲ್ಕು ಮಗಿಯ ಇದ್ದರ ಸುರಗಿ ಸುತ್ತಬೇಕೆಂದಾರ
ಸುರಗಿ ಸುತ್ತಿ ಬೇಕಂದಾರ ನೂಲ ಸಿಗಲು ಇಲ್ಲೇನ
ನೂಲ ಸಿಗಲಿಲ್ಲೇಳ ಅಳ್ಳಿ ದೊರಕಲಿಲ್ಲೇನ
ಅಳ್ಳಿ ದೊರಗಲಿಲ್ಲೇನ ಕುರಿಯ ಉಣ್ಣೆ ತಂದಾರ''[೧೫]

ಸುರಗಿಯನ್ನು ಸುತ್ತಲು ಉಣ್ಣೆದಾರವನ್ನು ಮತ್ತು ಹತ್ತಿದಾರವನ್ನು ಬಳಸುತ್ತಾರೆ. ಇದರ ಮೂಲಕವೇ ಹಾಲುಮತದವರಲ್ಲಿ ಉಣ್ಣೆ ಕಂಕಣ ಮತ್ತು ಹತ್ತಿಕಂಕಣವೆಂದು ಪ್ರತ್ಯೇಕತೆಯನ್ನು ದಾರದ ಬಳಕೆಯಿಂದ ಬೇರ್ಪಡುತ್ತವೆ. ಈ ಕಾರ್ಯಕ್ಕೆ ಐದು ಜನ ಬೇಕು. ಮಗಿಗೆ ಸುತ್ತಿದ ಸುರಗಿ ದಾರವನ್ನು ಮದುಮಕ್ಕಳ ಮುಂಗೈಗೆ ಕಟ್ಟುತ್ತಾರೆ. ಸುರಗಿಯ ಪವಿತ್ರತೆಯ ಸಂಕೇತವಾಗಿ ಹಾಲುಮತದವರಲ್ಲಿ ಮೂಡಿಬಂದಿದೆ. ನಂತರ ಹೂವು ಎಲೆ ಅಡಿಕೆಯನ್ನು ಕೊಟ್ಟು ಸೇಸೆಕ್ಕಿಟ್ಟು, ಕಂಕಣವನ್ನು ಹತ್ತಿಯ ದಾರದಿಂದ ಅರಿಶಿನ ಕೊಬ್ಬು ಎಲೆಯನ್ನು ಸೇರಿಸಿ ಕಟ್ಟುತ್ತಾರೆ. ಈ ದಾರವೇ ಸುರಗಿಯ ಕಂಕಣವೆಂದು ಹೇಳುತ್ತಾರೆ. ತದನಂತರ ಸುತ್ತಲೂ ಸುತ್ತಿದ ಐದು ಎಳೆ ಹತ್ತಿದಾರವನ್ನು ತೆಗೆದು ಎರಡು ಮಳಮಾಡಿ ಹಂದರದ ಪಕ್ಕದಲ್ಲಿರಿಸಿದ ಹಾಲಗಂಬಕ್ಕೆ ಕಟ್ಟುತ್ತಾರೆ. ಈ ರೀತಿಯಾಗಿ ಕಟ್ಟಿದರೆ ಮದುವೆಯಾದ ವರ್ಷದೊಳಗೆ ಸುಸೂತ್ರವಾಗಿ ಮಗು ಜನಿಸುತ್ತದೆಂದು ನಂಬಿಕೆಯನ್ನು ಇರಿಸಿಕೊಂಡಿರುವುದು ಕಂಡುಬರುತ್ತದೆ. ಸುರಗಿ ಎಂದರೆ ಕತ್ತಿ ಎಂದರ್ಥ. ಸುರಗಿಯ ನೀರನ್ನು ಹಾಕಿ ಮದುವೆ ಗಂಡಿಗೆ ಕೈಯಲ್ಲಿ ಚಿಕ್ಕಕತ್ತಿ, ಆ ಕತ್ತಿಗೆ ನಿಂಬೆ ಹಣ್ಣನ್ನು ಸಿಕ್ಕಿಸಿರುತ್ತಾರೆ. ಕತ್ತಿಯು ದುಷ್ಟರನ್ನು ಸಂಹರಿಸುವ ಸಂಕೇತವನ್ನು ಸೂಚಿಸುತ್ತದೆ. ಅಂತಹ ಅಸ್ತ್ರ ಕೈಯಲ್ಲಿದ್ದರೆ ಕಾರ್ಯಗಳು ಅಡ್ಡಿ ಆತಂಕವಿಲ್ಲದೆ ನೆರವೇರುತ್ತವೆಂದು ಇಂದಿಗೂ ಕುರುಬರು ಮದುಮಗನ ಕೈಯಲ್ಲಿ ಚಿಕ್ಕಕತ್ತಿ, ನಿಂಬೆ ಹಣ್ಣು ಜೋಪಾನವಾಗಿಟ್ಟುಕೊಳ್ಳಲು ಹೇಳುತ್ತಾರೆ. ಈ

ಪದ್ಧತಿಯು ಕುರುಬರು ಅಲೆಯುವ ಜನರು, ಮದುವೆ ಸಂದರ್ಭದಲ್ಲಿ ಎಲ್ಲಿಗಾದರೂ ಹೋಗಬೇಕಾದರೆ ಆತ್ಮರಕ್ಷಣೆಗಾಗಿ ಈ ಅಸ್ತ್ರವನ್ನು ಬಳಸುತ್ತಿದ್ದರು ಎಂದು ತಿಳಿಸುತ್ತದೆ.

ಸಮಾಜದಲ್ಲಿ ನಡೆಯುವ ಇಂತಹ ಮದುವೆಗಳು ಅಲೆಮಾರಿತನದಿಂದ ಬೇಸತ್ತ ಕುರುಬರು ಒಂದೇ ಕಡೆ ಕೆಲವುದಿನಗಳ ಕಾಲ ತಮ್ಮ ಬಂಧು ಬಾಂಧವರ ಜೊತೆ ಕೂಡುವಂತೆ ಮಾಡುತ್ತದೆ. ಕುಟುಂಬಗಳ ನಡುವೆ ಪ್ರೀತಿಯನ್ನು ಬೆಳೆಸುವಂತೆ ಮಾಡುತ್ತದೆ. ಅಪರಿಚಿತರನ್ನು ಪರಿಚಿತರನ್ನಾಗಿಸುವ ಸಜ್ಜಿಕೆಯೂ ಆಗಿರುತ್ತದೆ. 'ಕುರುಬ ಕೂಡಿ ಕೆಟ್ಟ ಬಡಿಗ ಅಲೆದು ಕೆಟ್ಟ' ಎಂಬ ಮಾತನ್ನು ಮದುವೆ ಸಂದರ್ಭದಲ್ಲಿ ಸುಳ್ಳಾಗಿಸಿದ್ದಾರೆ. ಅನ್ಯೂನ್ಯವಾಗಿ ಕೂಡುತ್ತಾ ತಮ್ಮ ಪ್ರೀತಿ ವಾತ್ಸಲ್ಯವನ್ನು ನದಿಯಂತೆ ಹರಿಬಿಡಲು ಇದು ಅನುಕೂಲವಾಗಿರುವುದರಿಂದ ಮದುವೆ ಕಾರ್ಯಕ್ಕೆ ತುಂಬಾ ಮಹತ್ವವನ್ನು ನೀಡುತ್ತಾರೆ.

ಮದುವೆ ಕಾರ್ಯದಲ್ಲಿ ಕಂಬಳಿಯ ಪಾತ್ರವು ಇಂದಿಗೂ ಮುಖ್ಯವಾಗಿಯೇ ಇದೆ. ಬಹುತೇಕ ಶುಭಕಾರ್ಯಗಳಲ್ಲಿ ಕಂಬಳಿ ಅತ್ಯವಶ್ಯಕವಾಗಿ ಬೇಕು. ಕಂಬಳಿಯನ್ನು ಕನ್ಯನೋಡುವುದರಿಂದ ಹಿಡಿದು ಮದುವೆ ಮಾತುಕತೆ, ನಿಶ್ಚಿತಾರ್ಥ, ಜವಳಿ ಪೂಜೆಗೆ, ಲಗ್ನದಕ್ಕಿ ಕೊಡುವುದು, ಮದುಮಕ್ಕಳನ್ನು ಮಾಡುವುದು, ಬೀಗರನ್ನು ಎದುರುಗೊಂಬುವುದು, ಐರಾಣಿ ತರುವುದು, ಕನ್ಯಾದಾನ, ಮಾಂಗಲ್ಯ ಧಾರಣ, ಭೂಮ, ಸೀಮಂತ ಕಾರ್ಯ, ನಾಮಕರಣ, ಕೂದಲು (ಜವಳ) ತೆಗೆಸುವುದು, ಮದುವೆಯಾದ ಹೆಣ್ಣಿಗೆ ಉಡಿಯಕ್ಕಿ ಹಾಕಲು ಪ್ರಸ್ತುತದಲ್ಲಿ ಕಂಬಳಿಯನ್ನು ಕುರುಬರು ಬಳಸುತ್ತಾ ಬಂದಿದ್ದಾರೆ. ಇವರು ಎಷ್ಟೇ ನಾಗರಿಕರಾದರೂ ಕಂಬಳಿಯ ಬಳಕೆಯನ್ನು ಮರೆತಿಲ್ಲ. ಇದರ ಉಪಯೋಗದಿಂದ ಕಂಬಂಳಿಯು ಕುರುಬರ ಜೀವನದಲ್ಲಿ ಎಷ್ಟು ಮಹತ್ವಹೊಂದಿದೆಂದು ಸಾಬೀತು ಪಡಿಸುತ್ತದೆ.

### vi. ಹಾಲಗಂಬ ಮತ್ತು ಐರಾಣಿ

"ಕನ್ನಡ ನೆಲದಲ್ಲಿ ಮೂಲ ಸಂಸ್ಕೃತಿಯ ಮೇಲೆ ಸವಾರಿ ಮಾಡಿದ ಪ್ರತಿಷ್ಠಿತ ಸಂಸ್ಕೃತಿಗಳ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದುಕಿನಲ್ಲಿಯೂ ಸಹ ಈ ಆಚರಣೆಗಳು ಅಷ್ಟಿಷ್ಟು ಅಸ್ತಿತ್ವದಲ್ಲಿ ಉಳಿದುಕೊಂಡು ಬಂದಿರುತ್ತವೆ. ಉದಾಹರಣೆಗೆ ಮದುವೆಯಂಥ ಸಾಮಾಜಿಕ ಸಂದರ್ಭದಲ್ಲಿ ಮನೆದೇವರ ಪೂಜೆಗೆ ಸಂಬಂಧಿಸಿದಂತೆ ವೈದಿಕರಲ್ಲಿಯೂ ಸಹ ಹಲಸು, ಆಲ, ಅತ್ತಿ ಮೊದಲಾದ ಮರದ ಕೊನೆಗಳನ್ನು ಕಂದು ಸೀರೆ, ಕುಪ್ಪಸ ತೊಡಿಸಿ, ಒಡವೆ ಹಾಕಿ ಅಲಂಕರಿಸಿ ಮನೆ ದೇವರ ಪೂಜೆ ಮಾಡುವ ಸಂಪ್ರದಾಯವಿದೆ. ಮಾದಿಗರ ಮನೆಯಲ್ಲಿ ಚಪ್ಪಲಿ ಹೊಲೆಯಲು ಬಳಸುವ ಕರಿಯ ಬಾನಿಯ ನೀರನ್ನು ಪವಿತ್ರ ನೀರನ್ನಾಗಿ ಬಳಸುವುದು ಇತ್ಯಾದಿಗಳು ಕಂಡುಬರುತ್ತವೆ."[೧೬] ಹಾಲುಮತದ ಸಮುದಾಯವು ಕೂಡ ಮದುವೆ ಒಂದು ದಿನ ಮುಂಚೆಯೇ ಹಂದರವನ್ನು ಹಾಕಲು ತೆಂಗಿನ ಗರಿ, ಹೊಂಗೆ ಟೊಂಗೆಗಳ ಎಲೆಯನ್ನು, ಜೊತೆಗೆ ಪವಿತ್ರವೆಂದು ಭಾವಿಸುವ 'ಹಾಲಗಂಬ'ವನ್ನು ತರುತ್ತಾರೆ. ಇದಕ್ಕೆ 'ಹೋಳಿಗಿ ಮರ'ವೆಂದು ಕರೆಯುತ್ತಾರೆ. ಈ ಹಾಲಗಂಬವನ್ನು ಮಡಿಯಿಂದ ಸಹೋದರ ಮಾವನು ತಂದು ಊರಿನ ಆಂಜನೇಯನ ದೇವಸ್ಥಾನದಲ್ಲಿ ಇಟ್ಟಿರುತ್ತಾನೆ. ತದನಂತರ ಅವುಗಳನ್ನು ತಂದವರಿಗೆ ಗೌರವದಿಂದ

ಬಟ್ಟೆಯನ್ನು ಉಡುಗೊರೆ ಕೊಡುತ್ತಾರೆ. ಈ ರೀತಿಯಾಗಿ ತಂದ 'ಹಾಲಗಂಬ'ವನ್ನು ಹುತ್ತಿನ ಮಣ್ಣಿನಲ್ಲಿ ನವಧ್ಯಾನಗಳನ್ನು ಮಿಶ್ರಮಾಡಿ ನೀರು ಹಾಕಿ ಕಲಸಿ ಚಿಕ್ಕದಾದ ಮಣ್ಣಿನ ರಾಶಿಮಾಡುತ್ತಾರೆ. ಅದರಲ್ಲಿ ಈ ಹಾಲಗಂಬವನ್ನು ನೆಡುತ್ತಾರೆ. ಮಣ್ಣಿನಲ್ಲಿ ನೀರಿನಾಂಶವನ್ನು ಯಥೇಚ್ಛವಾಗಿ ಹೊಂದಿರುವುದರಿಂದ ಮಿಶ್ರಣಮಾಡಿದ ನವಧಾನ್ಯಗಳು ಮೂರು ದಿನಗಳಲ್ಲಿ ಮೊಳಕೆಯೊಡೆಯುತ್ತವೆ. ಈ ಮೊಳಕೆಯ ಸಮೃದ್ಧಿಯ ಮೂಲಕ ಹೆಣ್ಣಿನ ಸ್ವಭಾವವನ್ನು, ಆಕೆಯ ಸಂತಾನ ಫಲವನ್ನು ತಿಳಿಯುತ್ತಾರೆ. ಹೀಗೆ ಕುರುಬ ಜನಾಂಗದಲ್ಲಿ ಕೌಟುಂಬಿಕ ಬದುಕು ಸಾಂಸ್ಕೃತಿಕ ಘಟಕವಾಗಿ ಮೂಡಿಬರುತ್ತದೆ.

ಐರಾಣಿ ತುರುವುದು ಕುರುಬರಲ್ಲಿ ಪ್ರಮುಖವಾದ ಕಾರ್ಯ ಕುಂಬಾರರಿಗೆ ಐರಾಣಿ ಮಾಡಲು ಎರಡುವರೆ ಸೇರು ಜೋಳವನ್ನು ಕೊಡುತ್ತಾರೆ. ಇಲ್ಲಿ ಜೋಳವೇ ಆಗಬೇಕು ಬೇರೆ ಧಾನ್ಯಗಳನ್ನು ಕೊಡುವುದಿಲ್ಲ. ಜೊತೆಗೆ ಮಾಡುವ ವೆಚ್ಚಕ್ಕೆ ಇಂತಿಷ್ಟು ದುಡ್ಡು ಎಂದು ಮಾತಾಡಿಕೊಂಡು ಕೊಡುವರು. ಕುಂಬಾರರು ಒಂದು ಮಣ್ಣಿನ ಮಡಿಕೆಯನ್ನು, ಒಂದು ಮಣ್ಣಿನ ಕೊಡ, ನಾಲ್ಕು ಮಗಿ, ಎಂಟು ಮುಚ್ಚಳಗಳನ್ನು ತಯಾರಿಸಿ ಸುಣ್ಣವನ್ನು ಹೆಚ್ಚುತ್ತಾರೆ. ಮದುವೆ ಮನೆಯವರಲ್ಲಿ ಸ್ವಂತ ಅಣ್ಣ ಅತ್ತಿಗೆ, ಚಿಕ್ಕಪ್ಪ, ಚಿಕ್ಕಮ್ಮ ಹೀಗೆ ಅಪ್ಪನ ಸಂಬಂಧದವರು ಈ ಐರಾಣಿಯನ್ನು ಹೊರಲು ಅರ್ಹತೆಯನ್ನು ಪಡೆದಿರುತ್ತಾರೆ. ಇದನ್ನು ಕುಂಬಾರ ಮನೆಯಿಂದ ಮದುವೆ ಮನೆಗೆ ತರುವಾಗ ಮೈಲಿಗೆಯೂ ಆಗದಂತೆ ಹೊತ್ತು ತರುವವರು. ತಂದು ಮನೆಯಲ್ಲಿ ಅದರ ಮೇಲೆ ದೀಪವನ್ನು ಉರಿಸುತ್ತಾರೆ. ಈ ದೀಪವು ಮಾಂಗಲ್ಯದ ಮುಹೂರ್ತ ಆಗುವವರೆಗೂ ನಿಧಾನವಾಗಿ ಹುರಿಯುವಂತೆ ನೋಡಿಕೊಳ್ಳುತ್ತಾರೆ. ಹೀಗೆ ಕುರುಬರು ಆಚರಿಸುವ ಪ್ರತಿಯೊಂದು ಆಚರಣೆಯಲ್ಲಿ ಅನ್ಯ ಸಮುದಾಯದವರು ಭಾಗವಹಿಸುವುದು ವಿಶೇಷವಾಗಿ ಕಂಡುಬರುತ್ತದೆ.

### vii. ಬಳೆ ಶಾಸ್ತ್ರ

ಹೆಣ್ಣಿನ ಮದುವೆಯಲ್ಲಿ ಮೊದಲು ನಡೆಯುವುದೇ ಬಳೆಶಾಸ್ತ್ರ. ಊರಿನ ಎಲ್ಲಾ ಮುತ್ತೈದೆಯರನ್ನು ಕರೆಯಿಸಿ ಬಳೆಯನ್ನು ತೊಡಿಸುತ್ತಾರೆ. ಇಲ್ಲಿ ಜಾತಿಯ ತಾರತಮ್ಯವನ್ನು ಮಾಡುವುದಿಲ್ಲ. ತಮ್ಮ ಮನೆಯವರಂತೆ ಅನ್ಯ ಜನಾಂಗದವರ ಹೆಣ್ಣುಗಳಿಗೂ ಬಳೆಯನ್ನು ತೊಡಿಸುವರು. ಆ ನಂತರ ಮದುವೆಯಾಗುವ ಕನ್ನೆಗೆ ಹಸಿರು ಬಳೆಯನ್ನು ಪೂಜೆಮಾಡಿ ತೊಡಿಸುವರು. ಆಗ ಬಳೆಗಾರನಿಗೆ ಮೊರದಲ್ಲಿ ಅಕ್ಕಿ, ಬೇಳೆ, ಬೆಲ್ಲ, ದವಸ ಧಾನ್ಯ ಬಟ್ಟೆಯನ್ನು ಇಟ್ಟು ಹಣವನ್ನು ಕೊಡುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬಳೆಗಾರನ ಬಳೆಯನ್ನು ಕಂಬಳಿಯ ಮೇಲೆ ಇರಿಸುವುದು. ಹಾಲುಮತದವರು ಕಂಬಳಿ ಬಿಟ್ಟು ಮುಂದೆ ಕೆಲಸವನ್ನು ಮಾಡುವುದಿಲ್ಲ ಎಂಬುವುದಕ್ಕೆ ಇದು ನಿದರ್ಶನವಾಗಿದೆ. ಕರಿಯ ಕಂಬಳಿಯು ದೃಷ್ಟಿ (ಆಸರು)ಯಾಗುವುದನ್ನು ತಡೆಮಾಡುತ್ತದೆಂದು ನಂಬಿದ್ದರಿಂದ ಈ ರೀತಿಯ ಆಚರಣೆಯು ರೂಢಿಗತವಾಗಿದೆ. ಈ ಕಾರ್ಯದ ನಂತರ ಮದುಮಕ್ಕಳಿಗೆ ಅರಿಶಿನವನ್ನು ಹಚ್ಚುತ್ತಾರೆ. ಈ ಅರಿಶಿನವು ದೇಹದ ಕಲ್ಮಶತೆಯನ್ನು ಕಳೆಯುವುದರ ಜೊತೆಗೆ ಭಂಡಾರ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ. ಅರಿಶಿನದ ಆಟವೆಂದೂ ಮದುವೆಗೆ ಬಂದ ನೆಂಟರಿಷ್ಟರು ಸಂತೋಷದಿಂದ ಕುಣಿದು ಕುಪ್ಪಳಿಸಿ ಹಚ್ಚಿಕೊಂಡು ಮೆರೆಯುವರು. ಈ

ಸಂಪ್ರದಾಯವು ದೂರದ ಅನೇಕ ಮನಸ್ಸುಗಳನ್ನು ಸಂಯೋಜಿಸುವ, ವೈಷಮ್ಯವನ್ನು ದೂರಮಾಡುವ ಸಾಮರ್ಥ್ಯವನ್ನು ಪಡೆದಿದೆ. ಹೀಗೆ ಹಾಲುಮತದಲ್ಲಿನ ಆಚರಣೆ ಸಂಪ್ರದಾಯಗಳು ಸಾರ್ವತ್ರಿಕ ಸಂತೋಷವನ್ನು ಹೊಂದಿವೆ. ಸ್ವಾರ್ಥಕತೆ ಇಲ್ಲಿ ಎಲ್ಲಿಯೂ ಕಾಣುವುದಿಲ್ಲ.

ಬಳೆಶಾಸ್ತ್ರವೂ ಹೆಣ್ಣಿನ ಜೀವನದಲ್ಲಿ ಎರಡು ಭಾರಿ ಬರುತ್ತದೆ. ಒಂದು ಕನ್ಯೆಯನ್ನು ಮದುವೆ ಹೆಣ್ಣಾಗಿಸುವುದು. ಮತ್ತೊಂದು ಹೆಣ್ಣು ಗಂರ್ಭಿಣಿಯಾಗಿರುವುದನ್ನು ತಿಳಿಸಪಡಿಸುವುದು. ಈ ಎರಡು ಬಳೆಶಾಸ್ತ್ರಗಳನ್ನು ಹಾಲುಮತದವರು ಮಹತ್ವ ಪೂರ್ಣವಾಗಿ ಆಚರಿಸುತ್ತಾರೆ. ಈ ಎರಡು ಕಾರ್ಯಗಳಿಗೂ ಬಳೆಗಾರ ಮತ್ತು ಕಂಬಳಿಯು ಪ್ರಮುಖವಾಗಿರುವುದು ಕಂಡುಬರುತ್ತದೆ. ಮೊದಲಿನ ಹಂತ ಈಗಾಗಲೇ ಇರುವ ಅಪರಿಚಿತ ವ್ಯಕ್ತಿಯನ್ನು ಒಪ್ಪಿಕೊಂಡಿರುವುದನ್ನು ಸೂಚಿಸಿದರೆ. ಎರಡನೆಯ ಹಂತದ ಶಾಸ್ತ್ರವು ಹೊಸ ವ್ಯಕ್ತಿಯನ್ನು ಸ್ವಗತಿಸುವುದನ್ನು ಸೂಚಿಸುತ್ತದೆ. ಹೀಗೆ ಬಳೆ ಶಾಸ್ತ್ರವು ಮದುವೆ ಹೆಣ್ಣು, ಗರ್ಭಿಣಿ ಹೆಣ್ಣು ಹೊಸ ಜೀವನಕ್ಕೆ ಹೋಗುವುದನ್ನು ತಿಳಿಸಿಕೊಡುತ್ತದೆ.

### viii. ಬಯ್ಕಿ ಬುತ್ತಿ ಮತ್ತು ಸೀಮಂತ ಕಾರ್ಯ

ಸೀಮಂತ ಕಾರ್ಯವು ದುರಂತದಿಂದ ಹುಟ್ಟಿಕೊಂಡ ಸುಖಾಂತ, ಸಡಗರದ ಆಚರಣೆಯೆಂದರೂ ತಪ್ಪಗಲಾರದು. ಕಾಳಿನಾರಾಯಣನಿಗೆ ತಂಗಿ ಸೂರಮ್ಮದೇವಿ ಐದು ತಿಂಗಳ ಬಸುರಿಯೆಂದು ಬಳೆಗಾರ ಬಾಬಣ್ಣ ತಿಳಿಸುತ್ತಾನೆ.

''ಐದು ತಿಂಗಳಾದವ ಚೊಚ್ಚಲ ಬಸರೇಳಂದಾಳ
ಚೊಚ್ಚಲ ಬಸರೇಳಂದಾಳ ತೌರಮನಿಯ ಮ್ಯಾಲೇನ
ತೌರುಮನೀಯ ಮ್ಯಾಲೆನೆ ಬಹಳೊಂದು ಖ್ಯಾಲ ಮಾಡೇನ
ಬಾನಾ ಬುತ್ತಿ ಬೇಡೇನ ಮಸರ ಬಾನದ ಬುತ್ತೇನ
ಮಸರ ಬಾನಾದ ಬುತ್ತೇನ ಬೇಡಿ ಬಗಸೇನಂದಾಳ
ಜಾಳಿಗಿ ದಂಡಿ ಬೇಡ್ಯಾಳ ಕಾಲಿಗ ಕತ್ತರಿ ಬೇಡ್ಯಾಳ
ನೆನೆಯಾ ದಂಡಿ ಬೇಡ್ಯಾಳ ಉತ್ತತ್ತಿ ಉರಿಗೊಬ್ಬರಿ
ಹಣೆಯಲಿ ಕುಂಕುಮ ಹೇಳ್ಯಾಳ ಹಲ್ಲಿಗಿ ಚಾಚೇಲ ಬೇಡ್ಯಾಳ
ಹುರದ ಹೂರಣಗಡಬೇನ ಕರದ ಕರಚಿಕಾಯೇನ
ಎಣ್ಣಿ ಹಂಚ್ಚದ ಹೋಳಿಗೆ ಎಳ್ಳ ಹಚ್ಚದ ರೊಟ್ಟೇನ''[೧೭]

ಹೀಗೆ ಸೂರಮ್ಮದೇವಿಯು ಸೀಮಂತ ಕಾರ್ಯ ಮತ್ತು ಬಯ್ಕಿ ಬುತ್ತಿಯನ್ನು ಬೇಡಿ ತವರಿಗೆ ಹೇಳಿ ಕಳಿಸುವಳು. ಇಲ್ಲಿ ಸಹೋದರಿ ಎಂಬುದನ್ನು ಮರೆತು ಕುತಂತ್ರವನ್ನು ಕಾಳಿನಾರಾಯಣನು ಆಲೋಚಿಸುತ್ತಾನೆ. ತಂಗಿಯ ಹೊಟ್ಟೆಯಲ್ಲಿ ಹೆಣ್ಣು ಮತ್ತು ಗಂಡು ಹುಟ್ಟುಬಾರದೆಂದು, ಆಕೆ ಬಂಜೆಯಾಗಬೇಕೆಂದು ತನ್ನ ಸೇವಕರ ಜೊತೆಗೂಡಿ ದುಷ್ಟಾಲೋಚನೆ ಮಾಡುವನು. ಕಳ್ಳಿಯ ಹಾಲಿನಿಂದ ಮೊಸರನ್ನು, ನಾಗರ ಹಾವನ್ನು ತಂದು ಹೀರೆಕಾಯಿ ಪಲ್ಯೆ ಮಾಡುವನು, ಹಸುರ ಹಾವಿನಿಂದ ಚೌಳಿಕಾಯಿ, ಮುಗಿದ ಹಾವಿನಿಂದ ಬೆಂಡಿಕಾಯಿ, ಹೆಬ್ಬಾವಿನಿಂದ ಕುಂಬಳಕಾಯಿಯನ್ನು

ಮಾಡಿ ವಿಷದ ಬುತ್ತಿಯನ್ನು ಮಾಡುವನು. ಬಸುರಿಯ ಜೀವದ ಬಯಕೆಯನ್ನು ಈ ರೀತಿಯಾಗಿ ನೆರವೇರಿಸಲು ತೊಡಗುವನು ಮತ್ತು ಸೀಮಂತ ಕಾರ್ಯಕ್ಕೆ ಬೇಕಾದ ಹಸಿರು ಸೀರೆ, ಕುಪ್ಪಸವನ್ನು ಸಾಳ್ಯಾರು (ನೇಕಾರ)ರ ಮನೆಗೆ ಹೋಗಿ ಉಟ್ಟರೆ ಮೈ ಸುಡುವ, ಜೀವ ಹೋಗುವ ಸೀರೆ ನೇಯಲು ಹೇಳುತ್ತಾನೆ. ನೇಕಾರರು ದುಡ್ಡಿನ ಆಸೆಗೆ ಅದೇ ರೀತಿ ನೇಯ್ದುಕೊಡುವರು. ನಂತರ ಸಿಂಪಿಗೇರರ ಮನೆಗೆ ಹೋಗಿ ಹಸಿರು ವಿಷದ ಕುಬಸವನ್ನು ಬೇಡಿತರುತ್ತಾನೆ. ಜೀರರ ಮನೆಯಿಂದ ವಿಷದ ಹೂವಿನ ದಂಡಿಯನ್ನು, ಕುಂಕುಮದಲ್ಲಿ ವಿಷ ಬೆರಸುವನು, ಹಲ್ಲಿಗೆ ಹಚ್ಚಿದರೆ ಕಂದ ಸಾಯುವಂತಿರುವ ಜಾಜೇಲಿಯನ್ನು ಉತ್ತತ್ತಿ, ಒಣಕೊಬ್ಬರಿ, ಉಡಿಯಕ್ಕಿಯನ್ನು ತಂಗಿಯ ಮನೆಗೆ ಕಳುಹಿಸಿಕೊಡುವನು. ಆದರೆ ಇತ್ತ ಗರ್ಭದಲ್ಲಿರುವ ವರಶಿಶುವು ಭವಿಷ್ಯವನ್ನು ಅರಿತುಕೊಂಡು ತಾಯಿಗೆ ಕಾಳಿನಾರಾಯಣ ಕೊಟ್ಟ ಪ್ರತಿಯೊಂದು ಆಹಾರ, ಬಟ್ಟೆಯನ್ನು ಮತ್ತೊಂದು ಪ್ರಾಣಿಗೆ ಹಾಕಿ ಸ್ವೀಕರಿಸಲು ಹೇಳುತ್ತದೆ. ಅಂತಯೇ ಸೂರಮ್ಮ ದೇವಿಯು ಕಾರ್ಯಪ್ರವೃತ್ತಳಾಗಿ ತನ್ನ ಮತ್ತು ಮಗುವಿನ ಪ್ರಾಣವನ್ನು ಉಳಿಸಿ ಕೊಳ್ಳವಳು. ಈ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡ ಸೀಮಂತಕಾರ್ಯ ಮತ್ತು ಬಯ್ಕಿ ಬುತ್ತಿಯ ಪದ್ಧತಿ ಇಂದು ಸಂಪೂರ್ಣ ಪರಿವರ್ತನೆ ಹೊಂದಿದೆ. ಹಾಲುಮತದವರು ಕಷ್ಟ ಸನ್ನಿವೇಶಗಳನ್ನು ಸುಖಾಂತವಾಗಿ ಮಾಡಿಕೊಂಡರು. ಪೂರ್ವದಲ್ಲಿದ್ದ ಉದ್ದೇಶವನ್ನು ನಂಬಿಕೆಯಲ್ಲಿ ಉಳಿಸಿಕೊಂಡಿದ್ದಾರೆ. ಈಗಲೂ ಹಾಲುಮತದವರಲ್ಲಿ ಗರ್ಭಿಣಿ ಸ್ತ್ರೀಯನ್ನು ಅಣ್ಣ ಅಥವಾ ತಮ್ಮಂದಿರ ಜೊತೆಯಲ್ಲಿ ಗಂಡನಮನೆಯಿಂದ ತವರು ಮನೆಗೆ ಕರೆತರುವುದನ್ನು ನಿಷೇಧಿಸಿದ್ದಾರೆ. ಅದಕ್ಕೆ ಈ ಕಾರಣವೇ ಮುಖ್ಯವಾಗಿರಬಹುದು. ಏಕೆಂದರೆ ಗರ್ಭಿಣಿಯಾದ ಅಕ್ಕ ತಂಗಿಯರನ್ನು ಅಣ್ಣ ತಮ್ಮರು ತವರಿಗೆ ಕರೆ ತಂದರೆ ಹೆರಿಗೆಯು ಸುಸೂತ್ರವಾಗಿ ನೆರವೇರುವುದಿಲ್ಲವೆಂದು ನಂಬಿದ್ದಾರೆ. ಪ್ರಸ್ತುತದಲ್ಲಿ ಹಾಲುಮತದವರು ನಂಬಿರುವುದಕ್ಕೂ ಪುರಾಣಗಳು ಹೇಳುವ ಕಥೆಗೂ ಪರಸ್ಪರ ಸಂಬಂಧವಿರುವುದನ್ನು ತಿಳಿದು ಬರುತ್ತದೆ. ಒಬ್ಬ ವ್ಯಕ್ತಿಯನ್ನು ಕೊಲ್ಲಲ್ಲು ಸೃಷ್ಟಿಯಾದ ತಂತ್ರವು ಪೀಳಿಗೆಯಿಂದ ಪೀಳಿಗೆಗೆ ಜಾರಿ ಬರುವಾಗ ಸಾಂಸ್ಕೃತಿಕ ಮಹತ್ವವನ್ನು ಪಡೆದಿರುವುದು ಕಂಡುಬರುತ್ತದೆ. ಮೂಲ ಉದ್ದೇಶ ಕೆಟ್ಟದಾಗಿದ್ದರೂ ಅದನ್ನು ಒಳ್ಳೆಯ ರೀತಿಯಲ್ಲಿ ಬದಲಾಯಿಸಿಕೊಂಡು ಇಂದಿಗೂ ಸಂತೋಷದಾಯಕವಾಗಿ ಆಚರಿಸುವ ಸಂಪ್ರದಾಯವಾಗಿಸಿಕೊಳ್ಳುವ ಬುದ್ಧಿ ಚಾತುರ್ಯವು ಹಾಲುಮತದೇವರ ಸಾಂಸ್ಕೃತಿಕ ಅನನ್ಯತೆಯನ್ನು ಹೇಳುತ್ತದೆ. ಅಣ್ಣನು ಎಂದೋ ಮಾಡಿದ ತಪ್ಪು ಇಂದೂ ಅಕ್ಕ ತಂಗಿಯರ ಸೌಖ್ಯದ ಸಂಭ್ರಮವಾಗಿ ಮೂಡಿಬಂದಿದೆ. ಈ ಹಿನ್ನೆಲೆಯಲ್ಲಿಯೇ 'ಕರಳೊತ್ತು ಬಂದವನು ಮಾನಿಗೆ ಕುತ್ತು ತರುವನು' ಎಂಬ ಗಾದೆಯು ಸೃಷ್ಟಿಯಾಗಿರಬಹುದು. ಮಗು ಜನಿಸುವಾಗ ಕರಳುಗಳನ್ನು ಕೊರಳಿಗೆ ಸುತ್ತಿಕೊಂಡು ಬಂದರೆ ಸೋದರ ಮಾವನಿಗೆ ಪ್ರಾಣಕ್ಕೆ ತೊಂದರೆಯಾಗುತ್ತದೆಂದು ಹಾಲುಮತದವರು ನಂಬಿದ್ದಾರೆ. ಅದನ್ನು ಪರಿಹರಿಸಲು ಒಂದು ತಿಂಗಳು ತುಂಬುವದರೊಳಗೆ ಸಹೋದರ ಮಾವನು ಬೆಳ್ಳಿ ಬಟ್ಟಲಲ್ಲಿ ಎಳ್ಳೆಣ್ಣೆಯಲ್ಲಿ ಮಗುವಿನ ಮುಖ ನೋಡಬೇಕೆಂಬ ಆಚರಣೆಯು ಇಂದಿಗೂ ನಡೆದುಕೊಂಡು ಬಂದಿದೆ. ಹೀಗೆ ಜನಪದರು ಆಚರಿಸುವ ಸಂಪ್ರದಾಯಗಳನ್ನು ಕೆದಕುತ್ತಾ ಹೋದರೆ ವಿಶಿಷ್ಟವಾದ ಅಂಶಗಳನ್ನು

ದಾಖಲಿಸಬಹುದು. ಮತ್ತು ಗರ್ಭಿಣಿ ಸ್ತ್ರೀಯರು ಊಟಕ್ಕೆ ಕುಳಿತುಕೊಂಡಾಗ ಮೊದಲ ತುತ್ತನ್ನು ನಾಯಿಗೆ ಹಾಕಿ ತಿನ್ನಬೇಕೆಂಬ ರೂಢಿಯು ಕಂಡುಬರುವುದು. ಇದು ಸೂರಮ್ಮದೇವಿಗೆ ಗರ್ಭದಲ್ಲಿನ ಶಿಶುವು ಆಹಾರವನ್ನು ಪ್ರಯೋಗಿಸಲು ಹೇಳಿದ ಮಾತಾಗಿದೆ.

''ಮೊದಲಿನ ತುತ್ತ ತಾಯವ್ವ ನಾಯಿಗ ಹಾಕಲಿಬೇಕವ್ವ
ಹಿಂದಿನ ತುತ್ತಾ ತಾಯವ್ವ ಬೆಕ್ಕಿಗೆ ಹಾಕಲಿಬೇಕವ್ವ''[೧೮]

ಇಲ್ಲಿ ತಂತ್ರ ಕುತಂತ್ರವನ್ನು ನಂಬಿಕೆಯಾಗಿ ಅಭಿವ್ಯಕ್ತಪಡಿಸಿದ್ದಾರೆ. ಈಗಲೂ ಗರ್ಭಿಣಿ ಸ್ತ್ರೀಯರು ಹೆರಿಗೆ ಆಗುವವರೆಗೂ (ಸೀಮಂತ ಕಾರ್ಯದ ನಂತರ) ಯಾವುದೇ ಹೊಸ ಬಟ್ಟೆಯನ್ನು ಧರಿಸುವುದಿಲ್ಲ. ಒಂದು ವೇಳೆ ಧರಿಸಲು ಆಸೆಯಾದರೆ ಆ ಬಟ್ಟೆಗಳನ್ನು ಒಂದು ದಿನದ ರಾತ್ರಿ 'ನಾಗಭೋದಿಗೆ'ಗೆ ಹಾಕಿ ನಿದ್ರೈದ ನಂತರ ಬಟ್ಟೆಗಳನ್ನು ತೊಡುವರು. ಈ ಎಲ್ಲ ನಂಬಿಕೆಗಳು ಪುರಾಣದಲ್ಲಿ ಬರುವ ಶಿಶುವಿನ ಭವಿಷ್ಯದ ನುಡಿಗಳಂತೆ ಕಂಡುಬರುತ್ತವೆ.

ಹಾಲುಮತ ಪುರಾಣಗಳ ರಚನೆಯ ಕಾಲವು ೧೨ನೇ ಶತಮಾನದಿಂದ ೧೮ನೇ ಶತಮಾನದ ಅವಧಿಯಾಗಿದೆ. ಆದರೂ ಪುರಾಣಕಾರರು ಹಾಲುಮತದವರ ಎಷ್ಟೋ ವಿಷಯಗಳನ್ನು, ಆಶೋತ್ತರಗಳನ್ನು ಹೇಳದೆ ಹೋಗಿದ್ದಾರೆ.

### ix. ಲಕ್ಷ್ಮಿ ಪೂಜೆ

ಕುರುಬರು ಲಕ್ಷ್ಮಿಪೂಜೆಯನ್ನು ಎರಡು ರೀತಿಯಲ್ಲಿ ಮಾಡುತ್ತಾರೆ. ಮೊದಲನೆಯದಾಗಿ ಲಕ್ಷ್ಮಿ ಪೂಜೆಯು ದೀಪಾವಳಿ ಹಬ್ಬಕ್ಕೆ ಸಂಬಂಧಿಸಿದ್ದು. ಮತ್ತೊಂದು ಮದುವೆಯ ಕಾರ್ಯಕ್ಕೆ ಮುಂಚೆಯೇ ಕೆಲ ಹಾಲುಮತದವರು ಲಕ್ಷ್ಮಿಪೂಜೆಯನ್ನು ಕೈಗೊಳ್ಳುವರು. ಈ ಆಚರಣೆಯು ಸೋಮರಾಯ ಮತ್ತು ತುಕ್ಕಪ್ಪರಾಯರ ಕಾಲದಿಂದ ಬಂದಿರಬಹುದು. ತುಕ್ಕಪ್ಪರಾಯ ಗೌಡಿಕೆಯನ್ನು ಪಡೆದಿದ್ದರೆ. ಸೋಮರಾಯ ಸೋನಾರ ಸಿದ್ಧರ ಅಪ್ಪಣೆಯಂತೆ ಧನಗಳನ್ನು, ಕುರಿಗಳನ್ನು ಕಾಯುತ್ತಿರುತ್ತಾನೆ. ಆದರೆ ಒಂದು ದಿವಸ ಸೋಮರಾಯನು ದನಗಳನ್ನು ಕಾಯುತ್ತಿರುವಾಗ ಗೌಳಿಗರು ದನಗಳನ್ನು ಒಡೆದುಕೊಂಡು ಈತನಲ್ಲಿಗೆ ಬರುತ್ತಾರೆ. ಜೊತೆಗೆ ತಮ್ಮ ದನಕರು ಮೇಯಿಸಲು ಜಾಗವನ್ನು ಕೇಳುತ್ತಾರೆ. ಸೋಮರಾಯನು ೧೨ ಚೌವರ ಕಂಟಿ ಕರುಣಬಿಟ್ಟು ನೀವು ವಾಸಿಸಿರಿಯೆಂದು ಹೇಳುವನು. ಹೀಗಿರುವಾಗ ಗೌಳಿಗರ ದನ, ಕರುಗಳಿಗೆ ರೋಗಗಳು ಕಾಡುತ್ತವೆ. ಅದಕ್ಕಾಗಿ ಇವರು ಕುಲದೇವತೆಯನ್ನು ೨-೩ ವರುಷವಾದರೂ ಪೂಜಿಸಿಲ್ಲ. ಆದ್ದರಿಂದ ಈ ಕಾಟವೆಂದು ತಿಳಿದು ದೇವಿಗೆ ಬಲಿಕೊಡಲು ಸಿದ್ಧರಾಗುವರು. ''ಕರಿಸೀರೆ, ಜಾಳಗಿ ದಂಡಿ, ಉತ್ತತ್ತಿ, ಉದರಗೊಬ್ಬರಿ, ಉಡಿಯಕ್ಕಿ ಸೇರಿಸುವರು. ದೇವಿ ಕಾರ್ಯಕಾಗಿ ಪ್ರತ್ಯೇಕ ಗುಡಿಸಲನ್ನು ನಿರ್ಮಿಸುವರು, ಅಲ್ಲಿ ಹಸಿ ಜಗಲಿ ಹಾಕಿ, ಸುಣ್ಣ, ಕೆಮ್ಮಣ್ಣು ಜೋರುಬಿಟ್ಟು, ಬಾಳೆಕಂಬ, ಕಬ್ಬಿನ ಹಂದರ, ತಳಿರು ತೋರಣಗಳಿಂದ ಜಗಲಿ ಮೇಲೆ ಚೌಮೂಲಿ ರಂಗ ಹಾಕಿ, ಅದರಲ್ಲಿ ಒಂದು ನುಚ್ಚಿನ ಕುಂಬ ತಯಾರಿಸಿ ಅದರ ಮೇಲೆ ಪಣತಿಯನ್ನಿಟ್ಟು ಕುಂಭದ ಮೇಲೆ ನಂದಾದೀಪವಿಟ್ಟು ಬಾರಾಮತಿಯಿಂದ ತಂದು ಮಧ್ಯ ರೀತಿಯಲ್ಲಿ ಪೂಜೆ ಮಾಡಿ ಬಲಿಕೊಡಲು ಸಿದ್ಧರಾಗುವರು.''[೧೯] ಹೀಗಿರುವಾಗ ಸೋಮರಾಯ ಇರುವಲ್ಲಿಗೆ ಗೌಳಿಗರ ಎಮ್ಮೆಯು ಓಡಿಹೋಗುತ್ತದೆ. ನಿದ್ದೆಯಿಂದೆದ್ದು

ಸೋಮರಾಯನು ಆಶ್ಚರ್ಯದಿಂದ ಅವರ ಪೂಜೆಯನ್ನು ವೀಕ್ಷಿಸುವನು. ಅಲ್ಲದೆ ಆಸೆಯಿಂದ ಗೌಳಿಗರಲ್ಲಿ ಈತನು

"ಭೂಮಿಯೊಳ್ಕೆಂಗುರಿಯ ರೂಪದಾಳಲ್ಕೆ ಸು
ಪ್ರೇಮದಿಂ ಕೂತೆನ್ನ ವೀಳ್ಯತಾರೆಂದು ಪೇಳಿದನಾಗ ಗೌಳಿಗರ್ಗೆ"[೨೦]

ಆಗ ಗೌಳಿಗರು ಕುಲದೇವತೆಯ ಪೂಜೆಯ ನಾಲ್ಕರಲ್ಲೊಂದು ಭಾಗವನ್ನು ಸೋಮರಾಯನಿಗೆ ಕೊಡುವರು. ಪೂಜೆಯು ಸಂಪೂರ್ಣವಾಗದೆ ಭಗ್ನವಾದರಿಂದ ಕುಲದೇವತೆಯು ಸೋಮರಾಯನನ್ನು ಹಿಂಬಾಲಿಸುವಳು. ಹೀಗೆ ಹಿಂಬಾಲಿಸಿದ ಗೌಳಿಗರ ಕುಲದೇವತೆಯು ಸೋಮರಾಯನ ದನ ಕುರಿಗಳಿಗೆ ರೋಗರುಜಿನಗಳ ಮೂಲಕ ತೊಂದರೆ ಕೊಡುವಳು. ಈ ಸ್ಥಿತಿಯನ್ನು ತಿಳಿಯದ ಸೋಮರಾಯನು ಸೋನಾರ ಸಿದ್ದರಲ್ಲಿ ಬೇಡಿಕೊಳ್ಳುವನು. ಅದಕ್ಕೆ ಸೋನಾರ ಸಿದ್ಧರು ಸೋಮರಾಯನಿಗೆ ಗೌಳಿಗರು ಪೂಜಿಸಿದಂತೆ ನೀನು ಮಧ್ಯ ರಾತ್ರಿಯಲ್ಲಿ ಕುಲದೇವತೆಯನ್ನು ಪೂಜಿಸಿ, ಬಲಿಯನ್ನು ಕೊಡಬೇಕೆಂದು ಹೇಳುತ್ತಾನೆ. ಹಾಗೆಯೇ ಸೋಮರಾಯನು ಗೌಳಿಗರ ಕುಲದೇವತೆಯ ಪೂಜೆಗೆ ಅಣಿಮಾಡಿಕೊಳ್ಳುವನು. ತಾಮಟಿಗೇರ ಹೆಣ್ಣುಗಳ ಕಂದನನ್ನು ಬಲಿಯಾಗಿ ನೀಡುವನು. ಇದನ್ನು ಕಂಡ ಹಿರಿಯಜ್ಜಿಯು ಬಲಿಯ ವಿಚಾರವನ್ನು ಕಂದನ ತಾಯಿಗೆ ತಿಳಿಸುತ್ತಾಳೆ. ಊರಿನ ಜನರೆಲ್ಲಾ ಸೋಮರಾಯನ ಮನೆಗೆ ಆಗಮಿಸುವರು. ಆದರೆ ಸೋಮರಾಯನು ತನ್ನ ತಪ್ಪನ್ನು ಅರಿತುಕೊಂಡು ಸೋನಾರ ಸಿದ್ದರನ್ನು ಸ್ಮರಿಸುವನು. ಆಗ ಅವರು ಬಲಿಕೊಟ್ಟ ಕಂದನ ಮೇಲೆ ಹಾಕಲು ಹೇಳುವನು. ಆ ಭಸ್ಮದ ಮೂಲಕ ಕಂದನು ಬದುಕುವನು ಮತ್ತು ಸೋಮರಾಯನ ಮರ್ಯಾದೆಯು ಉಳಿಯುತ್ತದೆ. ಹೀಗೆ ದನ ಕರುಗಳನ್ನು ಕಾಪಾಡಲು ಆಚರಿಸುತ್ತಿದ್ದ ಪದ್ಧತಿಯು ಇಂದೂ ಮದುವೆಯ ಕಾರ್ಯವಾಗಿ ಪರಿವರ್ತನೆ ಯಾಗಿರುವುದು ಕಂಡುಬರುತ್ತದೆ. ಇಂದು ಬಲಿಯನ್ನು ಕೊಡುವುದಿಲ್ಲ. ಆದರೆ ಅತಿ ಕ್ಲೀಷ್ಟಕರವಾದ ನೀತಿ-ನಿಯಮವನ್ನು ಪರಿಪಾಲಿಸುತ್ತಾರೆ. ಮದುವೆಯಾಗುವ ಮನೆಯಲ್ಲಿ ಹೆಣ್ಣು ಮಕ್ಕಳನ್ನು ಹೊರತು ಪಡಿಸಿ ತಂದೆ-ತಾಯಿ, ಸೊಸೆಯಂದಿರು, ಗಂಡು ಮಕ್ಕಳು ಈ ಪೂಜೆಯಲ್ಲಿ ಭಾಗವಹಿಸುವರು. ರಾತ್ರಿ ಹೊತ್ತಿನಲ್ಲಿ ಲಕ್ಷ್ಮಿ ಪೂಜೆ ಮಾಡುತ್ತಾರೆ. ಯಾವ ಸದ್ದು-ಗದ್ದಲವನ್ನು ಮಾಡುವುದಿಲ್ಲ. ಸೋಮರಾಯನಿಂದ ಬಂದ ಈ ಕುಲದೇವತೆಯ ಪೂಜೆಯು ಇಂದೂ ಲಕ್ಷ್ಮಿ ಪೂಜೆಯಾಗಿ ಮಾರ್ಪಾಡಾಗಿರಬಹುದು. ಗೌಳಿಗರು ಹಾಲುಮತದ ಉಪಗುಂಪಾಗಿರಬಹುದು. ಇದರ ಮೂಲಕ ತಿಳಿದುಬರುವುದು.. ಇದನ್ನು ಕರ್ನಾಟಕದ ಕುರುಬರು ಪುಸ್ತಕದಲ್ಲಿ "ಕುರುಬರ ಉಪಗುಂಪಾದ ಕನ್ನಡ ಗೌಳಿಗರು ನರ್ಮದೆಯ ಉತ್ತರ ಭಾಗವಾದ ನಾಶಿಕ ಹಾಗೂ ಕುರುಕ್ಷೇತ್ರ ಪ್ರದೇಶದಲ್ಲಿ ನೆಲೆಸಿದರು."[೨೧] ಎಂದು ತಿಳಿಸಲಾಗುತ್ತದೆ. ಜೊತೆಗೆ ಜನಪದ ಹಾಲುಮತ ಮಹಾಕಾವ್ಯದಲ್ಲಿ ಪದ್ಮಗೊಂಡ ಮತ್ತು ಶಿವಲಿಂಗಮ್ಮರಿಗೆ ಜನಿಸಿದ ಮಗನೇ ಮಡ್ಡಪ್ಪ. ಈತನು ತಂದೆ ತಾಯಿರಿಂದ ೫ ವರ್ಷದ ಮಗುವಾಗಿರುವಾಗ ಕಾಡಿನಲ್ಲಿ ಕಂಬಳಿ ಸಮೇತ ಕಳೆದು ಹೋಗುವನು. ಮಡ್ಡಪ್ಪನು ಅಲೆಯುತ್ತಾ ಒಂದು ಮರದ ಮೇಲೆ ಕುಳಿತುಕೊಳ್ಳುವನು. ಆ ಮರದ ಕೆಳಗೆ ಒಂದು ಡೋಣಿಯಲ್ಲಿ ಆಕಳುಗಳು ಬಂದು ಹಾಲು ಕರೆದು ಕರುಗಳಿಗೆ

ಕುಡಿಸುತ್ತವೆ. ಇವುಗಳಿಗೆ ಯಾಜಮಾನರಾಗಿ ಯಾರು ಇರಲ್ಲ. ಹಾಗಾಗಿ ಮಡ್ಡಪ್ಪನನ್ನೇ ತಮ್ಮನ್ನು ಕಾಯಬೇಕೆಂದು ಆಕಳುಗಳು ಬೇಡಿಕೊಳ್ಳುತ್ತವೆ. ದಿನನಿತ್ಯ ಆಕಳುಗಳನ್ನು ಮೇಯಿಸಿಕೊಂಡು ಮರದ ಮೇಲೆ ಜೀವನ ನಡೆಸುತ್ತಾನೆ. ಅಲ್ಲಿಗೆ ಗಾಣಿಗೇರ ಮಲ್ಲಪ್ಪನೆಂಬ ಬಡನವನು ಬರುವನು. ಈತನಿಗೆ ಮಡ್ಡಪ್ಪನು ಆಕಳ ಹಾಲುಕೊಟ್ಟು ಜೀವವನ್ನು ಉಳಿಸುವನು. ಮಡ್ಡಪ್ಪನು ಕಾಡಿನಲ್ಲಿ ಆಕಳುಗಳನ್ನು ಹೊಂದುವುದರ ಮೂಲಕ ಗೌಳಿಗನಾಗಿರಬಹುದೆಂದು ಕಂಡುಬರುತ್ತದೆ. ಹಾಲುಮತದವರೇ ಬಿಡಿ ಬಿಡಿಯಾಗಿ ವಾಸಿಸುವ ಪ್ರವೃತ್ತಿಯನ್ನು ಹೊಂದಿದ್ದರು. ಅದಕ್ಕಾಗಿ ಅವರು ಪರಿಸರಕ್ಕೆ ತಕ್ಕಂತೆ, ವೃತ್ತಿಯನ್ನು ಅನುಸರಿಸಿ ವಿವಿಧ ರೀತಿಯ ಹೆಸರುಗಳನ್ನು ಪಡೆದಿರಲು ಸಾಧ್ಯವಿದೆ.

ಮಡ್ಡಪ್ಪನು ಮೂಲತಃ ಕುರುಬ ಕುಲದವನು. ಆಕಸ್ಮಿಕವಾಗಿ ಬೇರೆಯಾಗಿ ಆಕಳನ್ನು ಪಡೆಯುತ್ತಾನೆ. ಇಲ್ಲಿ ಗೌಳಿಗನಾಗಿ ಕುರುಬನಾಗಿ ಗೋಚರಿಸುತ್ತಾನೆ. ನಂತರ ಗಾಣಿಗೇರ ಮಲ್ಲಪ್ಪನ ಮಗಳನ್ನು ಮದುವೆಯಾಗುವನು. ಈ ಗಾಣಿಗರು ಮಡ್ಡಪ್ಪನಿಂದ ಪಡೆದ ಆಕಳಿನ ಹಾಲನ್ನು ಮಾರುತ್ತಾ ಶ್ರೀಮಂತರಾಗುತ್ತಾರೆ. ಇದರ ಪರೋಪಕಾರವಾಗಿ ಗಾಣಿಗರ ಮಲ್ಲಪ್ಪನ ಮಗಳು ಗಂಗಮ್ಮಳನ್ನು ಕೊಟ್ಟು ಮದುವೆ ಮಾಡುವನು. ಗಾಣಿಗೇರ ಮಲ್ಲಪ್ಪನು ಮದುವೆಗೆ ಬಟ್ಟೆ, ಕರಿಮಣಿ ತರುತ್ತಾನೆ. ಇದನ್ನು ಅರಿತ ಮಡ್ಡಪ್ಪನು ತನ್ನ ಹತ್ತಿರವಿದ್ದ ಮೂರು ಮೊಳದ ಕಂಬಳಿಯನ್ನು ಕೊಡುತ್ತಾನೆ.

''ಮೂರ ಮಳ ಕಂಬಳಿ ಹೆಗಲಿಗೆ ಇರಬೇಕೆಂದಾನ
ಮಾರ್ತ್ಯಲೋಕದೊಳಗೆನ ಗಾಣಿಗ ಹೋಗಲಿ ಬೇಕಯ್ಯ
ಗಾಣಿಗ ಹೋಗಲಿಬೇಕಪ್ಪ ಗೌಳಿಗಿ ಆಗಲಿಬೇಕಪ್ಪ''[೨೨]

ಜೊತೆಗೆ ಗೌಳಿಗರು ಹೇಗಿರಬೇಕೆಂದು ಸಹ ತಿಳಿಸುತ್ತಾನೆ. ಹತ್ತು ಎಮ್ಮೆಗಳನ್ನು ಕಟ್ಟಿದರೆ ಒಂದು ಆಕಳ ಕಟ್ಟಬೇಕು. ಎಮ್ಮೆ ಎಷ್ಟೆ ಕಟ್ಟಿದರು ಅದರೊಳಗೆ ಒಂದು ಆಕಳು ಇದ್ದೆ ಇರಬೇಕು. ಕಂಬಳಿಯು ಸದಾ ಹೆಗಲಲ್ಲಿ ಇರಬೇಕು. ಕೈಯಲ್ಲಿ ಕೋಲನ್ನು ಹಿಡಿದಿರಬೇಕು. ಹೀಗೆ ಮಡ್ಡಪ್ಪನು ಗಾಣಿಗೇರ ಮಲ್ಲಪ್ಪನನ್ನು ಗೌಳಿಗನನ್ನಾಗಿ ಪರಿವರ್ತಿಸುವುದು ಕಂಡುಬರುತ್ತದೆ. ಮಡ್ಡಪ್ಪ ಮತ್ತು ಗಂಗಮ್ಮರ ಮಗನಾಗಿ ಅಡಿವೆಪ್ಪ ಜನಿಸುತ್ತಾನೆ. ಇಲ್ಲಿ ಕುರುಬರಿಗೂ ಗೌಳಿಗರಿಗೂ ಇರುವ ಅವಿನಾಭಾವ ಸಂಬಂಧವನ್ನು ತಿಳಿಯಲು ಕುರುಬರು ಆಚರಿಸುವ ಲಕ್ಷ್ಮಿ ಪೂಜೆಯೇ ಸಾಕ್ಷಿಯಾಗಿ ನಿಂತಿದೆ. ಧನ-ಕನಕಗಳಿಂದ ವೈಷಮ್ಯ ಹೊಂದಿದ್ದ ಕುರುಬರು ಮತ್ತೆ ಗೌಳಿಗರ ಕುಲದೇವತೆಯನ್ನು ಆರಾಧಿಸುವುದರ ಮೂಲಕ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿರುವುದು ಕಂಡುಬರುತ್ತದೆ.

ಪದುಮಗೊಂಡನಿಗೆ ಇಬ್ಬರು ಹೆಂಡತಿಯರು ಮೊದಲ ಹಂಡತಿ ಸಿದ್ಧಮ್ಮ, ಎರಡನೇ ಹೆಂಡತಿ ಶಿವಲಿಂಗಮ್ಮ ಮೊದಲ ಹೆಂಡತಿ ಮಕ್ಕಳು ಹತ್ತಿ ಕಂಕಣದವರು, ಶಿವಲಿಂಗಮ್ಮನ ಮಕ್ಕಳು ಉಣ್ಣೆ ಕಂಕಣದವರು. ಹಾಗೂ ತಂದೆಯನ್ನು ಅನುಸರಿಸಿ ಜೀವನ ನಡೆಸುವವರು ''ಗೊಂಡಗುರುಬರು, ಕಾಡಿನಲ್ಲಿ ಇದ್ದವರು ಕಾಡುಕುರುಬರು ಅಥವಾ ಅಡವಿಕುರುಬರು ಎಂದು ಕುರುಬರು ಕಾವಲೊಡೆಯುವ ಸೂಕ್ಷ್ಮ ಸಂಗತಿಯನ್ನು ತಿಳಿಸಿಕೊಡುತ್ತದೆ.''[೨೩] ಕುರುಬರ

ಸೋಮರಾಯನು ಗೌಳಿಗರಿಂದ ಪಡೆದ ದೇವತೆಯ ಸುಂಕ(ಕನಕ ಸಂಪತ್ತು)ದಿಂದ ತುಂಬಾ ಕಷ್ಟ ನಷ್ಟಗಳನ್ನು ಅನುಭವಿಸುವನು. ಅವಿವೇಕದಿಂದ ಮಾಡಿದ ತಪ್ಪಿಗೆ ಇಡೀ ಕುರುಬ ಮನೆತನವೇ ಸಂಕಷ್ಟದಲ್ಲಿ ಸಿಲುಕುತ್ತದೆ. ಆಗ ಸೋಮರಾಯನ ಮನೆದೇವನಾದ ಗೋರಕನಾಥನು ಬಂದು ''ಹಿಂದೆ ನೀ ಪೋಗಿ ಗೌಳಿಗರ ಧನಕನಕ ಹಿರಿದು ತಂದುದಕವರ ಮನೆದೇವಿ ಬಂದು ಪರಿಪರಿ ಕಾಡುತಿಹಳು''[೨೪] ಎಂದು ತಿಳಿಸಿ ಹೋಗುವನು. ಆ ಕಾರಣಕ್ಕೆ ಸೋಮರಾಯನು ಭಾವಶುದ್ಧದಿಂದ ತಮ್ಮ ಮನೆಯಲ್ಲಿ ಸ್ವಚ್ಚಗೊಳಿಸಿ ದೇವಿಯ ಪೂಜಿಸಲು ಮುಂದಾಗುವನು. ಈ ಪೂಜೆಗೆ ಮಹಾಶಾಂತಿಮಾಡುವುದು ಎಂದು ಕರೆಯುತ್ತಾರೆ. ಹೀಗೆ ಹಿಂದೆ ಸೋಮರಾಯನು ಮಾಡಿದ ತಪ್ಪಿಗೆ ಹುಟ್ಟಿಕೊಂಡ ಶಾಂತಿ ಮಾಡುವ ಪೂಜೆಯು ಇಂದು ಕರುಬರಲ್ಲಿ ಲಕ್ಷ್ಮಿಪೂಜೆ, ಅಮ್ಮನ ಪೂಜೆಯೆಂದು ಸ್ವಗೃಹದಲ್ಲಿ ಆಚರಿಸುವ ಸಂಪ್ರದಾಯವಾಗಿ ಕಂಡುಬರುತ್ತದೆ. ಮನುಷ್ಯನು ತಪ್ಪು ಮಾಡಿದ್ದನ್ನು ಈ ರೀತಿ ಪರಿವರ್ತನೆಯನ್ನು ವಿಧಿಸಿಕೊಳ್ಳುತ್ತಿದ್ದ ಎಂದು ತಿಳಿದು ಬರುತ್ತದೆ. ಹೀಗೆ ಎಷ್ಟೋ ಆಚರಣೆಗಳು ಒಂದು ಕಾಲಕ್ಕೆ ಪ್ರಾಯಶ್ಚಿತಗಳಾಗಿದ್ದವು, ಶಿಕ್ಷೆಯ ರೀತಿಯಲ್ಲಿದ್ದವು ಎನ್ನುವುದು ಈ ಮೂಲಕ ತಿಳಿದು ಬರುವುದು.ಇದು ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಪಡೆದು ಆ ಸಮುದಾಯದ ಪವಿತ್ರ ಆಚರಣೆಯಾಗಿರುವುದು ಕಂಡುಬರುತ್ತದೆ. ಗೌಳಿಗರು ಕುಲದೇವತೆಯನ್ನು ಪೂಜೆ ಮಾಡಲು ಕಂದನನ್ನು ಬಲಿಕೊಡುತ್ತಾರೆ. ಆದರೆ ಕುರುಬರು ನರಬಲಿಯನ್ನು ಕೊಡದೆ ಕುರಿಯನ್ನು ಕೊಡುತ್ತಾರೆ. ಮತ್ತೆ ಕೆಲ ಕುರುಬರು ಯಾವ ಬಲಿಯನ್ನು ಕೊಡದೆ ನಿಶಬ್ಧವಾಗಿ ಮನೆಯಲ್ಲಿ ಆಚರಿಸುವ ಒಂದು ಸಂಪ್ರದಾಯ ಮಾಡಿಕೊಂಡಿದ್ದಾರೆ.

**ನಂಬಿಕೆಗಳು**

ಸಮಾಜದಲ್ಲಿ ನಂಬಿಕೆಗಳು ಜನಪದರಿಂದ ಸೃಷ್ಟಿಯಾಗಿವೆ. ಇವು ಜೀವನದಲ್ಲಿ ಅಸಾಧಾರಣವಾದ ಕಾರ್ಯನಿರ್ವಹಿಸುತ್ತವೆ. ಜೀವಕ್ಕೆ ಉಸಿರಾಟ ಎಷ್ಟೋ ಅವಶ್ಯಕವೋ ಅಷ್ಟೇ ಈ ನಂಬಿಕೆಗಳು ಪಾತ್ರವಹಿಸುತ್ತವೆ. ಜನರು ಕಾನೂನಿನ ನಿಯಮಗಳನ್ನು ನೆನಪಿನಲ್ಲಿಡದಿದ್ದರೂ ನಂಬಿಕೆಗಳನ್ನು ಅವರ ಹೃದಯಾಂತರಾಳದಲ್ಲಿ ಎಂದೂ ಬತ್ತದಂತೆ ಇಟ್ಟುಕೊಂಡಿರುತ್ತಾರೆ. ಸಮಾಜದ ಕೆಳಸ್ತರದಿಂದ ಹಿಡಿದು ಮೇಲುಸ್ತರದವರೆಗೆ, ವಿದ್ಯಾವಂತರಿಂದ ಅವಿದ್ಯಾವಂತ ವರ್ಗದವರೆಗೆ ಜನಪದ ನಂಬಿಕೆಗಳು ಪ್ರಜ್ವಲಿಸುವ ದೀಪಗಳಾಗುತ್ತವೆ. ಆಚರಣೆ, ನಂಬಿಕೆ, ಸಂಪ್ರದಾಯಗಳು ಜನತೆಯ ಜೀವನಾನುಭವದಿಂದ ಮೂಡಿಬಂದವುಗಳು. ಈ ನಂಬಿಕೆಗಳು ಭಯದಿಂದ ಹುಟ್ಟಿ, ದೈವತ್ವದಲ್ಲಿ ಬೆಳೆದು ಆಚರಣೆಯಾಗುತ್ತವೆ. ಏನೋ ಒಂದು ಕಾರಣಕ್ಕೆ ಘಟಿಸಿದ ಘಟನೆಯೆ ತದನಂತರದ ದಿನಗಳಲ್ಲಿ ನಂಬಿಕೆಯಾಗಿ ಪರಿವರ್ತನೆಯಾಗುವುದು. ಇವು ಅಪೂರ್ವ ಕಲ್ಪನೆಯಿಂದ ಹುಟ್ಟಿದವು ಆದರೂ ಜನರನ್ನು ಹತೋಟಿಯಲ್ಲಿಡುವ ಸಾಮರ್ಥ್ಯವನ್ನು ಹೊಂದಿವೆ. ಇವುಗಳ ಇಲ್ಲದಿರುವಿಕೆಯನ್ನು ನೆನಸಿಕೊಂಡರೆ ಮನುಷ್ಯನು ಪ್ರತಿಕ್ಷಣ ಜೀವನದ ಆತಂಕ, ಭೀತಿಯಲ್ಲಿಯೇ ನಡೆಸುವುದು ಕಂಡುಬರುತ್ತಿತ್ತು. ಉದಾಹರಣೆಗೆ ಬಾಣಂತಿ ಒಂದು ತಿಂಗಳವರೆಗೆ ಸೂರ್ಯನ ಬಿಸಿಲನ್ನು ನೋಡಬಾರದು, ತಣ್ಣೀರಿನಲ್ಲಿ ಕೈ ಇಡಬಾರದು ಎಂಬ ನಂಬಿಕೆಗಳು ಸ್ತ್ರೀಯರ ಆರೋಗ್ಯವನ್ನು ಕಟ್ಟುನಿಟ್ಟಾಗಿ ಪರಿಪಾಲಿಸುವಂತೆ ಮಾಡಿವೆ. ಸೂರ್ಯಗ್ರಹಣ ಸಂದರ್ಭದಲ್ಲಿ ಯಾರು ಹೊರಗೆ

ಬರಬಾರದು, ಮಳೆ ಬರುವಾಗ ಮರದ ಕೆಳಗೆ ನಿಲ್ಲಬಾರದು. ಇನ್ನೂ ಅನೇಕ ಜನಪದ ನಂಬಿಕೆಗಳು ನಿಷೇದಾರ್ಥದಲ್ಲಿಯೇ ರಚನೆಗೊಂಡಿರುತ್ತವೆ. ಜನಪದ ನಂಬಿಕೆಗಳು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕವಾಗಿ ಅನ್ವಯಿಸುತ್ತವೆ. ಈ ನಂಬಿಕೆಗಳು ಜನರಲ್ಲಿ ಪ್ರಬಲವಾಗಿ ಮುದ್ರೆಯಾಗಿದ್ದು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರದಿಂದಲೇ ಆಗಿರುತ್ತವೆ.

ಕಾರಣವಿಲ್ಲದೆ ಇರುವ ನಂಬಿಕೆಗಳನ್ನು ಮೂಢನಂಬಿಕೆಗಳು ಎಂದು ಕರೆಯುತ್ತಾರೆ. ಆದರೆ ನಂಬಿಕೆಯನ್ನು ವಿಶ್ಲೇಷಿಸದೆ, ವಿಮರ್ಶಿಸದೆ, ಪರಿಶೀಲನೆ ಮಾಡದೆ ಅಂಧಾನುಕರಣೆಯಿಂದ ಆಚರಿಸಿದರೆ ಮೂಢನಂಬಿಕೆಗಳಾಗುತ್ತವೆ. ಇಂತಹ ಪ್ರಮಾದವು ಕೆಲವು ಕಡೆ ತುಂಬಾ ಅಪಾಯಕಾರಿಯೂ ಆಗಿರಬಹುದು. ಆದರೆ ಜನಪದ ನಂಬಿಕೆಗಳೆಲ್ಲಾ ಮೂಢನಂಬಿಕೆಗಳಲ್ಲ ಎನ್ನುವುದನ್ನು ಮನಗಾಣಬಹುದು. ನಂಬಿಕೆಯನ್ನು ಇಂಗ್ಲಿಷ್‌ನಲ್ಲಿ Belief ಎಂದು ಕರೆಯುತ್ತಾರೆ. ಮೂಢನಂಬಿಕೆಯನ್ನು Superstition ಎಂದು ಕರೆಯುತ್ತಾರೆ. ಜನಪದ ನಂಬಿಕೆಗಳಿಗೂ ಮೂಢನಂಬಿಕೆಗಳಿಗೂ ಸಾಕಷ್ಟು ಅಂತರವಿರುವುದನ್ನು ನೋಡಬಹುದು. ಮೂಢನಂಬಿಕೆಗಳಲ್ಲಿ ಸಾಮೂಹಿಕ ಅಭ್ಯಾಸಗಳಿರುತ್ತವೆ ಆದರೆ ಅವುಗಳಿಗೆ ಯಾವುದೇ ವಿಧವಾದ ವಿವೇಚನೆಯ ಆಧಾರವಾಗಲೀ, ಅಗತ್ಯತೆಗಳಾಗಲೀ ಋಣಭಾರ ಭಾವವಾಗಲೀ ಇರುವುದಿಲ್ಲ. ಇಂಗ್ಲಿಷಿನಲ್ಲಿ Super ಎಂಬ ಪದವು ''ಹೆಚ್ಚು'' ಎಂಬ ಅಭಿಪ್ರಾಯವನ್ನೀಯುವುದಲ್ಲದೆ ವ್ಯಕ್ತಿಗಳನ್ನು ಅಗೋಚರವಾದ ಮತ್ತು ಮಾಂತ್ರಿಕವಾದ ವಿಚಾರಗಳನ್ನು ನಂಬುವಂತೆ ಮಾಡುತ್ತವೆ. ''There are of course, other Manifestations of the Superstitions spirit of a comparitively innocuous kind, such as balief in faries, superstitions concerning the weather lucky and unlucky days, and the like''[೨೫] ಈ ಮೂಢ ನಂಬಿಕೆಗಳು ಸದಾ ವ್ಯಕ್ತಿಯಲ್ಲಿ ಭಯವನ್ನು ತುಂಬುವಂತೆ ಮಾಡುತ್ತವೆ. ಅದಕ್ಕೆ ಮೂಢನಂಬಿಕೆಯು 'ಆಧಾರವಿಲ್ಲದ್ದು; ಶೂನ್ಯವಾದುದು' ಎಂದು ವರ್ಜಿಲ್ ಮಹಾಕವಿಯು ಅಭಿಪ್ರಾಯಪಡುತ್ತಾನೆ. ಜನಪದ ನಂಬಿಕೆಗಳು ಬಹುಪಾಲು ವೈಜ್ಞಾನಿಕ ಅಂಶಗಳನ್ನು ಹೊಂದಿರುತ್ತದೆ. ಆದರೆ ಈ ನಂಬಿಕೆಗಳು ರಚನೆಗೊಂಡ ಕ್ಷೇತ್ರ ಪೌರಾಣಿಕವಾದ್ದರಿಂದ ಅಲ್ಪ ಎನ್ನುವ ಮಟ್ಟಕ್ಕೆ ನಿಂತಿವೆ. ''ಜನಪದ ನಂಬಿಕೆಗಳಲ್ಲಿ ಬಹುಪಾಲು ವೈಜ್ಞಾನಿಕ ಸತ್ಯವಿದೆ; ಅವುಗಳಲ್ಲಿ ಪೌರಾಣಿಕ ಅಂಶಗಳೂ ತುಂಬಿವೆ; ಸಾಮಾನ್ಯ ತಿಳುವಳಿಕೆ, ಐತಿಹ್ಯಾಂಶಗಳು ಮತ್ತು ಕಥಾಂಶಗಳು ಅಡಕವಾಗಿರುವುದನ್ನು ಕಾಣಬಹುದು.''[೨೬] ನಂಬಿಕೆಗಳು ತಿಳುವಳಿಕೆಯಿಂದ ಆಗಿರುತ್ತವೆ. ಕಾಲದಿಂದ ಕಾಲಕ್ಕೆ ಗತಿಸಿ ಬರುವುದರಿಂದ ಅವಾಸ್ತವವನ್ನು ಹೊಂದಿರುತ್ತವೆಂದು ತಿಳಿದುಬರುತ್ತದೆ. ಇಲ್ಲಿ ಆಚರಣೆಗಳು ಮತ್ತು ನಂಬಿಕೆಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಕಂಡುಬರುತ್ತವೆ. ಇವೆರಡು ಪರಸ್ಪರ ಪೂರಕವಾಗಿರುವವು. ಆಚರಣೆಗಳು ನಡೆಯಬೇಕಾದರೆ ಒಂದು ಕಾರಣವಿರುತ್ತದೆ. ಆ ಕಾರಣವೇ ನಂಬಿಕೆಯಾಗಿರುತ್ತದೆ. ಈ ನಂಬಿಕೆಯಿಂದಲೇ ಆಚರಣೆಯು ಸಂಪ್ರದಾಯವಾಗಿ ಮಾರ್ಪಡುತ್ತದೆ. ಉದಾ: ಭೂಮಿ ಪೂಜೆ ಭೂಮಿತಾಯಿ ಉತ್ತಮ ಫಸಲನ್ನು ಕೊಡಲಿ, ಮನೆ ತುಂಬಾ ಧಾನ್ಯಗಳು ತುಂಬಲಿ, ಎಂಬ ನಂಬಿಕೆಯೇ ಆಚರಣೆಯ ಬುನಾದಿಯಾಗಿದೆ. ಇಲ್ಲಿ

ಪ್ರಮುಖವಾಗಿ ತಿಳಿಯುವ ವಿಷಯವೆಂದರೆ ನಂಬಿಕೆ ಮೊದಲು ತದನಂತರ ಆಚರಣೆಯ ಸ್ಥಾನ ಕಂಡುಬರುತ್ತದೆ. ಈ ನಂಬಿಕೆಗಳು ಸಾರ್ವಕಾಲೀನತೆಯನ್ನು ಪಡೆದಿದ್ದರೂ ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ವ್ಯತ್ಯಾಸವನ್ನು ಹೊಂದಿರುತ್ತವೆ ಅಂದರೆ ಕುರುಬರು ಮಗು ಜನಿಸಿದಾಗ ಸೂಲಗಿತ್ತಿಯು ಮೊರದಲ್ಲಿ ಹಳೆ ಬಟ್ಟೆಯನ್ನು ಹಾಸಿ ಮನೆಯೊಳಗಿಂದ ತಲಬಾಗಿಲ ಹೊರಗೆ ಎತ್ತಿಕೊಂಡು ಬರುತ್ತಾಳೆ. ಆಕೆಯ ಹಿಂದೆ ಮಗುವಿಗೆ ನೆಂಟರಾಗುವವರು (ಮಹಿಳೆಯರು) ಗಂಗಾಳಕ್ಕೆ ಕೋಲಿನಿಂದ ಬಾರಿಸುತ್ತಾ ''ನಮ್ಮ ಮನೆ ದೇವರು ಒಳ್ಳೆದಲ್ಲ'' ಎಂದು ಕೂಗುತ್ತಾ ಹೊರ ಬಂದು ಒಳಕ್ಕೆ ಹೋಗುವುದು ಒಂದು ಆಚರಣೆ. ಇದಕ್ಕೆ ಕಾರಣ ಕುರುಬರ ಮನೆಯಲ್ಲಿ ಮಗು ಹುಟ್ಟಿದೆ ಎಂದು ತಿಳಿಸಲು ಮತ್ತು ಮಡಿವಾಳರು ಶೀಘ್ರವಾಗಿ ಬರಲು ಹೇಳುವುದಾಗಿದೆ.

ಇಂತಹ ಆಚರಣೆ ಬೇರೆ ಜನಾಂಗದವರಲ್ಲಿ ಈ ರೀತಿಯಾಗಿ ಕಂಡುಬರುವುದಿಲ್ಲ. ಹಾಗಾಗಿ ನಂಬಿಕೆ-ಆಚರಣೆಗಳು ಆಯಾ ಸಮುದಾಯದ ಸಂಸ್ಕೃತಿಗೆ ತಕ್ಕಂತೆಯೂ ರಚನೆಯಾಗಿರುತ್ತವೆ. ಜನಸಾಮಾನ್ಯರಲ್ಲಿ ಬೇರೂರಿರುವ ಲೌಕಿಕ ಜೀವನಕ್ಕೆ ಅನ್ವಯಿಸುವ ನಂಬಿಕೆಗಳನ್ನು ಸಾಂಸ್ಕೃತಿಕ ನಂಬಿಕೆಗಳೆಂದು ಕರೆಯುತ್ತಾರೆ. ಇದರಲ್ಲಿ ಹುಟ್ಟು -ಯೌವ್ವನ-ಮದುವೆ-ವೃದ್ಧಾಪ್ಯ-ಸಾವು-ಹಬ್ಬ-ಉತ್ಸವ-ಆಚಾರ ಮುಂತಾದ ಜನಪದ ಸಾಂಸ್ಕೃತಿಕ ಚಹರೆಗಳು ನಂಬಿಕೆಗಳು. ಇವುಗಳು ವ್ಯಕ್ತಿ, ಸಮಾಜದ ಸಮಾನ ಸಂಸ್ಕೃತಿಯನ್ನು ಕ್ರಮಬದ್ಧವಾಗಿ ಕಾಪಾಡಲೋ ಅಥವ ತನಗೆ ಉಪಯುಕ್ತವೆನಿಸಿದ ವಸ್ತುಗಳನ್ನು ಅವನತಿ ಹೊಂದದಂತೆ ವಿಧಿಸಿದ ಕಾನೂನುಗಳೇ ಈ ನಂಬಿಕೆಗಳಾಗಿವೆ. 'ಕುರುಬರು ತುಪ್ಪಟ ಹಿಂಜಲು ಉಪಯೋಗಿಸುವ ಕದಿರಿನ ಎಳೆಯನ್ನು ಬಾಣಂತಿಯರು ಎಡಗಾಲಿಗೆ ಹಾಕಿಕೊಂಡರೆ ಹೊರಗೆ ಹೋದಾಗ ಗಾಳಿ ಸೋಂಕಾಗುವುದಿಲ್ಲ. 'ಶುಭ ಕಾರ್ಯಕ್ಕೆ ಹೊರಟಾಗ ಕುರುಬರು ಅಡ್ಡಬಂದರೆ ಒಳ್ಳೆಯದು' 'ಕುರಿ ಮತ್ತು ಮೇಕೆಗಳು ಬೆಳಗಿನ ಹೊತ್ತು ಆಡುವುದನ್ನು ಕಾಣುವುದು ಅನಿಷ್ಟ.' 'ಮುಂಜಾನೆ ಎದ್ದತಕ್ಷಣ ಮೇಕೆ ಅಥವಾ ಕುರಿ ದರ್ಶನದಿಂದ ಶುಭ' 'ಮೇಕೆ ಕಟ್ಟಿದ ಹಗ್ಗ ದಾಟಬಾರದು.' ಹೀಗೆ ಕುರುಬ ಸಮುದಾಯದ ಸುತ್ತ ಅನೇಕ ನಂಬಿಕೆಗಳು ಆಚರಣೆಯ ರೀತಿಯಲ್ಲಿ ಪ್ರಚಲಿತವಾಗಿವೆ.

**i. ಜೇನು ತಿನಿಸುವುದು**

ಕುರುಬರು ಆಗತಾನೆ ಹುಟ್ಟಿದ ಮಗುವಿಗೆ ಜೇನು ತುಪ್ಪವನ್ನು ಯಾರಾದರೂ ಕಿರುಬೆರಳಿಗೆ ಹಚ್ಚಿಕೊಂಡು ತಿನ್ನಿಸುತ್ತಾರೆ. ಈ ಪದ್ಧತಿಯೂ ವಿಶಿಷ್ಟ ನಂಬಿಕೆಯನ್ನು ಹೊಂದಿದೆ. ನವಮಾಸಗಳವರೆಗೆ ತಾಯಿಯಿಂದ ಕೇವಲ ದ್ರವ ಪದಾರ್ಥವನ್ನು ಸೇವಿಸಿ ಬೆಳೆಯುತ್ತಿದ್ದ ಮಗು ಹೊಸ ವಾತಾವರಣವನ್ನು ಆಶ್ಚರ್ಯದಿಂದ, ಆತಂಕದಿಂದ ಎದುರಿಸುತ್ತಿರುತ್ತದೆ. ಅಂತಹ ಮಗುವಿಗೆ ತಾಯಿಯು ನಿಶಕ್ತಿಯಲ್ಲಿ ಹಾಲು ಕುಡಿಸಲು ತ್ರಾಣವಿಲ್ಲದ ಸ್ಥಿತಿಯಲ್ಲಿ ಇರುತ್ತಾಳೆ. ಅದಕ್ಕಾಗಿ ಆ ಮಗುವಿಗೆ ಜೇನು ತುಪ್ಪವನ್ನು ತಿನ್ನಿಸುವುದರ ಮೂಲಕ ಭೂಮಿಗೆ ಸ್ವಾಗತಿಸುತ್ತಾರೆ. ಮಾನವ ಜನ್ಮ ಜೇನಿನಷ್ಟೆ ಸಿಹಿಯಾಗಿರುತ್ತದೆ ಎಂದು ಈ ಮೂಲಕ ಸಂದೇಶವನ್ನು ಹೇಳುತ್ತಾರೆ. ಈ ಜೇನು ತಿನ್ನಿಸುವುದು ಹಾಲುಮತ ಪುರಾಣಗಳಲ್ಲಿ ವಿಶಿಷ್ಟವಾದ ನಂಬಿಕೆಯಾಗಿ ಕಂಡುಬರುತ್ತದೆ. ಈ ನಂಬಿಕೆಯ ಬಗ್ಗೆ ಜನಪದ ಹಾಲುಮತ ಮಹಾಕಾವ್ಯದಲ್ಲಿ ಹೀಗೆ ವಿವರಿಸಿದ್ದಾರೆ. ಈ ಜೇನು ತಿನಿಸುವುದರ ಹಿಂದೆ

ಘೋರವಾದ ಘಟನೆಯನ್ನು ಪುರಾಣಗಳು ಹೇಳುತ್ತವೆ. ಕಾಳಿನಾರಾಯಣನೆಂಬವನು ತಂಗಿ ಸೂರಮ್ಮದೇವಿಯ ಗರ್ಭದಲ್ಲಿ ಲಿಂಗ ಬೀರಣ್ಣನ ಜನನವಾಗುವುದನ್ನು ಅರಿತುಕೊಂಡು ಅದನ್ನು ಗರ್ಭದಲ್ಲಿಯೇ ನಾಶಮಾಡಲು ಹೋಗಿ ಸೋಲುವನು. ದೈವ ಪುತ್ರನಾದ ಲಿಂಗಬೀರಣ್ಣನು ಬದುಕಿದರೂ ಕಾಳಿನಾರಾಯಣ ಜೋತಿಷ್ಯದ ಹೇಳಿಕೆಯಿಂದ ಸೂರಮ್ಮದೇವಿಯು ಹೆತ್ತ ಶಿಶುವನ್ನು ಕಾಡಿಗೆ ಕಳಿಸುತ್ತಾಳೆ. ಅಲ್ಲಿಯೂ ಆ ಶಿಶು ದೈವದ ಕೃಪೆಯಿಂದ ಉಳಿದುಕೊಂಡು ಕಾಂಚಾಲ ಮರದಲ್ಲಿ ಬೆಳೆಯುವುದು. ಆಗ ಶಿವ-ಪಾರ್ವತಿಯರು ಆ ಶಿಶುವಿನ ರಕ್ಷಣೆಗಾಗಿ ಕೂದಲಿಗೆ ನಂದನವನದಲ್ಲಿ ಕಾಡು ಹಂದಿ, ಕಾಡುಕೋಣ ಉರಗ, ತೋಳ, ಜೇನು ಹುಳುಗಳು ಲಿಂಗ ಬೀರಣ್ಣನನ್ನು ಕಾಪಾಡುತ್ತವೆ.

''ಬಂಗಾರದ ಹಲಗಿಯ ತೊಟ್ಟಿಲ ಬೆಳ್ಳಿ ಹಿಡಿಯಾ ಇದ್ದಾವ
ಜೇನ ವೈದ ಕಟ್ಟ್ಯಾರೆ ಲಿಂಗಬೀರಣ್ಣ ದೇವರಿಗೆ
ಲಿಂಗ ಬೀರಣ್ಣ ದೇವರಿಗೆ ನಡುವಿನ ಎರಡು ಬೆರಳೇನ
ನಡುವಿನ ಎರಡು ಬೇರಳೇನ ಬಾಯಿ ಒಳಗೆ ಇಟ್ಟಾರ
ಬಾಯಿ ಒಳಗೆ ಇಟ್ಟಾರ ಜೇನಿನ ಲಗತ ಮಾಡ್ಯಾರ
ಬಟ್ಟ ಬೇಡಿದರಲ್ಲಪ್ಪ ಜೇನಿನ ರುಚಿಯ ಹಾಕ್ಯಾರ
ಮೊದಲೀನ ಯೋಗದೊಳೇನ ಲಿಂಗಬೀರಣ್ಣ ದೇವರ
ಲಿಂಗ ಬೀರಣ್ಣ ದೇವರೆ ಜೇನುತುಪ್ಪ ನೆಕ್ಕೂತಾನೇನ''[೨]

ಹೀಗೆ ಜೇನು ಹುಳುಗಳು ಕೇವಲ ಶಿಶುವಿನ ದೇಹ ರಕ್ಷಣೆಗಾಗಿ ಬಳಸದೆ ಜೇನಿನ ಮಧುರವು ತೃಷೆಯನ್ನು ನೀಗಿಸುವುದನ್ನು ಹೇಳುತ್ತದೆ. ಕಾಡಿನಲ್ಲಿ ಶಿಶುವಿಗೆ ಜೇನು ತುಪ್ಪ ಬಿಟ್ಟರೆ ಗೆಡ್ಡೆ ಗೆಣಸು ದೊರೆತರು ತಿನ್ನಲಾಗುವುದಿಲ್ಲ. ಇಲ್ಲಿ ತಾಯಿಯಿಂದ ದೂರವಾದ ಮಗುವನ್ನು ಪ್ರಕೃತಿ ದೇವತೆಯು ಪೋಷಣೆ ಮಾಡುವದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕುರುಬರು ''ಮನೆ ಮಲತಾಯಿ, ಅಡವಿ ಹಡೆದ ತಾಯಿಯೆಂದು'' ನಂಬಿಕೆಯಿರಿಸಿಕೊಂಡು ಬಂದಿದ್ದಾರೆ. ವನವೇ ಅವರ ಹೆತ್ತತಾಯಿಗೆ ಸಮಾನವೆಂದು ಅವರು ಆರಿಸಿಕೊಂಡ ವೃತ್ತಿಯು ಸಹ ಸೂಚಿಸುತ್ತದೆ. ಸಮಾಜದಲ್ಲಿ ಕ್ರೂರ ವ್ಯಕ್ತಿಗಳಿಂದ ಇಂತಹ ಅಮಾಯಕ ಶಿಶುಗಳು ಪಡುವ ಕಷ್ಟವನ್ನು ತಿಳಿಸುತ್ತದೆ. ಇಂತಹ ಘಟನೆಗಳು ಇಂದೂ ಭ್ರೂಣ ಹತ್ಯೆಯಾಗಿ ಪರಿವರ್ತನೆಗೊಂಡರೆ, ಮತ್ತೊಂದು ಕಡೆ ಆಸ್ಪತ್ರೆಗಳಲ್ಲಿ ಶಿಶುವನ್ನು ಮಾರುವುದನ್ನು ನೆನಪಿಸಿಕೊಡುತ್ತವೆ.

ಲಿಂಗಬೀರಣ್ಣ ತೊಟ್ಟಿಲಿಗೆ ಆಶ್ರಯ ಕೊಟ್ಟಮರ ಕಾಂಚಾಲಮರ. ಈ ಕಾಂಚಾಲಮರಕ್ಕೆ, ಕಂಚಿನಾಲದ ಮರ, ಆಲದ ಮರ, ತುಳುನಿನಲ್ಲಿ ಗೋಳಿಮರವೆಂದು, ಸಂಸ್ಕೃತದಲ್ಲಿ ಅಶ್ವತ್ಥಮರವೆಂದು ಕರೆಯುತ್ತಾರೆ. ಜನಪದರಲ್ಲಿ ಅಶ್ವತ್ಥ ಮರವನ್ನು ಸುತ್ತು ಹಾಕಿದರೆ ಕಂಕಣಬಲ, ಸಂತಾನ ಫಲ ದೊರೆಯುತ್ತದೆ ನಂಬಿದ್ದಾರೆ. ಈ ನಂಬಿಕೆಯೇ ಪುರುಷ ಪ್ರಾಧಾನ್ಯತೆಯ ಸಂಕೇತ. ಹಾಗೆಯೇ ತಾಯಿಯಿಂದ ದೂರವಾದರೂ ಲಿಂಗಬೀರಣ್ಣ ತಂದೆಯ ಸಮಾನನಾದ ಕಾಂಚಾಲಮರವು ಬೆಳೆಸುವುದು. ಕೆಲ ದಿನಗಳವರೆಗೆ ಆಶ್ರಯನೀಡುವುದು. ಈ ನಂಬಿಕೆಯೇ ಇಂದೂ ಆಲದ

ಮರವನ್ನು ದೈವತ್ವದ ನೆಲೆಯಲ್ಲಿ ಪೂಜ್ಯ ಭಾವನೆಯಿಂದ ಕಾಣುವುದಕ್ಕೆ ಕಾರಣವಾಗಿದೆ. ಇಂತಹ ನಂಬಿಕೆಗಳು ವೈದ್ಯ ಪದ್ಧತಿಯನ್ನು ತಿಳಿಸುತ್ತವೆ. ಶಿಶುವಿಗೆ ಜೇನು ತಿನಿಸುವುದರಿಂದ ಕಬ್ಬಿನಾಂಶದೊರೆಯುವುದು, ಅಶ್ವತ್ಥ ಮರವನ್ನು ಸುತ್ತುವರಿಯುವುದರಿಂದ ಅದರಲ್ಲಿನ ಔಷಧೀಯ ಗುಣಗಳು ಗಾಳಿಯ ಮೂಲಕ ದೇಹವನ್ನು ಸೇರಿ ಆರೋಗ್ಯವನ್ನು ಕಾಪಾಡುತ್ತವೆ.

ಹಾಲುಮತದವರು ಕೃಷಿಯನ್ನು ಪೂರಕ ಕಲಸವಾಗಿ ಮಾಡಿಕೊಂಡು ಪಶುಪಾಲನೆಯನ್ನು ಪ್ರಧಾನ ವೃತ್ತಿಯಾಗಿಸಿಕೊಂಡರು. ಇವರು ತಮ್ಮ ಜೀವನೋಪಾಯಕ್ಕೆ ಮಾತ್ರ ಹಾಲುಮತ ಧರ್ಮವನ್ನು ಸೃಷ್ಟಿಮಾಡಿಕೊಂಡಿಲ್ಲ ಎನ್ನುವುದಕ್ಕೆ ಅನೇಕ ನಿದರ್ಶನವನ್ನು ನೋಡಬಹುದು. ಇವರು ಕುರಿಕಾಯುವ ವೃತ್ತಿಯವರಾಗಿದ್ದರು. ಕೃಷಿ ಚಟುವಟಿಕೆಗಳಿಗೆ ಕಾಲಾವಧಿಯನ್ನು ಸೂಚಿಸುವ ಭೌದ್ಧಿಕತೆಯನ್ನು ಹೊಂದಿದ್ದರು. ಸಮಾಜದಲ್ಲಿ ಇಂದಿಗೂ ಏನೇ ಕಾರ್ಯ ಮಾಡಬೇಕಾದರೂ ಕುರುಬರು ಅಥವಾ ಹಾಲುಮತದವರು ಮೊದಲು ಮುಂಚೂಣಿಯಲ್ಲಿರುತ್ತಾರೆ. ಕುರುಬರು ಈ ಸ್ಥಾನವನ್ನು ಹುಡುಕಿಕೊಂಡು ಹೋದವರಲ್ಲ, ಸಮಾಜವೇ ಅವರಿಗೆ ಮೇಲಸ್ತರದ ಗೌರವವನ್ನು ನೀಡುತ್ತದೆ. ಆದ್ದರಿಂದ ಹಾಲುಮತವನ್ನು ಒಂದು ಸಮುದಾಯವೆಂದು ಭಾವಿಸದೆ ಜನಸಮುದಾಯವೆಂದು ಹೆಸರು ಪಡೆದಿದೆ. ಮಾನವ ಸಂಸ್ಕೃತಿಯ ಮಹಾಪುರುಷರಿಂದಲೆ ಈ ಹಾಲುಮತವು ಶ್ರೇಷ್ಠತೆಯನ್ನು ಒಳಗೊಂಡಿದೆ.

ಹಾಲುಮತದವರು ಸಮಾಜದಲ್ಲಿ ಪ್ರತ್ಯೇಕ ಮತ್ತು ವಿಶಿಷ್ಠ ಸ್ಥಾನವನ್ನು ಹೊಂದಿದ್ದಾರೆ. ಸಮಾಜದಲ್ಲಿನ ಯಾವ ವರ್ಗವಾದರೂ ಶುಭಕಾರ್ಯ ಮಾಡಬೇಕಾದರೆ ಮೊದಲು ಕುರುಬರಿಂದ ಮಾಡಿಸುವರು. ಅನ್ಯವರ್ಗದವರು ಹೆಣ್ಣು ನೋಡುವುದಕ್ಕೆ ಹೋದರೆ ಕುರುಬರನ್ನು ಕರೆದುಕೊಂಡು ಹೋಗಬೇಕೆಂದು ನಂಬಿದ್ದಾರೆ. ಅಂದರೆ ಕುರುಬರು ಯಾರಿಗೂ ಕೇಡನ್ನು ಬಯಸದ ವ್ಯಕ್ತಿಗಳು, ಕುರಿಯಂತೆ ಮುಗ್ಧ ಪ್ರಾಣಿಯೆಂದು ಭಾವಿಸಿದ್ದಾರೆ. ಸುಗ್ಗಿಯ ಕಾಲದಲ್ಲಿ ಭಿತ್ತನೆಯಲ್ಲಿ ಮೊದಲು ಕುರುಬರೇ ಕೈಹಿಡಿಯಬೇಕು. ವರ್ತಕರು ಹೊಸ ವ್ಯಾಪಾರವನ್ನು ಕೈಗೊಳ್ಳುವಾಗ ಆರಂಭಕ್ಕೆ ಕುರುಬರನ್ನೇ ಕರೆಯಿಸುವರು. ಈ ಎಲ್ಲ ನಂಬಿಕೆಗಳು ಪುರಾಣಗಳು ಆಧರಿಸಿಯೇ ರಚನೆಯಾಗಿವೆ. ಹಾಲುಮತದ ವೀರ ಪುರುಷರು ಕಂಬಳಿಯಿಂದ ಮಳೆಯನ್ನು ತರಿಸಿದ್ದಾರೆ. ಲಿಂಗಬೀರಣ್ಣ ಮಾಳಿಂಗರಾಯ, ಅಮೋಘಸಿದ್ಧ, ಗೊಲ್ಲಾಳೇಶ್ವರ, ಸಿದ್ಧರಾಮರನ್ನು ಹೊರತು ಪಡಿಸಿ ಹೇಳುವುದಾದರೆ ಗುಳೇದ ಗುಡ್ಡದ ಗಾದಿಲಿಂಗಪ್ಪ, ಇಟಗಿ ಭೀಮಮ್ಮ ಪ್ರಮುಖರಾಗಿ ಕಂಡುಬರುತ್ತಾರೆ.

"ವರವಿನ ಕಂಬಳಿ ಬೇಡ್ಯಾನ ಪರಸದ ಗಂಟ ಬೇಡ್ಯಾನ
ಬಡವಗ ಭಾಗ್ಯ ಬೇಡ್ಯಾನ ಬಂಜಿಕ ಮಕ್ಕಳ ಬೇಡ್ಯಾನ
ಮಳಿಯ ಕೀಲ ಬೇಡ್ಯಾನ ಬೆಳಿಯ ಕೀಲು ಬೇಡ್ಯಾನ
ಹಿಂದಿನ ಸುದ್ದಿ ಬೇಡಿದ್ದ ಪರಸದಗಂಟ ಬೇಡಿದ್ದ."[೨೮]

ಹಾಲುಮತದ ಮಹಾಪುರುಷರು ಶಿವನಿಂದಲೇ ಕಂಬಳಿಯನ್ನು, ಪ್ರಸಾದದ ಗಂಟನ್ನು ಬಡವರಿಗೆ ಭಾಗ್ಯವನ್ನು, ಬಂಜೆಗೆ ಮಕ್ಕಳ ನೀಡುವ ವರವನ್ನು, ಜಗತ್ತಿಗೆ ಮಳೆಯನ್ನು ತರಿಸುವ ಅಂತರ್ ಶಕ್ತಿಯನ್ನು, ಹಿಂದೆ ಆಗಿಹೋದ, ಮುಂದೆ ಆಗುವ ವಿಷಯಗಳನ್ನು ತಿಳಿಸುವ ಸಾಮರ್ಥ್ಯವನ್ನು

ಪಡೆದಿದ್ದರು. ಎಂದು ಹಾಲುಮತ ಪುರಾಣಗಳು ತಿಳಿಸುತ್ತವೆ. ಅದಕ್ಕಾಗಿಯೇ ಸಮಾಜದಲ್ಲಿ ಎಲ್ಲ ಜನವರ್ಗವು ಪ್ರೀತಿಯಿಂದ ಕಾಣುತ್ತಿತ್ತು ಎನಿಸುತ್ತದೆ. ಕಂಬಳಿಯನ್ನು ಬೀಸಿ ಮಳೆಯನ್ನು ಅಮೋಗಸಿದ್ಧನು ಈ ರೀತಿ ಮಳೆಯನ್ನು ತರಿಸುವುದು ಕಂಡುಬರುತ್ತದೆ.

''ಕೈಯ ಮಾಡುತಾನೇನ ಕಂಬಳಿ ಬೀಸುತಾನೇನ
ಗಂಗಿ ದಿಕ್ಕಿನೊಳಗೇನ ಅಂಗೈಯುಟ್ಟು ಮಾಡಾದವ
ಕೋಲಮಿಂಚ ಹೊಡದಾವ ನಾಡಿಗ ಜಾಲ ಹಾಕ್ಯಾವ
ಭೂಮಿಗ ಬರಬೇಕಂದಾರ ಗೋರ ಮಳಿಯ ಹತ್ಯಾವ''[೨೯]

ಈ ರೀತಿ ಅಮೋಘಸಿದ್ಧ ಮಳೆಯನ್ನು ತರಿಸಿದರೆ ಆ ಮಳೆಯನ್ನು ಮಾಳಿಂಗರಾಯನು ಆಕಾಶದಲ್ಲಿಯೇ ತಡೆಹಿಡಿಯುವಂತಹ ದಿಟ್ಟ ಸಾಮರ್ಥ್ಯವನ್ನು ಹೊಂದಿದ್ದುದನ್ನು ಹೀಗೆ ತಿಳಿಸುತ್ತದೆ.

''ಮಾಣಿಕ್ಯದ ಹರಳ ಮಾಳಪ್ಪ ಹಿಂದಕ ಕೈಯ ಮಾಡ್ಯಾನ
ಹಿಂದಕ ಕೈ ಮಾಡ್ಯಾನ ಮಳಿಯ ಕೈಲಾಸಕ ಸೇರ್‍ಯಾವ''[೩೦]

ಹೀಗೆ ಅಮೋಘಸಿದ್ದ ಮತ್ತು ಮಾಳಿಂಗರಾಯನ ಶಕ್ತಿ ಸಾಮರ್ಥ್ಯದಲ್ಲಿ ಮಾಳಿಂಗರಾಯನೇ ಗೆಲುವನ್ನು ಸಾಧಿಸುತ್ತಾನೆ. ಮಾಳಿಂಗರಾಯನು ಜನಪದರಲ್ಲಿ ಕಾಳಿಂಗರಾಯನಾಗಿ ಮಳೆಯನ್ನು ತರಿಸುವ ವ್ಯಕ್ತಿಯಾಗಿರಬಹುದೆಂದು ಆಲೋಚಿಸಲು ಅವಕಾಶಮಾಡಿಕೊಡುತ್ತದೆ.

''ಸಮಾಜದಲ್ಲಿ ಹಾಲುಮತದವರನ್ನು ನಂಬಿದ್ದಮಹತ್ತರ ಮತ್ತೊಂದು ಪಂಗಡವೆಂದರೆ ಹೈನೋರು. ಇವರು ಮದುಮಕ್ಕಳನ್ನು ಮಾಡುವಾಗ ಕುರುಬರ ಮನೆಯಲ್ಲಿಯೇ ಅರಿಶಿನವನ್ನು ಹಚ್ಚುತ್ತಾರೆ. ಏಕೆಂದರೆ ಕುರುಬರಿಂದ ಮದುಮಕ್ಕಳು ಅರಿಶಿನ ಹಚ್ಚಿಕೊಂಡರೆ ಸ್ತ್ರೀಯು ಶಾಶ್ವತ ಮುತ್ತೈದೆತನವನ್ನು ಹೊಂದಿರುತ್ತಾಳೆಂದು ಹೇಳಲಾಗುತ್ತದೆ.''[೩೧] ಹೀಗೆ ಸಮಾಜದಲ್ಲಿರುವ ವರ್ಗಗಳನ್ನು ಅಧ್ಯಯನ ಮಾಡಿದರೆ ಇಂತಹ ಎಷ್ಟೋ ನಂಬಿಕೆಗಳು ಬೆಳಕಿಗೆ ಬರುತ್ತವೆ.

### ii. ಕುರುಬರ ಹೇಳಿಕೆಗಳು

ಸಮಾಜದಲ್ಲಿ ರೂಪಿತಗೊಂಡ ಅನುಭವದ ಪ್ರತಿಯೊಂದು ನುಡಿಗಳು ಅನೇಕ ರೀತಿಯ ಪರಿಭಾಷೆಯನ್ನು ಪರಿಚಯಿಸುತ್ತವೆ. ಸಮಾಜವು ಜನರ ಅನುಭವಗಳ ಗೂಡು. ಈ ಗೂಡಿನ ನಿರ್ಮಾಣಕ್ಕೆ ಗಾಳಿ, ಬೆಳಕು, ಸೂರ್ಯ, ಮಳೆಯಿಂದ ಹೇಗೆ ತೊಂದರೆಗಳು, ಅಡ್ಡಿ ಆತಂಕಗಳು ಬರುತ್ತವೋ, ಅದೇ ರೀತಿ ಸಮುದಾಯದ ರಚನೆಗೂ ಬಿಡುವುದಿಲ್ಲ. ಹಕ್ಕಿಗಳು ಮರಿಯನ್ನು ಬೆಳೆಸಲು ಗೂಡನ್ನು ನಿರ್ಮಿಸಿಕೊಳ್ಳುವುದು ಎಷ್ಟೋ ಸತ್ಯವೋ, ಅಷ್ಟೇ ಸಮುದಾಯಗಳು ಉಕ್ತಿ, ನುಡಿಗಳನ್ನು ತನ್ನ ರಕ್ಷಣೆಗಾಗಿ ರಚಿಸಿಕೊಂಡಿರುತ್ತವೆ. ಅದು ವರ್ತಮಾನ, ಭವಿಷ್ಯ ಕುರಿತು ಹೇಳಿದರು ಭೂತದ ಸತ್ಯವನ್ನೇರಿರುತ್ತದೆ ಎಂಬುದನ್ನು ಮಂತ್ರಗಳು ಶ್ಲೋಕಗಳು, ಕಾರಣಿಕದ ನುಡಿಗಳು, ಹೇಳಿಕೆಗಳು ಮತ್ತು ಸಿದ್ದಟ್ಟಿಕೆ ನುಡಿಗಳೇ ಸಾಕ್ಷಿ. ಆದ್ದರಿಂದ ಇವುಗಳು ಜನಮಾನಸದಲ್ಲಿ ಸ್ಥಾಯಿವಾಗಿ ಉಳಿದುಕೊಂಡಿವೆ. ಒಬ್ಬ ಮನುಷ್ಯನು ಏಕಚಿತ್ತದಿಂದ ತನ್ನ ಸುತ್ತಮುತ್ತಲ್ಲಿನ ವಸ್ತುಗಳ ಚಲನವಲನವನ್ನು ಅರಿಯಬಲ್ಲ ಎಂದು ಮನೋವಿಜ್ಞಾನವು ತಿಳಿಸಿಕೊಡುತ್ತದೆ. ಈ ಹಿನ್ನೆಲೆಯಲ್ಲಿ ಹಾಲುಮತದ ಗುರು ಒಡೆಯರು, ಶಿಷ್ಯ ಮಕ್ಕಳು ಹೇಳುವ ಅನುಭವದ ಹೇಳಿಕೆಯಲ್ಲಿ

ಅಡಕವಾಗಿರುವುದು ಕಂಡುಬರುತ್ತದೆ. ಹಾಲುಮತದವರ ಪ್ರಾದೇಶಿಕ, ಸಾಮಾಜಿಕ, ಧಾರ್ಮಿಕ ಆಚರಣೆಯ ಪ್ರಭಾವದಿಂದ ಭವಿಷ್ಯದ ವಾಣಿಯನ್ನು ಕಾರಣಿಕದ ನುಡಿ, ಸಿದ್ದಟ್ಟಿಕೆ ನುಡಿ, ಹೇಳಿಕೆ, ಭವಿಷ್ಯದ ಜಾತಕವೆಂದು ವೈರುಧ್ಯದಿಂದ ಕರೆಯುತ್ತಾರೆ. ಭಾಷಿಕವಾಗಿ ಅನೇಕ ಪದರಚನೆಯನ್ನು ಹೊಂದಿದ್ದರು. ಕುರುಬರು ನೇಮನಿತ್ಯದಿಂದ ಹೇಳುವ ನುಡಿಗಳು ಜೀವಂತಿಕೆಯನ್ನು ಪಡೆದಿರುತ್ತವೆ. ಹೀಗೆ ಜನಪದರು ಪರಂಪಲಾನುಗತ ಜ್ಞಾನದ ಅನುಭವಗಳನ್ನು ಹಲವಾರು ಪ್ರಕಾರಗಳಲ್ಲಿ ಅಭಿವ್ಯಕ್ತಪಡಿಸುತ್ತಾರೆ. ಈ ಪ್ರಕಾರಗಳು ಮಳೆ ಬೆಳೆ ಕುರಿತಾಗಿ ಇರುವುದು ವಿಶೇಷಕರವಾಗಿದೆ. ಮಳೆ ಬಂದರೆ ಬೆಳೆ, ಬೆಳೆ ಬಂದರೆ ಬಾಳು ಎಂಬುದನ್ನು ಈ ಒಂದು ಸಾಲಿನಲ್ಲಿಯೇ ಅಡಕವಾಗಿರುತ್ತದೆ. ಕುರುಬರು ಮಳೆಯನ್ನು ನಂಬಿ ಪ್ರಮುಖವಾದ ಎರಡು ವೃತ್ತಿಯನ್ನು ಅನಾದಿಕಾಲದಿಂದಲೂ ಮಾಡಿಕೊಂಡು ಬರುತ್ತಿದ್ದಾರೆ. ಇವರು ಕುರಿ ಸಾಕಾಣಿಕೆಯ ಜೊತೆ ಜೊತೆಗೆ ಕೃಷಿಯನ್ನು ಸಂಪ್ರೀತಿಯಿಂದ ನಿರ್ವಿಸುವ ಕಸುಬುದಾರರು. ಈ ಎರಡು ವೃತ್ತಿಗಳು ಕೇವಲ ಕುರುಬ ಸಮುದಾಯವಮ್ಮು ಮಾತ್ರ ಅಭಿವೃದ್ಧಿಯೊದನೆ ಸರ್ವರ ಕಲ್ಯಾಣವನ್ನು ಬಯಸುವುದು.

ಪ್ರಕೃತಿಯಲ್ಲಿ ಜೊತೆಗೂಡಿ ಆರಂಭಿಸಿದ ಜೀವನವನ್ನು ಸ್ವಾಭಾವಿಕವಾಗಿಯೇ ಪ್ರೀತಿಯಿಂದ ಕಾಣುವುದು ರೂಢಿಯಾಗಿದೆ. ಪ್ರಕೃತಿಯನ್ನು ಗೆಲ್ಲಬೇಕಾದರೆ ಮನುಷ್ಯ ಪೂಜೆ ಪುನಸ್ಕಾರದಿಂದಲೇ ಎಂಬುದನ್ನು ಎಲ್ಲರೂ ಅರಿತಿದ್ದಾರೆ. ಅದೇ ರೀತಿ ಹಾಲುಮತ ಸಮುದಾಯವು ಹೊರತಾಗಿಲ್ಲ. ಹಾಲುಮತದವರಲ್ಲಿಯೇ ಹೇಳಿಕೆಯನ್ನು ಹೇಳುವ ವರ್ಗಕ್ಕೆ ಕುರುಬರ ಗುರು ಒಡೆಯರು, ಶಿಷ್ಯರ ಮಕ್ಕಳು, ಆಳು ಮಕ್ಕಳು ಎಂದು ಕರೆಯುತ್ತಾರೆ. ಅಲ್ಲದೆ ಕುರುಬರಿಗೆ ಇವರು ಗುರುವಿನವರು. ಇವರೇ ಪ್ರತಿ ವರ್ಷ ಜಾತ್ರೆ ಉತ್ಸವದಲ್ಲಿ ಹೇಳಿಕೆಯನ್ನು ಹೇಳುತ್ತಾರೆ. ಐಯ್ನೊರು ರೀತಿಯಲ್ಲಿ ಇವರು ಕಾರ್ಯನಿರ್ವಹಿಸುತ್ತಾರೆ. ಇವರು ಹೇಳುವ ಅನುಭವದ ನುಡಿಗಳು ವಾಸ್ತವತೆಯನ್ನು ಹೇಳುತ್ತವೆ. ಉದಾಹರಣೆಗೆ ಕಂಬಳಿಯ ಕುರಿತು ಮಾಹಿತಿ ಸಂಗ್ರಹಿಸುವಾಗ ಹಿರಿಯರಾದ ಬಿ.ಸಿ.ಪಾಟೀಲರು ಈ ರೀತಿ ಹೇಳುತ್ತಾರೆ. ಇವರಿಗೆ ೯೨ ವರ್ಷ ವಯಸ್ಸು, ಮುಂಡರಗಿ ತಾಲೂಕಿನ ಡೋಣಿ ಗ್ರಾಮದ ಪಶ್ಚಿಮಕ್ಕೆ ಕಪ್ಪತಗುಡ್ಡವಿದೆ. ಅದಕ್ಕೆ ಹೊಂದಿಕೊಂಡಂತೆ ಮಲ್ಲಯ್ಯನ (ಮಳಯ್ಯ) ಮರಡಿಯಿದೆ. ಈ ಮರಡಿಯ ಮೇಲೆ ಕುರುಬ ನಿಂತು ಕಂಬಳಿ ಬೀಸಿ ಮಳೆಯನ್ನು ತರಿಸಿದ ಘಟನೆಯನ್ನು ಸ್ವತಃ ಪಾಟೀಲ್ ಅವರು ೧೯೨೮ರಲ್ಲಿ ನಡೆದ ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ. ಈಗಲೂ ಕುರುಬರ ಒಡೆಯರು ಹೇಳುವ ನುಡಿಗಳು ಸತ್ಯವನ್ನು ಹೊಂದಿವೆ ಎಂದು ತಿಳಿಸತ್ತದೆ.

'ಕರಿಯ ಕಂಬಳಿ ಮುಂದಾಯಿತು ಬೆಳೆ ಹಿಂದಾಯಿತು' ಈ ಹೇಳಿಕೆಯು ಮಳೆ ಮತ್ತು ಬೆಳೆ ಕುರಿತು ಹೇಳಿದ ವಾಕ್ಯವಾಗಿದೆ. ಕಂಬಳಿಯಿಂದ ಮಳೆ ತರಿಸುವುದು ಕುರುಬರ ಆಧ್ಯಾತ್ಮಿಕ ತತ್ವದ ಕೈಚಳಕ. ಆದ್ದರಿಂದ ಕರಿ ಕಂಬಳಿಯಿಂದ ಮಳೆ ಅಧಿಕವಾಗಿ ಬೆಳೆಯು ನಾಶವಾಗುವುದು ಎಂಬರ್ಥವನ್ನು ಸೂಚಿಸುತ್ತದೆ. ಮಳೆಯಿಂದ ಬೆಳೆ ಹಿಂದಾದರೂ ಕುರಿಗಳಿಗೆ ಯಾವ ತೊಂದರೆಯಿಲ್ಲ ಎಂಬುದನ್ನು ಹೇಳುತ್ತದೆ. ಏಕೆಂದರೆ ಮಳೆ ಎಷ್ಟೆ ಬಂದರೂ ಕುರಿಗುಳು ಚಲ್ಲಾಪಿಲ್ಲಿಯಾಗಿದೆ.

ಹಿಂಡು ಹಿಂಡಾಗಿ ಕೂಡಿಕೊಂಡು ಚಲಿಸುತ್ತವೆ. ಹಾಗೂ ಕುರಿಯ ಕೂದಲು ದಟ್ಟವಾಗಿರುವುದರಿಂದ ಅವುಗಳಿಗೆ ಚಳಿಯ ಅನುಭವವಾಗದು. ಎಷ್ಟೇ ನೀರು ಬಿದ್ದಿದರೂ ಮೈಯನ್ನು ಕೊಡವಿ ಮತ್ತೆ ಬಾಯಿಯನ್ನು ನೆಲಕ್ಕೆ ಅಂಟಿಸಿ ಮೇಯುವ ಸ್ವಭಾವವನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಕುರುಬರ ಕುರಿಯು 'ಸೂಜಿಮೊನೆಯಟು ಮೊಳಕೆಯಿದ್ದರೂ ಗೂದಿಹೊಂಡುವಂತೆ ಮೇಯುತ್ತದೆಂದು ಹೇಳುತ್ತಾರೆ. ಇದ್ದರಿಂದ ಕುರಿಗಳಿಗೆ ಅಬ್ಬರ ಮಳೆಯು ಜೀವನಕ್ಕೆ ಅಡ್ಡಿಮಾಡದೆಂದು ತಿಳಿಸುತ್ತದೆ.

ಕರಿಕಾಳು ಮುಂದಾಯಿತು, ಬಿಳಿಕಾಳು ಹಿಂದಾಯಿತು ಕುರುಬರ ಹೇಳಿಕೆಗಳು ಒಂದು ಜನರ ಪರವಾಗಿದ್ದರೆ ಮತ್ತೊಂದು ಜನರ ವಿರೋಧಿ ಜೀವನಕ್ಕೆ ಸಂಬಂಧಿಸಿರುತ್ತದೆ. ಕರಿಕಾಳು ಎಂದರೆ ಸೂರ್ಯಕಾಂತಿ ಈ ಬೆಳೆಯು ಹೊರನೆಲದಲ್ಲಿ ಬೆಳೆಯುವ ಪೈರು ಹಾಗಾಗಿ ಮಳೆಯು ಅಲ್ಪವಾಗಿ ಸುರಿದರು ಅಡ್ಡಿಯಿಲ್ಲ ಆದರೆ ಜೋಳವು ಹೊರನೆಲದಲ್ಲಿ ಬೆಳೆದರೂ ನೆಲವು ಒಂದು ಹಂತದಲ್ಲಿ ಹದವಾಗಿರುವುದಕ್ಕೆ ಮಳೆಯು ಬೇಕು. ಅದಕ್ಕಾಗಿಯೇ 'ರೋಹಿಣಿ ಮಳೆಗೆ ಓಣಿ ತುಂಬಾ ಜೋಳ' ಎಂದು ರೈತರು ನಂಬಿದ್ದಾರೆ. ಇದು ಮುಂಗಾರಿ ಬೆಳೆಯಲ್ಲಿ ಬರುತ್ತದೆ. ಕರಿಕಾಳು ಬರಗಾಲವನ್ನು, ಅಲ್ಪ ಮಳೆಯು ಬರುವಿಕೆಯನ್ನು ಸೂಚಿಸುತ್ತದೆ.

ಕುರುಬರ ಹೇಳಿಕೆಗಳನ್ನು ಪುರಾಣಗಳಲ್ಲಿ ಪ್ರಸ್ತಾಪಿಸದೆ ಹೋಗಿರುವುದು ವಿಷಾದಕರ ಸಂಗತಿಯಾಗಿದೆ. ಪುರಾಣಗಳು ಕುರುಬ ಸಮುದಾಯದ ಹುಟ್ಟು, ಬೆಳವಣಿಗೆ, ಮತ ಪ್ರಚಾರ, ಮತವನ್ನು ಉಳಿಸಿಕೊಳ್ಳುವ ಬರದಲ್ಲಿಯೇ ಮಗ್ನರಾಗಿ ಬಿಟ್ಟಿದ್ದಾರೆ ಎಂದು ಕಂಡು ಬರುತ್ತದೆ ಏಕೆಂದರೆ ಸಮಾಜದ ಅನ್ಯ ವರ್ಗದವರ ಜೊತೆಗೆ ಸರಿಸಮವಾಗಿ ನಿಲ್ಲುವುದು ಮುಖ್ಯವಾಗಿತ್ತು ಅನಿಸುತ್ತದೆ. ಮೊದಲು ಅಸ್ಮಿತೆ ಉಳಿದರೆ ನಂತರ ವೃದ್ಧಿಯ ಕಡೆಗೆ ಗಮನಕೊಡಬಹುದೆಂದು ಆಲೋಚಿಸಿರಬಹುದು ಎಂದು ತಿಳಿದುಬರುತ್ತದೆ. ಆದರೆ ಮತ ಪ್ರಚಾರ ಮೌಖಿಕದಿಂದ ದಾಖಲೀಕರಣಗೊಂಡರೂ ಮೌಖಿಕ ಹೇಳಿಕೆಗಳನ್ನು ಏಕೆ ಲಿಖಿತ ಪುರಾಣಗಳಲ್ಲಿ ದಾಖಲಿಸಿಲ್ಲ ಎಂಬುದು ಪ್ರಶ್ನೆಯು ಕಾಡುತ್ತದೆ. ಈ ಪ್ರಶ್ನೆಗೆ ಸಾಮಾನ್ಯವಾಗಿ ಈ ರಿತಿಯ ಉತ್ತರ ನೀಡಬಹುದು ಅನಿಸುತ್ತದೆ. ಸಮುದಾಯು ಭೂಮಿಯಲ್ಲಿ ಬೇರೂರಿದ ನಂತರ ತನ್ನ ತಾನಾಗಿಯೇ ಅದರ ಅನುಯಾಯಿಗಳು ಹೇಳಿಕೆಗಳನ್ನು ಮನದಲ್ಲಿ ದಾಖಲೀಕರಿಸಿದರು. ಇಡೀ ಪುರಾಣ ಕಥೆಯನ್ನು ಸ್ಮರಣೆಯಲ್ಲಿಡುವುದಕ್ಕಿಂತ ಅನುಭವದ ಒಂದೇ ವಾಕ್ಯವೂ ಮಾನವರ ಮನಸ್ಸಿನಿಂದ ಅವನತಿ ಹೊಂದಲಿಕ್ಕೆ ಸಾಧ್ಯವಿಲ್ಲವೆಂದು ಅರಿತಿದ್ದರೆಂದು ಕಾಣುತ್ತದೆ. ಅದಕ್ಕಾಗಿ ಪುರಾಣ ನಾಯಕನನ್ನು ಮಾತ್ರ ದಾಖಲಿಸಿ ಅವರ ಹೇಳಿಕೆಯನ್ನು ದಾಖಲೀಕರಿಸದೆ ಹೋಗಿರಬಹುದು ಎಂದು ಊಹಿಸಬಹುದಾಗಿದೆ. ಅದೇ ರೀತಿ ಹಾಲುಮತದ ನಾಯಕರುಗಳ ಜೀವನ ಚರಿತ್ರೆಯ ಮಾಹಿತಿಗಿಂತ ಅವರು ಹೇಳಿದ ನುಡಿಗಳು ಶಾಶ್ವತ ಇತಿಹಾಸವನ್ನು ಪಡೆದಿವೆಯೆಂದು ಇಂದಿನ ಕುರುಬರ ಗುರು ಒಡೆಯರ ಹೇಳಿಕೆಗಳೇ ಪ್ರಸ್ತುತ ನಿದರ್ಶನ.

**೨. ಧಾರ್ಮಿಕ ಮೌಲ್ಯಗಳು**

ಸಮುದಾಯವು ಅನುಭವಾತ್ಮಕವಾದ ಕಥೆಯನ್ನು ಪುರಾಣಗಳಲ್ಲಿ ಅಡಗಿಸಿರುತ್ತವೆ. ಭೂಮಿ, ಸೂರ್ಯ, ಚಂದ್ರ, ಗಾಳಿ, ನೀರು, ಬೆಂಕಿಯನ್ನು ದೇವರೆಂದು ಭಾವಿಸುತ್ತಾ ಪೂಜಿಸುತ್ತಲೇ

ಬಂದಿವೆ. ಈ ಅಂಶಗಳು ಪೂರ್ವಜರ ಚರಿತ್ರೆಯನ್ನು ಎಣಿಯುವುದಕ್ಕೆ ಆಸಕ್ತಿಯಾಗಿರವುದು ಕಂಡು ಬರುತ್ತದೆ. ಮನುಷ್ಯ ಎಷ್ಟೇ ಅಭಿವೃದ್ಧಿಯನ್ನು ಪಡೆದರು ಈ ಮೇಲಿನ ಪ್ರಪಂಚವನ್ನು ಹೊರತು ಪಡಿಸಿ ಬದುಕಲಾರ. ಆಗಾಗಿ ಶತಶತಮಾನದಿಂದಲೂ ಪರಿಸರ ಮತ್ತು ಮಾನವ ಜೀವನದ ಸಂಪರ್ಕ ಬಿಟ್ಟು ಬಿಡದೆ ಸಾಗಿರಬರುತ್ತಿದೆ. ಇವೆರಡು ಒಂದೇ ಹಾದಿಯಲ್ಲಿ ಬರುವಾಗ ಕೌಶಲ್ಯತೆಯಿಂದ ಪರಸ್ಪರ ಮೌಲ್ಯಯುಕ್ತವಾಗಿ ಕಾರ್ಯ ನಿರ್ವಹಿಸಿರುತ್ತವೆ. ಆ ಕಾರ್ಯಗಳ ಆಯಾ ಪ್ರದೇಶಕ್ಕೆ ಸೀಮಿತವಾದರೆ ಅಲ್ಲಿನ ಮತಗಳಿಗೆ ಅನುಸಾರವಾಗಿ ಮೌಲ್ಯವನ್ನು ಪಡೆಯುತ್ತವೆ. ಜೈನರು ತಮ್ಮ ಧರ್ಮ ಶ್ರೇಷ್ಠವೆಂದು ತಿಳಿಸಲು ತೀರ್ಥಂಕರರಾಗಿ ಸಲ್ಲೇಖನ ವ್ರತವನ್ನು ಆಚರಿಸಿದರು. ವೈದಿಕರು ಭಗವಂತ (ವಿಷ್ಣು)ನೇ ಶ್ರೇಷ್ಠವೆಂದು ಉಪಾಸನೆಯ ಜೊತೆಗೆ ಉಪವಾಸವನ್ನು ಆಯ್ದುಕೊಂಡರು. ಅದೇ ರೀತಿ ಶಿವನಾರಾಧಕರು ಉಪಾಸನೆ, ಉಪವಾಸ, ವ್ರತಗಳಿಗಿಂತ ಕಾಯಕಕ್ಕೆ ಮಹತ್ವಕೊಟ್ಟರು. ಆದ್ದರಿಂದ ಸಮಾಜದ ಅನೇಕ ರೀತಿ ವೃತ್ತಿಗಾರರು ಶಿವನನ್ನು ಅವರವರ ನೆಲೆಯಲ್ಲಿಯೇ ಆರಾಧಿಸತೊಡಗಿದರು. ಹೀಗೆ ಆರಾಧಿಸುವ ವಿಧಿ ವಿಧಾನಗಳು, ಪರಿಭ್ರಮಣ, ನೆಲೆಗಳು, ಸ್ಥಾವರದಿಂದ ಜಂಗಮದ ನೆಲೆಯಲ್ಲಿ ಅಭಿವ್ಯಕ್ತವಾಗತೊಡಗಿವೆ. ಈ ಶಿವನಾರಾಧಿಸುವವರಲ್ಲಿ ವೀರಶೈವದವರ ನಂತರ ದೇವರನ್ನು ಜಂಗಮವಾಗಿ ಕಂಡವರೆಂದರೆ ಸಮಾಜದಲ್ಲಿನ ಬಹುಸಂಖ್ಯಾತರಾದ ಹಾಲುಮತದವರು ಆಗಿದ್ದಾರೆ. ವೀರಶೈವದವರು ಇಷ್ಟಲಿಂಗವನ್ನು ಒಪ್ಪಿಕೊಂಡರೆ ಹಾಲುಮತದವರು ಸಹ ಲಿಂಗಧಾರಿಗಳಾಗಿ ಜೀವಿಸಿದವರು. ಸಹಲಿಂಗವೆಂದರೆ ವೃತ್ತಿಯನ್ನೆ ಏಕನಿಷ್ಠೆಯಿಂದ ಪೂಜಿಸುವುದು. ವೀರಶೈವದವರು ವಿವಿಧ ತರಹದ ಕಾಯಕ ಮಾಡುವರು ಅವರವರ ಸಾಧನ ಸಲಕರಣೆಯನ್ನು ದೈವತ್ವದ ನೆಲೆಯಲ್ಲಿ ಕಾಣುತ್ತಾರೆ. ಆದರೆ ಹಾಲುಮತದವರು ಅನೇಕ ಪ್ರದೇಶಗಳಲ್ಲಿ ಜೀವಿಸಿದರು ಪರಸ್ಪರ ಒಂದೇ ರೀತಿಯ ಧಾರ್ಮಿಕ ಮೌಲ್ಯವನ್ನು ಕಾಪಾಡುತ್ತಿದ್ದಾರೆ. ಉದಾಹರಣೆಗೆ ಕುರುಬರಿಗೆಲ್ಲಾ ಕಂಬಳಿಯು ಮಹತ್ವದ ವಸ್ತುವಾಗಿ ಗೋಚರಿಸುತ್ತದೆ. ಅದೇ ರೀತಿ ಕುರಿಗಳಿಂದ ಕಂಬಳಿ, ಕಂಥೆ ಸೇವೆ, ಪಾದ ಪೂಜೆ, ಡೋಣಿ ಸೇವೆ, ಸಿದ್ದಟ್ಟಿ ನುಡಿಗಳು, ಕಾರಣಿಕದ ನುಡಿಗಳು ಧಾರ್ಮಿಕ ಮೌಲ್ಯಗಳಾಗಿ ಇಂದಿಗೂ ಸ್ಥಾನವನ್ನು ಕಾಪಾಡಿಕೊಂಡು ಬರುತ್ತಿವೆ.

ಕುರುಬರು ಕುರಿಕಾಯುವ ವೃತ್ತಿಯನ್ನು ಅನುಸರಿಸಿದ್ದರಿಂದ ಲಿಂಗದ ಪರಿಕಲ್ಪನೆಯೂ ಬಯಲಿನಲ್ಲಿ ಆತ್ಮವಾಗಿ, ಗಾಳಿಯಲ್ಲಿ ಉಸಿರಾಗಿ, ಬೆಳಕಿನಲ್ಲಿ ಜ್ಞಾನದ ಬೆಳಕಾಗಿ ಗೋಚರಿಸುತ್ತದೆ. ನಿಂತಲ್ಲಿ ನೆಲೆಯನ್ನು ಪಡೆಯುವ, ಹೋದಲ್ಲಿ ಹೋಗುವ ಸಂಚಾರತ್ವವನ್ನು ಮಾಡುತ್ತಲೇ ಇರುತ್ತದೆ. ಈ ಕಾರಣದಿಂದ ಸಮಾಜದಲ್ಲಿ ಅನೇಕ ಜನರ ಜೀವನ ಶೈಲಿ, ಆಚರಣೆಯ ಜೊತೆಗೆ ಬಾಳಬೇಕಾದುದ್ದರಿಂದ ತಮಗೆ ಹತ್ತಿರವಾದ ಜನರ ಆಚರಣೆಯ ಅಂಶಗಳಿಂದ ಲಿಂಗತ್ವದ ನೆಲೆಯಲ್ಲಿ ಬದಲಾವಣೆಯನ್ನು ಮಾಡಿಕೊಂಡಿರುವುದನ್ನು ಗಮನಿಸಬಹುದು. ಹಾಲುಮತದವರಿಗೆ ಧಾರ್ಮಿಕ ಕ್ಷೇತ್ರದಲ್ಲಿ ಸಮವಾಗಿ ನಿಲ್ಲುವರೆಂದರೆ ವೀರಶೈವದವರೇ ಆಗಿದ್ದಾರೆ. ಹಾಗಾಗಿ ಇವರ ಆಚರಣೆ ಮತ್ತು ಹಾಲುಮತದವರ ಆಚರಣೆಗಳಲ್ಲಿ ಸಾಮ್ಯತೆ ಕಂಡುಬರುತ್ತವೆ.

"ಜನಪದ ಸಾಮಾಜಿಕರ ನೈತಿಕ ಮತ್ತು ಧಾರ್ಮಿಕ ಪ್ರಜ್ಞೆ ದೃಢವಾಗಿರುತ್ತದೆ. ಆ ಜನ ಪವಿತ್ರವಾದ ವಸ್ತು ಸಂಗತಿಗಳನ್ನು ನಂಬುತ್ತಾರೆ. ಹಾಗಾಗಿ ಅವರ ನಿರ್ಧಾರಗಳ ಸರಿ ಅಥವಾ ತಪ್ಪು ಎಂಬ ಭಾವನೆ ಅವರ ಅಪ್ರಜ್ಞಾತ್ಮಕ ಸಾಮಾಜಿಕ ಭಾವನೆಯಿಂದ ಹೊಮ್ಮುತ್ತದೆ. ಆದ್ದರಿಂದ ಅದು ಅಲೌಕಿಕವೂ, ನಿರ್ಬಂಧಾತ್ಮಕವೂ, ಪ್ರಬಲವು ಆಗಿರುತ್ತದೆ."[೨] ಈ ಹೇಳಿಕೆಯೂ ಜನಪದರು ಕಲ್ಪನೆಯ ಮೂಲಕ ಕಥೆ, ಪುರಾಣಗಳನ್ನು ಕಟ್ಟಿದ್ದರೂ ಅವರಲ್ಲಿ ವಾಸ್ತವತೆಯ ಕ್ರಿಯಾತ್ಮಕತೆಯನ್ನು ಕಾಣುತ್ತೇವೆ. ಅದು ಅಪರಿಮಿತವಾಗಿದ್ದರೂ ಪ್ರಾಮಾಣಿಕ ಧಾರ್ಮಿಕ ನಿಷ್ಠೆಯ ಅಂಶವಾಗಿರುತ್ತದೆ. ಪವಾಡ ತಂತ್ರಗಳ ಮೂಲಕವೇ ಸಮಾಜದ ಸಮಸ್ಯೆಗಳನ್ನು, ಮನಸ್ಸುಗಳನ್ನು ಹತೋಟಿಗೆ ತರುತ್ತವೆ. ಇವತ್ತಿನ ಕಾನೂನು ನಿಯಮದಂತೆ ನೀತಿ ಸಂಹಿತೆಯನ್ನು, ಕಟ್ಟಳೆಯ ರೂಪದಲ್ಲಿ ರೂಪಿಸಿಕೊಂಡು ತದಾತ್ಮಕ ಜೀವನವನ್ನು ನಡೆಸಲು ಯೋಗ್ಯವಾದ ವಿಚಾರಗಳಾಗಿರುತ್ತವೆ. ಹಾಗಾಗಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬ ವಿಚಾರಗಳ ಪ್ರಸಾರ ಕಾರ್ಯವನ್ನು ವ್ಯಕ್ತಿಗತದ ಮೂಲಕ ಸಾಮೂಹಿಕತೆಗೆ ಅನ್ವಯಿಸುತ್ತವೆ. ಈ ಪ್ರಸರಣ ಕಾರ್ಯ ತಂತ್ರಕ್ಕೆ ಜನಪದರು ನೇರವಾಗಿ ಜೀವನದ ದಿನನಿತ್ಯ ಆಚರಣೆಯನ್ನು ಆರಿಸಿಕೊಂಡಿರುವುದು ಗಮನಿಸುವ ಅಂಶವಾಗಿದೆ. ಜನಪದರು ಕುಲಸಂಕಥನಗಳನ್ನು ಹೇಳುವಲ್ಲಿ ಯಾವ ಪ್ರಕಾರವೂ ಸಹ ನಿರ್ಭಾವುಕವಾಗಿ ಹೇಳಿಲ್ಲ. ಕಥೆಯ ಆಪ್ತತೆಗೆ ಉಪಕತೆಗಳನ್ನು ಪೂರ್ವದಲ್ಲಿ ಹೇಳುವುದು ರೂಢಿ. ಉದಾಹರಣೆಗೆ ಹಾಲುಮತ ಪುರಾಣಗಳು ಯಾವ ಕಾರಣಕ್ಕೆ ರಚನೆಯಾದವು ಎಂಬ ಪ್ರಶ್ನೆಯಿಂದ ಉತ್ತರ ಕಂಡುಕೊಳ್ಳಬಹುದು. ಪುರಾಣಗಳ ಮುಖ್ಯ ವ್ಯಕ್ತಿಯು ಕೈಲಾಸದಲ್ಲಿ ಶಾಪ ಹೊಂದಿದವರಾಗಿರುತ್ತಾರೆ. ಅದರ ವಿಮೋಚನೆಗೆ ನರಜನ್ಮವೇ ಶ್ರೇಷ್ಠ ಎಂಬ ಭಾವನೆಯನ್ನು ಜನರು ಜೀವ/ದೇಹದ ಮೇಲೆ ಇಟ್ಟ ಆಸ್ತೆಯನ್ನು ತೋರಿಸುತ್ತದೆ. ಆ ಜೀವ ಪ್ರೀತಿಯೇ ಮತ್ತಷ್ಟು ಪ್ರಬಲವಾಗಿ, ಶಾಸ್ವತ ನೆಲೆಯನ್ನು ಹೊಂದಲು ಧಾರ್ಮಿಕ ಆಚರಣೆಯನ್ನು ಆರಿಸಿಕೊಂಡಿರುವುದು ಜನರ ಧಾರ್ಮಿಕ ಪ್ರಜ್ಞೆಯನ್ನು ತಿಳಿಸುತ್ತದೆ.

ಪುರಾಣಗಳಲ್ಲಿ ವ್ಯಕ್ತವಾಗಿರುವ ಪವಾಡಗಳು ಜನಮಾನಸದ ದಿವ್ಯ ಧ್ವನಿಯಾಗಿ ಕೇಳಿಸುತ್ತವೆ. ಜನರು ಕಾಡಿನ ಬದುಕನ್ನು ಪ್ರೀತಿಸುವ ಮತ್ತು ಪ್ರಕೃತಿಯನ್ನು ಆರಾಧಿಸುವ ಸೂಕ್ಷ್ಮ ಮನಸ್ಸುಳ್ಳವರಾಗಿದ್ದಾರೆ. ವರ್ಗದಿಂದ, ನವನಾಗರಿಕತೆಯ ತುತ್ತತುದಿ ತಲುಪಿದ್ದರು ಎಲ್ಲರ ಬದುಕಿನಲ್ಲೂ, ಎಲ್ಲ ಕಾಲಕ್ಕೂ ಹೊಂದಿಕೊಂಡು ಜಾನಪದವು ಒಂದಿಲ್ಲೊಂದು ಬದಲಾವಣೆಯಾಗುತ್ತಾ ಬಂದಿರುವುದು ಸತ್ಯ. ಈ ಆಚರಣಾ ನೆಲೆಗಳು ಕಾಲ ಕಾಲದಿಂದ ನಡೆದುಕೊಂಡು ಬಂದು ಸಮಾಜದ ಜನರು ಗೌರವಿಸುವ ಸ್ಥಾನವನ್ನು ಪಡೆದವು. ಆಗ ಅವುಗಳು ಸಮಾಜದಲ್ಲಿ ಮೌಲ್ಯಗಳಾಗಿ ಮಾರ್ಪಟ್ಟವು. ಹೀಗೆ ಮಾರ್ಪಾಟ್ಟ ಮೌಲ್ಯಗಳೆಂದರೆ ಹಾಲುಮತದವರ ಲಿಂಗ ದೀಕ್ಷೆ, ಕಂಥೆ ಸೇವೆ, ಡೋಣಿ ಸೇವೆ, ಭಂಡಾರ ಸೇವೆ, ಪಾದ ಪೂಜೆ, ಸಿದ್ಧಟ್ಟಿ ನುಡಿಗಳು, ಕುರುಬರ ಪಂಗಡಗಳ ನಿರ್ವಚನ, ಕುರುಬರ ಗುರು ಒಡೆಯರು ಮುಂತಾದವು ಧಾರ್ಮಿಕ ಮೌಲ್ಯಗಳಾಗಿ ಕುರುಬರಲ್ಲಿ ಪ್ರಸಾರಗೊಳ್ಳುತ್ತಿವೆ.

### i. ಲಿಂಗದೀಕ್ಷೆ

ಹಾಲುಮತದವರು ಶಿವನಿಂದಲೇ ಜನಿಸಿದವರ ಎಂಬ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ. ಆದ್ದರಿಂದ ನಮಗೆ ಲಿಂಗತ್ವವು ಜನ್ಮಜಾತವಾಗಿಯೇ ಜೊತೆಯಲ್ಲಿ ಬಂದಿದೆ ಎಂದು ಹೇಳುತ್ತಾರೆ. ಹಾಲುಮತ ಪುರಾಣಗಳಲ್ಲಿ ಎಲ್ಲಿಯೂ ಲಿಂಗಧಾರಣೆಯನ್ನು ಮಹತ್ವವಾಗಿ ಹೇಳಲ್ಲ. ಆದರೆ ಶಾಂತಮುತ್ತಯ್ಯನು ಲಿಂಗ ದೀಕ್ಷೆಯನ್ನು ರೇವಣಸಿದ್ದರಿಂದ ಮಾಡಿಸಿಕೊಳ್ಳುತ್ತಾನೆ. ಏಕೆಂದರೆ ಶಾಂತಮುತ್ತಯ್ಯನು ತಂದೆ ಪದ್ಮಗೊಂಡನಿಂದ ಬೇರೆಯಾಗಿ ಜೀವನ ಸಾಗಿಸಲು ಸರೂರಿಗೆ ಆಗಮಿಸುವನು. ಈಗಾಗಲೇ ಕಲ್ಯಾಣಪುರದಿಂದ ಬಹಿಷ್ಕಾರಗೊಂಡಿದ್ದ ಕುರುಬರನ್ನು ಮತ್ತೆ ಕಲ್ಯಾಣದೊಳಗೆ ಸೇರಿಸಲು ಅಲ್ಲಿನ ಲಿಂಗಧಾರಿಗಳ ಸರಿಸಮಾನವಾಗಿ ಮೇಲನೋಟಕ್ಕೆ ಕಾಣಬೇಕು. ಅದಕ್ಕಾಗಿ ರೇವಣಸಿದ್ಧರು ಶಾಂತಮುತ್ತಯ್ಯನಿಗೆ ಕೀಳಾದ ಕುಲವನ್ನು ಮೇಲು ಮಾಡು ಎಂದು ಲಿಂಗದೀಕ್ಷೆಯನ್ನು ಗೈಯುವರು. ಈ ಸನ್ನಿವೇಶವು 'ಮುಳ್ಳನ್ನು ಮುಳ್ಳಿನಿಂದಲೇ' ತೆಗೆಯಬೇಕು ಎಂಬ ಸ್ವಾರಸ್ಯಾರ್ಥವನ್ನು ತಿಳಿಸುತ್ತದೆ. ಕುರುಬ ಕುಲವನ್ನು ಬಹಿಷ್ಕರಿಸಿದ ಕಲ್ಯಾಣಪುರ ಕೃತಕ ಲಿಂಗಧಾರಿಗಳಿಗೆ ಬುದ್ಧಿಕಲಿಸಲು ಕೈಗೊಂಡ ಮೊದಲ ಕಾರ್ಯವೇ ಈ ಲಿಂಗದೀಕ್ಷೆಯಾಗಿದೆ. ಹಾಲುಮತದವರು ಯಾವ ಕಾಲದಲ್ಲಿ ಲಿಂಗದೀಕ್ಷೆಗೆ ಮೊರೆ ಹೋದರೆಂದು ಸಿದ್ಧಮಂಕ ಚರಿತೆ, ತಗರ ಪವಾಡ, ಹಾಲುಮತೋತ್ತೇಜಕ ಪುರಾಣಗಳು ತಿಳಿಸಿಕೊಡುತ್ತವೆ. ಜೊತೆಗೆ ಗೊಲ್ಲಾಳೇಶ್ವರನು ಶ್ರೀಶೈಲದಿಂದ ಲಿಂಗವನ್ನು ಪಡೆದುದು ತಿಳಿದುಬರುತ್ತದೆ.

''ಲಿಂಗ' ಶಬ್ದದ ಮುಂದೆ 'ದೀಕ್ಷೆ' ಎಂಬುದು ಸೇರಿ ಭಾವೋತ್ಕಟತೆಯನ್ನು ಉಂಟುಮಾಡಿದೆ. 'ಲಿಂಗ' ಪದದ ಅರ್ಥವು ಶಿವನನ್ನು ಸೂಚಿಸಿದರೆ, ದೀಕ್ಷೆಯು ಸಂಕೀರ್ಣ ಅರ್ಥವನ್ನು ಸೂಚಿಸುತ್ತದೆ. 'ದೀಕ್ಷೆ' ಎಂಬ ಪದಕ್ಕೆ ಸಾಮನ್ಯ ಹಾಗೂ ವಿಶೇಷ ಅರ್ಥಗಳುಂಟು. ದಕ್ಷತೆಯಿಂದ ಸತ್ಕಾರ್ಯ ನಿರ್ವಹಣೆಗೆ ಸನ್ನದ್ಧರಾಗಿ ಕಂಕಣಬದ್ಧರಾಗಿ ಇರುವುದು ಎಂಬುದು ಅದರ ಸಾಮಾನ್ಯ ಅರ್ಥವೆನಿಸಿದರೆ, ಒಂದೂ ಆಗಮಿಕ ವಿಧಿ, ಧಾರ್ಮಿಕ ಸಂಸ್ಕಾರ, ಅನುಗ್ರಹ, ಗುರುಕಾರುಣ್ಯ ಎಂಬುವು ಅದರ ವಿಶೇಷಾರ್ಥಗಳಾಗಿವೆ. ''ಭವಿತನದಿಂದ ಭಕ್ತತ್ವಕ್ಕೆ ಬರಿಸುವ ಒಂದು ಸಂಸ್ಕಾರ. ದೈಹಿಕ ದೋಷಗಳನ್ನು ಕಳೆದು ಶುದ್ಧವಿಸಿ ಅಂಗವನ್ನಾಗಿಸುವ ಕ್ರಿಯೆ. ಜೀವಭಾವವನ್ನು ತೊಲಗಿಸಿ ಲಿಂಗವನ್ನಾಗಿಸುವ ವಿಧಾನ. ಪ್ರಾಕೃತತೆಯಿಂದ ಅಪ್ರಕೃತತೆಗೆ ರೂಪಾಂತರಿಸುವ ಪ್ರಕ್ರಿಯೆ. ಮಾಂಸಪಿಂಡವನ್ನು ಮಾರ್ಪಡಿಸಿ ಮಂತ್ರಪಿಂಡವನ್ನಾಗಿಸುವ ಮಾಂತ್ರಿಕ ಕ್ರಿಯೆ. ಪ್ರಾಣವಿಕಾರವನ್ನಳಿಸಿ ಪ್ರಾಣಾವಾಕಾರವನ್ನಾಗಿಸುವ ಪ್ರವಿಧಿ. ಭಾವವನ್ನು ಶುದ್ಧವಿಸಿ ಭ್ರಾಂತಿಯನ್ನು ಭಾವೋತ್ಕಟತೆಯನ್ನುಂಟು ಮಾಡಿ ಭಾವುಕರನ್ನಾಗಿಸುವ ಭೂಮಕ್ರಿಯೆ. ದೃಷ್ಟಿಗೆ ದೂರ ದರ್ಶಿತ್ವವನ್ನು ತರುವ ದೀಪ್ತಸಂಸ್ಕಾರ. ತ್ರಿವಿಧಾಂಗಗಳನ್ನು ಪರಿಷ್ಕರಿಸಿ ಅಂತಶ್ಚೇತನವನ್ನು ಆವಿಷ್ಕರಿಸುವ ಅಭಿಜಾತವ್ರತ; ಅನನ್ಯ ಪ್ರತಿಭೆ ಶಿವಾತ್ಮ ವಿದ್ಯಾಗುರುದೇವನ ಚಿತ್ಕಳಾಕಾರುಣ್ಯ ಎಂಬ ಅರ್ಥಗಳೂ ಇದಕುಂಟು ವೀರಶೈವ ಪರಿಭಾಷೆಯಲ್ಲಿ ದೀಕ್ಷೆ ಎಂದರೆ ಗುರುಕಾರುಣ್ಯ ವೆಂದರ್ಥ.''[೩೩] ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹೀಗೆ ಹಾಲುಮತ ಪುರಾಣದಲ್ಲಿ ಬರುವ ಲಿಂಗದೀಕ್ಷೆಯನ್ನು ಶಿವದೀಕ್ಷೆ ಎಂತಲೂ ಕರೆಯಲಾಗಿದೆ. ಇದು ಆಗಮಿಕ ವಿಧಿಯಾಗಿ ಆಚರಣೆಯಲ್ಲಿದೆ. ಲಿಂಗ ದೀಕ್ಷೆಯನ್ನು ಪಡೆದವರು ದೇವರ

ಶಿಷ್ಯಂದಿರು ಆಗುತ್ತಾರೆ. ಈ ಮೂಲಕ ಸಮಾಜದ ಒಳಿತಿಗಾಗಿಯೇ ಜೀವನವನ್ನು ಮುಡಿಪಾಗಿಟ್ಟಿರುತ್ತಾರೆಂದು ತಿಳಿಸಿಕೊಡುತ್ತದೆ. ಈ ವಿಧಿಯು ಗುರುಕರುಣೆಯಿಂದಲೇ ದಕ್ಕುವ ಪರಿಕಪ್ವ ಜ್ಞಾನ. ಹಾಗಾಗಿ ತನ್ನ ಸ್ವಾರ್ಥವನ್ನು ಮರೆತು ಲಿಂಗತ್ವದ ಗುಣಗಳನ್ನು ಪಡೆಯಲು ಆದೇಶಿಸುತ್ತದೆ. ಲಿಂಗ ದೀಕ್ಷೆ ಎಂಬುದು ಸಮಾಜದಲ್ಲಿನ ಹಲವರು ಆಚರಿಸುವ ವಿಧಿ ವಿಧಾನಗಳನ್ನು ಗೌರವಿಸಬೇಕೆಂದು ಆಗ್ರಹಿಸುತ್ತದೆ. ಅದಕ್ಕಾಗಿ ಶಾಂತಮುತ್ತಯ್ಯ, ಸಿದ್ಧಮಂಕ, ಸಿದ್ಧರಾಮ ಮುಂತಾದವರು ತಮ್ಮ ಸಂಸ್ಕೃತಿಯ ವಿಧಿ-ವಿಧಾನಗಳು ಮೌಲ್ಯಯುಕ್ತವಾದವು, ಸತ್ಯಯುಕ್ತವಾದುವು ಎಂದು ಸಾರಲು, ಹಾಲುಮತ ಧರ್ಮ ಪವಿತ್ರವಾದುದು ಎಂದು ಪ್ರಚಾರ ಪಡಿಸಲು ಈ ಲಿಂಗದೀಕ್ಷೆಯನ್ನು ರೇವಣಸಿದ್ಧರು ಶಾಂತಯ್ಯನಿಗೆ ದಯಪಾಲಿಸಿದರೆಂದು ತಿಳಿದುಬರುತ್ತದೆ.

''ಲಿಂಗದೀಕ್ಷೆಯನಿತ್ತು ಕ್ಷೀರ ಕುಲಕಧ್ಯಕ್ಷ
ನಂಗೊಳಿಸಿ ಗುರು ಕಂಕಣವ ಧರಿಸಿ ಕರಕೆ ಘನ
ಕಂಗೊಳಿಪ ತೆರದಿ ಪಟ್ಟವಗಟ್ಟಿ ಗುರುನಾಮಶಾಸನವಗೈದು ಮತ್ತಂ''[೩೪]

ಇಲ್ಲಿ ಶಾಂತಮುತ್ತಯ್ಯನು ಕುಲೋದ್ಧಾರಕ್ಕಾಗಿ ಲಿಂಗದೀಕ್ಷೆಯನ್ನು ಜೀವನದ ಮಧ್ಯಂತರದಲ್ಲಿ ಪಡೆಯುತ್ತಾನೆ. ಮತ್ತೊಂದು ಕಡೆ ರೇವಣಸಿದ್ದರು ತನ್ನ ಮಗನಾದ ರುದ್ರಮುನಿಗೆ ನಾಮಕರಣ ಮಾಡುತ್ತಲೇ ಶಿವದೀಕ್ಷೆಯನ್ನು ಕೊಡಿಸುತ್ತಾರೆ. ಈ ಅಭಿಪ್ರಾಯವು ''ಕುರುಬರು ಹುಟ್ಟುಲಿಂಗದವರು, ಲಿಂಗಾಯತರು ಕಟ್ಟುಲಿಂಗದೋರು'' ಎಂಬ ಗಾದೆಗೆ ಕಾರಣವಾಗಿರಬಹುದು. ಲಿಂಗದೀಕ್ಷೆಯನ್ನು ರೇವಣಸಿದ್ಧರು ಲೋಕ ಸಂಚಾರಿಸುತ್ತಾ ಶರಣರಿಗೆ ನೀಡುತ್ತಾರೆ. ಈ ಕ್ರಿಯೆಯು ಒಂದು ಕ್ಷೀರಕುಲವನ್ನು ದ್ವಿಗುಣಗೊಳಿಸಲು ಮಾಡಿದ ತಂತ್ರವಾಗಿ ಗೋಚರಿಸಿದರೆ ಮತ್ತೊಂದು ಕಡೆ ಕುರುಬರು ಲಿಂಗಾಯತರಾಗುವ ಸಂಕರವನ್ನು ತಿಳಿಸುತ್ತದೆ. ಹಾಗೂ ಲಿಂಗ ದೀಕ್ಷೆಯು ಗುರು ಶಿಷ್ಯರ ಸಂಬಂಧವನ್ನು ಭದ್ರಪಡಿಸುವ ಸೇತು ಬಂಧವಾಗಿ ಕಾರ್ಯನಿರ್ವಹಿಸುತ್ತದೆ. ರೇವಣಸಿದ್ಧರು-ಶಾಂತಮುತ್ತಯ್ಯ, ಸಿದ್ಧರಾಮ-ಮಂಕತಂದೆ (ಮರುಳಸಿದ್ಧ), ಲಿಂಗಬೀರಣ್ಣ-ಮಾಳಿಂಗರಾಯ, ಸಿದ್ಧರಾಮ-ಗೊಲ್ಲಾಳಯ್ಯ, ಈ ರೀತಿಯಾಗಿ ಪುರಾಣಗಳಲ್ಲಿ ಗುರು ಶಿಷ್ಯರು ಪವಾಡಗಳಿಂದ ಹಾಲುಮತದ ಸಾಂಸ್ಕೃತಿಕತೆಯನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಗುರು-ಶಿಷ್ಯರು ಸರಿಸಮಾನನಾಗಿ ಸಮಾಜ ಕಾರ್ಯವನ್ನು ಮಾಡುತ್ತಾರೆ. ಆದರೆ ಮೊದಲ ಪ್ರಾಶಸ್ತ್ಯ, ಪೂಜೆ ಮಾತ್ರ ಗುರುವಿನ ನಂತರವೇ ಶಿಷ್ಯರಿಗೆ ನೆರವೇರುವುದು ಕಂಡುಬರುತ್ತದೆ. ಲಿಂಗದೀಕ್ಷೆಯು ಕುರುಬರಲ್ಲಿ ಕೆಲವೆಡೆ ಮಾತ್ರ ಕಾಣುತ್ತೇವೆ. ಆದರೆ ಸಾಂಕೇತಿಕವಾಗಿ ಲಿಂಗಕಟ್ಟಿಕೊಳ್ಳದೆ, ಗುರುವಿನ ಮಕ್ಕಳೆಂದು ಇಂದು ರುದ್ರಾಕ್ಷಿ ದೀಕ್ಷೆಯನ್ನು ಪಡೆಯುತ್ತಾರೆ. ಹೆಚ್ಚಾಗಿ ಲಿಂಗದೀಕ್ಷೆಯು ತುಮಕೂರು, ಬಿಜಾಪುರ, ಕೊಪ್ಪಳ, ಮೈಸೂರಿನ ಕೆಲವು ಪ್ರದೇಶಗಳಲ್ಲಿ ಲಿಂಗವನ್ನು ಧರಿಸಿದರೆ ಬಳ್ಳಾರಿ, ಚಿತ್ರದುರ್ಗದಲ್ಲಿ ಕುರುಬರು ಲಿಂಗವನ್ನು ಧರಿಸಲ್ಲ. ಕಾರಣ ಕಲ್ಯಾಣ ದೂರವಿರುವ ಸ್ಥಳ ಮತ್ತು ನಾಚಿಕೆಯ ಸ್ವಭಾವವಿರಬಹುದು. ಹಾಗೂ ಬಳ್ಳಾರಿ ಜಿಲ್ಲೆ, ದಾವಣಗೆರೆಗೆ ಮೈಲಾರ ಲಿಂಗ ಪ್ರಭಾವ ಅರ್ದಿಕವಾಗಿದ್ದರಿಂದ ಲಿಂಗದೀಕ್ಷೆಗಿಂತ ನೈಜ ಸೇವೆಗೆ ಮಹತ್ವ ಕೊಡುತ್ತಾರೆ. ಎಲ್ಲಿ ವೀರಶೈವದ ಪ್ರಭಾವ ಹೆಚ್ಚು ಆ ಕಡೆಯಲ್ಲಿ ಲಿಂಗದೀಕ್ಷೆಯು ವೀರಶೈವದವರ ನಿಯಮದಂತೆ ಆಚರಿಸುವ

ಪದ್ಧತಿಯಾಗಿದೆ. ಹೀಗೆ ಕುರುಬರಲ್ಲಿನ ಒಂದು ಪಂಗಡವಾದ ಹಂಡೆ ಕುರುಬರು ಅರ್ಥಾತ್ ಹಂಡೆ ವಜೀರರಾಗಿ ಲಿಂಗವಂತರಾಗಿ ಸಮಾಜದಲ್ಲಿ ಜೀವಿಸುತ್ತಿರುವುದೇ ಜೀವಂತ ಸಾಕ್ಷಿ. ಈ ಸಂಕರವು ಕುರುಬರು ಎಂದರೆ ಹೀನವೆಂದೂ ಭಾವಿಸಿರಬಹುದು. ಮರುಳಸಿದ್ದನು ''ಸಿದ್ಧರಾಮನಿಂದ ಲಿಂಗವಂತನಾಗುತ್ತಾನೆ.

''ಗುರುವ ಕಂಡೆನು ಕಲ್ಪತರುವ ಕಂಡೆನು ವರ
ಸಿರಿಯ ಕಂಡೆನು ಕಂಡೆನೆಂದು
ಪರುಷದ ಗಿರಿಯ ಸಾರಿದ ಲೋಹದಂದದಿ
ಹರುಷದಿ ನಿಂದು ಮಂಕಯನು''[೩೫]

''ಗುರುವೇ ನೀ ಕರುಣಿಸು ಶಿವಭಕ್ತಿಭಾವದ
ತರುವೆ ನೀ ಕರುಣಿಸೆಂದೆಱಗಿ
ಪರಕೆ ಪರವೆ ಕರುಣಿಸು ಲಿಂಗನಿಷ್ಠೆಯ
ಗುರುವೆ ನೀ ಕರುಣಿಸಂದೆನುತ''[೩೬]

ಹೀಗೆ ಲಿಂಗದೀಕ್ಷೆಯು ಗುರುವನು ಪಡೆದು ಜೀವನವನ್ನು ಸುಮಾರ್ಗದಲ್ಲಿ ನಡೆಸಲು ಮುಖ್ಯವಾಗಿದೆಂದು ಕಂಡುಬರುತ್ತದೆ. ಹಾಲುಮತದವರು ಲಿಂಗನಿಷ್ಠೆ ಮತ್ತು ಲಿಂಗದೀಕ್ಷೆಯನ್ನು ಜೀವವಿರದ ವಸ್ತುವಾಗಿ ಕಾಣದೆ ಅದು ಜೀವಾತ್ಮವೆಂದು ಸಾರುತ್ತಾರೆ. ಹಾಗಾಗಿ ಎಲ್ಲ ಕುರುಬರು ಲಿಂಗದೀಕ್ಷೆಯನ್ನು ಅನುಸರಿಸದಿರುವುದನ್ನು ತಿಳಿಸುತ್ತದೆ. ವ್ಯಕ್ತಿಯು ಸಮಾಜಕ್ಕೆ ಒಳ್ಳೆಯವನ್ನಾಗಿರಬೇಕಂದು, ಸಮುದಾಯದ ಉದ್ಧಾರಕ್ಕಾಗಿ ಕಠಿಣ ಜೀವನವನ್ನು ಎದುರಿಸಿದ ಹಿನ್ನೆಲೆಯಲ್ಲಿ ಲಿಂಗದೀಕ್ಷೆಯು ಅರ್ಥವನ್ನು ಪಡೆದುಕೊಳ್ಳುತ್ತದೆ.

**ii. ಕಂತೆ ಸೇವೆ**

ಪ್ರತಿಯೊಂದು ಸಂಸ್ಕೃತಿಯಲ್ಲಿ ಆಯಾ ಸಮುದಾಯದ ದಿನನಿತ್ಯ ಜೀವನದ ಸಂಸ್ಕೃತಿಯು ಒಳಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಸಂಸ್ಕೃತಿ ಸಂಶೋಧನೆಯ ಉದ್ದೇಶವೆಂದರೆ ವರ್ತಮಾನಕಾಲದ ಅಗತ್ಯಕ್ಕೆ ತಕ್ಕಂತೆ ಗತಕಾಲವನ್ನು ಮರುರಚನೆ ಮಾಡಿಕೊಳ್ಳುವುದು. ಈ ರೀತಿಯ ಸಂಶೋಧನೆಗಳು ವರ್ತಮಾನಕಾಲದ ಸಾಮಾಜಿಕ ಆಸಕ್ತಿಗಳಿಂದ ಪ್ರೇರಣೆಗೊಂಡಿರುತ್ತವೆ. ಹಾಗೂ ಜನರ ಜೀವನದಲ್ಲಿ ಹಾಸುಹೊಕ್ಕಾಗಿರುತ್ತವೆ. ಆದರೆ ಈ ರೀತಿಯ ಸಂಸ್ಕೃತಿಯ ಬಿಡಿ ಬಿಡಿ ಪರಿಕಲ್ಪನೆ ಪ್ರತಿಯೊಂದು ಸಮುದಾಯದ ಆಧ್ಯಾತ್ಮಿಕ ಕ್ಷೇತ್ರದ ಪ್ರತೀಕವಾಗಿ ರೂಪಿತವಾಗಿರುತ್ತದೆ. ಆದರೆ ಆ ಪರಿಭಾಷೆ ರೂಪಿತವಾಗಲು ಅನೇಕ ಕಾಲಾವಧಿಯನ್ನು ಕಳೆದಿರುತ್ತವೆಂದು ಸ್ಥಳನಾಮ ಮತ್ತು ನಾಮ ವಿಜ್ಞಾನಗಳಲ್ಲಿ ಅಧ್ಯಯನ ಮಾಡುತ್ತೇವೆ. ಅದೇ ರೀತಿಯಾಗಿ ಆಚರಣೆ ಸಂಪ್ರದಾಯದಲ್ಲಿನ ಕೆಲವು ವಿಶಿಷ್ಟ ಪರಿಕಲ್ಪನೆಗಳು ವ್ಯಾಪಕವಾದ ಸಂಸ್ಕೃತಿ ಅರ್ಥವನ್ನು ಪ್ರತಿಬಿಂಬಿಸುತ್ತವೆ. ಈ ಸಮುದಾಯದ ಬೆಳವಣಿಗೆಯ ಸ್ಥೂಲ ಚಿತ್ರಣ, ಬದುಕಿನ ತಾತ್ವಿಕ ನೆಲೆ, ಜನಾಂಗದ ಪ್ರಾಮುಖ್ಯತೆ, ಸಾಮಾಜಿಕ ವ್ಯವಸ್ಥೆ, ಸಾಂಸ್ಕೃತಿಕ ಅನನ್ಯತೆಯನ್ನು ಈ ಪರಿಕಲ್ಪನೆಗಳು

ತಿಳಿಸಿಕೊಡುವಲ್ಲಿ ಪ್ರಮುಖ ಪ್ರಾಧಾನ್ಯತೆಯನ್ನು ಹೊಂದಿವೆ. ಜೀವನದಲ್ಲಿನ ಶಿಸ್ತು, ಸಂಯಮ, ನಾಡಿನ ಕಾಳಜಿಯ ಪ್ರತೀಕವಾಗಿಯೂ ಅಧ್ಯಯನ ಮಾಡಬಹುದು. ಒಂದು ಸಂಸ್ಕೃತಿಯು ಹೇಗೆ ಪರಿಕಲ್ಪನೆ ಮತ್ತು ಚಿಂತನೆಗಳಿಂದ ಅವಸ್ಥಾಂತರಗಳನ್ನು ದಾಟಿ ಇಂದು ಸ್ಥಿರೀಕರಣಗೊಂಡಿದೆಂದು ಈ ಪರಿಕಲ್ಪನೆಗಳ ಮೂಲಕ ತಿಳಿದುಬರುತ್ತದೆ. ಇದನ್ನೆ ವಸ್ತುನಿಷ್ಠವಾಗಿ ಮತ್ತೊಂದು ವ್ಯಕ್ತಿನಿಷ್ಠವಾಗಿ ಪರಿಕಲ್ಪನೆಯಾಗಿ ವಿವರಣೆಯನ್ನು ಮಾಡಲಾಗಿದೆ. ಹಾಲುಮತ ಸಮುದಾಯದಲ್ಲಿ ವಸ್ತುನಿಷ್ಠ ಪರಿಕಲ್ಪನೆಗಳು ಮತ್ತು ವ್ಯಕ್ತಿನಿಷ್ಠ ಕಲ್ಪನೆಗಳು ಮತ್ತು ಸಂಸ್ಕೃತ ನಿಷ್ಠ ಪರಿಕಲ್ಪನೆಗಳನ್ನು ಒಳಗೊಂಡಿದೆ. ವಸ್ತು ನಿಷ್ಠ ಪರಿಕಲ್ಪನೆಗಳು ಮನುಷ್ಯನಿಗೆ ಹೊರಗಿನ ಪ್ರಾಪಂಚಿಕ ಅನುಭವದಿಂದ ರಚನೆಯಾದವು. ವ್ಯಕ್ತಿನಿಷ್ಠವೆಂದರೆ ಮನುಷ್ಯ ಮನಸ್ಸಿನ ಅಂತರ್ಯದ ಅನುಭಾವಗಳಿಂದ ಸೃಷ್ಟಿಯಾದವು. ಇವೆರಡೂ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತವೆ.

ಹೀಗೆ ಹಾಲುಮತ ಸಮುದಾಯದಲ್ಲಿ ''ಕಂತೆಸೇವೆ'' ಎಂಬ ಪರಿಕಲ್ಪನೆಯೂ ವಿಶಿಷ್ಟ ಅರ್ಥವನ್ನು ಹೊಂದಿದೆ. ''ಕಂತೆ ಸೇವೆ'' ಎಂಬುದನ್ನು ಸಾಮಾನ್ಯವಾಗಿ ಕಂತೆ-ಬಟ್ಟೆ, ವಸ್ತ್ರ ಎಂದು, ಸೇವೆ-ಕೆಲಸ, ಕರ್ಮವೆಂದು ಮೇಲುನೋಟಕ್ಕೆ ಪದಶಃ ಅರ್ಥವನ್ನು ತಿಳಿಸುತ್ತದೆ. ಆದರೆ ಸಮುದಾಯದ ಸಾಂಸ್ಕೃತಿಕ ಅಧ್ಯಯನ ಕೈಗೊಂಡಾಗ ಪದಶಃ ಅರ್ಥಕ್ಕೆ ಪ್ರಾಮುಖ್ಯತೆ ದೊರೆಯುವುದು. ಅದರ ಸಂಸ್ಕೃತಿಯಿಂದ ರಚನೆಯಾದ ತಳಹದಿಯನ್ನು ಶೋಧಿಸುತ್ತಾ ಆಚರಣೆ, ಧರ್ಮ, ಸಂಪ್ರದಾಯದ ಆಶಯವನ್ನು ತಿಳಿಯುವುದಕ್ಕೆ ಆಧ್ಯತೆ ನೀಡಲಾಗಿದೆ. ಹೀಗಾಗಿ ''ಕಂತೆ ಸೇವೆ'' ಕೇವಲ ವಸ್ತ್ರದಾನ, ಬಟ್ಟೆ ನೇಯಿಗೆಗೆ, ವಸ್ತ್ರ ಕೆಲಸಕ್ಕೆ ಮಾತ್ರ ಸೀಮಿತವಾಗಿರದೆ ಸಂಸ್ಕೃತಿಯ ಮಹತ್ವವನ್ನು ತಿಳಿಸುತ್ತದೆ.

''ಕಂತೆಸೇವೆ'' ಎಂಬ ಪರಿಕಲ್ಪನೆಯೂ ಹಾಲುಮತ ಸಮುದಾಯದ ವಿಶಿಷ್ಟ ಸಂಪ್ರದಾಯವಾಗಿದೆ. ಹಾಲುಮತ ಪುರಾಣಗಳಲ್ಲಿ ಇದಕ್ಕೆ ತುಂಬಾ ಪವಿತ್ರ ಸ್ಥಾನವನ್ನು ನೀಡಲಾಗಿದೆ. ಈ ಪರಿಭಾಷೆಯು ಹುಟ್ಟಲು ಒಂದು ಕಥೆಯೇ ಮೂಡಿ ಬಂದಿದೆ.

ಸಿದ್ಧ ಮಂಕನು ಕಠಿಣ ತಪಸ್ಸನ್ನು ಕುಲೋದ್ಧಾರಕ್ಕಾಗಿ ಕೈಗೊಂಡಿರುತ್ತಾನೆ. ಇದಕ್ಕೆ ಕಾರಣ ಮಂಗಳವಾಡದಲ್ಲಿ ಆಳುತ್ತಲಿದ್ದ ಬಿಜ್ಜಳರಾಯನೇ ಬಿಜ್ಜಳರಾಯನು ಸಾಮ್ರಾಜ್ಯದಲ್ಲಿ ಅನೇಕ ವರ್ಗದವರಿಗೆ ವಾಸಿಸಲು ಸೌಲಭ್ಯ ಕಲ್ಪಿಸಿರುತ್ತಾನೆ. ಜೈನರು, ವೀರಶೈವದವರು ಮತ್ತು ಹಾಲುಮತದವರು ಸಹ ಸಾಮರಸ್ಯದಿಂದ ಜೀವನ ನಡೆಸುತ್ತಿರುತ್ತಾರೆ. ಆದರೆ ಹಾಲುಮತ ಸಮುದಾಯವು ಅನ್ಯ ಜಾತಿಗಳಿಗಿಂತ ವಿಭಿನ್ನ ಜೀವನವನ್ನು ನಡೆಸುವ ಸಮುದಯವಾಗಿತ್ತು. ಕುರಿಗಳನ್ನು ಕಾಯ್ದುಕೊಂಡು ತಮ್ಮ ಜೀವನಾಂಶಕ್ಕೆ ಉತ್ಪನ್ನವನ್ನು ಪಡೆಯುವ ಕುಲಕಸುಬುದಾರರಾಗಿದ್ದರು. ಇವರ ಸ್ವತಃ ಏಳಿಗೆಯನ್ನು ಸಹಿಸದ ಬಿಜ್ಜಳನ ಕೆಲ ಸೇವಕ ಜನರು ಹೊಟ್ಟೆಕಿಚ್ಚಿನಿಂದ ದೂರನ್ನು ನೀಡುತ್ತಾರೆ. ಮಂಗಳವಾಡದಲ್ಲಿನ ಕುರುಬರು ದೇವರಿಗೆ ಬಲಿಕೊಟ್ಟ ಕುರಿಗಳನ್ನು ಊರೊಳಕ್ಕೆ ತಂದು ಸುಡುತ್ತಿದ್ದಾರೆ. ಇದರ ಸುಟ್ಟ ವಾಸನೆಯೂ ನಮ್ಮನ್ನು ಉಸಿರಾಡಲು ಬಿಡುತ್ತಿಲ್ಲ ಮತ್ತು ಊರು ಮೈಲಿಗೆ ಆಯಿತೆಂದು ದೂರು ನೀಡುತ್ತಾರೆ.

''ಹಾಲ (ಕಂಬಿಗೆ) ಸತ್ತ ಕುಜಿ ಮಾಂಸವ ಕಟ್ಟಿ
ಸಾಲುವಿಡಿದು ಕಂಬಿ ಬರಲು
ಮಲನಜಿಯದ ರಾಯನು ಮಾದಿಗರುಗೂಡಿ
ಹಾಳುಮಾಡಿದರು ಪಟ್ಟಣವ''[೩೭]

ಎಂದು ಹೇಳುತ್ತಾ ಕುರುಬರನ್ನು ಹದಿನೆಂಟು ಸಮಯದೊಳು ಸಲ್ಲರೆಂದು ಹೊರಹಾಕಿದರು. ಹನ್ನೆರಡು ವರ್ಷ ಊರಿನಿಂದ ಬಹಿಷ್ಕಾರ ಹಾಕುತ್ತಾರೆ. ಅಲ್ಲದೆ

''ಅರಸು ಪ್ರಧಾನರು ಪ್ರಜೆ ಸಮಸ್ತವು ಕೂಡಿ
ಹರಿತಂದು ಕುರುಬಗೌಡಗಳ
ಕರೆದು ನೆರಹಿ ಕಲ್ಯಾಣವ ಹೊರಡಿಸಿ
ಬರೆದು ಬಂದರು ಏಳುಗೆಜೆಯ''[೩೮]

ಈ ಪದ್ಯದಲ್ಲಿ ಬರುವ ''ಏಳುಗೆಜೆ'' ಎಂಬ ಸಂಖ್ಯಾವಾಚಕ ಶಬ್ದವೂ ಸಂಸ್ಕೃತಿಯಲ್ಲಿ ಅಪಶಕುನ ಎನ್ನುವ ರೀತಿಯಲ್ಲಿ ಚಿತ್ರಿತವಾಗಿದೆ. ಒಂದು ವೇಳೆ ಈ ಸಂಖ್ಯೆಯನ್ನು ಉಚ್ಚರಿಸಬೇಕಾದರೆ ''ಏಳು'' ಎಂದು ಹೇಳದೆ ''ಮತ್ತೊಂದು'' ಎನ್ನುವ ಪರಿಪಾಠವಿದೆ. ಜೊತೆಗೆ ದಕ್ಷಿಣ ಕರ್ನಾಟಕದಲ್ಲಿ ''ಆರೇತ್ತಲಿ'' ಎಂದು ಹೇಳುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಒಂದು ಕುಲಸಮುದಾಯವನ್ನು ಏಳುಗೆರೆಯನ್ನು ಹಾಕಿ ಊರಿಂದ ಹೊರದೂರುವುದೆಂದರೆ ಆ ಕುಲವನ್ನು ಶಾಶ್ವತವಾಗಿ ಸಂಸ್ಕೃತಿಯ ಪಟ್ಟಿಯಿಂದ ಹೊರಹಾಕುವ ಹುನ್ನಾರವಿದೆಯೆಂದು ಸೂಕ್ಷ್ಮವಾಗಿ ಅರ್ಥೈಹಿಸಬಹುದು.

ಹಾಲುಮತ ಜನಾಂಗವೂ ಸಂಸ್ಕೃತಿಯ ಮೂಲ ಸೊಗಡನ್ನು ಇಂದಿಗೂ ಆಚರಣೆ, ಹಬ್ಬ ಹರಿದಿನಗಳಲ್ಲಿ ಉಳಿಸಿಕೊಂಡು ಬಂದಿರುವ ವಿಶಿಷ್ಠ ಸಮುದಾಯ. ತನ್ನ ಆಚರಣೆಯನ್ನು ಇನ್ನಿತರ ಸಮುದಾಯಗಳು ಆಚರಿಸುವಂತೆ ಜನಪ್ರಿಯತೆಯನ್ನು ಪಡೆದಿದೆ. ಉದಾ. ಕಂಬಳಿ ಬಳಕೆಯು ಹಾಲುಮತದವರಿಗೆ ಮಾತ್ರ ಪವಿತ್ರ ಗದ್ದುಗೆಯಾಗಿಲ್ಲ. ಕುರುಬರೇತರರು ಮದುವೆ, ಮುಂಜಿ, ನಾಮಕರಣ, ಗ್ರಾಮದ ದೇವತೆಗಳಗೆ ಗದ್ದುಗೆ ಮಾಡುವುದು, ಶವ ಸಂಸ್ಕಾರದ ನಂತರ ಮನೆಯ ದೇವರುಗಳನ್ನು ತೊಳುಯುವುಕ್ಕೆ ಹೀಗೆ ವಿಶಾಲವಾದ ಬಳಕೆಯ ವ್ಯಾಪ್ತಿಯನ್ನು ಕಂಬಳಿಯು ಹೊಂದಿದೆ. ಮೊದಲು ಕಂಬಳಿಯ ಪ್ರಸ್ತಾಪವು ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣದಲ್ಲಿ ಕಂಡುಬರುತ್ತದೆ.

''ಮರುಳ ಕೌರಬಿಯೇ ನೀನಿಂದಿನಿಂ ಹರಿಣಗಳ
ದರುಶನಕೆ ಪೋಗದೆ ನಿರಂತರದಿ ನಾರದನ
ಪರಿಶಾಪಯುಕ್ತಮಾದಜ ಕುರಿಗಳನ್ನು ಕೇಶಾಪಕರ್ಪಣ ಮಾಡಿ
ವಿರಚಿಸುತಂ ಬರುವ ಭೂರ್ಜನಗಿತ್ತು ಕುಲ
ಚರಿತಮಂ ನುಡಿಸು ಪಂಚಾಕ್ಷರೀ ಮಂತ್ರ ಭಾ
ಸುರ ಭಸ್ಮ ರುದ್ರಾಕ್ಷಿಗಳು ನಿನಗೆ ದೊರಕಲೆಂದು ಶಾಪವನಿತ್ತನು''[೩೯]

ಮತ್ತೊಂದು ಇದು ಪುರಾಣದ ಆದಿಯಲ್ಲಿ ಬರುತ್ತದೆ. ಅದೆಂದರೆ, ಶಾಂತಮುತ್ತಯ್ಯನು ರೇವಣಸಿದ್ಧರ ಆಶೀರ್ವಾದದಿಂದ ರಾಕ್ಷಸರನ್ನು ಕೊಂದು ಹಾಕುವನು. ರೇವಣಸಿದ್ಧರು ಮತ್ತು ಶಾಂತಮುತ್ತಯ್ಯರು ಸೊನ್ನಲಾಪುರದಿಂದ ಶಿವಾಲಯಗಳ ದರ್ಶನ ಮಾಡಿ ಬರುತ್ತಿರುವಾಗ ''ಮುಂಡಾಸುರ'' ಎಂಬ ರಾಕ್ಷಸನು ಅವರಿಗೆ ಅಡ್ಡಿ ಪಡಿಸುತ್ತಾನೆ. ಆಗ ಕೋಪಗೊಂಡ ಶಾಂತಮುತ್ತಯ್ಯನು ಆ ರಾಕ್ಷಸನನ್ನು ಕೊಂದು ಮೂರು ಭಾಗವನ್ನು ಮಾಡುತ್ತಾನೆ. ಆ ಸಾಹಸಕ್ಕೆ ಮೆಚ್ಚಿದ ರೇವಣಸಿದ್ಧರು ''ಮೂರಡಿ ಕಂತೆ'' ಮಾಡಿ ಶಾಂತಯ್ಯನಿಗೆ ಧರಿಸಲು ಹೇಳುತ್ತಾನೆ.

''ಮೂರಡಿಯ ಕಂತೆ'' ಮತ್ತು ''ಕುರಿಗಳ ಕೇಶಾಪಕರ್ಷಣ'' ಎಂಬ ಪದಗಳಿಂದ ಕಂಬಳಿಯ ಬಳಕೆ ಇತ್ತೆಂದು ಖಚಿತವಾಗುತ್ತದೆ. ಒಂದು ಕುರಿಗಳ ತುಪ್ಪಟವನ್ನು ಕತ್ತರಿಸುವುದಕ್ಕೆ ಸಂಬಂಧಿಸಿದರೆ, ಮತ್ತೊಂದು ಕತ್ತರಿಸಿದ ಕುರಿಯ ಉಣ್ಣೆಯನ್ನು ಹೇಗೆ ಕಂತೆ ಮಾಡಬೇಕೆಂದು? ತಿಳಿಸುತ್ತದೆ. ಅಲ್ಲದೆ ಕುರಿಯ ಉಣ್ಣೆ ''ಕಂತೆ'' ಯಾಗುವ ಮತ್ತು ''ಕಂಬಳಿ'' ಆಗುವ ಪೂರ್ವಸಿದ್ಧತೆಯನ್ನು ಇಲ್ಲಿ ಕೈಗೊಳ್ಳುವುದು ಕಂಡುಬರುತ್ತದೆ.

''ಕಂತೆ'' ಎನ್ನುವ ಶಬ್ದಕ್ಕೆ ಕಿಟ್ಟಲ್ ಕೋಶದಲ್ಲಿ ಹೆಣಿಗೆಯಿಂದ ಮಾಡಿದ ವಸ್ತ್ರ, ಶೈವ ಸನ್ಯಾಸಿಗಳು ಧರಿಸುವ ವಸ್ತ್ರ ಎಂಬ ಅರ್ಥವಿದೆ. ಇದರಿಂದ ತಿಳಿಯುವ ಅಂಶವೆಂದರೆ ಶಿವನ ರೂಪಧರಿಸಿದ ರೇವಣಸಿದ್ಧೇಶ್ವರರ ಸಮುದಾಯಕ್ಕೆ ಸಂಬಂಧಿಸಿದ್ದು ಎಂದು ಸ್ಪಷ್ಟವಾಗುತ್ತದೆ. ''ಕಂತೆ''ಯನ್ನು ಬಟ್ಟೆ ಎಂದು ಕರೆದರೆ, ಅದು ಹತ್ತಿಯದ್ದಾಗಿರಬಹುದು, ಉಣ್ಣೆಯದ್ದಾಗಿರಬಹುದು. ಆದರೆ ಕುರುಬ ಸಮುದಾಯಲ್ಲಿ ಇದಕ್ಕೆ ವಿಶೇಷಣ ಸೇರಿ ಕರಿಯಕಂತೆ ಎಂದು ಪ್ರಚಲಿತದಲ್ಲಿದೆ. ಕಾರಣ ಕುರಿಯ ಉಣ್ಣೆಯು ಕಪ್ಪು, ಹಲವಾರು ಬಣ್ಣದ ಕುರಿಗಳಿದ್ದರೂ ಪವಿತ್ರವಾದದ್ದು ''ಕರಿಯ ಉಣ್ಣೆ'' ಮಾತ್ರ. ಇದು ಕೇವಲ ಸಾಂಕೇತಿಕವಾಗಿ ಬಳಸುವ ವಿಶೇಷಣವಲ್ಲ. 'ಕರಿಯ' ಎನ್ನುವುದು ಕತ್ತಲೆಯಿಂದ ಬೆಳಕಿನ ಕಡೆಗೆ ಕರೆದೊಯ್ಯುವ ಸಾಂಸ್ಕೃತಿಕ ಮಹತ್ವವನ್ನು ಹೊಂದಿದೆ.

**''ಕರಿಯ ಕಂತೆ''ಯನ್ನು ತಯಾರಿಸುವ ವಿಧಾನ**

ಪುರಾಣಗಳಲ್ಲಿ ಕರಿಯ ಕಂತೆಯನ್ನು ತಯಾರಿಸುವ ವಿಧಾನವನ್ನು ಶಾಸ್ತ್ರೋಕ್ತವಾಗಿ ವಿವರಿಸಿದ್ದಾರೆ. ಇದು ಇಂದು ವಿಧಿ ವಿಧಾನವಾಗಿ, ಶಾಸ್ತ್ರಬದ್ಧವಾದ ಕುರುಬರ ಸಂಪ್ರದಾಯಗಳಲ್ಲಿ ಪ್ರಮುಖ ಪದ್ಧತಿಯಾಗಿದೆ. ಕುರಿಗಳಿಂದ ತಮ್ಮ ಜೀವನೋಪಾಯನ್ನು ಪೂರೈಸುವುದರ ಜೊತೆ ಲೋಕೋಪಕಾರಕ್ಕೂ ಸಮುದಾಯ ಶ್ರಮ ಪಟ್ಟಿರುವ ಸಂಗತಿ ತಿಳಿದುಬರುತ್ತದೆ. ವೃತ್ತಿಯ ಪವಿತ್ರಭಾವನೆಯೇ ಸಂಸ್ಕೃತಿಯ ಪ್ರತೀಕವಾದದ್ದು ಆಶ್ಚರ್ಯವನ್ನು ತರುವಂತಿದೆ. ಸಾಮಾನ್ಯವಾಗಿ ಕಂಬಳಿಯನ್ನು ತಯಾರಿಸಲು ಎಲ್ಲಾ ಕುರಿಯ ಉಣ್ಣೆಯನ್ನು ಉಪಯೋಗಿಸುತ್ತಾರೆ. ಆದರೆ ದೇವರಿಗೆ ಅರ್ಪಿಸುವ ''ಕರಿಯ ಕಂಥೆ''ಯ ತಯಾರಿಕೆಯು ಮಡಿಯನ್ನು ಕಾಯ್ದುಕೊಂಡು ಬರುವುದು ಇಂದಿಗೂ ಸಮಾಜದಲ್ಲಿ ಬೆಳಕು ಬೀರಿದೆ.

''ಕರಿಯ ಕಂತೆ''ಯನ್ನು ತಯಾರಿಸುವುದಕ್ಕೆ ಕುರಿಯ ಹಿಂಡಿನಲ್ಲಿಯೇ ಒಂದು ದಷ್ಟಪುಷ್ಟವಾದ ಕರಿಯ ಟಗರನ್ನು ಶಿವನ ಹೆಸರೇಳಿ, ಬಿಲ್ವಪತ್ರೆಯಿಂದ ಪೂಜೆಮಾಡಿ, ವಿಭೂತಿ ಮತ್ತು ತೀರ್ಥವನ್ನು

ಸೋಂಕಿಸಿ ಬಿಡುತ್ತಾರೆ. ಅಂದಿನಿಂದ ಆ ಕರಿಯ ಟಗರುಮರಿಗೆ "ಕಂತೆಯ ಮರಿ" ಅಥವಾ "ಬೀಜದ ಮರಿ" ಎಂತಲೂ ಕರೆಯುತ್ತಾರೆ. ಇದನ್ನು ಯಾರು ಸಾಮಾನ್ಯವಾಗಿ ಒಡೆಯುವುದಾಗಲಿ, ಕಡಿಯುವುದಾಗಲಿ ಮಾಡುವುದಿಲ್ಲ. ಏಕೆಂದರೆ ಶಿವನ ಹೆಸರು ಹೇಳಿ ಬಿಟ್ಟ ಟಗರು ಶಿವಸ್ವರೂಪದೆಂಬ ನಂಬಿಕೆಯು ಜನರಲ್ಲಿ ಮನೆಮಾಡಿದೆ. ಅಲ್ಲದೆ ಈ ಕಂತೆ ಮರಿಯು ಆಕಸ್ಮಿಕವಾಗಿ ಗುಂಪಿನಿಂದ ಬೇರೆಯವರ ಬೆಳೆಯನ್ನು ತಿಂದರೆ ಆ ಪೈರು ಹುಲುಸಾಗಿ ಬೆಳೆಯುವುದೆಂಬ ಅಭಿಪ್ರಾಯದಿಂದ ಅದನ್ನು ಯಾರು ಹಿಂಸೆಮಾಡಲಾರರು. ನಂತರ ಕರಿಯ ಟಗರಿಗೆ ಸಮೃದ್ಧವಾಗಿ ಉಣ್ಣೆಬಂದ ಬಳಿಕ ಕುರುಬರ ಒಡೆಯರು ಉಣ್ಣೆಯನ್ನು ಕತ್ತರಿಸಿಕೊಂಡು ಬಂದು, ಸ್ನಾನ ಮಾಡಿ, ಉಪವಾಸವಿದ್ದು ಒಂದೇ ದಿನದಲ್ಲಿ ಕಂತೆಯನ್ನು ತಯಾರಿಸುತ್ತಾರೆ. ತದನಂತರ ಆ ಕಂತೆಯನ್ನು ಪಲ್ಲಕ್ಕಿಯಲ್ಲಿಟ್ಟು ರೇವಣಸಿದ್ಧರಿಗೆ ಗಂಗಾಸ್ನಾನಮಾಡಿಸಿ, ಪೂಜೆ ಮಾಡಿ, ಭಂಡಾರ ಹಚ್ಚಿ ಕರಿಯ ಕಂತೆಯನ್ನು ಅರ್ಪಿಸುತ್ತಾರೆ. ಈ ಪದ್ಧತಿಯೂ ಇಂದಿಗೂ ವಿದ್ಯುಕ್ತವಾಗಿ ನಡೆದುಕೊಂಡು ಬರುತ್ತಿದೆ. ಇದನ್ನು ಗಮನಿಸಿದಾಗ ಎಲ್ಲಾ ಸಮುದಾಯಗಳಿಗಿಂತ ಕುರುಬ ಸಮುದಾಯವೂ ಪ್ರಾಚೀನ ಆಚರಣೆಯನ್ನು ಪ್ರಸ್ತುತದಲ್ಲಿ ಬದಲಾಯಿಸದೆ, ಚಾಚುತಪ್ಪದೆ ನಡೆಸಿಕೊಂಡು ಬಂದಿರುವುದು ಸಂಸ್ಕೃತಿಯನ್ನು ಉಳಿಸುವ ಕಾಳಜಿಯು ಎದ್ದುಕಾಣುತ್ತದೆ.

ರೇವಣಸಿದ್ಧರಿಗೆ ಕರಿಯ ಕಂಥೆಯನ್ನು ತಯಾರಿಸುವಾಗ ವೈಜ್ಞಾನಿಕ ಸಲಕರಣೆಯನ್ನು ಬಳಸುವುದಿಲ್ಲ. ಇದು ಸಂಸ್ಕೃತಿಯು ಆಧುನಿಕತೆಯ ಆಬ್ಬರವನ್ನು ದೂರವಿಡುವುದನ್ನು ತಿಳಿಸಿಕೊಡುತ್ತದೆ. ಆದರೆ ವೈಜ್ಞಾನಿಕ ತಾಂತ್ರಿಕಜ್ಞಾನದಿಂದ ಇಂದು ಸ್ವಲ್ಪಮಟ್ಟಿಗೆ ಯಂತ್ರಗಳನ್ನು ಬಳಸುವ ರೂಢಿಯಾಗಿದೆ.

ತಗರ ಪವಾಡದಲ್ಲಿ ಕರಿಯ ಕಂತೆ ಪದಕ್ಕೆ ಸಮನಾರ್ಥವಾಗಿ 'ಮೂರೇಣಿನ ಕಂತೆ'ಯೆಂದು ಬಳಕೆಯಾಗಿದೆ. ಶಾಂತಮುತ್ತಯ್ಯನು ಸತ್ತ ತಗರನ್ನು ಬದುಕಿಸಿ ಬಸವಣ್ಣನವರಿಂದ ಈ ಕಂಥೆಯನ್ನು ಪಡೆಯುತ್ತಾನೆ. ಹಾಲುಮತದ ಕುಲಕ್ಕೆ ನೀನು ಗುರುವಾಗಿ ಈ ರೀತಿ ನಡೆಯೆಂದು ಬಸವಣ್ಣನವರು ಹೇಳುತ್ತಾರೆ.

"ಕುಲಕ್ಕೆ ದೊಡ್ಡವನಲ್ಲ ಕುಲಕೆ ಮೀರಿದೊನಲ್ಲ
ಕುಲಕ್ಕಿಂತ ಅಧಿಕ ತಾನಲ್ಲ
ಕುಲವೆಂಬುದು ತನ್ನ ಛಲ ಬಿರದೆನುತಲಿ
ಕುಲವನೆತ್ತಿದನು ಶಾಂತಯ್ಯ"[೮೦]

ಅಂದರೆ ಕುರುಬ ಕುಲದ ಒಡೆಯರು, ಗುರುಗಳು ಗುರುವೆಂಬ ಪದವಿಯಿಂದ ಜನರನ್ನು ಜರಿಯಬಾರದು, ಕುಲಕ್ಕೆ ಅವಮಾನ ಮಾಡಬಾರದು, ಅಧಿಕಾರ ಮದದಲ್ಲಿ ತನ್ನ ಛಲವನ್ನು ಪ್ರದರ್ಶಿಸಬಾರದೆಂದು ಮುಖ್ಯಸ್ಥನ ಸಾಂಸ್ಕೃತಿಕ ಜವಾಬ್ದಾರಿಯನ್ನು ಬೋಧಿಸುತ್ತದೆ. ಇಂತಹ ಒಡೆಯರಿಗೆ ಮಾತ್ರ ಕಂತೆ ತಯಾರಿಕೆಯ ಒಡೆತನವನ್ನು ಸಮುದಾಯ ಕೊಟ್ಟಿದೆ. ಒಡೆಯರು ಎಂದರೆ ಸಮಾಜದ ಒಳಿತಿನ ನ್ಯಾಯಾಧೀಶನಂತೆ ಕಾರ್ಯ ನಿರ್ವಹಿಸುವ ವ್ಯಕ್ತಿಯೆಂದು ಗೌರವವನ್ನು ಕೊಡಲಾಗುತ್ತದೆ.

ಈ ರೀತಿಯ ಸಂಸ್ಕೃತಿಯ ಕಾಳಜಿಯ ವಕ್ತಾರ ಶಾಂತಮುತ್ತಯ್ಯ. ಈತನಿಗೆ ಪುರಸ್ಕಾರವೆಂಬಂತೆ ಮೂರೇಣಿನ ಕಂಥೆಯು ಲಭಿಸುತ್ತದೆ.

"ಕ್ಷೀರ ಕುಲಕೆ ಎನ್ನ ಒಡೆಯನ ಮಾಡಿದೆ
ಕುರುಹು ಯಾವುದು ಎನ್ನ ಗುರುವೆ
ಮೂರು ಲೋಕಕೆ ಪ್ರಜ್ವಲಿತಹ ಕುಲವೆಂದು
ಮೂರೇಣಿನ ಕಂಥೆಯನಿತ್ತ"[೮೧]

ತಗರ ಪವಾಡದಲ್ಲಿ ಮೂರೇಣಿ ಕಂಥೆಯು ಬಸವಣ್ಣರಿಂದ ಶಾಂತಮುತ್ತಯ್ಯನಿಗೆ ಸಿಗುವ ಪುರಸ್ಕಾರವಾದರೆ, ಸಿದ್ಧವಂಕ ಚರಿತೆಯಲ್ಲಿ ಸಿದ್ಧರಾಮನು ಮಂಕಸಿದ್ಧನಿಗೆ ಕೊಡುವ ಪ್ರಸಂಗ ಬರುತ್ತದೆ. ಈ ಎರಡು ಕೃತಿಗಳಲ್ಲಿ ಕಂಥೆಯನ್ನು ಕೊಡುವ ವ್ಯಕ್ತಿಗಳು ಬೇರೆ ಬೇರೆಯಾದರೂ ಅದರ ಮೂಲ ಉದ್ದೇಶ ಮತ್ತು ಆಚರಿಸುವ ಸಂಪ್ರದಾಯ ಒಂದೇ ಆಗಿದೆ.

ತಗರ ಪವಾಡ ಮತ್ತು ಸಿದ್ಧಮಂಕ ಚರಿತೆಯಿದ್ದಂತೆ ಮಾಳಿಂಗರಾಯ, ಜನಪದ ಹಾಲುಮತ ಮಹಾಕಾವ್ಯ, ಹಾಲ್ಮತದ ಶ್ರೀ ಸಿದ್ಧಬೀರೇಶ್ವರ ಅರ್ಥಾತ್ ಶ್ರೀ ಕರಿಸಿದ್ಧೇಶ್ವರ ಪುರಾಣಗಳಲ್ಲಿ ಕಂಬಳಿಯ ಬಗ್ಗೆ ಉಲ್ಲೇಖ ಮಾಡಲಾಗಿದೆ. ಅಲ್ಲದೆ ಕಂಬಳಿಗಳಲ್ಲಿ ಯಾವ ಯಾವ ವಿಧಗಳೆಂದು ಹೇಳಿದ್ದಾರೆ.

ಕಂಬಳಿಯು ಶಾಂತಿಸಾಗರದಿಂದ ಹುಟ್ಟಿದೆ. ಹಾಗಾಗಿ ಎಲ್ಲಾ ಸಮುದಾಯಗಳು ಇದನ್ನು ಭೇದ-ಭಾವವಿಲ್ಲದೆ ಸಮಾರಂಭಗಳಲ್ಲಿ ವಿಧಿವತ್ತಾಗಿ ಬಳಸುತ್ತಾರೆ. ಇದರಿಂದ ಹಾಲುಮತದವರು ಎಲ್ಲಾ ಸಮುದಾಯದೊಂದಿಗೆ ಸಾಮರಸ್ಯದಿಂದಿದ್ದರೆಂದು ಕಂಬಳಿಯ ಬಳಕೆಯಿಂದ ಗೊತ್ತಾಗುತ್ತದೆ. ಮಾಳಿಂಗರಾಯನ ಕಾವ್ಯದಲ್ಲಿ ಕಂಬಳಿಯ ಕುರಿತು ಈ ರೀತಿಯಾಗಿ ಚಿತ್ರಿಸುತ್ತಾರೆ.

"ಕೆಳವಪ್ಪಾ ಕೇಳೋ
ಹೆಂಗಾಯ್ತೊ ಕಂಬಳೀ
ಶಾಂತಿ ಸಾಗರದ ಕಂಬಳೀ
ಶಾಂತ ಮನಸ್ಸಿಲಿಂದೇ
ಬದುಕುತ ನಡೆದವಗ
ವರವ ಆದೀತ ಕಂಬಳೀ
ಮೂಲ ಮಂತ್ರಕ ಮೇಲಾದ ಕಂಬಳೀ
ಕಾಲಕ ಸರಿಯಾಗಿ ಬಂದದ ಕಂಬಳೀ
ಕೈಲಾಸದಾಗ ಕಂಬಳೀ
ಮಾದೇವನ ಭಕ್ತಿಗಿ ಮೆಚ್ಚಿ ಗದ್ದೀಗಿ
ಮೊದಲಾಗಿತೊ ಕಂಬಳೀ
ಸ್ಥಳಕ ಸುದ್ದಾಗಿ ಇರುವ ಕಂಬಳೀ
ಜಕ್ಕಪ್ಪ ಮಾಳಪ್ಪ ಹೊರುವ ಕಂಬಳೀ

ಯಾವ ಬಟ್ಟಾ ಇಲ್ಲದ ಕಂಬಳೀ
ಹಾವಾಗಿ ಹರಿತ್ತಿತ್ತೋ
ಬೆಂಕ್ಯಾಗಿ ಉರಿತ್ತಿತ್ತೋ
ಚೇಳಾಗಿ ಚಿಮ್ಮತಿತ್ತೋ ಕಂಬಳೀ
ಕೃತಾಯುಗದಾಗ ಜಡಿಯ ಕಂಬಳೀ
ತ್ರೆತಾಯುಗದ ಹೋಮದ ಕಂಬಳೀ
ಕೇಳಿರೆಪ್ಪಾ ಬೆಂಕಿ ವರಣ ಕಂಬಳೀ
ಜಪ್ಪಿಸಿ ನಡದವ್ರೂ ಜತನಾಗಿ ಸಿಕ್ಕೀತೋ
ಹಾಲುಮತದ ಕಂಬಳೀ
ಸಿದ್ಧಮಾಳಪ್ಪ ಹೊರುವ ಕಂಬಳೀ
ಬೀಜಗುಂತಿ ಮ್ಯಾಲ ಇದ್ದ ಕಂಬಳೀ
ಬೀಸ್ಯಾಡಿ ಮಳೀಯ ತಂದ ಕಂಬಳೀ
ಹಿಂಡ ಸಿದ್ದರ ಬಂದಿ ಬಿಡಿಸಿದ
ಪುಂಡ ಮಾಳಪ್ಪನ ಕಂಬಳೀ
ಪುಂಡ ಮಾಳಪ್ಪ ಹೊರುವ ಕಂಬಳೀ
ಮಾನಗೇಡಿ ಕೈಯಾಗ ದೊರಿಲಾರ್ದ ಕಂಬಳೀ
ಹುಲಜಂತಿ ಈಶ ಹೊರುವ ಕಂಬಳೀ
ಹುಲಜಂತಿ ಮಠದಾಗ ಆಡಿವೆಪ್ಪ ಮಾರಾಯ್ಗ
ವರಾಕೊಟ್ಟ ಕಂಬಳೀ"[೬೨]

ಕಂಬಳಿಯು ಶಾಂತಿಯ ಸಂಕೇತವಾಗಿ, ಸಂತಸದ ಪ್ರತೀಕವಾಗಿ ಮೂಡಿಬಂದಿದೆ. ಇದು ಹಾಲುಮತದ ಕುಲೋದ್ಧಾರಕ್ಕಾಗಿಯೇ ಭೂಮಿಯಲ್ಲಿ ಕುರಿಗಳ ಮೂಲಕ ಜನಪ್ರಿಯವಾಗಿದೆ. ಕಂಬಳಿಯು ಬದುಕನ್ನು ಕಟ್ಟಿಕೊಡುತ್ತದೆ. ಅಂದರೆ ಸಾಕಿ ಸಲುಹಿದ ಕುರಿಯ ಉಣ್ಣೆಯು ಆರ್ಥಿಕಾಭಿವೃದ್ಧಿಗೆ ಕಾರಣವಾದರೆ, ಸಮಾಜದಲ್ಲಿ ಕಂಬಳಿಯ ಬಳಕೆಯಿಂದ ಈ ಸಮುದಾಯದವರು ಅನ್ಯ ಸಮುದಾಯಗಳ ಒಡನಾಟ ಹೊಂದಿದ್ದ ಪ್ರಮುಖ ಜನಾಂಗ ಎಂಬ ಅಂಶ ತಿಳಿದು ಬರುತ್ತದೆ. ಹಾಗಾಗಿ ವ್ಯಕ್ತಿ ಸಮುದಾಯ ಬದುಕುವುದಕ್ಕೆ ಕಂಬಳಿಯು ಅವಶ್ಯಕ ಎಂದು ಹಾಲುಮತ ಪುರಾಣಗಳು ತಿಳಿಸುತ್ತವೆ. ಸಮಾರಂಭದ ಎಲ್ಲಾ ಮೂಲ ಕಾರ್ಯಕ್ಕೂ ಕಂಬಳಿಯೇ ಬೇಕು. ಮಗು ಶೈಕ್ಷಣಿಕಾವ್ಯಸ್ಥೆಯನ್ನು ಪ್ರವೇಶಿಸಲು ಕಂಬಳಿಯೇ ಆಧಾರ. ಹೇಗೆಂದರೆ ಶುಭದಿನ ನೋಡಿ ಮಗುವನ್ನು ಕಂಬಳಿಯ ಮೇಲೆ ಕುಳ್ಳಿರಿಸಿ, ಅಕ್ಕಿಯಲ್ಲಿ ಕೈಯಿಂದ ಓಂಕಾರವನ್ನು ಬರೆಸುತ್ತಾರೆ. ಮಗು ಹುಟ್ಟಿನಿಂದ ಸಾಯುವರೆಗೂ ಇದರ ಉಪಯೋಗವನ್ನು ಪಡೆದುಕೊಳ್ಳುತ್ತದೆ. ಶುಭಕಾರ್ಯಕ್ಕೆ ಮಾತ್ರ ಸೀಮಿತವಾಗದೆ ಬರಗಾಲದಲ್ಲಿ ಮಳೆಯನ್ನು ತರಿಸುವ ಪವಾಡ ವಸ್ತುವಾಗಿಯೂ, ಕೆಲವೊಂದು ಸಂದರ್ಭದಲ್ಲಿ ಬೇರೆ ಬೇರೆ ಪ್ರದೇಶಕ್ಕೆ ಸಂಚರಿಸಲು ವಾಹನದಂತೆ

ಸೌಲಭ್ಯವನ್ನು ಮಾಡಿದ್ದೆಂದು ಹಾಲುಮತದ ಹಿರಿಕರಿಂದ ತಿಳಿದುಕೊಳ್ಳಲಾಯಿತು. ಎಲ್ಲಾ ಯುಗದಲ್ಲಿ ಇದರ ಅವಶ್ಯಕತೆ ಇತ್ತು ಎಂದು ಹೇಳುವಲ್ಲಿ ಎಲ್ಲಾ ಯುಗದಲ್ಲಿ ಹಾಲುಮತಸ್ಥರು ಬದುಕಿಬಾಳಿದರೆಂದು ಕಂಬಳಿಯ ಪ್ರಸ್ತಾಪದಿಂದ ತಿಳಿದುಬರುತ್ತದೆ.

ಹೀಗೆ ಮೈಲಾರಲಿಂಗನ ಜಾತ್ರೆಯಲ್ಲಿ ಕಂಬಳಿಯು ತುಂಬಾ ಪ್ರಮುಖ ಪಾತ್ರವಹಿಸುತ್ತದೆ. ಅಲ್ಲದೆ ಹೇಳಿಕೆಯಾಗುವಷ್ಟು ಪ್ರಾಮುಖ್ಯತೆಯನ್ನು ಸಹ ಹೊಂದಿದೆ. ''ಕಂಬಳಿ ಬೀಸಿತು ಅಂಬಳಿ ಅಳಸಿತಲೇ ಪರಾಕ್'' ಎಂದು ಕಾರ್ಣಿಕದ ನುಡಿಯು ಸಾಂಸ್ಕೃತಿಕ ಆಲೋಚನಾ ಶಕ್ತಿಯನ್ನು ಬಹಿರಂಗ ಪಡಿಸುತ್ತದೆ. ಅಂದರೆ ಕಂಬಳಿ ಬೀಸಿದರೆ ಮಳೆಯು ಧಾರಕಾರವಾಗಿ ಸುರಿಯುತ್ತದೆ. ಇದರಿಂದ ಭೂಮಿಯ ಫಲವತ್ತತೆ ಅಧಿಕವಾಗಿ ಹಚ್ಚಹಸಿರಿನ ತಾಣವೂ ಸೃಷ್ಟಿಯಾಗುತ್ತದೆ. ಜನಗಳು, ಪ್ರಾಣಿ, ಪಕ್ಷಿಗಳು, ಜಲಚರಗಳು ಸುಖಸಂತೋಷದಿಂದ ನಲಿಯುತ್ತಾರೆಂದು ಹೇಳುತ್ತಾ, ಅತಿಸೃಷ್ಟಿಯಿಂದ ರೈತರು ಬೆಳೆದ ಒಳ್ಳೆಯ ಫಸಲು ಅಳಸುವುದು. ಅಂದರೆ ಬೆಳೆದ ಪೈರು ಸಂಪೂರ್ಣವಾಗಿ ಮಾನವನಿಗೆ ದೊರಕುವುದಿಲ್ಲ ಮಳೆಯ ರಭಸಕ್ಕೆ ಕೊಚ್ಚಿಕೊಂಡು ಹೋಗುತ್ತದೆಂದು ಒಳಾರ್ಥವನ್ನು ''ಕಂಬಳಿಯ'' ಶಬ್ದವೂ ಕಾರ್ಣಿಕ ನುಡಿಯಲ್ಲಿ ಒಳಗೊಂಡಿದೆ. ಹೀಗೆ ಕಂಬಳಿಯು ಒಂದು ಕಡೆ ಸಮಾಜೋದ್ಧಾರವನ್ನು ತಿಳಿಸಿಕೊಡುವಲ್ಲಿ ಸಮಾಜದ ಮೇಲಿನ ಕಾಳಜಿಯನ್ನು ತೋರಿಸುತ್ತದೆ. ಮತ್ತೊಂದು ಕಡೆ ವರ್ಷಾವಧಿಯಲ್ಲಿ ಯಾವ ಯಾವ ರೀತಿ ಆಹಾರ ಸಂಗ್ರಹಿಸಬಹುದೆಂದು ಮುಂದಾಲೋಚನೆಯನ್ನು ವಿಜ್ಞಾನಿಗಳ ವಿಚಾರದಂತೆ ಕಾರ್ಯ ನಿರ್ವಹಿಸುತ್ತದೆ.

ಹಾಲುಮತದ ಸಿದ್ಧಬೀರೇಶ್ವರ ಪುರಾಣ ಅರ್ಥಾತ್ ಕರಿಸಿದ್ಧೇಶ್ವರ ಪುರಾಣದಲ್ಲಿ ಕಂಬಳಿಯನ್ನು ''ಅಗ್ನಿ ಮುನಿಯೂ, ಉದಕ ಮುನಿಯೂ, ತಮ್ಮ ತಮ್ಮ ರೋಮಗಳನ್ನು ತಂದು ಹೋಮಗಂಬಳಿ, ನೇಮಗಂಬಳಿ, ಮಲ್ಲಗಂಬಳಿಗಳೆಂಬ ಮೂರು ಪ್ರಕರಣಗಳನ್ನು ತಿಳಿಸುತ್ತದೆ. ಬ್ರಹ್ಮನು ಆ ರೋಮಂಗಳಿಗೆ ಬೆಜವನ್ನು ಹಾಕಲು, ನಾರಾಯಣನು ಲಾಲಿಯನ್ನು ಒಗೆದನು ಮತ್ತು ವಿಷ್ಣುವು ಕಂಬಳಿಯನ್ನು ನೇಯ್ದು ತೆಗೆದನು.''[೧೩] ಈ ಪ್ರಕಾರವಾಗಿ ತ್ರಿಮೂರ್ತಿಗಳಿಂದ ತಯಾರಿಸಿದ ಪರಮ ಪಾವನವಾದ ಕಂಬಳಿ ವಸ್ತ್ರವನ್ನು ಪರಮೇಶ್ವನಿಗೆ ಹೊದಿಸಿದರು. ಪರಮೇಶ್ವರನು ಅಗ್ನಿಯಿಂದ ದೊರೆತ ನೇಮಗಂಬಳಿಯನ್ನು ಗದ್ದುಗೆಯ ಮಾಡಿ ಉದಕದಿಂದ ಲಭಿಸಿದ ಮಲ್ಲಗಂಬಳಿಯನ್ನು ಹೋಮಕ್ಕಾಗಿ ಹೊದಿಸಿದನು. ಈ ಪ್ರಕಾರವಾಗಿ ಪಂಚಮಹಾಭೂತಂಗಳಿಂದ ಕಂಬಳಿಯನ್ನು ಪೂಜಿಸುತ್ತಾರೆ. ಕಂಬಳಿಯು ನೇಮಗಂಬಳಿ, ಹೋಮಗಂಬಳಿ ಮತ್ತು ಮಲ್ಲಗಂಬಳಿಯೆಂದು ಮೂರು ರೀತಿಯಲ್ಲಿ ಬೆಳೆದು ಬಂದಿತು.

ಶಿವನ ಆತ್ಮಲಿಂಗದಿಂದ ಶ್ರೀಗುರು ರೇವಣಸಿದ್ಧರು ಜನಿಸಿ ಭೂಲೋಕಕ್ಕೆ ಆಗಮಿಸುವರು. ಹೀಗೆ ಭೂಮಿಗೆ ಬರುವ ರೇವಣಸಿದ್ಧರು ''ತನ್ನ ಜಟಾ ಭಾರವನ್ನು ಸುತ್ತಿ, ಕ್ಯಾವೀಂ ಹೊದ್ದ ಕೊರಳೊಳ್ ರುದ್ರಾಕ್ಷಿ ಸರಗಳನ್ನು ಧರಿಸಿ, ಕಂಕಣ ಕಾಲೋಳಗೆ ಕಿರುಜಂಗನ್ನೂ ಮೊಣಕಾಲ ಮೇಲೆ ಜಂಗನ್ನೂ ಧರಿಸಿ ಗುಂಡು ಗೋಪುರವನ್ನು, ಮುಳ್ಳು ಕಡಾವಿಗೆಯನ್ನು ತಕ್ಕೊಂಡು ಹಣೆಯೊಳ್ ಶಿವ ಪಂಚಾಕ್ಷರಿಯಿಂದ ಪೂತವಾದ ವಿಭೂತಿಯಂ ಧರಿಸಿಕೊಂಡು ಜೋಳಿಗೆಯಂ

ತಕ್ಕೊಂಡು ಭೂಲೋಕಕ್ಕೆ ಹೋಗಲು ಸಿದ್ಧನಾಗಿ ಮಹೇಶ್ವರ ಕಾಲುಗಳಿಗೆ ಬಂದು ಎರಗಲು ಕೃಪಾಳುವಾದ ಆದಿ ಗುರುವಾದ ಮಹೇಶ್ವರನು ಗುರು ರೇವಣಸಿದ್ಧನಿಗೆ ಪರಿಪರಿಯಂ ಆಶೀರ್ವಾದ ಮಾಡಿ ತನಗೆ ಅಗ್ನಿಯಿಂದ ಪೂರ್ವದಲ್ಲಿ ದೊರೆತ ನೇಮಗಂಬಳಿಯನ್ನು ಆತನಿಗೆ ಉಡುಗೆಯನ್ನಾಗಿ ಮಾಡಿ ಭೂಲೋಕಕ್ಕೆ ಆಗಮಿಸಿ ಅಲ್ಲಿ ಶಿವ ಮತವನ್ನು ಸ್ಥಾಪಿಸುವನಾಗೆಂದು ತಿಳುಹಿ ಕಳುಹಿದನು.''[೪೪] ಇದ್ದರಿಂದ ನೇಮಗಂಬಳಿಯು ಶಿವದೀಕ್ಷೆ, ನಾಮಕರಣ ಆಚರಣೆಗಳಲ್ಲಿಯೇ ಮತ್ತೆ ಮಡಿ ಆಚರಣೆಗಳಿಗೆ ನೇಮಗಂಬಳಿಯನ್ನು ಉಪಯೋಗಿಸುತ್ತಿರಬಹುದು. ಸಾಹಸ ಸಾಧನೆಗಳಿಗೆ ಮಲ್ಲಗಂಬಳಿಯ ಬಳಕೆಯನ್ನು ಮಾಡುತ್ತಿದ್ದರು. ಭೂಮಿಗೆ ಮಳೆ ಬರಿಸುವುದು, ನಾಯಕರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಪ್ರಯಾಣ ಬೆಳೆಸುವುದು, ದೇಹಕ್ಕೆ ರೋಗ ರುಜಿನ ಬಂದರೆ ಕಂಬಳಿಯಿಂದ ಗುಣಪಡಿಸುವುದನ್ನು ಹಾಲುಮತ ಪುರಾಣಗಳಲ್ಲಿನ ಸನ್ನಿವೇಶಗಳಿಂದ ತಿಳಿದುಬರುತ್ತದೆ. ಅಂದರೆ ಕಂಬಳಿಯ ಮಹಿಮೆಯು ಸರ್ವಕಾಲಿಕ, ಸರ್ವಜನರ ಮನೋಭಿಲಾಷೆಯನ್ನು ಪೂರೈಸುವ ಅಕ್ಷಯ ಪಾತ್ರೆಯಾಗಿತ್ತು.

ಇದಕ್ಕೆ ಪೂರಕವೆಂಬತೆ ಆದಿಗೊಂಡನು ಶಿವನ ಆರ್ಶಿರ್ವಾದಿಂದ ಮಕ್ಕಳನ್ನು ಪಡೆಯುತ್ತಾನೆ. ನಂತರ ಆರು ಮಂದಿ ಮಕ್ಕಳು ಮದುವೆ ಮಾಡಿಕೊಂಡರು. ಈ ಸಂದರ್ಭದಲ್ಲಿ ತಂದೆ ಆದಿಗೊಂಡನು ''ತಮ್ಮ ಹೊರೆಯಾದ ಕೂಲಿ ಕಂಬಳಿಯನ್ನು ಬಿಟ್ಟುಕೊಟ್ಟು ಎಷ್ಟೋ ಭೂಮಿ ಶೀಮೆಗಳನ್ನು ಕೊಂಡು, ಸಡಗರದಿಂದ ಒಕ್ಕಲುತನವನ್ನು ಮಾಡುತ್ತಾ ಇರುತ್ತಿದ್ದರು.''[೪೫] ಎಂದು ಹೇಳುವಲ್ಲಿ ಕುರುಬರ ಆದಿಗೊಂಡನು ಮಕ್ಕಳಿಗೆ ತನ್ನ ಸಂಪತ್ತನ್ನು ವಿಭಾಗಿಸುವಾಗ ಕಂಬಳಿಯ ವೃತ್ತಿಯನ್ನು ವಿಭಾಗಿಸಿದನೆಂದು ಅಂದಿನಿಂದ ಅದು ಕೂಲಿ ಕಂಬಳಿಯಾಯಿತೆಂದು ತಿಳಿಸಿಕೊಡುವುದು. ಕುಟುಂಬದಲ್ಲಿ ಸದಸ್ಯರುಗಳು ಹೆಚ್ಚಾದಂತೆ ಪೂರ್ವದ ಆಸ್ತಿಯು ಇಬ್ಭಾಗವಾಗುವುದು. ಹೀಗಾಗಿ ಕೂಡುಕಟ್ಟಿನಿಂದಿದ್ದ ವೃತ್ತಿ, ಆಚರಣೆ ಪದ್ಧತಿಗಳು ಬೇರ್ಪಡುವ ಸನ್ನಿವೇಶವನ್ನು ತಿಳಿಸಿಕೊಡುತ್ತದೆ.

ಹಾಲುಮತ ಮಹಾಕಾವ್ಯದಲ್ಲಿ ಕಂಬಳಿಯನ್ನು ಶಾಂತಮುತ್ತಯ್ಯನು ರಾಕ್ಷಸರನ್ನು ಕೊಂದು ತಯಾರಿಸುತ್ತಾನೆ. ಭೂಮಿ, ಸೂರ್ಯ, ಚಂದ್ರ, ಸಾಗರ, ಗಾಳಿ, ಬೆಳಕುಗಳ ಹುಟ್ಟಿನ ನಂತರ ಕಂಬಳಿಯ ಪ್ರಸ್ತಾಪಬರುವುದು. ಐದು ಜನ ರಕ್ಕಸರು ಶಾಂತಮುತ್ತಯ್ಯನಿಗೆ ತೊಂದರೆ ಕೊಡುತ್ತಾರೆ. ಒಬ್ಬ ರಾಕ್ಷಸನನ್ನು ಕೊಂದು ಟಗರನ್ನಾಗಿ ಮಾಡುತ್ತಾನೆ. ಇನ್ನುಳಿದವರು ಕುರಿಗಳಾಗುತ್ತಾರೆ. ಹೀಗೆ ಕುರಿಗಳನ್ನು ಕಾಯುತ್ತಾ ಶಾಂತಮುತ್ತಯ್ಯನು ಕುರಿಯ ಉಣ್ಣೆಯಿಂದ ಕಂಬಳಿಯನ್ನು ತಯಾರಿಸುವನು. ಈ ಕ್ರಿಯೆಯು ಪ್ರಬಲ ವರ್ಗವನ್ನು ದಮನಮಾಡಿ ಅದರ ಅವಶೇಷಗಳಿಂದ ತನ್ನ ಸಮುದಾಯದ ಅಭಿವೃದ್ಧಿಯನ್ನು ಪಡೆಯಿತೆಂದು ತಿಳಿದುಬರುತ್ತದೆ. ಡುಳ್ಳಾಸುರ ದೈತ್ಯನ ಕೊಂದ ಎರಡು ಕೈಯಿಂದ ಸಾಮಾನು, ಹೊಟ್ಟೆ ಸೀಳಿ ಡೊಕ್ಕಿಯನ್ನು, ಕಾಳಜ ತೆಗೆದು ತಾಳ ಮಾಡುತ್ತಾನೆ, ಗುಂಡಗಿ ತಗಿಯುತ್ತಾ ಊದಶಂಕ ಮಾಡಿ, ಕಂಬಳಿ ನೈಯುವುದಕ್ಕೆ ಕತ್ತರಿ, ಬೆಸಗಿ, ಕಾಲಿನಿಂದ ಹೊರೆ, ನಾಕ ನಗಮೂರಿ, ಐದ ನಗಮೂರಿ, ನಾಕ ಗುಂಜಿ, ಐದ ಗುಂಜಿ ಹೊಡೆಯುತ್ತ,

''ಎಂಟ ಗುಂಜಿ ಹೊಡದಾನ ಹನ್ನೆರಡು ಗುಂಜಿ ಹೊಡದಾನ
ಹದನಾರ ಗುಂಜಿ ಹೊಡದಾನೆ ಹಗ್ಗ ತಯ್ಯಾರ ಮಾಡ್ಯಾನ
ಹಗ್ಗ ತಯ್ಯಾರ ಮಾಡ್ಯಾನ ಹುಂಕಿ ತಯ್ಯಾರ ಮಾಡ್ಯಾನ
ಸರಿಯಾ ಮಾಡುತಾನೇನ ಕಂಬಳಿಗ ಹಚ್ಚುತಾನೇನ''[೪೬]

ಹೀಗೆ ಕಂಬಳಿಯು ಎಷ್ಟು ಸಂಖ್ಯೆಯ ಎಳೆಗಳನ್ನು ಹೊಂದಿರಬೇಕೆಂಬುದು ಸಂಪ್ರದಾಯದಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ.

''ಕಂಬಳೆಪ್ಪ ಕಂಬಳ್ಯೋ ಕಂಬಳಿ ನೈಯ್ಯುತಾನೇನ
ಏಸು ಸೀಳಿನ ಕಂಬಳೇ ತಾನೆ ನೈಯ್ಯುತಾನೇನ
ಕಂಬಳೆಪ್ಪ ಕಂಬಳ್ಯೊ ಬೆಂಕಿ ವರ್ಣದ ಕಂಬಳ್ಯೋ
ಒಂದು ಎಳಿಯಾ ಇಟ್ಟಾನ ಶಾಂತಮುತ್ಯಾನಾದವ
ಶಾಂತಮುತ್ತಯ್ಯನ ಕಂಬಳೇ ಮುತ್ತಿನ ಎಳಿಯಾ ಇಟ್ಟಾನ
ಮುತ್ತಿನ ಎಳಿಯಾನಲ್ಲಪ್ಪ ಕಂಬಳಿವಳಾಗ ಇಟ್ಟಾನ
ಕಂಬಳಿವಳಗ ಇಟ್ಟಾನೆ ಬಿಳಿಯಾ ಎಳಿಯಾ ಇಟ್ಟಾನ''[೪೭]

ಬಿಳಿಯ ಎಳಿಯಿರುವುದು ಶಾಂತಮುತ್ತಯ್ಯನ ಕಂಬಳಿ. ಇಂದಿಗೂ ಕರಿಯ ಕಂಬಳಿಯ ಕೊನೆಯಲ್ಲಿ (ಎರಡು ಇಂಚಿನ ಕೊನೆ) ಬಿಳಿಯ ಎಳಿಯು ಕಂಬಳಿಯ ನಾಲ್ಕು ಭಾಗದಲ್ಲಿ ಸೇರಿರುತ್ತದೆ. ಈ ನೇಯ್ಗೆಯಂತೆ ಕುರುಬರ ಮದುವೆಯ ಕಾರ್ಯದಲ್ಲಿ ಕಂಬಳಿಯ ರೀತಿಯಲ್ಲಿಯೆ ಅಕ್ಕಿಯನ್ನು ಹಾಕಿ ಪೂಜ ಕಾರ್ಯವನ್ನು ಮಾಡುತ್ತಾರೆ. ಕಾರಣವೆಂದರೆ ಕುರುಬರು ಅಲೆಯುವ ಸಂಸ್ಕೃತಿಯರು. ಹಾಗಾಗಿ ಕಂಬಳಿಯು ಸಮಯಕ್ಕೆ ಬೇಕಾದಾಗ ದೊರೆಯದಿರಬಹುದು. ಆಗ ಆಹಾರ ಪದಾರ್ಥದಲ್ಲಿ ಅಕ್ಕಿಯನ್ನು ತೆಗೆದುಕೊಂಡು ಕಂಬಳಿಯಂತೆ ಚೌಕಟ್ಟನ್ನು ಬರೆದು ಮದುವೆಯ ನಿಶ್ಚಿತವನ್ನು ಮಾಡುತ್ತಾರೆ. ಕಂಬಳಿಯು ದೊರೆಯದಿಂದ್ದಾಗ ಅನುಕೂಲಕ್ಕೆ ಮಾಡಿಕೊಂಡ ಈ ನಂಬಿಕೆಯು ಇಂದು ಕಂಬಳಿಯಿದ್ದರೂ ಆ ಕಂಬಳಿಯ ಮೇಲೆ ಅಕ್ಕಿಯಿಂದ ಸೇಸೆ ಕಟ್ಟಿಯನ್ನು ಬರೆದು ಅದರ ಮೇಲೆ ಮದುಮಕ್ಕಳನ್ನು ಕೂಡಿಸುತ್ತಾರೆ. ಈ ರೀತಿಯಾಗಿ ಸಂಪ್ರದಾಯವೂ ಕ್ರಮಬದ್ಧತೆಯನ್ನು ಕಾಪಾಡಿಕೊಂಡ ಸಂಗತಿಯೂ ತಿಳಿಯುತ್ತದೆ.

ಅಲ್ಲದೆ ಕಂಬಳಿಯ ಕಾರ್ಯ ವೈಖರಿಯನ್ನು ತಿಳಿಸುತ್ತಾರೆ. ಕಂಬಳಿಯೂ ಕೆಟ್ಟವರಿಗೆ ಬೆಂಕಿಯಾಗುತ್ತೆ, ಹಾವಾಗಿ ಹರಿಯುತ್ತೆ, ನೀರಾಗಿ ಚಿಮ್ಮುವ ಕಂಬಳಿ. ಈ ರೂಪಕಗಳಿಂದ ತಿಳಿಯುವ ಅಂಶವೆಂದರೆ ಕಂಬಳಿಯು ದುಷ್ಟರಿಗೆ ಹಾವಿನ ವಿಷದಂತೆ ಸಾಮರ್ಥ್ಯ ತೋರಿಸುವುದು, ಬೆಂಕಿಯಂತೆ ವೇಗವಾಗಿ ವೈರಿಗಳನ್ನು ನಾಶಮಾಡುವ ಗುಣಹೊಂದಿದೆ ಮತ್ತು ಪ್ರೀತಿಯನ್ನು ಕೊಟ್ಟರೆ ನೀರಿನ ಚಿಲುಮೆಯಂತೆ ಜೀವದಾನವನ್ನು ಮಾಡುತ್ತದೆಂದು ತಿಳಿಸಿಕೊಡುತ್ತದೆ. ಕಂಬಳಿಯನ್ನು ಎಲ್ಲಿಗಾದರೂ ಕೊಂಡೊಯ್ಯಬಹುದೆಂದು ತಿಳಿಸಿಕೊಡುತ್ತಾರೆ. ಕಂಬಳಿಯನ್ನು ಮಡಚಿ, ಗಳಿಗಿ ಹಾಕಿ ವಡ್ಡೊಲಗದಲ್ಲಿರಿಸಬಹುದು. ವಡ್ಡೊಲಗದಲ್ಲಿಯ ಆ ಕಂಬಳಿಯನ್ನು ಮರೆಸುವನು. ನಂತರ ಶಿವ ಪಾರ್ವತಿಯರಿಗೆ ಆಯ್ಯಾರ (ಮುಯ್ಯಿ)ಯನ್ನು ಮಾಡುತ್ತಾನೆ.

ಹೀಗೆ ಕಂಬಳಿಯೂ ಆರ್ಥಿಕಾಭಿವೃದ್ಧಿಯ ಪ್ರತೀಕವಾಗದೆ ಸಾಂಸ್ಕೃತಿಕ ಅರ್ಥವನ್ನು ಕಾಲದಿಂದ ಕಾಲಕ್ಕೆ ಉಳಿಸಿಕೊಂಡು ಬಂದಿದೆ. ಮೊದಲು ಮದುವೆ ಸಂದರ್ಭದಲ್ಲಿ ಮುಯ್ಯಿಯನ್ನು ಮಾಡುವ ಬೆಲೆ ಬಾಳುವ ವಸ್ತುವಾಗಿತ್ತು. ಹಾಗೂ ಇದನ್ನು ಕೊಡುವ ಉದ್ದೇಶವೆಂದರೆ ರೇವಣಸಿದ್ಧರಿಂದ ಶಾಂತಮುತ್ತಯ್ಯವರೆಗೆ ಈ ಕಂಬಳಿಯು ದೈವಸ್ವರೂಪ ಪಡೆದಿತ್ತು. ಕಂಬಳಿಯಲ್ಲಿ ದೇವರಿಗೆ ಮತ್ತು ಮಾನವರ ಸಡಗರದ ಸಮಾರಂಭಕ್ಕೆ, ಶುಭಕಾರ್ಯಕ್ಕೆ ಪ್ರತ್ಯೇಕವಾದ ಕಂಬಳಿಯನ್ನು ತಯಾರಿಸುತ್ತಿದ್ದರು. ಮನುಷ್ಯನಿಗೆ ಉಪಯೋಗವಾಗುವ ಕಂಬಳಿಯನ್ನು ಯಾರಾದರೂ ನೇಯ್ದು ಮಾರಾಟಮಾಡಬಹುದು. ವ್ಯವಹಾರದ ಉತ್ಪನ್ನವಾಗಿಯೂ ಕಂಬಳಿಯನ್ನು ತಯಾರಿಸತೊಡಗಿದರು.

ಈ 'ಕಂತೆ ಸೇವೆ'ಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಹಾಲುಮತ ಸಮುದಾಯವು ಇನ್ನಿತರ ಸಮುದಾಯಗಳ ಸಂಪ್ರದಾಯಗಳ ಜೊತೆಗೆ ಪೈಪೋಟಿ ಮಾಡಿದಂತಿದೆ. ಅಂದರೆ ಶೈವ ಪಂಥದಾರಿಗಳಾದ ವೀರಶೈವರು ''ಕಂತೆ'' ಎಂಬುದನ್ನು ವಿಧಿವತ್ತಾಗಿ ಧರ್ಮಗುರುಗಳಿಂದ ದೀಕ್ಷೆ ಪಡೆದು, ಲಿಂಗದೀಕ್ಷೆಯ ಕುರುಹಾಗಿ ಆ ಕಂತೆಯನ್ನು ಬಟ್ಟೆಯಲ್ಲಿಟ್ಟು ಕೊರಳಲ್ಲಿ ಕಟ್ಟಿಕೊಳ್ಳುತ್ತಾರೆ. ಕಂತೆ ಉತ್ಪಾದನೆಯು ವೀರಶೈವ ಧರ್ಮದಲ್ಲಿ ಕುಟುಂಬದ ಕಸುಬಾಗಿತ್ತು. ಈ ಪದ್ಧತಿಯು ೧೨ನೇ ಶತಮಾನದ ನಂತರದಿಂದ ಚಾಲ್ತಿಗೆ ಬಂದಿರಬಹುದು. ೧೨ನೇ ಶತಮಾನದಲ್ಲಿ ಬಸವಣ್ಣನವರು ಅಂಗೈಯಲ್ಲಿ ಇಷ್ಟಲಿಂಗವಿಟ್ಟು ಪೂಜೆಮಾಡುವುದು ಆತ್ಮಲಿಂಗಕ್ಕೆ ಸಮವೆಂದು ಹೇಳಿದರು. ಈ ಪ್ರೇರಣೆಯೂ ಮುಂದಿನ ಶರಣರ ಜೀವನ ಮಾರ್ಗದಲ್ಲಿ ನಂಬಿಕೆಯು ಪ್ರಧಾನ ಆಚರಣೆ/ಸಂಪ್ರದಾಯವಾಗಿ ಬೆಳೆಯಿತು. ಕಂತೆಯನ್ನು ಯಾರು ಧರಿಸಬೇಕು? ಯಾವ ವಯಸ್ಸಿನಲ್ಲಿ ಧರಿಸಬೇಕು ಹೀಗೆ ಅನೇಕ ಪ್ರಶ್ನೆಗಳಿಗೆ ವೀರಶೈವ ಧರ್ಮದಲ್ಲಿ ಅವರದೆ ಆದ ದೃಷ್ಟಿಕೋನ ಹೊಂದಿದೆ. ಆದರೆ ಹಾಲುಮತ ಸಮುದಾಯದವರು ಹುಟ್ಟು ಲಿಂಗದವರು ಆ ಕಾರಣಕ್ಕೆ ಇದು ಕಂತೆಯನ್ನು ಶಿವನ ಕುರುಹಾಗಿ ಕೊರಳಲ್ಲಿ ಧರಿಸದೆ ತಮ್ಮ ಕುಲದ ಕೆಲಸದಲ್ಲಿ ಒಂದು ಪ್ರತ್ಯೇಕ ಧೋರಣೆಯಾಗಿಸಿಕೊಂಡು ''ಕಂಥೆ ಸೇವೆ'' ಮಾಡಿಕೊಂಡಿರುವುದನ್ನು ತಿಳಿಸುತ್ತದೆ. ವೀರಶೈವದಲ್ಲಿ ಬರುವ ಕಂತೆಧಾರಣೆಗೂ ಮತ್ತು ಹಾಲುಮತದಲ್ಲಿ ಬರುವ ಕಂಥೆ ಸೇವೆಗೂ ಪರಸ್ಪರ ಭಿನ್ನ ಅರ್ಥ, ಸ್ವರೂಪವನ್ನು ಹೊಂದಿರುವುದು ಇಂದಿನ ಆಚರಣೆಗಳ ಮೂಲಕ ತಿಳಿಯುತ್ತದೆ. ತದನಂತರ ಸಿದ್ಧಮಂಕ ಮತ್ತು ಶಾಂತಮುತ್ತಯ್ಯರು ಬಿಜ್ಜಳನ ಸಾನಿಧ್ಯವನ್ನು ಬಯಸಿ, ಅಂದರೆ ಸಮಾಜದಲ್ಲಿ ಹಿರಿಮೆಯನ್ನು ಪಡೆದುಕೊಳ್ಳಲು ತಗರಪವಾಡವನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಲಿಂಗದ ಪರಿಕಲ್ಪನೆಯೂ ಹುಟ್ಟುಲಿಂಗದಿಂದ ಕಟ್ಟುಲಿಂಗಕ್ಕೆ ಪರಿವರ್ತನೆಯಾದ ಪ್ರಸಂಗವನ್ನು ಸೂಕ್ಷ್ಮವಾಗಿ ಬಿಡಿಸುತ್ತದೆ.

> ''ಎಜಗಿದ ಮಂಕ ತಂದೆಗೆ ಸಿದ್ದರಾಮಯ್ಯ
> ನು(ಉ)ವ ಲಿಂಗವು ತಾನೆಂದು
> ಮರೆಯ (ದಿ) ಪ್ಪುದ್ಯೆಸತಿಯೆಂದು ಗೋತ್ರದ ಮುಂ
> ದು(ಅ)ವ ಜೇರ್ಣದ ಕಂಥೆಯಿತ್ತ''[೪೮]

''ಹೊಲೆಚಿಲೆ ಮುಟ್ಟು ಗಂಧದಲೀ ಕಂಥೆಯ
ನೊಲಿದು ಪೂಜೆಯ ಮಾಡು ಮಗನೆ
ಧರಿಸು ಕಂಥೆಯನೆಂದು ರೇವಣ ಪ್ರಭುರಾಯ
ನೊರೆದನು ಮಂಕಸಿದ್ಧನಿಗೆ''[೪೯]

ಈ ರೀತಿಯಲ್ಲಿ ಕಂಥೆಯನ್ನು ಪೂಜೆಮಾಡುವುದಕ್ಕೆ ರೇವಣಸಿದ್ಧರು ಪ್ರೇರೆಪಿಸುತ್ತಾರೆ. ಈ ಹಿನ್ನೆಲೆಯಲ್ಲಿ ಹಾಲುಮತದವರು ಅಂದಿನ ಸಾಮಾಜಿಕ ಒತ್ತಡಕ್ಕೆ ಒಳಗಾಗಿ ಕಂತೆಧಾರಣೆಯನ್ನು ಲಿಂಗದ ರೂಪದಲ್ಲಿ ಧರಿಸಿರಬಹುದು. ಲಿಂಗವನ್ನು ಧರಿಸಿದರೂ ಕುರುಬರು ತಮ್ಮ ಮೂಲ ಆಚರಣೆ ಪದ್ಧತಿಯನ್ನು ಬಿಟ್ಟಿಲ್ಲವೆಂದು ಪ್ರಸ್ತುತದಲ್ಲಿರುವ ಆ ಸಮುದಾಯದ ಜನರೇ ನಿದರ್ಶನ. ಅಷ್ಟಲ್ಲದೆ ಈ ಕಂಥೆಯನ್ನು ಪಡೆದದ್ದ ಶಾಸ್ವತವಾಗಿ ಸಮಾಜದಲ್ಲಿ ಉಳಿಯಲೆಂದು ಶಿವನಾಮ ಶಾಸನ ಬರೆಯಿಸಿದ ಉಲ್ಲೇಖವು ಸಿದ್ಧಮಂಕ ಚರಿತ್ರೆಯಲ್ಲಿ ಚಾರಿತ್ರಿಕ ದಾಖಲೆಯನ್ನು ಹುಡುಕಲು ಸಹಾಯಕವಾಗುತ್ತದೆ.

''ಗುರು ಸಿದ್ಧರಾಮ ಮಂಕನ ಕಂಥೆ ಎಂದೆಂಬುದ
ಶಿವನಾಮ ಶಾಸನದಿಂದ
ಸಾಧಿಸಿ ಬರೆಸಿ ರೇವಣ ಸಿದ್ದರಾಮಯ್ಯ
(೮೯) ಧರೆಯೊಳು ಮೆಚೆಯಲ್ಕೆ''[೫೦]

ಸಂಸ್ಕೃತಿಯಾಗಲಿ, ಸಮುದಾಯವಾಗಲಿ ಬೆಳೆಯಬೇಕಾದರೆ ಪೂರ್ವಮಾಹಿತಿಯ ಜೊತೆಗೆ ಪ್ರಸ್ತುತದಲ್ಲಿನ ಆಕರಗಳು ಮುಖ್ಯ ಇವೆರಡು ಲಕ್ಷಣಗಳನ್ನು ಹಾಲುಮತದವರು ಪುರಾಣಗಳಲ್ಲಿರುವಂತೆ ಜೀವಿಸುವ ಸಮುದಾಯವಾಗಿದೆ. ಇದಕ್ಕೆ ಸಾಕ್ಷಿಯಾಗಿ ಶಾಸನಗಳನ್ನು ಬರೆಯಿಸುವ ರೂಢಿಯೂ ರಾಜಮಹಾರಾಜರಂತೆ ಸಮುದಾಯಗಳೂ ಸಂಸ್ಕೃತಿಯನ್ನು ದಾಖಲಿಸಿರಿಸುವಲ್ಲಿ ಉಪಯೋಗಿಸಿರುವುದು ಐತಿಹಾಸಿಕ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ.

ಮಧ್ಯಕಾಲೀನ ಸಂದರ್ಭದಲ್ಲಿ ಎಲ್ಲಾ ಪಂಥಗಳಿಗೂ ಒಂದು ವಿಶಿಷ್ಠತೆ ದೊರೆಯಿತು. ಯಾರನ್ನು ಮೇಲು ಕೀಳು ಎನ್ನದೆ ಸರ್ವರನ್ನು ತನ್ನೆಡೆಗೆ ಸೆಳೆಯಿತು. ಹೀಗಾಗಿ ಅನೇಕ ಪಂಥಗಳು ಹುಟ್ಟಿಕೊಂಡವು. ಕಾಪಾಲಿಕರು, ಶಕ್ತರು, ನಾಥ, ಸೂಫಿಗಳು ಪಾಶುಪತ. ಶೈವ ಪಂಥಗಳು ರಚನೆಯಾದವು. ಈ ಎಲ್ಲಾ ಪಂಥಗಳು ಒಂದನ್ನೊಂದು ಪ್ರಭಾವ ಬೀರಿವೆ. ಜೊತೆಗೆ ಆಯಾ ಪಂಥದ ಕೆಲವು ಪರಿಕಲ್ಪನೆಗಳನ್ನು ಸಾಮಾನ್ಯವಾಗಿ ಉಲ್ಲೇಖಿಸುತ್ತಾರೆ.

''ಈ ನಾಥ ಪಂಥದಲ್ಲಿ ಕಂಥೆ ಎಂಬ ಶಬ್ದವೂ ವಿರಕ್ತದಲ್ಲಿರುವ ಒಂದು ವಿಶಿಷ್ಟ ಲಕ್ಷಣ. ಸದಾ ಅಲೆಯುವ ಪ್ರವೃತ್ತಿ ಹೊಂದಿದ ಇವರು ಕಂಬಳಿಯನ್ನು ದೇಹ ರಕ್ಷಣೆಗಾಗಿ ಉಪಯೋಗಿಸುತ್ತಿದ್ದರು. ನಂತರ ಬಂದ ಸೂಫಿಗಳು ಸಾಮಾನ್ಯವಾಗಿ ಕೌದಿ (ಘೊಂಗಡಿ) ಅಥವಾ ಕಂಬಳಿ (ಗೋದಡಿ)ಯನ್ನು ಬಳಸುತ್ತಾರೆ. ಇದು ಅವರ ವೈರಾಗ್ಯ ಸೂಚಕ ಲಕ್ಷಣ. ಹುಜವೇರಿಯ ಪ್ರಕಾರ ಕೌದಿ ಅಥವಾ ಕಂಬಳಿಯನ್ನು ಧರಿಸುವವರು ಲೌಕಿಕತೆಯನ್ನು ತ್ಯಾಗ

ಮಾಡಬೇಕಾಗಿರುತ್ತದೆ. ಅಂದರೆ ಲೌಕಿಕ ಜಗತ್ತಿನ ಸುಖ ಭೋಗಗಳೆಲ್ಲವನ್ನು ತ್ಯಜಿಸಿ ಸನ್ಯಾಸಿಯಾಗುವುದೆಂದು ತಿಳಿಸಿಕೊಡುವುದು.''[೫೧] ನಾಥ ಮತ್ತು ಸೂಫಿಗಳ ಲಕ್ಷಣಗಳಲ್ಲಿ ಕಂಬಳಿಯು ಉಲ್ಲೇಖ ಬರುವುದರಿಂದ ಮತ್ತಷ್ಟು ಪ್ರಾಚೀನತೆಯನ್ನು ತಿಳಿಸುತ್ತದೆ. ಹಾಗೂ ವೈರಾಗ್ಯ ಸೂಚಕ ಎನ್ನುವುದು ಹಾಲುಮತದವರಲ್ಲಿ ಒಡೆಯರು, ಗುರುಗಳು ಎಂಬ ಅರ್ಥದಲ್ಲಿ ಬಳಕೆಯಾಗುವುದು. ನಾಥ ಮತ್ತು ಸೂಫಿಗಳು ಸನ್ಯಾಸಿಗಳಾಗಿ ಅನುಭಾವಗಳನ್ನು ಪ್ರತಿಪಾದಿಸಿದರೆ. ಹಾಲುಮತದವರು ''ಕಂಥೆ'' ಪವಿತ್ರವಾದ ಸೇವಾಕಾರ್ಯವೆಂದು ಪ್ರತಿಪಾದಿಸಿದ್ದಾರೆ. ಅಲ್ಲದೆ ಬುಡಕಟ್ಟು ಜನಾಂಗವಾದ ಲಂಬಾಣಿ ಸಮುದಾಯವು ಸಹ ಕಂಬಳಿಯನ್ನು ಪವಿತ್ರವೆಂದು ಭಾವಿಸುತ್ತದೆ. ಲಂಬಾಣಿ ಸಮುದಾಯ ಮದುವೆಯಲ್ಲಿ ಕಂಬಳಿಗೆ ನಾಲ್ಕು ಮೂಲಿಗೆ ಕೋಲನ್ನು ಕಟ್ಟುತ್ತಾರೆ. ಇದನ್ನು ಕಂಬಳಿ ಹಂದರದಂತೆ ನಿರ್ಮಿಸಿರುತ್ತಾರೆ. ಈ ಹಂದರದ ನಡುವೆ ಒಂದು ಕೋಲನ್ನಿಟ್ಟು ಕಂಬಳಿಯ ಹೊರ ಮೈಯಲ್ಲಿ ಕಂಚಿನ ತಂಬಿಗೆಯನ್ನು ಬೋರಲು ಹಾಕುತ್ತಾರೆ. ಇದರ ಕೆಳಗೆ ಮದು ಮಕ್ಕಳನ್ನು ಕೂಡಿಸಿ ಕಾರ್ಯಗಳನ್ನು ಮಾಡುವರು. ಈ ರೀತಿಯ ಕಾರ್ಯಕ್ಕೆ ''ಮಂಡೆಡೊ''ಎಂದು ಲಂಬಾಣಿಗಳು ಕರೆಯುತ್ತಾರೆ. ಇದರರ್ಥ ಕಂಬಳಿಯು ಹಾಲುಮತದವರಲ್ಲಿ ಮಾತ್ರ ಪವಿತ್ರತೆಯನ್ನು ಪಡೆಯದೆ ಸಮಾಜದ ಇತರ ಸಮುದಾಯಗಳಿಗೂ ಇದು ಅತ್ಯವಶ್ಯಕವೆಂದು ತಿಳಿಸುತ್ತದೆ. ಈ ಮೂಲಕ ಹಾಲುಮತ ಸಮಾಜವನ್ನು ಗೌರವಿಸುವುದು ಕಂಡುಬರುತ್ತದೆ.

### iii. ಮೇಷ ಪವಾಡ

ಕುರುಬ ಸಮುದಾಯವು ಕುರಿಗೆ ಮೊದಲ ಸ್ಥಾನಕೊಟ್ಟಿದೆ. ಅದು ಅವರ ಕುಲದ ಚಿನ್ನೆಯು ಹೌದು. ಹಾಲುಮತವು ಕುರಿಯನ್ನು ಸಾಕಿ ಸಲುಹಿ ಅವುಗಳ ಹಾಲಿನಿಂದ ಜೀವನವನ್ನು ಸಾಗಿಸುತ್ತಿತ್ತು. ಅದಕ್ಕೆ ಕುರುಬರು ಹಾಲುಮತದವರೆಂದು ಕರೆಯಿಸಿಕೊಳ್ಳುವರು. ಹಾಗೂ ಪಾರ್ವತಿ ಪರಮೇಶ್ವರ ಭೂಲೋಕಕ್ಕೆ ಬಂದಿರುವಾಗ ಪಾರ್ವತಿಯು ಪ್ರಕೃತಿಯ ನಿಜಸೌಂದರ್ಯಕ್ಕೆ ಸೋಲುವಳು. ಆಗ ಆಕೆಯ ಎದೆಹಾಲು ಸುರಿಯುತ್ತವೆ. ಆ ಎದೆ ಹಾಲಿನಿಂದ ಎರಡು ಬೊಂಬೆಗಳನ್ನು ತಯಾರಿಸಿ ಶಿವನಿಂದ ಜೀವ ಬರಿಸುವಳು. ಈ ರೀತಿಯಾಗಿ ಜನಿಸಿದ ಮುದ್ದಗೊಂಡ ಮುದ್ದವೆಯರ ಕುಲವೇ ಹಾಲುಮತವೆಂದು ಕರೆಯಲಾಗುತ್ತದೆಂದು ಎರಡು ರೀತಿಯಾಗಿ ಐತಿಹ್ಯಗಳನ್ನು ಹೇಳುತ್ತಾರೆ. ಇದಕ್ಕೆ ಪುರಾಣಗಳು, ಡೊಳ್ಳಿನ ಹಾಡುಗಳು ಸಹ ಆಕರ ಒದಗಿಸುತ್ತವೆ. ಹೀಗೆ ಮೇಷಕ್ಕೆ ಕುರುಬರು ಹೆಚ್ಚಿನ ಆದ್ಯತೆಯನ್ನು ನೀಡುವುದು ಕುಲ ವೃತ್ತಿಯನ್ನು ಪ್ರತಿನಿಧಿಸುತ್ತದೆ ಹಾಗಾಗಿ ಸರೂರ ಶಾಂತಮುತ್ತಯ್ಯನು 'ತಗರ ಪವಾಡ'ವನ್ನು ಮಾಡಿ ಮತ್ತಷ್ಟು ಈ ಪ್ರಾಣಿಗೆ ಮೌಲ್ಯವನ್ನು ತರುವನು. ವೀರಶೈವದವರು ಬಸವನನ್ನು (ಎತ್ತು) ಪೂಜ್ಯಭಾವದಿಂದ ಆರಾಧಿಸಿದರೆ, ಕುರುಬರು ಕುರಿಯನ್ನು ಭಾಗ್ಯದ ನಿಧಿಯೆಂದು ಪೂಜ್ಯಭಾವದಿಂದ ಆರಾಧಿಸುತ್ತಾರೆ. ಈ ಟಗರು ಎಂಬುದು ಪರ್ಯಾಯವಾಗಿ ಕುರಿ, ಮೇಷ, ತಗರು, ಎಂದು ಬಳಕೆಯಾಗಿದೆ.

ಕುರುಬರಿಗೆ ಕುರಿಯು ಕೇವಲ ಸಾಕುವ ಪ್ರಾಣಿಯಲ್ಲ. ಇದು ಅವರ ಕುಲದ ಸಂಕೇತವನ್ನು ಅರುಹುತ್ತಾ ಸಾಂಸ್ಕೃತಿಕ ಮಹತ್ವವನ್ನು ತಿಳಿಸುವುದು ಕಂಡು ಬರುತ್ತದೆ. ಕುರಿಗಳ ಕಾಯುವಿಕೆ,

ಸಾಕಾಣಿಕೆಯು ತುಂಬಾ ಕಠಿಣವಾದ ವೃತ್ತಿ. ಈ ಹಿನ್ನೆಲೆಯಲ್ಲಿ ಕುರುಬನಂತೆ ಅಡ್ಡಾಡಬೇಕೆಂದು ಹಿರಿಯರ ಮಾತನ್ನು ಸ್ಮರಿಸಬಹುದು. ಅಂದರೆ ಕುರಿ ಕಾಯುವವರು ನಿಂತಲ್ಲಿ ನಿಲ್ಲದೆ ಅಲೆಮಾರಿಯಾಗಿ ತಿರುಗುವವರು. ಹಾಗಾಗಿ ಅವರಿಗೆ ತಾಳ್ಮೆಯು ಹೆಚ್ಚೆಂದು ತಿಳಿದುಬರುತ್ತದೆ.

ಕುರಿಯ ಬಗ್ಗೆ ಚರಿತ್ರೆಯನ್ನು ತಿಳಿಸಲು ಪ್ರತ್ಯೇಕವಾದ ಕಾವ್ಯವೇ ರಚನೆಯಾಗಿದೆ.ಅದೇ 'ಟಗರ ಪವಾಡ' ಟಗರ ಪವಾಡದ ಮೂಲಕ ಸರೂರ ಶಾಂತಮುತ್ತಯ್ಯನು ಕುರುಬ ಕುಲ, ಟಗರಿನ ಮೌಲ್ಯ, ಕುರುಬರ ಸಾಮಾಜಿಕ ಆಶಯವನ್ನು ತಿಳಿಸುತ್ತಾನೆ. ಮೂಲತಃ ಶಾಂತಮುತ್ತಯ್ಯನು ಕುಡುವಕ್ಕಲಿಗ ಆದಿಗೊಂಡನ ಮೊಮ್ಮಗ. ಈತನ ತಂದೆ ಪದ್ಮಣನು ಮಾಡಿದ ಪ್ರಮಾದವೇ ವರವಾಗಿ ಇವರು ಕುರಿ ಕಾಯುವವರಾಗುತ್ತಾರೆ. ತಂದೆಯಿಂದ ಕುರಿಯನ್ನು ಭಾಗಮಾಡಿಕೊಂಡು ಸ್ವತಂತ್ರವಾಗಿ ಬದುಕುವನು. ಕುರುಬರು ಕುರಿಯನ್ನು ಯಾರು ಕಾಯುತ್ತಾರೋ ಅವರೇ ಇಂದಿನ ಅಗರ್ಭ ಸಿರಿವಂತನೆಂದು ಹೇಳಲಾಗುತ್ತದೆ. ಅಂದರೆ ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಕುರಿಯ ಹಿಂಡು ಪ್ರಮುಖವಾಗಿದೆ. ಟಗರ ಪವಾಡವು ಈಗಾಗಲೇ ಕಲ್ಯಾಣದಿಂದ ಹೊರಹಾಕಲ್ಪಟ್ಟ ಕುರುಬರನ್ನು ಶಾಂತಮುತ್ತಯ್ಯನಿಂದ ಸಾಮಾಜಿಕ ಮೌಲ್ಯವನ್ನು ದೊರೆಯುವಂತೆ ಮಾಡುತ್ತದೆ. ಮತ್ತೊಂದು ಕೃತಿಯಾದ ಸಿದ್ಧಮಂಕ ಚರಿತೆಯಲ್ಲಿಯೂ ಹನ್ನೆರಡು ವರ್ಷ ಕುಲಕ್ಕೆ ಹೊರಗಾಗಿರುತ್ತಾರೆ. ಹೀಗೆ ಸಮಾಜದ ಇತರ ಕುಲಗಳಿಂದ ದೂರವಿರುವ ಕುರುಬರ ಕುಲವೂ ಇತರ ಕುಲಗಳಿಗೆ ಎಷ್ಟು ಅವಶ್ಯವೆಂದು, ಹಾಗೂ ಎಷ್ಟು ಮೌಲ್ಯಯುತವಾದುದೆಂದು ತಿಳಿಸಿಕೊಡಲು ರಚನೆಯಾಗಿದೆ ಎನ್ನಬಹುದು.

ಕೆಟ್ಟಕುಲವನ್ನು ಸಮಾಜದಲ್ಲಿ ಕೀರ್ತಿ ಹೊಂದುವಂತೆ ಟಗರ ಕಥೆಯಿಂದ ಬಂದಿದ್ದನ್ನು ತಿಳಿಸುತ್ತದೆ. ಒಂದು ಕಡೆ ತಗರ ಪವಾಡದಲ್ಲಿ ಹನ್ನೆರಡು ವರ್ಷ ಕಲ್ಯಾಣ ಪಟ್ಟಣದಿಂದ ಹೊರಗಿದ್ದರೆ ಸಿದ್ಧಮಂಕದಲ್ಲಿ ಕಲ್ಯಾಣದಿಂದ ಏಳುಬೇಲಿಯ ಹೊರಗೆ ಜೀವಿಸಲು ಆಜ್ಞೆ ಮಾಡಿದರು. ಇಲ್ಲಿನ ಹನ್ನೆರಡು ಮತ್ತು ಏಳು ಕುರುಬ ಸಮುದಾಯದ ಅಶುಭ ಸಂಖ್ಯೆಗಳಾಗಿವೆ. ಏಕೆಂದರೆ ಹನ್ನೆರಡು ಎಂಬುದನ್ನು ಪಟ್ಟವೆಂದು ಕರೆಯುತ್ತಾರೆ. ಏಳು ಸಂಖ್ಯೆಯು ಜೀವನ ಏಳು ಬೀಳೆಂಬ ಅರ್ಥವನ್ನು ಪ್ರತಿನಿಧಿಸುತ್ತದೆ. ಕುರುಬರು ಯಾವುದೇ ಹರಕೆಯನ್ನು ಹೊತ್ತಿದ್ದರೆ ೧೨ ವರ್ಷಗಳ ಒಳಗೆಯೇ ತೀರಿಸಬೇಕು. ಇಲ್ಲವಾದರೆ ಕುಟುಂಬದಲ್ಲಿ ಅಡ್ಡಿ ಆತಂಕ, ವಿಘ್ನಗಳು ಕಾಡುತ್ತವೆಂಬ ನಂಬಿಕೆಯಿದೆ. ಅದಕ್ಕಾಗಿ ''ಹರಿಕೆ ಹನ್ನೆರಡು ವರ್ಷ, ಮುಡುಪು ಮುವತ್ತು ವರ್ಷ'' ಎಂದು ಮನುಷ್ಯನ ಕೋರಿಕೆಯನ್ನು ತೀರಿಸಲು ನೀಡಿದ ಕಾಲಾವಧಿ. ಕಲ್ಯಾಣದಿಂದ ಹನ್ನೆರಡು ವರ್ಷ ಹೊರಗಡೆ ಬಾಳಿದ ಕುರುಬರು ಆ ವರ್ಷವೇ ಅವರು ಸಮಾಜದಲ್ಲಿ ಮಾನ್ಯತೆಯನ್ನು ಪಡೆಯಲು ಹೋರಾಟ ನಡೆಸುತ್ತಾರೆ. ಅದನ್ನು ತಗರ ಪವಾಡವು ತಿಳಿಸಿ ಕೊಡುತ್ತದೆ. ಶಾಂತಮುತ್ತಯ್ಯನು ಈ ತಗರ ಪವಾಡದ ಕೇಂದ್ರ ವ್ಯಕ್ತಿ. ರೇವಣರಿಂದ ಆಶೀರ್ವಾದ ಪಡೆದು ಸರೂರಿನಲ್ಲಿ ಜೀವಿಸುವ ಶಿವಭಕ್ತ. ಈತನು ಕುಲೋದ್ಧಾರಕ್ಕೆ ಕಾಯುತ್ತಿರುವ ಸಂದರ್ಭದಲ್ಲಿ ಕಲ್ಯಾಣದಿಂದ ಸತ್ತ ಬಸವನನ್ನು ಬಂಡಿಯಲ್ಲಿಟ್ಟು ಮೆರವಣಿಗೆ ಮಾಡಿಕೊಂಡು ಸಂಸ್ಕಾರ ಮಾಡಲು ಬರುತ್ತಾರೆ. ಇದನ್ನು ಶಾಂತಯ್ಯನು ಸದುಪಯೋಗಿಸಿಕೊಳ್ಳುವನು. ಕಿನ್ನರ ಬೊಮ್ಮಯ್ಯನು

ಶಾಂತಮುತ್ತಯ್ಯನಲ್ಲಿ ಬಿಟ್ಟ ತಗರು ಸತ್ತಿತೆಂದು ವಿಷಯ ತಿಳಿಯುತ್ತದೆ. ಶಾಂತಯ್ಯನು ರೇವಣರ, ಭಕ್ತಿ ಭಂಡಾರಿ ಬಸವಣ್ಣರ ಕೃಪೆಯಿಂದ ಸತ್ತ ತಗರನ್ನು ವಿಭೂತಿ ಸವರಿ, ತೀರ್ಥವನ್ನು ಚುಮುಕಿಸಿ ಎಬ್ಬಿಸುತ್ತಾನೆ. ಆದರೆ ವೀರಶೈವದವರು ಸತ್ತ ಬಸವನನ್ನು ಎಬ್ಬಿಸಿದೆ ಸೋಲುತ್ತಾರೆ. ಹೀಗೆ ಶಾಂತಮುತ್ತಯ್ಯ ಜಯಶಾಲಿಯಾಗುತ್ತಾನೆ. ನಂತರ ಕಲ್ಯಾಣದ ಜನರು, ಕುರುಬಗೌಡರು ಸಂಯೋಜನೆಯಿಂದ ಮೇಷೋತ್ಸವವನ್ನು ನೆರವೇರಿಸುತ್ತಾರೆ. ಸತ್ಯವುಳ್ಳ ಶಾಂತಯ್ಯನೆಂದು ಬಸವೇಶರು ಮುದ್ದಾಡಿ ಹಣೆಯಲ್ಲಿ ಭಸ್ಮವನ್ನು ಇಡುತ್ತಾರೆ.

ಈ ಉತ್ಸವಕ್ಕೆ ದಿಕ್ಕು ದಿಕ್ಕಿನ ಕುರುಬರು ಸಂತಸದಿಂದ ಹಾಲುಮೊಸರುನ್ನು ಲೆಕ್ಕವಿಲ್ಲದಷ್ಟು ದಾನ ಮಾಡುವರು. ಬಸವಣ್ಣನು ಉಡುಗೊರೆಯಾಗಿ ಮೂರೇಣಿನ ಕಂಥೆಯನ್ನು ನೀಡುವನು. ಅಲ್ಲದೆ ಶರಣರು ತಗರ ಪವಾಡ ಮೆರೆದಿದಕ್ಕೆ ಶಾಂತಯ್ಯನ ಸಂಕೇತವಾಗಿ ಕುರಿಯ ಕೊಂಬಿನ ಮೇಲೆ ಗುರುತು ಬೀಳುವಂತೆ ಮಾಡುವರು. ಅಂದರೆ ಜೀವ ಪಡೆದ ಶಿವಭಕ್ತ ಬ್ರಹ್ಮಯ್ಯನ ತಗರು ಸೊಕ್ಕಿನಿಂದ ಕಂಬಕಂಬಗಳಿಗೆ ಹಾಯುತ್ತದೆ. ಅದನ್ನು ಹತೋಟಿಗೆ ತರಲು ಶಾಂತಯ್ಯ ತಗರಿನ ಎರಡು ಕೋಡ ಹಿಡಿದು ಬಾಗಿಸುವನು.

ಈ ರೀತಿ ಬಲವಾಗಿ ಕೋಡು ಹಿಡಿದಾಗ ಕೈ ಬೆರಳು ಗುರುತು ಟಗರಿನ ಕೋಡಿನಲ್ಲಿ ಅಚ್ಚಗುತ್ತದೆ ಈಗಲೂ ತಗರಿನ ಕೋಡಿನಲ್ಲಿನ ಈ ಗುರುತನ್ನು ಶಾಂತಯ್ಯನ ಕೈ ಬೆರಳ ಗುರುತೆಂದು ಕುರುಬರು ನಂಬಿದ್ದಾರೆ. ಹೀಗೆ ಕಲ್ಯಾಣದಿಂದ ಬಂದ ಶಾಂತಯ್ಯನನ್ನು ಮತ್ತು ತಗರನ್ನು ಸರೂರ ಜನರು ವಿಜೃಂಭಣೆಯಿಂದ ಸ್ವಾಗತಿಸುತ್ತಾರೆ. ಜನರುಗಳ ಜೊತೆಗೆ ನಿಸರ್ಗ ದೇವತೆಯು ಸಹ ವಿಜಯೋತ್ಸವಕ್ಕೆ ತಯಾರಿಯನ್ನು ನಡೆಸುತ್ತಾಳೆಂದು ಕೃತಿಯಲ್ಲಿ ಹೇಳಲಾಗಿದೆ. "ಕೊಳರ್ವಕ್ಕಿ, ಹಂಸ, ಅರಗಿಳಿ, ಪಾರಿವಾಳ, ಎಳೆದುಂಬಿ ಕೋಗಿಲೆಯ ಕಲರವವು ತಂಗಾಳಿಯಲ್ಲಿ ಸೇರಿ ಸ್ವಾಗತಿಸುತ್ತದೆ. ಕಾಮನ ಬಳಗ, ಅನೇಕ ಜಾತಿಯ ಫಲಪುಷ್ಪಗಳು ಶುಭ ಕೋರುತ್ತವೆ. ಗಮುಗಮಿಸುವ ಲಾವಂಚದಿಂದ ಸುಂದರ ಚಪ್ಪರವನ್ನು ಮಾಡಲಾಗಿರುತ್ತದೆ. ಮೆರವಣಿಗೆಯಲ್ಲಿ ಬಳಲಿ ಬಂದವರಿಗೆ ''ತಳಿರು ಹಾಸಿಕೆ ಹಾಸಿ ಎಳನೀರು ಕಬ್ಬು ಪಣ್ಬಲವ, ತಿಳಿಯ ಮಜ್ಜಿಗೆ ಮೊಸರು ಪಾನಂಗಳನುಯಿತ್ತು ಬಿಳಿಎಲೆ ಅಡಿಕೆ ಕೆನೆಸುಣ್ಣ''ವನ್ನು ಬಂದವರಿಗೆ ಕೊಡುವರು. ಈ ಪದ್ಧತಿಯು ಕುರುಬರು ಕೆಲ ಪ್ರದೇಶದಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಮದುವೆ ಸಂದರ್ಭದಲ್ಲಿ ವೀಳ್ಯದೆಲೆ, ಕಬ್ಬು, ಹಣ್ಣು, ಹೂವು, ಎಳನೀರು, ಮಜ್ಜಿಗೆ, ಮೊಸರುಗಳನ್ನು ಸ್ಥಳದಲ್ಲಿಯೇ ಕೊಟ್ಟು, ವೀಳ್ಯೆದೆಲೆ, ಕಬ್ಬು, ಹಣ್ಣು, ಅಡಿಕೆ, ಸುಣ್ಣವನ್ನು ಪ್ಯಾಕ್ ಮಾಡಿ ಬಂಧುಗಳಿಗೆ ಕೊಟ್ಟು ಕಳಿಸುವರು. ಮಧ್ಯಮ ವರ್ಗದ ಕುರುಬರು ಊಟಕ್ಕೆ ಮಜ್ಜಿಗೆಯನ್ನು, ಎಲೆ, ಅಡಿಕೆಯನ್ನು ಕೊಡುವ ಪದ್ಧತಿಯನ್ನು ಇಟ್ಟುಕೊಂಡಿರುವುದು ಕುರುಬರ ಆರ್ಥಿಕ ಸ್ಥಿತಿಯನ್ನು ತಿಳಿಸಿ ಕೊಡುವುದು. ಹೀಗೆ ಕುರುಬ ಜನಾಂಗದಲ್ಲಿ ಎಷ್ಟೊ ಆಚರಣೆ ಪದ್ಧತಿಗಳು ದುಬಾರಿ ವೆಚ್ಚ ತಗಲುವ ಉದ್ದೇಶದಿಂದ ಆಚರಣೆಯನ್ನು ಬಿಡುತ್ತಾ ಬಂದಿರುವುದು ಕಾಣಬಹುದು. ಆದರೆ ಇಂದಿಗೂ ಕುರಿಯನ್ನು ಕಾಯುತ್ತಿರುವವರು 'ಹಟ್ಟಿಪೂಜೆ' ಎಂದು ಆಚರಿಸುತ್ತಾರೆ. ಹಟ್ಟಿಯಲ್ಲಿನ ಕುರಿಗಳ ಹಿಕ್ಕೆಯನ್ನು ಕೂಡಿಸಿ ಅದಕ್ಕೆ ಬೆಂಕಿ ಹಚ್ಚಿ, ಈ ಬೆಂಕಿಯಿಂದ ಕುರಿ ಹಾಲನ್ನು ಉಕ್ಕಿಸುತ್ತಾರೆ.

ಆ ಹಾಲು ಯಾವ ಕಡೆ ಉಕ್ಕುತ್ತದೆಯೋ ಆ ಕಡೆ ಈ ವರ್ಷ ಕುರಿಗಳಿಗೆ ಮೇವು ಸಿಗುತ್ತದೆಂದು ಪರಿಭಾವಿಸುತ್ತಾರೆ. ಹೀಗೆ ಮೇಷ ಪವಾಡವು ಧಾರ್ಮಿಕ ಆಚರಣೆಯಾಗಿ ಕಂಡು ಬಂದರೂ ಕುರುಬರ ಜೀವನದ ಸ್ಥಿತಿಯನ್ನು ತಿಳಿಯುವುದಕ್ಕೆ ತುಂಬಾ ಪ್ರಮುಖವಾಗಿದೆ.

**iv. ಅಗ್ನಿ ಕುಂಡ**

ಹಾಲುಮತ ಸಮುದಾಯಗಳ ದೇವರು ಅಗ್ನಿಕುಂಡನನ್ನು ಪ್ರವೇಶಿಸುವುದು ಒಂದು ಧಾರ್ಮಿಕ ಆಚರಣೆಯಾಗಿದೆ. ಅಗ್ನಿಕುಂಡವನ್ನು ತುಳಿಯುವ ಆಚರಣೆಯ ಜೊತೆಗೆ ಮುಳ್ಳುಕಂಟೆಯನ್ನು ತುಳಿಯುವುದು ಒಂದು ಪದ್ಧತಿಯಾಗಿತ್ತು. ಈ ರೀತಿಯ ಘಟನೆಗಳು ಸಮುದಾಯದ ಶುದ್ಧತೆಯನ್ನು ಆ ಸಮುದಾಯದ ಸದಸ್ಯರುಗಳು ಪವಾಡ ಪುರುಷರಾಗಿ ನೆರವೇರಿಸುತ್ತಾರೆ. ಈ ಮೂಲಕ ಹಾಲುಮತ ಸಮುದಾಯವು ಹೊರತಾಗಿಲ್ಲ. ಬೀರಪ್ಪ, ಮಾಳಪ್ಪರಂತಹ ನಾಯಕರು ಅಗ್ನಿಕುಂಡವನ್ನು ಪ್ರವೇಶಿಸುವುದರ ಮೂಲಕ ಕುರುಬರ ಆತ್ಮಶಕ್ತಿಯನ್ನು ಪ್ರತಿಬಿಂಬಿಸುತ್ತಿದೆ. ಹಾಗೂ ದುಷ್ಟರನ್ನು ಸುಟ್ಟು ಹಾಕುವ ಸಾಮರ್ಥ್ಯವನ್ನು ಹೊಂದಿದೆಂದು ತಿಳಿಸುತ್ತದೆ. ಹಾಗೆಯೇ ಶಾಂತಮುತ್ತಯ್ಯನ ಸಂಪ್ರದಾಯದವರು ಇವತ್ತು ಏಳುಕಂಟಿ ಮೇಲೆ ನಿಂತು ಹೇಳುವ ಹೇಳಿಕೆಯು ನಿದರ್ಶನವಾಗಿದೆ.

ಈ ಹಿನ್ನೆಲೆಯಲ್ಲಿ ಶಿವ-ಪಾರ್ವತಿಯರು ಭೂಲೋಕಕ್ಕೆ ಮಾಳಪ್ಪನ ಭಕ್ತಿಪಕಾಷ್ಟತೆಯನ್ನು ಪರಿಶೀಲಿಸಲು ಬರುವರು. ಆಗ ಮಾಳಪ್ಪನು ಅವರನ್ನು ಹೆಗಲ ಮೇಲೆ ಕೂಡಿಸಿಕೊಂಡು ಬೀಜಗುಂತಿಗೆ ಬರುತ್ತಾನೆ. ಅಲ್ಲಿ ಶಿವ ಪಾರ್ವತಿಯರು ಆತನ ಭಕ್ತಿಗೆ ಮೆಚ್ಚಿ ಈ ರೀತಿ ವರವನ್ನು ನೀಡುವರು.

"ಏನ ಬೇಡತಿ ಬೇಡೋ ಮಾಳಪ್ಪಾ
ಕೊಡುವೆನೋ ನಾನಿಲ್ಲಿ
ಮಾಳಪ್ಪ ಕೈಯ ಜೋಡ್ಸಿ ನಿಂತಾನಲ್ಲೀ
ಬಡವರ್ಗಿ ಭಾಗ್ಯ ಬೇಡ್ಯಾನೋ ಅಲ್ಲೀ
ವರುಷಕ ಒಮ್ಮೆ ದರಶನ ಕೊಡಬೇಕ
ಅಂತ ವಚನ ಕೊಡಬೇಕಲ್ಲಿ"[೫೨]

ಹೀಗೆ ಪಾರ್ವತಿ ಶಿವರಿಂದ ಪಡೆದ ವರವನ್ನು ಮಾಳಪ್ಪನು ಹಾಲುಮತ ಸಮುದಾಯದ ವರ್ಷಾಚರಣೆಯಾಗಿಸುವುದು ಕಂಡುಬರುತ್ತದೆ. ಇದರ ಪ್ರಯುಕ್ತವಾಗಿ ಇಂದು ಏಳುಕಂಟೆಯಂತಹ ಆಚರಣೆಯು ರೂಢಿಯಾಗಿರಬಹುದು. ಇದಕ್ಕೆ ಇನ್ನು ಸ್ಪಷ್ಟವಾಗಿ ಮಾಳಪ್ಪನು ಈ ರೀತಿಯಾಗಿ ವಿಶ್ಲೇಷಣೆ ಮಾಡುವನು. "ಮಾಳಪ್ಪನು ಬನ್ನಿ ಮಹಾಕಾಳಿ ಮರದ ಹತ್ತಿರ ಬಂದು ಹೇಳುವಲ್ಲಿ ಇನ್ನಷ್ಟು ಈ ಆಚರಣೆಯು ಸ್ಪಷ್ಟವಾಗುತ್ತದೆ.

"ನಾಲ್ಕು ದಿಕ್ಕ ಸೋಸಿ ನೋಡ್ಯಾನಲ್ಲೀ
ಮನಸಿನ ವಿಚಾರ ತಾನು ಮಾಡ್ಯಾನಲ್ಲಿ
ಹೋಮಿಗಿ ಪಿಂಪಳ ಶ್ರೀಗಂಧ ಬನ್ನಿ
ತಂದ ಒಟ್ಯಾನಲ್ಲೀ"[೫೩]

ಹೀಗೆ ಮಾಳಪ್ಪನು ಬನ್ನಿಗಿಡದ ಹತ್ತಿರ ಬಂದು ಹೋಮದ ಕೊಂಡಕ್ಕೆ ವಿವಿಧ ಮರಗಳ ಕಟ್ಟಿಗೆ ತುಂಡುಗಳನ್ನು, ಎಳ್ಳು, ಬದಾಮಿ, ಕೊಬರಿಯನ್ನು ಹಾಕುವನು. ಜೊತೆಗೆ ಹಣೆಗೆ ಅರಿಷಿಣ, ಕುಂಕುಮ ಹಚ್ಚಿಕೊಂಡು ಕಾಯಿ ಹೊಡೆಯುತ್ತಾನೆ. ಅಲ್ಲದೆ ಹಾಲು ತುಪ್ಪಾ ಸುರುವನು. ನಂತರ ಬನ್ನಿ ಮರವನ್ನು ಏರಿ ಸುತ್ತಲಿನ ಜನರನ್ನು ವಿಕ್ಷೀಸುತ್ತಾನೆ. ಗುರುವಿನ ಧ್ಯಾನ ಮಾಡಿ ಗಿಡದ ಹೂಗಳು ಅರಳಿದ್ದನ್ನು ನೋಡಿ ಅಗ್ನಿ ಕೊಂಡ ಹಾಯುತ್ತಾನೆ. ಇಲ್ಲಿ ಬನ್ನಿ ಹೂಗಳು ಅರಳುದನ್ನು ನೋಡಿಕೊಂಡು ಪೂಜೆ ಮಾಡುವುದು ವಿಶೇಷವಾಗಿ ಕಂಡುಬರುತ್ತದೆ. ಅಂದರೆ ಇವರು ಅಷ್ಟು ಸೂಕ್ಷ್ಮತೆಯಿಂದ. ಜೀವನದ ಸುತ್ತಮುತ್ತಲಿನ ಪರಿಸರವನ್ನು ವೀಕ್ಷಿಸುತ್ತಿದ್ದರೆಂದು ತಿಳಿದುಬರುವುದು. ಈ ಮೂಲಕ ನಿಸರ್ಗದ ರಹಸ್ಯವನ್ನು ಬಲವರಾಗಿದ್ದರು ಎಂದು ಸೂಚಿಸುತ್ತದೆ. ಆದ್ದರಿಂದ ಕುರುಬರು ಪ್ರಕೃತಿಯಲ್ಲಿ ಆಗು ಹೋಗುಗಳನ್ನು ಕೂಲಂಕುಷವಾಗಿ ವರ್ತಮಾನದ ಹೇಳಿಕೆಗಳಲ್ಲಿ ಕಟ್ಟಿರುವುದು ಸತ್ಯಾಂಶವಾಗಿ ಕಂಡುಬರುತ್ತದೆ. ಇವರು ವಿಜ್ಞಾನಿಗಳಂತೆ ವೈಚಾರಿಕತೆಯನ್ನು ಹೊಂದಿದ್ದರೆಂದು ಇಂತಹ ಆಚರಣೆಗಳು ಸಾಬೀತು ಪಡಿಸುತ್ತವೆ. ಈ ಕೊಂಡ ಹಾಯುವ ಆಚರಣೆಯು ಭಂಡಾರ ಸಂಸ್ಕೃತಿ ನಾಯಕರಾದ ಬೀರಪ್ಪ ಮತ್ತು ಮಾಳಿಂಗರಾಯರ ಆರಾಧನೆ ಮೂಲಕ ಬಂದವುಗಳೆಂದು ಪುರಾಣಗಳಿಂದ ತಿಳಿದುಬರುತ್ತದೆ.

**v. ದೋಣಿ ಸೇವೆ.**

ದೋಣಿ ಸೇವೆಯು ಹಾಲುಮತ ಕುರುಬರಲ್ಲಿ ಪ್ರಮುಖವಾದ ಆಚರಣೆಯಾಗಿ ಕಂಡುಬರುತ್ತದೆ. ಬೀರಪ್ಪ, ಮಾಳಿಂಗರಾಯ, ರೇವಣಸಿದ್ಧ, ಗೋಲ್ಲಾಳ, ಸಿದ್ಧಮಂಕರ ವಿವರ ಹೇಳುವಲ್ಲಿ ಡೋಣಿಸೇವೆಯು ಪ್ರಸ್ತಾಪ ಪುರಾಣಗಳಲ್ಲಿ ಬರುವುದಿಲ್ಲ. ಆದರೆ ಜನಪದ ಹಾಲುಮತ ಮಹಾಕಾವ್ಯದಲ್ಲಿ ಮಾತ್ರ ಈ ಪರಿಭಾಷೆಯನ್ನು ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಜನಪದ ಹಾಲುಮತ ಮಹಾಕಾವ್ಯವು ೧೯ನೇ ಶತಮಾನದಲ್ಲಿ ಆಧುನಿಕ ಜ್ಞಾನ ಶಿಸ್ತುಗಳ ಮೂಲಕ ಸಂಗ್ರಹಿಸಿದ ಮೌಖಿಕ ಕಾವ್ಯ. ಹಾಗಾಗಿ ಮೈಲಾರಲಿಂಗನ ಪ್ರಭಾವವನ್ನು ಹೊಂದಿದ್ದ ಮತ್ತು ತಿಳಿದುಕೊಂಡಿದ್ದರಿಂದ ಈ ಕೃತಿಯಲ್ಲಿ ಹಾಡುಗಾರರು ಇದನ್ನು ಪ್ರಸ್ತಾಪಿಸಿದ್ದಾರೆ ಎನ್ನಬಹುದು. ಮೈಲಾರಲಿಂಗನ ಪ್ರಭಾವವು ಹಾಡುಗಾರನ ಮೇಲೆ ಆಗಿದೆ ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ಗಂಗಿಮಾಳನ ಕಥೆಯ ಪ್ರಸ್ತಾಪದಲ್ಲಿ ವಿಶಿಷ್ಟ ಆಚರಣೆಯಾಗಿ ಈ ಡೋಣಿ ಸೇವೆಯು ಕಂಡುಬರುತ್ತದೆ. ಮೈಲಾರಲಿಂಗನು ಮಣಿಮಲ್ಲಾಸುರರ ಸಂಹಾರಕ್ಕೆ ಭೂಮಿಗೆ ಬರುತ್ತಾನೆ. ಇವರ ಸಂಹಾರಕ್ಕೆ ಗಂಗಿಮಾಳಮ್ಮನ ಹತ್ತಿರ ಹೋಗಿ ಭಂಡಾರವನ್ನು ಬೇಡುವನು. ಗಂಗಿಮಾಳಮ್ಮನಲ್ಲಿ ಭಂಡಾರ ಪಡೆಯುವುದರಿಂದ ವರ್ತಕಳಾಗಿದ್ದಳೆಂದು ತಿಳಿಸುತ್ತದೆ. ಅಲ್ಲದೆ ಮೈಲಾರಲಿಂಗನು ನೇರವಾಗಿ ಮಾಳಮ್ಮನ ಹತ್ತಿರ ಭಂಡಾರವನ್ನು ಕೇಳುವುದಿಲ್ಲ. ಇದಕ್ಕಾಗಿ ಬಳೆಗಾರನ ವೇಷಧರಿಸುವುದರ ಮೂಲಕ ಗಂಗಿಮಾಳಮ್ಮನ ಮನೆಯ ಪ್ರವೇಶ ಮಾಡುವನು. ನಂತರ ನಿಜ ರೂಪವನ್ನು ತೋರಿ ಬಾವಿಕಟ್ಟೆಯ ಹತ್ತಿರ ಬಂದು ಭಂಡಾರ ಕೊಡಲು ಹೇಳುವನು. ಆಗ ಆಕೆ ಭಂಡಾರ ಕೊಡುವುದರ ಮೂಲಕ ಮೈಲಾರಲಿಂಗನ ಹಿಂದೆ ಹೋಗುತ್ತಾಳೆ. ಈ ಮೂಲಕ ಮೈಲಾರಲಿಂಗನು

ಅನ್ಯ ಸಮುದಾಯದ ಹೆಣ್ಣನ್ನು ಮದುವೆಯಾಗಿ ಮೇಲ್ವರ್ಗದವರ ಗರ್ವ ಅಡಗಿಸುವುದು ಕಂಡುಬರುತ್ತದೆ. ಮದುವೆಯಾಗಲು ನಿರ್ಧಾರಿಸಿದಾಗ ಆಕೆಯ ಅಣ್ಣಂದಿರು ಅಡ್ಡಿಯಾಗುತ್ತಾರೆ.

"ಹಂತ ಯಾಳ್ಯಾದೊಳಗೇನೆ ಗಂಗಿ ಮಾಳಮ್ಮನಣ್ಣದೇರಾ
ಗಂಗಿ ಮಾಳಮ್ಮನಣ್ಣದೇರಾ ಹೆಗಲಿಗ ಕೊಡ್ಲಿ ಹೊತ್ತಾರ
ಯಾರನ ಕೇಳಿದಂದಾರ ಯಾರಿಗ ಹೇಳಿದಂದಾರ
ಬೂದಿ ಬಡಕ ಸನ್ಯಾಸಿ ಎಲಿಂದ ಬಂದೀದಂದಾರ
ಗುಲ್ಲನಾಯಿತಂದರೋ ಮಲ್ಲಯ್ಯನ ಮ್ಯಾಲೆ ಬಿಟ್ಟಾರ"[೫೪]

ಹೀಗೆ ನಾಯಿಯನ್ನು ಮೈಲಾರಲಿಂಗ ಗಂಗಿಮಾಳಮ್ಮರ ಮೇಲೆ ಬಿಡುತ್ತಾರೆ. ಮಾಳಮ್ಮನ ಅಣ್ಣಂದಿರು ಆಕೆಯ ಸ್ವತಂತ್ರಕ್ಕೆ ಅಡ್ಡಿಯಾಗುವುದನ್ನು ವಿರೋಧಿಸುವುದಕ್ಕೆ ನೀಡಿದ ಶಾಪವೇ ಒಗ್ಗಯ್ಯರಾಗುವುದಕ್ಕೆ ಮೂಲ ಕಾರಣವಾಗಿದೆ..

"ನಾಲ್ಕು ಮಂದಿ ಅಣ್ಣದೇರಿಗೆ ಶಾಪ ಕುಡುತಾಳೇನಯ್ಯ
ಡೋಣಿ ಹಿಡಿಯುತಾರೇನ ಒಗ್ಗನಾಗುತಾರೇನ
ಹೆಗಲಿಗ ಅಡ್ಡಿ ಹಾಕ್ಯಾನೆ ಟೊಂಕಕ ಗಂಟ ಕಟ್ಯಾನ
ಕೌಡಿ ಕೊಳ್ಳಾಗ ಕಟ್ಯಾನ ನಾಯಿನಾಗಿ ಬೊಗಳ್ಯಾರ"[೫೫]

ಈ ರೀತಿಯಾಗಿ ಶಾಪಕ್ಕೆ ಗುರಿಯಾದ ವ್ಯಕ್ತಿಗಳು ನಾಯಿಯಾಗಿ ಡೋಣಿಯಲ್ಲಿ ಆಹಾರ ಸೇವಿಸುವ ವಿಕೃತರೂಪವನ್ನು ಡೋಣಿಸೇವೆ ಎಂದು ಕರೆಯಲಾಗುತ್ತದೆ. ಈ ಡೋಣಿ ಸೇವೆಯೆಂಬುದು ದುಷ್ಟರನ್ನು ಶಿಷ್ಟರಾಗಿಸುವುದು, ದುಷ್ಟರ ಅಹಂಕಾರ ವಜಾ ಮಾಡುವ ಸಂಕೇತವಾಗಿ ಮೂಡಿಬಂದಿದೆ. ಆಚರಣೆಗಳು ಹುಟ್ಟುವುದಕ್ಕೆ ದುಷ್ಟರೆ ಕಾರಣೀಭೂತರಾಗಿರುತ್ತಾರೆ. ಹೋರಾಟದ ಪರವಾಗಿ ಮೂಡಿದ ಡೋಣಿ ಪ್ರಸಂಗ ಇಂದು ಆಚರಣೆಯ ಸ್ಥಾನದಿಂದ ಪೂಜ್ಯನೀಯವಾಗಿದೆ. ಮೈಲಾರಲಿಂಗನ ಭಕ್ತರು ಹರಕೆಗಳನ್ನು ತಿರಿಸುವಲ್ಲಿ ಡೋಣಿಸೇವೆಯನ್ನು ಮಾಡುತ್ತಾರೆ. ಒಂದು ಕಟ್ಟಿಗೆ ಹಾಗೂ ಲೋಹದಿಂದ ಮಾಡಿದ ಡೋಣಿಯಲ್ಲಿ ಹಾಲು, ಮೊಸರು, ತುಪ್ಪ, ಬಾಳೆಹಣ್ಣು, ಅನ್ನ ಮುಂತಾದ ವಸ್ತುಗಳನ್ನು ತುಂಬಿರುತ್ತಾರೆ. ಈ ಡೋಣಿ ಸೇವೆಯಲ್ಲಿ ಎರಡು ರೀತಿಯನ್ನು ಕಾಣುತ್ತೇವೆ. ಒಂದು ಡೋಣಿ ಸೇವೆಯನ್ನು ಬೇರೆಯವರಿಗೆ ನೀಡುವುದು. ಮತ್ತೊಂದು ತಾವೇ ನಾಯಿಗಳಂತೆ ಡೋಣಿಯಲ್ಲಿನ ಆಹಾರವನ್ನು ಸೇವಿಸುವುದು. ಹೀಗೆ ಡೋಣಿ ಸೇವೆ ಪದ್ಧತಿಯು ಮೈಲಾರಲಿಂಗನಿಗೆ ಮಾತ್ರ ಸೀಮಿತವಾದ ಒಂದು ವಿಶಿಷ್ಟ ಆಚರಣೆಯಾಗಿದೆ. ಈ ರೀತಿಯಾಗಿ ಆಚರಿಸುವವರನ್ನು ಗೊಗ್ಗಯ್ಯನವರು ಎಂದು ಕರೆಯಲಾಗುತ್ತದೆ. ಒಟ್ಟಾರೆ ಡೋಣಿಸೇವೆಯು ವ್ಯಕ್ತಿಯ ಅಹಂಕಾರವನ್ನು ತೊಡಗಿಸಲು ರೂಪಿತವಾದ ಒಂದು ಕಾನೂನು ಆಗಿ ಕಂಡುಬರುತ್ತದೆ.

**vi. ಹಾಲುಮತದ ಒಳಪಂಗಡಗಳು**

ಹಾಲುಮತ ಸಮುದಾಯದಲ್ಲಿ ಒಳಪಂಗಡಗಳ ಸೃಷ್ಟಿಗೆ ವೃತ್ತಿಯು ಕಾರಣವಾಗಿದೆ. ಸಮಾಜದಲ್ಲಿ ಒಂದೊಂದು ಕೆಲಸಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಿಕೊಂಡಂತೆ ಹಾಲುಮತದಲ್ಲಿಯೂ ಅನೇಕರು

ವೃತ್ತಿಯನ್ನು ಆರಿಸಿಕೊಂಡರು. ಬಟ್ಟೆ ಹೊಗೆಯುವುದರಿಂದ ಅಗಸ, ಮಡಿವಾಳ ಎಂದು ಕರೆಯಿಸಿಕೊಂಡರು. ವ್ಯಕ್ತಿಯ ತಲೆ ಕೂದಲನ್ನು ಕತ್ತರಿಸುವವರಿಗೆ ಕ್ಷೌರಿಕನೆಂದು, ಗಡಿಗೆ ಮಾಡುವನಿಗೆ ಕುಂಬಾರ ಎಂದು ಗುರುತಿಸುವಂತೆ ಮುದ್ದುಗೊಂಡ ಮುದ್ದವ್ವೆಯರ ಆರು ಮಂದಿ ಮಕ್ಕಳಿಗೆ ಪ್ರತ್ಯೇಕವಾದ ಕೆಲಸವನ್ನು ನೇಮಿಸುವ ಆ ವೃತ್ತಿಗಳಿಗೆ ತಮ್ಮದೇ ಆದ ಪರಿಭಾಷೆಯನ್ನು ರಚಿಸಿಕೊಂಡರು. ಮೊದಲನೇ ಮಗ ಆದಿಗೊಂಡನು "ಶಿವನ ಕೃಪೆಯಿಂದ ತಾಡಿನ ಎಲೆಯ ಮೇಲೆ ಭವಿಷ್ಯ ಬರೆದು ಅಲ್ಲಲ್ಲಿ ವಿಹರಿಸುತ್ತ ಸರ್ವರೊಂದಿಗೆ ಅತಿ ಪ್ರೇಮದಿಂದ ವರ್ತಿಸುತ್ತ ಶಿವಚಿಂತನೆಯಲ್ಲಿ ಶಿವೈಕ್ಯಭಾವದಲ್ಲಿ ಸದ್ಭಾವನೆಯಿಂದ ಭಕ್ತಿ ನಿಷ್ಠೆಗಳಿಗೊಳಗಾಗಿ ಏಕೋ ಭಾವದಿಂದ ವೇಳೆಗಳೆಯುತ್ತಿದ್ದನು. ಅದೇ ಆತನ ಕಾಯಕವಾದುದರಿಂದ ಆತನ ವಂಶದವರಿಗೆ 'ಶಾಸ್ತ್ರಗೊಲ್ಲ, ಶಾಸ್ತ್ರಗೋಲ' ರೆಂಬ ನಾಮೆಯೇ ಇದೆ."[೫೬] ಹೀಗೆ ಆದಿಗೊಂಡನ ಮಕ್ಕಳು ಶಿವನ ಲೀಲೆಯನ್ನು ಭಕ್ತಿಭಾವದಿಂದ ಕೊಂಡಾಡುತ ತಮ್ಮ ಜೀವನಕ್ಕೆ ಬೇಕಾದ ಆಹಾರ ಪದಾರ್ಥಗಳನ್ನು ಸಂಪಾದಿಸುತ್ತಿದ್ದರು ಎಂದು ಹೇಳುತ್ತದೆ. ಶಿವನ ಲೀಲೆಯನ್ನು ಶಾಸ್ತ್ರದ ರೀತಿಯಲ್ಲಿ ಹೇಳಿಕೊಂಡು ಬಾಳುತ್ತಿದ್ದರಿಂದ ಶಾಸ್ತ್ರಗೋಲರಾಗಿ ಹಾಲುಮತದಲ್ಲಿ ಪ್ರತ್ಯೇಕ ಜನರಾಗಿ ಉಳಿಯುತ್ತಾರೆ.

ಲಕ್ಕೊಂಡನು ಶಿವನ ದಯದಿಂದ ದಿನನಿತ್ಯ ಬೇರೆ ಬೇರೆ ಆಶ್ರಮಗಳಲ್ಲಿ, ಮನೆ ಮಠಗಳಲ್ಲಿ ಅವರವರ ಚರಿತ್ರೆಯನ್ನು ಹೊಗಳುವ ಕಾಯಕವನ್ನು ಆರಿಸಿಕೊಂಡಿದ್ದಾನೆ. ಈತನ ಕೆಲಸಕ್ಕೆ ಮುನಿ ಪುಂಗವರು ಹೆಳವರು ಎಂದು ಅಭಿದಾನ ಮಾಡುತ್ತಾರೆ. ಆದರೆ ಈತನ ಸಹೋದರರು ಈ ವೃತ್ತಿಯನ್ನು ಬಿಟ್ಟುಬಿಡಲು ಹೇಳುತ್ತಾರೆ. "ಲಕ್ಕೊಂಡನು ಹಠಮಾಡಿ ಈ ಕೆಲಸವನ್ನೆ ಮಾಡಿದ್ದರಿಂದ ಈತನ ಎರಡೂ ಕಾಲು ತೆಗೆಯುತ್ತಾರೆ. ಇಷ್ಟಾದರೂ ಈತ ಶಿವನಾಮಸ್ಮರಣೆ ಹಾಗೂ ತನ್ನ ಕಾಯಕ ಬಿಡಲಿಲ್ಲ. ಲಕ್ಕೊಂಡನ ಕಾಯಕ ನಿಷ್ಠೆಯಲ್ಲಿ ಸ್ವರಪರಿಯಿಂದ ಪರೀಕ್ಷಿಸಿ ಶಿವನು ಪ್ರಸನ್ನ ಚಿತ್ತನಾಗಿ ಆತನಿಗೆ ಹೋದ ಕಾಲ ಕೊಟ್ಟನಲ್ಲದೇ ನಿನ್ನಿಂದ ಕುಲಗೋತ್ರ ಹ್ವಾರೆ ಹೇಳುವ ಹೆಳವನರೆಂಬ ವಂಶೋತ್ಪತ್ತಿ ಉದ್ಭವಿಸಲು ಎಂದು ಆಶೀರ್ವದಿಸಿ ಶಿವನು ಅದೃಶ್ಯನಾದನು."[೫೭] ಹೆಳವರು ಪ್ರತಿ ವರ್ಷಕ್ಕೊಮ್ಮೆ ಬಂದು ಕುರುಬರ ಮನೆಯಲ್ಲಿ ಆಯಾ ಮನೆತನದ ವಂಶಾವಳಿಯನ್ನು ಕೂಲಂಕುಷವಾಗಿ ದಾಖಲಿಸಿರುವುದನ್ನು ಕ್ರಮಬದ್ಧವಾಗಿ ಓದುತ್ತಾ ಹೋಗುತ್ತಾರೆ. ಇವರು ಈ ಕೆಲಸಕ್ಕೆ ಪ್ರತಿಯಾಗಿ ಕುರುಬರ ಮನೆಯಲ್ಲಿ ಜೋಳ, ಅಕ್ಕಿ, ಬೆಲ್ಲ, ಆಕಳನ್ನು ದಾನವಾಗಿ ಪಡೆದುಕೊಂಡು ಹೋಗುವರು. ಈ ರೀತಿಯಾಗಿ ಕುರುಬರ ಲಕ್ಕೊಂಡನ ವಂಶದವರೇ ಹೆಳವಯ್ಯಾ, ಜಂಗಮಯ್ಯರಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶದಲ್ಲಿ ಕಂಡು ಬರುತ್ತಾರೆ. ವಂಶಾವಳಿಯನ್ನು ವಿವರಿಸುತ್ತಾ ಆಯಾ ಮನೆತನದ ಬೆಡಗುಗಳನ್ನು ಮನೆದೇವರ ನೆಲೆಯನ್ನು ತಿಳಿಸುತ್ತಾರೆ. ಈ ಮೂಲಕ ಕುರುಬರ ವಂಶಾವಳಿಯನ್ನು ಚರಿತ್ರೆಯಾಗಿಸುವಲ್ಲಿ ಹೆಳವರ ಪಾತ್ರ ಮುಖ್ಯವಾಗಿದೆ. ಹೇಳವರ ವೇಷವು ಭಿನ್ನವಾಗಿರುವುದನ್ನು ಗುರುತಿಸಬಹುದು. ಹೆಳವರು ಕೈಯಲ್ಲಿ ಒಂದು ಬಟ್ಟೆ ಕಡತವನ್ನು ಹೊಂದಿರುತ್ತಾರೆ. ಅದರಲ್ಲಿಯೇ ಆಯಾ ಮನೆತನದ ವ್ಯಕ್ತಿನಾಮಗಳ ವಿವರ ಒಳಗೊಂಡಿರುತ್ತದೆ. ಹಾಗೂ ಹೊಸದಾಗಿ ಜನಿಸಿದ

ಮಕ್ಕಳುಗಳ ಹೆಸರನ್ನು ಸೇರಿಸಿಕೊಂಡು ಕೌಟುಂಬಿಕತೆಯ ಇಡೀ ಪಟ್ಟಿಯನ್ನು ದಾಖಲಿಕರಿಸುವ ಮಹಾನ್ ಕೆಲಸವನ್ನು ಕೈಗೊಂಡಿರುವುದನ್ನು ಸೂಚಿಸುತ್ತದೆ.

ಕುರುಬರಲ್ಲಿ ಮತ್ತೊಂದು ಉಪಪಂಗಡವೆಂದರೆ 'ಕುಡೊಕ್ಕಲಿಗರು'. ಈ ಪರಿಭಾಷೆಯು ಖ್ಯಾಮಗೊಂಡ ಎಂಬವನು ಬೇಸಾಯವನ್ನು ಹೊಂದಿದ್ದರಿಂದ ಬಂದಿರುವುದು. ಖ್ಯಾಮಗೊಂಡನ ಗುರು ಆದಿನಾಥನ ಸ್ಮರಣೆಯಲ್ಲಿಯೇ ದನ ಕರುಗಳನ್ನು ಸಂರಕ್ಷಣೆ ಮಾಡಿ ಅವುಗಳಿಂದ ವ್ಯವಸಾಯವನ್ನು ಮಾಡುತ್ತಾನೆ. "ಆತನ ಕೃಷಿ ಉದ್ಯೋಗದ ಪ್ರೀತಿಯನ್ನು ಕಂಡು ಅತಿಥಿ ಅಭ್ಯಾಗತರ ಸೇವಾಭಾವ ದರ್ಶಿಸಿ ನಿನ್ನ ವಂಶದವರಿಗೆ 'ಕೂಡೊಕ್ಕಲಿಗ' ರೆಂದು ನಾಮವು ಭೂಲೋಕದಲ್ಲಿ ಪ್ರಸಿದ್ಧಿ ಪಡೆಯಲಿ"[೫೮] ಕುರುಬರು ಕೃಷಿಯ ಜೊತೆಗೆ ಪಶುಸಂಗೋಪನೆಯನ್ನು ಮಾಡುತ್ತಿದ್ದರು. ಇವರು ಸಮಾಜದಲ್ಲಿ ಶ್ರಮಜೀವಿಗಳಂತೆ ಕಂಡುಬರುತ್ತಾರೆ.

ದ್ಯಾಮಗೊಂಡ ಎಂಬುವನಿಂದ 'ಸುಡುಗಾಡ ಸಿದ್ಧ'ನೆಂಬ ಕುಲವು ಸಮಾಜದಲ್ಲಿ ಅಭಿದಾನ ಪಡೆಯುತ್ತದೆ. ಇವರು ಕುರುಬರಲ್ಲಿಯೇ ಅತಿ ಹಠವಾದಿ ಜನರು ಎಂದು ಕರೆಯುತ್ತಾರೆ. ಅತಿ ಕೋಪಿಷ್ಠರು, ಏಕಾಂಗಿಗಳು ಎಂದು ಇವರನ್ನು ಹೇಳಲಾಗುತ್ತದೆ. ''ಇವರು ವೃದ್ಧಿ, ಸಿದ್ಧಿ, ಅಣಿಮಾದಿಗಳನ್ನು ಪ್ರಾಪ್ತ ಮಾಡಿಕೊಳ್ಳಬೇಕೆಂಬ ಹಂಬಲದಿಂದಾಗಿ ಏಕಾಂತ ಸ್ಥಳವಿದ್ದಲ್ಲಿ ಹೋಗಿ ಅತಿಘೋರ ಜಪ-ತಪಗಳನ್ನಾಚರಿಸಿದನಲ್ಲದೇ ಹಟಯೋಗ ಮುಂತಾದ ಯೋಗವನ್ನು ಮಾಡಿ ಶಿವನನ್ನು ಪ್ರಾರ್ಥಿಸುತ್ತಾರೆ. ಆಗ ವೇತಾಳನು ಆತನ ತಪಸ್ಸಿಗೆ ಪ್ರಸನ್ನನಾಗುವನು. ವೇತಾಳನಿಂದ ಅನೇಕ ಚಮತ್ಕಾರಗಳನ್ನು ಅರಿತು-ಬೆರೆತು ವಶಮಾಡಿಕೊಂಡು ಗ್ರಾಮ-ಗ್ರಾಮಗಳಿಗೂ ಹಾಗೂ ಪ್ರಾಂತಕ್ಕೂ ಸಂಚರಿಸಿ ತಾನು ವಶೀಕರಿಸಿಕೊಂಡಂಥ ಅಣಿಮಾದಿಗಳ ಚಮತ್ಕಾರಗಳನ್ನು ಜನ-ಜಂಗುಳಿಗೆ ಬೆರಗುಗೊಳಿಸುವರು. ಅದಕ್ಕಾಗಿ ಈತನ ವಂಶಸ್ಥರನ್ನು 'ಸುಡುಗಾಡಸಿದ್ಧ'ರೆಂದು ಹೆಸರು ಪಡೆಯುತ್ತಾರೆ.''[೫೯] ಈತನಿಗೆ ವೇತಾಳನು ಪ್ರಸನ್ನನಾಗಿ ಸಹಕರಿಸಿದ್ದರಿಂದ ಈತನ ವಂಶಸ್ಥರ ನಾಮಗಳು ವೇತಾಳ ಮತ್ತು ಸಿದ್ಧ ಎಂಬ ಪದಗಳಿಂದ ಕೊನೆಯಾಗುತ್ತವೆ. ಉದಾಹರಣೆಗೆ ಭೂತಯ್ಯ, ವೇತಾಳಸಿದ್ಧ, ಕಾಡಸಿದ್ಧ, ಸಂಕದಯ್ಯಾ ಎಂಬ ಹೆಸರುಗಳನ್ನು ನೋಡಬಹುದು.

ನೇಮಗೊಂಡಂನೆಂಬವನಿಂದ ಗೌಲೆತ್ತಿನವರು ಅಥವಾ ಕೋಲೆಬಸವನಾಡಿಸುವರ ಕುಲವು ಹುಟ್ಟಿತ್ತೆಂದು ತಿಳಿದುಬರುತ್ತದೆ. ನೇಮಗೊಂಡನ ಗುರು ಆದಿನಾಥ. ಆದಿನಾಥ ಎಂದರೆ ಇಲ್ಲಿ ಶಿವ. ಕೋಲೆಬಸವನನ್ನು ಹಿಡಿದಕೊಂಡು ಊರಿನಲ್ಲಿ ಮನೆ ಮನೆಗೆ ಹೋಗಿ ಶಿವನ ಪರಾಯಣವನ್ನು ಶ್ರದ್ಧಾಭಕ್ತಿಯಿಂದ ಪ್ರಸಾರ ಮಾಡುತ್ತಿದ್ದನು. ಆದ್ದರಿಂದ ಈತನ ಶಿವಭಕ್ತಿಯನ್ನು ಕಾಯಕದಲ್ಲಿ ತೋರಿಸಿದನು. ಅದಕ್ಕಾಗಿ ಶಿವನು ನಿನ್ನ ಉದರದಿಂದ ಜನಿಸಿದವರಿಗೆ ಗೌಲೆತ್ತಿನವರು ಅಥವಾ ಬಸವಣ್ಣನಾಡಿಸುವವರು ಎಂಬ ಅಭಿದಾನ ಬಂದು ''ನಿನ್ನ ಬಳ್ಳಿ ಜಗದಾದ್ಯಂತ ಹಂದರದಂತಾಗಲಿ ಎಂದು ಶುಭಾಶೀರ್ವಾದ ಮಾಡಿದರು.''[೬೦] ಹೀಗೆ ಕೋಲೆಬಸವನ ವೃತ್ತಿಯನ್ನು ಕುರುಬರೆ ಆರಂಭಿಸಿದ್ದಾಗಿ ಹಾಲುಮತ ಪುರಾಣದಲ್ಲಿ ಹೇಳಲಾಗಿದೆ. ನಂತರ ಕೊನೆಯ ಮಗನಾದ ಪದ್ಮಗೊಂಡನು ಕುರಿಗಳನ್ನು ಕಾಯುವ ವೃತ್ತಿಯನ್ನು ಆಯ್ದುಕೊಳ್ಳುವನು. ಕುರಿಗಳನ್ನು ಕಾಯುತ್ತಾ ಕಾಡಿಗೆ ತೆರಳುತ್ತಾನೆ. ಅಲ್ಲಿ ಶಿವ ಪಾರ್ವತಿ ಪ್ರತ್ಯಕ್ಷರಾಗಿ ರಕ್ಕಸನ ಹತ್ತಿರವಿದ್ದ ಶುಚಿಲೆಯನ್ನು

ಮದುವೆಯಾಗಬೇಕು ಎಂದು ಹೇಳುತ್ತಾರೆ. ನಂತರ ಆ ರಾಕ್ಷಸನನ್ನು ಕೊಂದು ಹಾಲುಮತದವರ ಕುರಿಗಳೆ ಆತನಿಗೆ ಆಹಾರವಾಗಿಸೆಂದು ವರ ನೀಡುತ್ತಾನೆ. ಅದೇ ರೀತಿಯಾಗಿ ಪದ್ಮಗೊಂಡನು ಗಂದ ರಕ್ಕಸನೆಂಬ ದೈತ್ಯನನ್ನು ಕೊಲ್ಲುತ್ತಾನೆ. ಅದಕ್ಕೆ ರಾಕ್ಷಸನು ಶಾಶ್ವತವಾಗಿ ಭೂಮಿಯಲ್ಲಿ ತನ್ನ ಕುರುಹು ಉಳಿಯಲು ಬೇಡುತ್ತದೆ. ನೀನು ನನ್ನ ಪ್ರಾಣ ತೆಗೆದುಕೊಳ್ಳಬೇಡ. ಇನ್ನೂ ನಾನು ಶಾಪದಿಂದ ನಿಃಶ್ಯಾಪವಾಗಬೇಕಾಗಿದೆ. ಮತ್ತು ದೇವ ದಾನವ ಮಾನವರೆಲ್ಲರಿಗೂ ಶಾಪಕ್ಕೂ ಮತ ಶಾಪ ವಿಮೋಚನೆಗೂ, ಸುಖಕ್ಕೂ, ದುಃಖಕ್ಕೂ, ಸ್ವರ್ಗಕ್ಕೂ-ನರಕಕ್ಕೂ ಸ್ತ್ರೀಯೇ ಕಾರಣಳೆಂದು ಮೂರು ಲೋಕಗಳಿಗೂ ಸಾರು. ನಂತರ ಶುಚಿಲೆಯು ಬಂದು ಈ ರಾಕ್ಷಸ ನನ್ನ ತಂದೆ ಸಮ ಕೊಲ್ಲ ಬೇಡವೆಂದು ಪದ್ಮಗೊಂಡನಿಗೆ ಕೇಳಿಕೊಳ್ಳುತ್ತಾಳೆ. ಅದಕ್ಕೆ ಪದ್ಮಗೊಂಡನು ರಾಕ್ಷಸನಿಗೆ ಎಲ್ಲಿಯವರೆಗೂ ನೀನು ಯಾವುದೇ ಎಂಥವನೇ ಆದಂಥ ಪುರುಷರ ಭಕ್ಷಣ ಮಾಡಲಾರದೇ ಮಾನವ ವಂಶದಲ್ಲಿಯ ಹಾಲುಮತದವರ ಕುರಿಗಳನ್ನೇ ತಿನ್ನುತ ಅವೇ ನಿನ್ನ ಆಹಾರವೆಂದು ತಿಳಿದು ಜಗದಲ್ಲಿ ತೋಳಿನ ರೂಪ ತಾಳು ಎಂದು ಉಚ್ಚರಿಸಿ ಆತನನ್ನು ಜೀವದಾನ ಮಾಡಿದನು. ಹೀಗೆ ಪದ್ಮಗೊಂಡನು ದುಷ್ಟರನ್ನು ಸಂಹರಿಸಿ ಶುಚಿಲೆಯನ್ನು ಮದುವೆಯಾಗುತ್ತಾನೆ. ಈಕೆಯ ಮಕ್ಕಳು ಉಣ್ಣೆ ಕಂಕಣದವರಾಗಿ ಬಾಳುತ್ತಾರೆ. ಅಲ್ಲದೆ ಇದರಲ್ಲಿ ಎರಡು ಪಂಗಡಗಳುಂಟಾಗುತ್ತವೆ. ಅವುಗಳೆಂದರೆ 'ಝುಂಡೇ ಕುರುಬರು' ಹಾಗೂ 'ಡಂಗೆ ಕುರುಬರು' ಎಂದು ಹತ್ತಿ ಕಂಕಣದವರಲ್ಲಿ 'ಹಂಡೆ ಕುರುಬರು' ಹಾಗೂ 'ಬಂಡೆ ಕುರುಬ'ರೆಂದು ಕರೆಯಲಾಗುತ್ತದೆ.

ಹೀಗೆ ಹಾಲುಮತ ಸಮುದಾಯದಲ್ಲಿ ಒಳಪಂಗಡಗಳು ಕಾಯಕದಿಂದ ಹೊಸ ಹೊಸ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ. ಆದರೆ ಇವರೆಲ್ಲಾ ಮೂಲತಃ ಕುರುಬರೇ ಎಂದು ಕಂಡುಬರುತ್ತದೆ. ಕುರಿಗಳನ್ನು ಕಾಯುತ್ತಾ ಕಾಡಿಗೆ ಹೋಗಿ ಜೀವನ ನಡೆಸುವುದರಿಂದ ಕಾಡು ಕುರುಬರು ಅಥವಾ ಅಡವಿ ಕುರುಬರು ಎಂದು ಕರೆಯುವುದನ್ನು ಹಾಲುಮತ ಪುರಾಣಗಳ ಮೂಲಕ ತಿಳಿದುಬರುತ್ತದೆ.

> "ಸಿದ್ಧಮನ ಗಂಡ ಪದಮಗೊಂಡ ಶಿವಲಿಂಗಮ್ಮನ ಗಂಡ ಪದುಮಗೊಂಡ
> ಇಬರ ಇಬ್ಬರಿಗಲ್ಲೇಳಯ್ಯ ಪದಮಾಗೊಂಡನಿದ್ದಾನೆ
> ತಂದಿ ಹಿಡಿದು ಬಂದಾರೆ ನಾವೇ ಗೊಂಡಗುರುಬರೆ
> ಕಾಡಿನಲ್ಲಿ ಇದ್ದರ ನಾವ ಕಾಡು ಕುರುಬರಾದೇವೆ
> ಕಾಡ ಕುರುಬರು ನಾವೇನಾದೆವು ಅಡವೀಯ ಕುರುಬರು ನಾವೇನ
> ಗೊಂಡಗುರುಬರು ನಾವೇನಯ್ಯ ಪದುಮಾಗೊಂಡನ ಮಕ್ಕಳೆ"[೬೧]

ಈ ರೀತಿಯಾಗಿ ಪದುಮಗೊಂಡನ ಎರಡು ಮದುವೆಯನ್ನು ಮಾಡಿಕೊಳ್ಳುವುದರಿಂದ ಕುರುಬರಲ್ಲಿ ಕುಲಗಳು ಕವಲೊಡೆದಿರುವುದನ್ನು ಗಮನಿಸಬಹುದು.

ತಗರ ಪವಾಡದಲ್ಲಿ ಪದ್ಮಗೊಂಡನ ಹಿರಿಯ ಹೆಂಡತಿಯಾದ ಲಿಂಗಮ್ಮಳ ಮಕ್ಕಳು ಹದಿಮೂರು ಮಂದಿಯೆಂದು ತಿಳಿಸುತ್ತದೆ. ಪದ್ಮಗೊಂಡನು ಕುರಿಗಳನ್ನು ಪಡೆಯುವುದಕ್ಕಿಂತ ಮುಂಚೆ ಬಾದಾಮಿ ಬಸವಿಗೊಂಡ ಮಗಳನಾದ ಲಿಂಗಮ್ಮನ ಜೊತೆ ವಿವಾಹವಾಗಿರುತ್ತದೆ. ಈಕೆಯ ಮಕ್ಕಳು

ಹದಿಮೂರು ಮಂದಿ, ಈಕೆಯು ನಗರದಲ್ಲಿನ ಸ್ತ್ರೀಯಾಗಿ ಕಂಡು ಬರುತ್ತಾಳೆ. ನಗರ ವ್ಯವಸಾಯದ ಬೆಳೆಯಲ್ಲಿ ಹತ್ತಿಯನ್ನು ಬೆಳೆಯುವುದಕ್ಕೆ ಅನುಕೂಲಗಳು, ಸೌಲಭ್ಯಗಳು ಇದ್ದವು. ಆದಕಾರಣ ನಗರದಲ್ಲಿನ ಕುರುಬರು ಹತ್ತಿಕಂಕಣದವರಾಗಿ ಕಂಡುಬರುತ್ತಾರೆ.

ಕುರುಬರಲ್ಲಿ ಒಳಪಂಗಡಗಳು ಪದ್ಮಗೊಂಡನ ಮಕ್ಕಳಿಂದಲೇ ಹುಟ್ಟಿಕೊಂಡಿರುವುದು ವಿಶೇಷವಾಗಿ ಕಂಡುಬರುತ್ತದೆ. ಪದ್ಮಗೊಂಡನು ಎರಡು ಮದುವೆಯಾಗವುದರ ಮೂಲಕ ಉಣ್ಣೆಕಂಕಣ ಮತ್ತು ಹತ್ತಿ ಕಂಕಣಗಳೆಂದು ಸಮಾಜದಲ್ಲಿ ಕಂಡುಬರುತ್ತವೆ. ಈ ಉಣ್ಣೆ ಕಂಕಣ ಮತ್ತು ಹತ್ತಿ ಕಂಕಣಗಳೇ ಮೂಲತಃ ಕುರುಬರಲ್ಲಿನ ಎರಡು ಮುಖ್ಯ ಪಂಗಡಗಳಾಗಿದ್ದವು. ನಂತರದಲ್ಲಿ ವಂಶ ಬೆಳೆದಂತೆಲ್ಲಾ ಮೂಲ ಪಂಗಡದಲ್ಲಿ ಕವಲೊಡೆದಿರುವುದನ್ನು ಗಮನಿಸಬಹುದು.

> "ಕಂದಯ್ಯ ನಿನ್ನ ಹಿರಿಹೆಂಡತಿ ಲಿಂಗಮ್ಮಗೆ ಕಂದರು ಹದಿಮೂರು ಮಂದಿ
> ಚೆಂದದಿ ಹತ್ತಿಕಂಕಣದ ಕುರುಬರೆಂದು ನಿನ್ನ ಚಿಕ್ಕ ಹೆಂಡತಿ
> ಸಿರಿವಂತೆ ಗಂಡುಮಕ್ಕಳು ಮೂರುಮಂದಿ ಉಣ್ಣೆ ಕಂಕಣದ ಕುರುಬ
> ರೆಂದು ಶಿವ ಪೇಳಿ ಮುಂದಣ ಕುರುಹ ಪೇಳಿದನು"[೨]

ಹತ್ತಿಕಂಕಣದವರು ಕುಡಿವೊಕ್ಕಲಿಗರು ಉಣ್ಣೆಕಂಕಣದವರು ಕುರಿಗಾಯಿಗಳು ಆಗಿರುವುದನ್ನು ತಿಳಿಸುತ್ತದೆ. ಪದ್ಮಗೊಂಡನ ಮಗ ಶಾಂತಮುತ್ತಯ್ಯನು ಉಣ್ಣೆ ಕಂಕಣದಿಂದ ಹತ್ತಿಕಂಕಣಕ್ಕೆ ಪರಿವರ್ತನೆಯಾಗುತ್ತಾನೆ. ಆದರೆ ಈತನ ಒಕ್ಕಲಾಗಿ ಬದುಕು ಸಾಗಿಸುವವರು ಶಾಂತಯ್ಯನನ್ನು ಉಣ್ಣೆಕಂಕಣದಲ್ಲಿಯೇ ಶ್ರೇಷ್ಠವನೆಂದು ಹೇಳುತ್ತದೆ. ಇದನ್ನು ಶಾಂತಮುತ್ತಯ್ಯ ಕುರಿಯನ್ನು ತಂದೆಯಿಂದ ಪಡೆದುಕೊಳ್ಳುವಲ್ಲಿ ಸೂಚಿಸುತ್ತದೆ.

> "ರಕ್ಕಸಿ ಕುಲದವಳೊಡನೆ ಭೋಜನ ಮಾಡೆ
> ದಕ್ಕೊದೆ ತಿಂಬುವ ಅನ್ನ
> ಅತ್ತಲು ಗುರು ನೀನೆ ಗತಿಯೆನುತಲಿ ಆಗ
> ಚಿಕ್ಕ ಶಾತನು ಕಡೆಗಾದ"[೩]

ಈ ಪದ್ಯವು ಆಹಾರದಲ್ಲಿನ ತಾರತಮ್ಯವನ್ನು ಮೇಲುನೋಟಕ್ಕೆ ಹೇಳಿದರು. ಕುರುಬರಲ್ಲಿ ಇದು ಕಟ್ಟುನಿಟ್ಟಿನ ಆಹಾರ ಪದ್ಧತಿಯನ್ನು ತಿಳಿಸುತ್ತದೆ. ಸಿರಿವಂತೆ ಪದ್ಮಗೊಂಡನ ಎರಡನೆ ಹೆಂಡತಿ ರಾಕ್ಷಸಿಯ ಹತ್ತಿರ ಬೆಳೆದವಳು. ರಾಕ್ಷಸಿಯ ಆಹಾರ ಮಾಂಸ, ಹಾಗಾಗಿ ಶಾಂತಯ್ಯನು ಮಾಂಸವನ್ನು ಸೇವಿಸುವ ಕುಲದವರ ಜೊತೆ ಕೂಡಿ ಊಟ ಯೋಗ್ಯವಲ್ಲವೆಂದು ತಿಳಿಸುತ್ತಾನೆ. ಇಲ್ಲಿ ಪದ್ಮಗೊಂಡನ ಬಹುಪತ್ನಿತ್ವದ ಕುರುಬರಲ್ಲಿ ಎರಡು ಪಂಗಡಗಳು ಏರ್ಪಟ್ಟರೆ, ಶಾಂತಯ್ಯನು ಆ ಪಂಗಡಗಳ ಪ್ರಸಾರ ಮತ್ತು ರಕ್ಷಣೆಯ ಹರಿಕಾರನಾಗಿ ಕಂಡುಬರುತ್ತಾನೆ. ಶಾಂತಯ್ಯನು ತಂದೆಯಿಂದ ಬೇರ್ಪಡುವ ಮುಖಾಂತರ ಹೊಸ ಹೊಸ ಆಶಯಗಳನ್ನು ಅನುಸರಿಸುತ್ತಾನೆ. ಕುರಿಯ ಹಾಲಿನಲ್ಲಿ ಅನ್ನವನ್ನು ಲಿಂಗಕ್ಕೆ ಅರ್ಪಿಸುವ ಕಲೆಯನ್ನು ಕಂಡುಕೊಳ್ಳುವನು. ಉಣ್ಣೆ ಕಂಕಣವನ್ನು ತಮ್ಮ ಕುಲಕ್ಕೆ ಬರಮಾಡಿಕೊಳ್ಳುವಲ್ಲಿ ಲಿಂಗಧಾರಣೆ ಅಥವಾ ಲಿಂಗದೀಕ್ಷೆ ಕಡ್ಡಾಯವೆಂದು ಹೇಳಲಾಗುತ್ತದೆ. ಈ ಮೂಲಕ ಹತ್ತಿಕಂಕಣದಲ್ಲಿ ಮತ್ತೆ ಉಣ್ಣೆ ಕಂಕಣ ಸೇರಿಸುವ ಹನ್ನಾರುವು

ಕಂಡುಬರುತ್ತದೆ. ಶಾಂತಮುತ್ತಯ್ಯ ಸರೂರಿನಲ್ಲಿ ನೆಲೆಸಿದ್ದರಿಂದ ಅಲ್ಲಿಯೇ ಕುರಿಯ ಹಟ್ಟಿಯನ್ನು ಹಾಕಿಕೊಂಡೆರುತ್ತಾನೆ.

"ಹಟ್ಟಿಕಾರರು ಹಳ್ಳಿಕಾರರು ಅರಿವಿನ
ಹುಟ್ಟು ಅರಿಯದ ಕುರುಬರು
ರಟ್ಟಮತವ ಮಾಡಿದ ಕುಲದವರು ಕಂಬಿ
ಕಟ್ಟಿ ಮಾರಿದರು ಪಾಲ್ಮೊಸರ"[೬೪]

ಹೀಗೆ ತಗರ ಪವಾಡದಲ್ಲಿ ಕುರುಬರು ಹಳ್ಳಿಯಲ್ಲಿ ವಾಸವಾಗುವುದರ ಮೂಲಕ ಹಳ್ಳಿಕಾರರಾದರು, ಕುರಿ ಹಟ್ಟಿಯನ್ನು ಹಾಕುವುದರ ಮೂಲಕ ಹಟ್ಟಿಕಾರರಾದರೆಂದು ತಿಳಿಸುತ್ತದೆ. ಹಟ್ಟಿಕಾರರು, ಹಳ್ಳಿಕಾರರು ಮೂಲತಃ ರಟ್ಟಮತದಿಂದ (ಹಾಲುಮತ) ಪರಿವರ್ತನೆಯಾದ ಕುಲಗಳೆಂದು ಸಹ ತಿಳಿಸುವುದು. ಈ ಎಲ್ಲ ಕುಲಕ್ಕೆ ಶಾಂತಮುತ್ತಯ್ಯನೇ ಒಡೆಯನಾಗಿರುವುದು ವಿಶೇಷವಾಗಿದೆ. ಹಾಲುಮತದ ಒಳಗಿನ ಕುಲವರ್ಗಕ್ಕೆ ಮುಖ್ಯಸ್ಥನಾಗಿ ಮಾಡುವ ಮುಖಾಂತರ ಒಡೆಯರು ಎಂಬ ಪದವಿಯನ್ನು ಆತನಿಗೆ ನೀಡಲಾದದ್ದನ್ನು ತಿಳಿಸುತ್ತದೆ. ಈಗಲೂ ಮುದ್ದೇಬಿಹಾಳು ತಾಲೂಕಿನ ಸರೂರು ಗ್ರಾಮದಲ್ಲಿ ಶಾಂತ ಸಂಪ್ರದಾಯದವರನ್ನು ನೋಡಬಹುದು. ಮತ್ತೊಂದು ಕಡೆ ಪದ್ಮಗೊಂಡನಿಗೆ ಮೂರುಮಕ್ಕಳು ಇರುವುದನ್ನು ತಿಳಿಸುತ್ತದೆ. ಗುರವಾದ ಸಿದ್ಧ ಬೀರೇಶ್ವರನು ಪದ್ಮಣ್ಣನ ಹಿರಿಯ ಮಗನಾದ ಗುರುಲಿಂಗನನ್ನು ಗೌಡತನಕ್ಕೆ ನೇಮಿಸಿದನು. ನಡುವಿನರಾದ ಶಿವಲಿಂಗನನ್ನು ಗೌಡತನಕ್ಕೆ ನೇಮಿಸಿ, ಚಿಕ್ಕವನಾದ ಬಸವಲಿಂಗನನ್ನು ಪದ್ಮಣ್ಣನು ಕೊಟ್ಟಕುರಿಗಳನ್ನು ತಕ್ಕೊಂಡು ಪೂರ್ವದ ಸ್ಥಳವಾದ ಹರನಪುರಕ್ಕೆ ಹೊರಟನು ಸಿದ್ಧಮಂಕ ಚರಿತ್ರೆಯಲ್ಲಿ ಕುಡಿಯೊಕ್ಕಲ ಮಗ ಹೆಗ್ಗಗೌಡನೆಂದ ಕುರುಬ ಕುಲದಲ್ಲಿ ಎರಡು ಪಂಗಡಗಳ ಹುಟ್ಟಿಗೆ ಕಾರಣ ಕರ್ತೃನಾಗಿಸಿದ್ದಾರೆ. ಇವುಗಳ ಹಾಲಿನಿಂದ ಹಳ್ಳ ಬೆಣ್ಣೆಯಿಂದ ಬೆಟ್ಟ ನಿರ್ಮಿತವಾಗಿತ್ತು. ಇದನ್ನು ಕಾಪಾಡಲು ಶಿವನು ರಾಕ್ಷಸಿಯ ಮಗಳನ್ನು ಊಳಿಗದವಳಾಗಿ ಮಾಡುತ್ತಾನೆ.

"ಹಾಲು ಹಳ್ಳ ಬೆಣ್ಣೆ ಬೆಟ್ಟವಾಗಿರೆ ಕಂಡು
ಶೂಲಿ ನೆನೆದನೊಂದನುವ
ಕಾಳರಕ್ಕಸಿಯ ಮಗಳ ಕಳುಹಿದನವ
ಊಳಿಗದಲಾಗಿರೆಂದು"[೬೫]

ಹಾಲು ಹಳ್ಳ, ಬೆಣ್ಣೆ ಬೆಟ್ಟವನ್ನು ಕಾಯಲು ರಾಕ್ಷಸಿಯ ಮಗಳನ್ನು ನೇಮಿಸುವುದು ರಾಕ್ಷಸರು ಬಲಿಷ್ಠರು ಅವರಿಂದ ಕುರಿಗಳು ರಕ್ಷಣೆಯನ್ನು ಮಾಡಲು ಸುಲಭವಾಗುತ್ತದೆಂದು ಸೂಚಿಸುತ್ತದೆ. ಇಲ್ಲಿ ರಾಕ್ಷಸ ಸ್ತ್ರೀಯು ಕುರುಬ ಗೌಡನಲ್ಲಿ ಅನುರಕ್ತೆಯಾಗುವುದರ ಮೂಲಕ ಹಾಲುಮತ ಸಮುದಾಯಕ್ಕೆ ಆಕೆಯ ಪರಿವಾರದವರಿಗೆ ರಕ್ಷಣೆಯನ್ನು ಒದಗಿಸುವುದನ್ನು ತಿಳಿಸುತ್ತದೆ. ಕೆಳಸಮುದಾಯದ ಮೂಲಕ ಬಂದ ಸ್ತ್ರೀಯು ಕಾಲಾಂತರದಲ್ಲಿ ಇಲ್ಲಿ ಸ್ಥಿರತೆಯನ್ನು ಹೊಂದುವಳು. ಈ ರೀತಿಯಾಗಿ ಆಗಮಿಸಿದ ಕಾರಣ ಈಕೆಯ ಸಂತತಿಯನ್ನು ಹಾಲುಮತ ಧರ್ಮದ ರಕ್ಷಣೆಗಾಗಿ ಬಳಸಿಕೊಳ್ಳುವುದು ಕಂಡುಬರುತ್ತದೆ. ಹೀಗೆ ಹೆಗ್ಗಗೌಡನು ಸಿದ್ಧಮ್ಮನೊಂದಿಗೆ ಸರೂರಿನಲ್ಲಿ

ನೆಲೆ ನಿಲ್ಲುವನು. ಈಕೆಯ ಸಂತತಿಯೇ ಮುಂದೆ ಪ್ರತ್ಯೇಕವಾದ ಉಣ್ಣೆ ಕಂಕಣವಾದುದನ್ನು ಸೂಚಿಸುತ್ತದೆ. ಈ ಸಿದ್ಧಮಂಕ ಚರಿತೆಯಲ್ಲಿ ಹೆಗ್ಗಗೌಡನ ಹೆಂಡತಿ ಸಿದ್ಧಮ್ಮಳು ಸಿದ್ಧಮಂಕನ ತಪಸ್ಸಿನ ರಕ್ಷಣೆಯನ್ನು ಹೊರುತ್ತಾಳೆ. ಹತ್ತಿಕಂಕಣ, ಉಣ್ಣೆಕಂಕಣಗಳು ಸುಮ್ಮನೆ ರಚನೆಯಾದ ಪಂಗಡಗಳಲ್ಲ. ಇವುಗಳ ರಚನೆಯ ಹಿಂದೆ ಒಂದು ಸಮುದಾಯದ ಅಸ್ಮಿತೆಯ ಕುರುಹನ್ನು ಹೊಂದಿದೆ. ಇವುಗಳು ಸಮುದಾಯದಲ್ಲಿ ರಚನೆಯಾಗಬೇಕಾದರೆ ಮುಖ್ಯ ಘಟನೆ ಬೇಕು. ಆ ಕಾರಣ ವಿವಾಹ ಎನ್ನುವುದು ಮುಖ್ಯವಾಗಿ ನಿಲ್ಲುತ್ತದೆ. ಮುಖ್ಯ ಉದ್ದೇಶ ಸಮುದಾಯದ ಉನ್ನತಿ, ಅಭಿವೃದ್ಧಿಯಿಂದ ಸಂಸ್ಕೃತಿಯನ್ನು ಮಹತ್ವಗೊಳಿಸುವುದಾಗಿತ್ತು. ಹಾಗಾಗಿ ಪಂಗಡಗಳು ಸಂಸ್ಕೃತಿಯನ್ನು ಬೇರೆ ಮಾಡುವ ಒಂದು ಮಾಪನವೆಂದು ತಿಳಿಯದ, ಸಾಂಸ್ಕೃತಿಕ ನೆಲೆಯನ್ನು ಅಭಿವ್ಯಕ್ತ ಪಡಿಸುವುದಾಗಿತ್ತು. ಈ ಹಿನ್ನೆಲೆಯಲ್ಲಿಯೇ ಹಾಲುಮತದ ಪಂಗಡಗಳನ್ನು ಅಧ್ಯಯನ ಮಾಡಲಾಗಿದೆ. ಉಣ್ಣೆ ಕಂಕಣದವರು ಕಂಬಳಿ ವೃತ್ತಿಯನ್ನು ಸಮಾಜಕ್ಕೆ ಪರಿಚಯಿಸುವ ಸಲುವಾಗಿಯೇ ರಚನೆಯಾಗಿದೆಂದು ಹೇಳಬಹುದು. ಪದ್ಮಗೊಂಡನ ಕಿರಿಯ ಹೆಂಡತಿ ಚೆನ್ನಮ್ಮ ಈ ಹಿನ್ನೆಲೆಯಲ್ಲಿ ಕಂಡುಬರುತ್ತಾಳೆ. ಮದುವೆ ಮಾಡುವುದರ ಮೂಲಕ ಆಕೆಗೆ ಕಂಬಳಿಯ ನೇಯ್ಗೆಯ ಸ್ವತಂತ್ರವನ್ನು ನೀಡುತ್ತದೆ. ಅನೇಕ ಕುರಿಗಳ ಉಣ್ಣೆ ಕತ್ತರಿಸಿ ಬೆತ್ತವ ಸೀಳಿ, ಬಳ್ಳಿಯನ್ನು ಕಟ್ಟಿ ಬಿಲ್ಲನ್ನು ಮಾಡುವುದು, ಅದಕ್ಕೆ ಕುರಿ ಉಣ್ಣೆಯನ್ನು ನೂಲಿನಂತೆ ಇಂಜಿ ಸುತ್ತಬೇಕು. ಉಂಕಿಯಿಂದ ಸ್ವಚ್ಛತೆಯನ್ನು ಮಾಡಬೇಕೆಂದು ತಿಳಿಸುತ್ತದೆ. ಈ ಕಾಯಕಕ್ಕೆ ಹೆಚ್ಚಿನ ಶ್ರಮ ಅಗತ್ಯ ಹಾಗಾಗಿ ಇದನ್ನು ಬಲಿಷ್ಠಳಾದ ರಾಕ್ಷಸಿ ಮಗಳು ಚೆನ್ನಮ್ಮಗೆ ಬಿಟ್ಟುಕೊಡುತ್ತಾರೆ. ದುಷ್ಟರನ್ನು ಸಂಹರಿಸಿ ಪ್ರತೀಕವಾಗಿ ಉಣ್ಣೆ ಕಂಕಣ ಹುಟ್ಟಿತು ಎಂದು ತಿಳಿಯುತ್ತದೆ. ಹತ್ತಿಕಂಕಣ ನಾಡಿನಲ್ಲಿ ಬೆಳೆಯುವ ಕುರುಬರ ಬಗೆಗೆ ಹೇಳಿದರೆ, ಉಣ್ಣೆ ಕಂಕಣ ನಗರದಿಂದ ಕಾಡಿನಲ್ಲಿ ಬಾಳುವ ಕುರುಬರ ಜೀವನವನ್ನು ಹೇಳುತ್ತವೆ. ಹೀಗಾಗಿ ಈ ಎರಡು ಶಾಖೆಗಳು ಪರಸ್ಪರ ದೂರವಾಗುತ್ತ ಹೋದವು. ಆದರೆ ಇಂದು ಆಧುನಿಕತೆಯ ಸಂಪರ್ಕ ಮಾಧ್ಯಮದಿಂದ ಮತ್ತೆ ಈ ಎರಡು ಪಂಗಡಗಳು ಒಂದಾಗಿವೆ. ಹಾಗೂ ತಮ್ಮ ತಮ್ಮಲ್ಲಿಯೇ ಜಾತಿ, ಗೋತ್ರ, ಬೆಡಗುಗಳ ಮೂಲಕ ಪ್ರತ್ಯೇಕ ಗುರುತಿಸಿಕೊಳ್ಳುವಿಕೆಯು ಕಂಡುಬರುವುದು ಅನೇಕ ಬೆಡಗು, ಗೋತ್ರದಿಂದ ಕುರುಬ ಸಮುದಾಯ ಗುರುತಿಸಿಕೊಂಡು ಮೂಲದ ಸ್ಥಿತಿಯನ್ನು ಒಪ್ಪಿಕೊಳ್ಳುವುದು.

ಕುರುಬರು ಕುರಿಯ ಸಾಕಾಣಿಕೆಯನ್ನು ಮಾತ್ರ ನಂಬಿಕೊಂಡಿರಲಿಲ್ಲ. ವ್ಯವಸಾಯದ ಜೊತೆಗೆ ಸಮಾಜದಲ್ಲಿನ ಧಾರ್ಮಿಕ ಕಾರ್ಯಗಳ ಪ್ರಸಾರವನ್ನು ಮಾಡುತ್ತಿದ್ದರು. ಇವರಿಗೆ ಕೋಲ್ಕಾರರೆಂದು ಕರೆಯುತ್ತಾರೆ. ದಳವಾಯಿಗಳು, ಈರಗಾರರು, ದಾಸ ಕುರುಬರು, ತಮ್ಮದೇ ಆದ ಸೀಮಿತ ವೃತ್ತಿಯನ್ನು ಅನುಸರಿಸುತ್ತಿದ್ದರು. ಇವುಗಳು ಕುರುಬ ಸಮುದಾಯವು ಪರಿವರ್ತನೆಗೊಂಡ ಬಗೆಯನ್ನು ತಿಳಿಸುತ್ತದೆ. ಒಟ್ಟಾರೆ ಹಾಲುಮತಕ್ಕೆ ಕುರುಬ ಎಂಬುದು ಪರ್ಯಾರ್ಯಯವಾಗಿ ಕರೆಯಲಾಗಿದೆ. ನಂತರ ಕುರುಬ ಸಮುದಾಯವನ್ನು ಅನೇಕ ಪಂಗಡಗಳಿಂದ ವರ್ಗೀಕರಿಸಲಾಗಿದೆ. ಹಂಡೆ ಕುರುಬರು ರಾಜಕಾರಣದ ಹುನ್ನಾರದಲ್ಲಿ ಹಂಡೆ ವಜೀರರಾಗಿ ಕೆಲವು ಪ್ರದೇಶದಲ್ಲಿ

ಕಂಡುಬರುತ್ತಾರೆ. ಹಂಡೆ ವಜೀರರು ಮೂಲತಃ ಹಂಡೆ ಕುರುಬರಾಗಿದ್ದರೆಂದು ಎಂ.ಎಂ.ಕಲಬುರ್ಗಿ ಮತ್ತು ಶಂ.ಬಾ.ಜೋಶಿ ಅವರು ಅಭಿಪ್ರಾಯ ಪಡುವುದು ಸತ್ಯವಾಗಿ ತೋರುತ್ತದೆ.

**೩. ಸಾಮಾಜಿಕ ಆಶಯ**

ಪ್ರಾಚೀನ ಕರ್ನಾಟಕದ ಸಮಾಜವೆಂದರೆ ಹಲವು ಸಮುದಾಯಗಳ ಒಟ್ಟು ಒಕ್ಕೂಟವೇ ಆಗಿತ್ತು. ಈ ಹಿನ್ನೆಲೆಯಲ್ಲಿ ಹಾಲುಮತ ಸಮುದಾಯದ ಸಾಮಾಜಿಕ ಆಶಯಗಳು ವಿಶಿಷ್ಟ ಪೂರ್ಣವಾಗಿದೆ. ಮಾನವನ ಬೇಟೆ ಸಂಸ್ಕೃತಿ, ಪಶುಪಾಲನ ಸಂಸ್ಕೃತಿ ಹಾಗೂ ಕೃಷಿ ಸಂಸ್ಕೃತಿಯ ಚರಿತ್ರೆಯನ್ನು ನೋಡಿದಾಗ ಹಾಲುಮತ ಸಮುದಾಯ ಪಶುಪಾಲನ ಸಂಸ್ಕೃತಿಯಿಂದ ಬೆಳೆದು ಬಂದು ಸಾಮಾಜಿಕವಾಗಿ ಮೈಬಿಚ್ಚಿಕೊಳ್ಳುತ್ತಾ ನಡೆದಿರುವುದು ತಿಳಿದು ಬರುತ್ತದೆ. ಈ ಹಿನ್ನೆಲೆಯಲ್ಲಿ ಕುರಿಗಳನ್ನು, ಆಕಳುಗಳನ್ನು ಕುರುಬರು ಸಾಕುವುದರ ಮೂಲಕ ಸಮಾಜಕ್ಕೆ ಅತ್ಯುಪಯುಕ್ತವಾದ ಸಮುದಾಯವಾಗಿ ಬೆಳೆಯಿತು. ಕುರಿಯನ್ನು ಸಾಕುವುದರ ಜೊತೆಗೆ ವ್ಯವಸಾಯ ವೃತ್ತಿಯಾಗಿಸಿಕೊಂಡರು. ಇಲ್ಲಿ ಕುರಿಯನ್ನು ಬದುಕಿಸಲು ಭೂಮಿ ಅವಶ್ಯವಾಗಿ ಬೇಕಿತ್ತು. ಆದಕಾರಣ ಕುರುಬ ಸಮುದಾಯ ಕಾಡಿನ ಭೂಮಿಯನ್ನು ಕುರಿಗಳ ಹಟ್ಟಿ ಯಾಗಿಸಿಕೊಂಡರು. ನಂತರ ಭೂಮಿ ಸಾಗುವಳಿ ಮಾಡಲು ದನಕರುಗಳನ್ನು ಬಳಸಿಕೊಂಡರು. ಕುರಿ ಮತ್ತು ದನಗಳ ಸಂಗೋಪನೆಯು ಮೂಲತಃ ಹೈನುಗಾರಿಕೆಯನ್ನು ಸೂಚಿಸುತ್ತವೆ. ಇದನ್ನು ಉಪಯೋಗಿಸಿಕೊಂಡರೂ ಕುರಿ ತುಪ್ಪಟದಿಂದ ಏನು ಮಾಡುವುದು, ದನಗಳನ್ನು ಮತ್ತೆ ಯಾವ ಕೆಲಸಕ್ಕೆ ಬಳಸಿಕೊಳ್ಳಬೇಕು ಎಂದು ಯೋಚಿಸುವರು. ಅಂತಿಮವಾಗಿ ದೊರೆತ ಯೋಚನೆಯೆಂದರೆ ಕುರಿ ಉಣ್ಣೆಯ ಉತ್ಪಾದನೆ, ಕಂಬಳಿ ತಯಾರಿಕೆ, ಇದನ್ನು ವೈವಿಧ್ಯತೆಯಲ್ಲಿ ಬಳಸುವಿಕೆ, ಮಾರಾಟ ಒಂದು ಹಂತವಾದರೆ, ದನಗಳಿಂದ ಭೂಮಿಯನ್ನು ಸಾಗುವಳಿ ಮಾಡುವುದು ಮತ್ತೊಂದು ಹಂತವಾಗಿ ರೂಢಿಸಿಕೊಂಡರು. ಕುರುಬರು ದನಗಾಯಿಗಳಾಗಿ ಕುಡೊಕ್ಕಲಿಗರಾಗುವರು ಎಂದು ಪದ್ಮಗೊಂಡನು ಸಿರಿವಂತೆಯನ್ನು ಮದುವೆಯಾಗುವ ಪ್ರಸಂಗದಲ್ಲಿ ವ್ಯಕ್ತವಾಗುತ್ತದೆ.

> "ಕಂದ ನೀ ಕುಡಿವೊಕ್ಕಲಿಗ ಕುರಿಗೂಡಿದ ಕಾರಣ
> ದಿಂದ ಕುರುಬಗೌಡನಾಗಿ"[೬೬]

ಹೀಗೆ ಕುರುಬರು ಕೃಷಿಯನ್ನು ವೃತ್ತಿಯಾಗಿಸಿಕೊಂಡರು. ನಂತರದಲ್ಲಿ ಕುರಿಗಳನ್ನು ಸಾಕುವುದರ ಮುಖಾಂತರ ಕುರುಬಗೌಡರಾಗುತ್ತಾರೆ. ಈ ಮೂಲಕ ಹಾಲುಮತದವರೆನಿಸಿಕೊಂಡರು. ಇಂತಹ ಸಮೃದ್ಧ ಶ್ರಮ ಸಂಸ್ಕೃತಿ ಸಮುದಾಯವನ್ನು ಅವಲಂಬಿಸಿ ಅನೇಕ ಉಪ ಸಮುದಾಯಗಳು ಬೆಳೆಯಲು ಕಾರಣವಾಯಿತು.

ಕುರಿಯನ್ನು ಪಡೆದ ಕುರುಬ ಅವುಗಳ ಮೇಲ್ವಾಚರಣೆಯನ್ನು ತಾನು ವಹಿಸಿಕೊಂಡು ಉಣ್ಣೆಯನ್ನು ಕತ್ತರಿಸಲು ಕಮ್ಮಾರನ ಸಹಾಯ ಪಡೆದನು. ಕಮ್ಮಾರನಿಗೆ ಉಣ್ಣೆ ಕತ್ತರಿಸುವ ಸಾಧನೆಗಳನ್ನು ತಯಾರಿಸಲು ದೈವದಿಂದ ಹೇಳಿಸಲಾಗಿದೆ. ಹೀಗೆ ಹಾಲುಮತ ಸಮುದಾಯದವು ಸಾಮಾಜಿಕ ವ್ಯವಸ್ಥೆಯನ್ನು ಕಾಪಾಡುತ್ತದೆ. ಕಮ್ಮಾರನಿಗೆ ಈ ಕಾರ್ಯವನ್ನು ವಹಿಸಿದಂತೆ ಸಮಾಜದ ಇತರ ಸಮುದಾಯಗಳಿಗೆ ಜೀವನಾಶ್ರಯದ ಕೇಂದ್ರ ಎಂದು ಸೂಚಿಸುತ್ತದೆ. ನಂತರ

ಕಂಬಳಿಗೆ ಉಣ್ಣೆಯನ್ನು ಸಂಗ್ರಹಿಸುವುದು. ಉಣ್ಣೆಯಿಂದ ಕಂಬಳಿ ತಯಾರಿಸುವ ಮೂಲ ಕೆಲಸವು ಹಾಲುಮತ ಸಮುದಾಯಕ್ಕೆ ಮಾತ್ರ ಸೀಮಿತವಾಗಿತ್ತು. ಈ ಅಂಶವು ಕಂಬಳಿ ನೇಯುವುದು ಪವಿತ್ರವೆಂದು ಭಾವಿಸಿದರ ಪರಿಣಾಮವಾಗಿ ಇಂದಿಗೂ ಇದು ಹಾಲುಮತದವರ ಪವಿತ್ರ ಆಚರಣೆಯಾಗಿದೆ. ಕಂಬಳಿ ನೇಯಲು ಬೇಕಾದ ಉಪಕರಣಗಳನ್ನು ವ್ಯವಸಾಯಕ್ಕೆ ಬೇಕಾಗುವ ಕಬ್ಬಿಣದ ಉಪಕರಣಗಳನ್ನು ಒದಗಿಸುವ ದೃಷ್ಟಿಯಿಂದ ಕಮ್ಮಾರನ ಕಸುಬು ತುಂಬ ಅಗತ್ಯವಾದುದು. ಹೀಗಾಗಿ ಹಾಲುಮತ ಪುರಾಣಗಳಲ್ಲಿ ಕಮ್ಮಾರನನ್ನು ಕರ್ಮಯೋಗಿಯಾಗಿ ಚಿತ್ರಿಸಿವೆ. ಈತನನ್ನು ಕಮ್ಮಾರ, ಕಂಬಾರ ಎಂದು ಸಹ ಉಲ್ಲೇಖಿಸುತ್ತವೆ.

> "ಕಮ್ಮಾರನ ನೆನೆದರೆ ಕತ್ತರಿ ಬರೆ
> ವರ್ಮವಜಿದು ಪಶುಗಳುನು
> ನಿರ್ಮಳದಿಂದ ಕತ್ತರಿಸಿ ಹೊಡಚಿ ಕಟ್ಟಿ
> ತಮ್ಮ ನೀ ಹೊಸೆ ತೊಡೆಗದಿರಿ"[೭]

> "ತೊಡೆಗದರಿಂ ನೂತು ಹಿಡಿದಾಖು ಮೊಳನಿಕ್ಕೆ
> ಒಡನೆ ತೋಜಿದ ಮಗ್ಗದನುವ
> ಕಡುವೇಗದಿ ಪೇಳಿ ಕಲಿಸಿ ಕರಿದ ನೆಯ್ದು
> ಮೃಡಸಿದ್ಧಮಲ್ಲಗೀಯೆನಲು"[೮]

ಸಿದ್ಧಮಂಕ ಚರಿತೆಯ ಈ ಮೇಲಿನ ಪದ್ಯಗಳು ಹಾಲುಮತ ಸಮಾಜದ ಸಾಮಾಜಿಕ ಅನನ್ಯತೆಯನ್ನು ತಿಳಿಸುತ್ತವೆ. ಸಮಾಜದ ಎಲ್ಲ ವರ್ಗದವರಿಗೆ ಬೇಕಾದ ಕಂಬಳಿಯ ತಯಾರಿಕೆಯಲ್ಲಿ ಕಮ್ಮರರ ಮತ್ತು ನೇಕಾರರ ಪ್ರಾಮುಖ್ಯತೆ ಇರುವುದನ್ನು ಹಾಲುಮತ ಪುರಾಣಗಳು ಚಿತ್ರಿಸುತ್ತವೆ. ಇದರಿಂದಾಗಿ ಪಶುಸಂಗೋಪನ ಮೂಲದವರಾದ ಕುರುಬ ಜನಾಂಗ ಹೈನುಗಾರಿಕೆ, ಉಣ್ಣೆಗಾರಿಕೆ ಮತ್ತು ಸಾವಯವ ಗೊಬ್ಬರದಂತಹ ಜೈವಿಕ ವಸ್ತುಗಳನ್ನು ಕೃಷಿ ಸಂಸ್ಕತಿಗೆ ಅಡಿಪಾಯವೆನ್ನುವಂತೆ ವಿಸ್ತರಿಸುವುದರ ಮೂಲಕ ಕೃಷಿ ಸಮಾಜದ ಅಭಿವೃದ್ಧಿಗೂ ಕಾರಣವಾಗಿದೆ. ವಿಶೇಷವಾಗಿ ಶರಣ ಸಂಪ್ರದಾಯದ ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡು ಬೆಳೆದ ಹಾಲುಮತಸ್ಥರು ಸಾಮಾಜಿಕ ಸಾಮರಸ್ಯಕ್ಕಾಗಿ ದಾಸೋಹ ಪರಿಕಲ್ಪನೆ, ಕಾಯಕ ನಿಷ್ಠೆ, ಅತಿಥಿ ಸತ್ಕಾರ, ಸಮುದಾಯಗಳಲ್ಲಿ ಹಾಲುಮತದ ಮಾನ್ಯತೆ ಮತ್ತು ಸಮಾನತೆ, ನಂಬಿಕೆಗಳ ಮೂಲಕ ಸಾಮಾಜಿಕ ಆಶಯವನ್ನು ತಿಳಿಯಬಹುದು. ಹಾಲುಮತ ಪುರಾಣಗಳ ಮೇಲೆ ವೀರಶೈವದ ಪ್ರಭಾವ ಗಾಢವಾಗಿದೆ. ಆದಕಾರಣ ಆಚರಣೆಯಲ್ಲಿ ಅದರ ನೆರಳನ್ನು ನೋಡುತ್ತೇವೆ. ಹಾಲುಮತ ದಾಸೋಹ ಪರಿಕಲ್ಪನೆಯು ವೀರಶೈವ ದಾಸೋಹ ಪರಿಕಲ್ಪನೆಗಿಂತ ಭಿನ್ನವಾಗಿ ಕಂಡುಬರುವುದು ಇಲ್ಲಿ ಪತಿ ಪತ್ನಿಯರು ಬೇಸರಿಲ್ಲದೆ ಭಕ್ತ ಜನಕ್ಕೆ ಪ್ರಸಾದವನ್ನು ಉಣಬಡಿಸುವರು. ಮುಖ್ಯವಾಗಿ ದಾಸೋಹ ಪರಿಕಲ್ಪನೆಯು ಫಲಪದವಿಯನ್ನು ಆಪೇಕ್ಷಿಸುವುದಿಲ್ಲವೆಂದು ಹೇಳುತ್ತದೆ. ರೇವಣಸಿದ್ಧರು ಶಾತಮುತ್ತಯ್ಯನ ಭಕ್ತಿ ಪರೀಕ್ಷೆಗೆ ಒಳಪಡಿಸುವಾಗ ದಾಸೋಹದ ಮಹತ್ವ ದೊರೆಯುವುದು.

"ಹಾಲುಬೋನವನುಂಡು ಸೊರಗಿದೆವೆನುತಲಿ
ಕೋಲನು ಊರಿ ನಿಂತುಕೊಡ
ಮುಲೋಕದೊಡೆಯನ ಕಂಡು ಶಾಂತಯ್ಯನು
ಪಾದಕ್ಕೆ ಬಂದೆರಗಿದನು"[೬೯]

ಹಾಲುಮತದವರು ಮಾಡುವ ದಾಸೋಹವು ಹಾಲುಬೋನವಾಗಿತ್ತು. ಇದು ಕಾಯಕದ ಹಿಂದಿನ ಮಹತ್ವವನ್ನು ತಿಳಿಸುತ್ತದೆ. ಜೊತೆಗೆ ಇವರ ದಾಸೋಹ ಅಕ್ಷಯವಾದುದು ಎಂದು ಸಾರುತ್ತದೆ. ರೇವಣಸಿದ್ಧರು ಶಾಂತಯ್ಯನ ದಾಸೋಹ ಪರೀಕ್ಷೆಯನ್ನು ಒಡ್ಡಿದಾಗ ಲಕ್ಷ ಸಂಖ್ಯೆಯ ವಿರಕ್ತ ಜಂಗಮರಿಗೂ ಅಂಜದೆ ಸಂತೋಷದಿಂದ ಊಟವನ್ನು ನೀಡುವರು. ಆಗ ರೇವಣಸಿದ್ಧರು ಒಂದು ಕರಗ ಅಂಬಲಿಗೆ ಒಂಭತ್ತು ಲಕ್ಷ ಜನರಿಗೆ ನೀಡುವ ಅನ್ನ ಸಾಮಾರ್ಥ್ಯವನ್ನು ದಯಪಾಲಿಸಿದರು. ಹಾಲುಮತದವರಲ್ಲಿ ಇಂದಿಗೂ ವರ್ಷಾಚರಣೆಯಲ್ಲಿ ಈ ಪದ್ಧತಿ ಕಂಡುಬರುತ್ತದೆ. ಈ ದಾಸೋಹವು ಕುರಿ ಹಾಲಿಗೆ ಮಹತ್ವ ಕೊಡುವುದು. ಇನ್ನೂ ದಂಪತಿಗಳು ನೀಡುವ ದಾಸೋಹವು ದಾನಧರ್ಮ, ನೀತಿ ನಿಯಮ, ನಡೆ ನುಡಿ, ದೈವೀಶ್ರದ್ಧೆಯನ್ನು ಸಾಮಾಜಿಕ ಮೌಲ್ಯವಾಗಿ ಕಂಡುಬರುತ್ತವೆ. ಹಾಲುಮತ ಸಮುದಾಯದಲ್ಲಿ ಸ್ತ್ರೀ ಮೇಲು ಕೀಳೆಂಬ ಭಾವನೆಯನ್ನು ಈ ಮೂಲಕ ಬದಲಾಯಿಸುತ್ತದೆ. ಮಹಿಳೆಯರ ಸ್ಥಾನಪುರುಷರಗಿಂತ ಕೀಳಲ್ಲವೆಂದು ಪ್ರತಿಪಾದಿಸುತ್ತದೆ.

"ವರುಷ ಒಂದೊಂದಕೆ ಕುಳದೆಜೆಗೆಯನೆತ್ತಿ
ಗುರುಸೇವೆಯ ಮಾಡು ಮಂಕ
ಪರಿಷೆಯ ನೆರಹಿ ಹಿರಿಯರಿಗೆ ಪರ್ವವ ಮಾಡಿ
ಗುರುಸೇವೆ ಮಾಡು ಮಂಕಯ್ಯ"[೭೦]

ಈ ರೀತಿಯಾಗಿ ಹಾಲುಮತದವರು ಗುರುಸೇವೆಯ ನೆಪದಲ್ಲಿ ದಾಸೋಹವನ್ನು ಪರ್ವದ ರೀತಿಯಲ್ಲಿ ಆಚರಿಸುತ್ತಾರೆ. ಈ ಪರ್ವಕ್ಕೆ ಕುಲತೆರಿಗೆಯಿಂದ ಬಂದ ಹಣವನ್ನು ಉಪಯೋಗಿಸುತ್ತದೆ. ಹೀಗೆ ಹಾಲುಮತದವರು ಕುಲದ ಕೀರ್ತಿಗಾಗಿ ಪರ್ವವನ್ನು ಆಚರಣೆಯ ಪದ್ಧತಿಯಾಗಿಸಿ ಕೊಂಡಿರುವುದು ಇದು ಸೂಚಿಸುತ್ತದೆ. ವಿಶೇಷವಾಗಿ ವಿಕಾಸನ ಶೀಲವಾದ ತನ್ನ ಅಪೂರ್ಣತೆಯಿಂದ ಪೂರ್ಣತೆಯ ಕಡೆಗೆ ನಡೆಯುತ್ತದೆ. ಇದಕ್ಕೆ ಉತ್ತಮ ನಿದರ್ಶನ ಹಾಲುಮತ ಸಮಾಜ. ಸಿದ್ಧ ಸಂಪ್ರದಾಯದ ಕುರುಬರು ಶರಣ ಸಂಪ್ರದಾಯಕ್ಕೆ ಪರಿವರ್ತನೆಯಾಗುವುದರ ಮೂಲಕ ಲಿಂಗಾಯತ ಸಮುದಾಯದ ವ್ಯಾಪ್ತಿಯನ್ನು ಹಿಗ್ಗಿಸಿದ ಐತಿಹಾಸಿಕ ಸಂಗತಿಗಳನ್ನು ಹಾಲುಮತ ಪುರಾಣಗಳು ಕಟ್ಟಿಕೊಡುತ್ತವೆ. ಇದಕ್ಕೆ ಉತ್ತಮ ನಿದರ್ಶನವೆಂಬಂತೆ ಸಿದ್ಧಮಂಕ ಚರಿತೆಯಲ್ಲಿ ಈ ರೀತಿ ಪ್ರಸ್ತಾಪಿಸಲಾಗಿದೆ. "ಕುರುಬರಾದ ರೇವಣಸಿದ್ಧ - ಸಿದ್ಧರಾಮ - ಮರಳಮಂಕಯ್ಯಗಳು ಒಂದು ಕಡೆ, ಬಸವಣ್ಣ - ಅಲ್ಲಮ ಇನ್ನೊಂದು ಕಡೆ ನಿಂತುದು, ಅವರು ಇವರಂತಾದುದು ಇಲ್ಲಿ ಕಂಡುಬರುತ್ತದೆ. ಮಂಕ ತಂದೆಯ ರಕ್ಷಣೆಯ ಕಾರ್ಯ ಕೈಗೊಂಡಿದ್ದ ಹೆಗ್ಗಗೌಡನ ಮನೆಗೆ ಬಂದ ನಾರದ 'ಹರಸಿ ವಿಭೂತಿಯನಿಟ್ಟು'(೩-೯೧) ಆಶೀರ್ವದಿಸುತ್ತಾನೆ. ಬಿಜ್ಜಳನು ಕುರುಬರಿಗೆ ಕಲ್ಯಾಣ ಪ್ರವೇಶಕ್ಕೆ ಅನುಮತಿ ನೀಡುತ್ತಲೇ ಜರುಗಿದ ಆರೋಗಣೆಯ ಬಳಿಕ ಎಲ್ಲರಿಗೂ

ವಿಭೂತಿ ವೀಳ್ಯ (೪-೧೫೧) ಕೊಡಲಾಗುತ್ತದೆ. ಕುರುಬರಿಗೆ ಕಟ್ಟಳೆ ಮಾಡಿದ ಸಿದ್ಧರಾಮಯ್ಯ "ಹಾಲುಮತದ ಗೌಡುಗಳಿಗೆ ವಿಭೂತಿ"ಯು ಎನ್ನುತ್ತ ಹೆಗ್ಗಗೌಡನ ಮಕ್ಕಳ ಹಣೆಗೆ ವಿಭೂತಿ ಇಟ್ಟು (೪-೧೬೩), ಅದರ ಮಹತ್ವವನ್ನು ವಿವರಿಸುತ್ತಾನೆ. ಇದಲ್ಲದೆ

ಹೊದ್ದವು ಮುನ್ನ ಅಱುವತ್ತು ವ್ಯಾಧಿಯು
ಸಿದ್ಧನ ನೆನೆದು ವಿಭೂತಿಯನು
ಮದ್ದು ಇದೊಂದು ದಿನಪ್ರತಿ ಧರಿಸಲು
ಸಿದ್ಧಿಯಹುದು ನೆನೆದುದಕೆ

ಎಂದು ಇಲ್ಲಿ ಸೂಚಿಸಲಾಗಿದೆ. ಸಿದ್ಧರಾಮನು ಹಾಲುಮತದ ಇತರ ಗೌಡಗಳನ್ನು ಕರೆದು ವಿಭೂತಿ ಹಚ್ಚುವ (೪-೨೦೯), ರೇವಣಸಿದ್ಧನು ಹೆಗ್ಗಗೌಡನಿಗೆ ರಾಜವಂಶದಲ್ಲಿ ಹುಟ್ಟಲು ಆಶೀರ್ವದಿಸಿ ಹಣೆಗೆ ವಿಭೂತಿಯಿಡುವ (೪-೨೫೩) ಘಟನೆಗಳು ಇಲ್ಲಿವೆ. ಹೀಗೆ ಪದೇ ಪದೇ ವಿಭೂತಿಯ ಪ್ರಸ್ತಾಪ ಇಲ್ಲಿ ಬರುತ್ತದೆ. ಬಹುಶಃ ಕುರುಬರು ತಮ್ಮ 'ಭಂಡಾರ ಸಂಸ್ಕೃತಿ'ಯಿಂದ 'ವಿಭೂತಿ ಸಂಸ್ಕೃತಿಗೆ' ಹೊರಳುತ್ತಲಿರುವರೆಂಬ ಧ್ವನಿ ಇಲ್ಲಿದೆ.[೧೧]

ಈ ರೀತಿ ಲಿಂಗವಂತ ಸಮಾಜದಲ್ಲಿ ಲೀನವಾಗಿರುವ ಹಾಲುಮತ ಸಮಾಜ ವೈಷ್ಣವ ಸಂಪ್ರದಾಯದ ತತ್ವಗಳನ್ನು ನಿರಾಕರಿಸುವ ನೆಲೆಯಲ್ಲಿ ಬೆಳೆಯಿತೆಂಬುದನ್ನು ಹಾಲುಮತ ಪುರಾಣವಾದ ಮಾಳಿಂಗರಾಯನ ಕಾವ್ಯದ ಮಾಳಪ್ಪ ಮತ್ತು ಪಾಂಡುರಂಗರ ಸಂಭಾಷಣೆಯಲ್ಲಿ ಹೀಗೆ ವ್ಯಕ್ತವಾಗಿದೆ.

ವೈಷ್ಣವ ಸಂಪ್ರದಾಯದ ವ್ಯಕ್ತಿಯೊಬ್ಬನೆ ಲೋಕಕ್ಕೆ ಒಡೆಯನಲ್ಲ. ಅವನೇ ಕೇಂದ್ರ ಶಕ್ತಿಯಲ್ಲ. ಬದಲಾಗಿ ಶೂದ್ರ ಸಂಪ್ರದಾಯದ ವ್ಯಕ್ತಿಗಳು ಕೂಡ ಆ ಸ್ಥಾನಕ್ಕೇರಬಲ್ಲರು ಎಂಬ ಸಂದೇಶವನ್ನು ಮಾಳಿಂಗರಾಯ ಮತ್ತು ಪಾಂಡುರಂಗರ ಸಂದರ್ಭ ಸೂಚಿಸುತ್ತದೆ.

"ಲಿಂಗ ಬರಲಿಲ್ಲಾ ಮ್ಯಲಕ ಪುರಾ
ಲಿಂಗಕ ಸ್ಥಾಪನೆ ಅಲೇ ಮಾಡ್ಯಾನಾ
ಮುರುಸಿದ್ಧಂತ ಹೆಸರಿಟ್ಟ ಕರಾದಾರಾ
ಹನ್ನೆರಡ ವರ್ಷ ಬೀರಲಿಂಗನ ಸೇವಾ
ಪಾಂಡುರಂಗ ಮಾಡ್ಯಾರಾ"[೧೨]

ಯಜಮಾನ್ಯ ಸಂಸ್ಕೃತಿಯು ಬಹುಕಾಲ ಸಮಾಜವನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದರ ಫಲವಾಗಿ ಏಣಿಶ್ರೇಣಿಕೃತ ವ್ಯವಸ್ಥೆ ನಿರ್ಮಾಣವಾಗಿತ್ತು. ಅದರಲ್ಲಿ ಜೈನ ಮತ್ತು ವೈದಿಕ ಪುರಾಣಗಳು ಶ್ರೇಷ್ಠ ಎಂದು ಪ್ರತಿಪಾದನೆಯಾಗಿತ್ತು. ಉಳಿದ ಸಮುದಾಯಗಳ ಚಾರಿತ್ರಿಕ ಹಿನ್ನೋಟಗಳು ಗೌಣವಾಗಿದ್ದವು. ಕೇವಲ ವೈದಿಕ ಪರಂಪರೆಯೇ ನಮ್ಮದೆಂದು ಆರಾಧಿಸಲಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಹಾಲುಮತ ಸಮುದಾಯಗಳು ಈಗಾಗಲೇ ನಿರ್ಮಿತವಾಗಿದ್ದ ಪುರಾಣ ಸಿದ್ಧಾಂತಗಳನ್ನು ಮುರಿದು ತಮ್ಮದೇ ಆದ ಶ್ರಮ ಸಂಸ್ಕೃತಿಯ ಆಲೋಚನೆಗಳ ಹಂದರದಿಂದ ಹಾಲುಮತ ಪುರಾಣಗಳನ್ನು ಏಣೆಯಲಾಯಿತು. ಆ ಸಂದರ್ಭದಲ್ಲಿ ಈಗಾಗಲೇ ರಚನೆಯಾಗಿರುವ ಪುರಾಣ ವ್ಯಕ್ತಿಗಳನ್ನು ಅಧೀನತೆಯಲ್ಲಿಡಲು ಮತ್ತು ತಮ್ಮ ಕುಲಗುರುಗಳನ್ನು ಶ್ರೇಷ್ಠ ಎಂದು

ಪ್ರತಿಪಾದಿಸಲು ಹಲವಾರು ಕಲ್ಪನೆಗಳನ್ನು ಪುರಾಣಗಳಲ್ಲಿ ತರಲಾಗಿದೆ. ಈ ಮೇಲಿನ ಪದ್ಯ ಕಾಂಡವು ಕೂಡ ಅದನ್ನು ಪ್ರತಿಪಾದಿಸುತ್ತದೆ.

ವಿಶೇಷವಾಗಿ ವೈಷ್ಣವ ಸಮುದಾಯದ ವ್ಯಕ್ತಿಯನ್ನು ಹಾಲುಮತ ಸಮುದಾಯದ ವೃತ್ತಿಯಲ್ಲಿ ಪಾಲ್ಗೊಳ್ಳುವುದರ ಮೂಲಕ ಈ ಸಮುದಾಯದ ವ್ಯಕ್ತಿಯಾಗಿಸುವಲ್ಲಿ ಪಾಂಡುರಂಗನ ಪಾತ್ರ ಕಂಡುಬರುತ್ತದೆ. ತನ್ನ ಸಮುದಾಯದ ಸಂಕೇತಗಳನ್ನು ಹಾಲುಮತಸ್ಥರಲ್ಲಿ ಸೇರಿಸುವುದನ್ನು ಪಾಂಡುರಂಗನು ಕುರುಬರ ಧೋಳಗೊಡನ ಮನೆಯಲ್ಲಿದ್ದುಕೊಂಡು ಕಂಬಳಿ ನೇಯ್ಲು, ಮಾರಾಟ ಮಾಡುವುದರಿಂದ ತಿಳಿದುಬರುತ್ತದೆ.

"ಮಾಲೆಲಿ ಶಣ್ಯಾ ಮಾಳಪ್ಪ ಭಂಡಾರ ಬಿಡಬಾರದಂದಾನ
ಹಾಸ ಮಾಡುತಾನೇನ ಉಂಕಿ ಮಾಡುತಾನೇನ
ಐದು ಅಂಕುರಾದಾವೇ ನಾಲ್ಕು ನಾಲ್ವರಾದವ
ಎಂಟು ದಿಕ್ಕಿನ ಕಂಬಳೆ ಮಂಟಪದಗ ಇರು ಕಂಬಳೆ"[೨೩]

ಜನಪದ ಹಾಲುಮತ ಮಹಾಕಾವ್ಯದ ಈ ಪದ್ಯವು ಪಾಂಡುರಂಗನು ಗೀರಿಗಂಧ, ಮೂರನಾಮವನ್ನು ತ್ಯಜಿಸಿ ಹಾಲುಮತಸ್ಥರ ಭಂಡಾರ ಸಂಸ್ಕೃತಿಯನ್ನು ಬಿಡಬಾರದೆಂದು ಪ್ರತಿಪಾದಿಸತ್ತದೆ. ಇದೇ ರೀತಿಯಾಗಿ ಅನೇಕ ಸಮುದಾಯದಗಳು ಹಾಲುಮತ ಸಮುದಾಯಕ್ಕೆ ವಿಧೇಯವಾಗಿರುವುದನ್ನು ಹಾಲುಮತದ ಪುರಾಣಗಳಲ್ಲಿ ಪ್ರಸ್ತಾಪಿಸಲಾಗಿದೆ. ರೇವಣಸಿದ್ಧರು ಸಮಾಜದ ಅನೇಕ ವೃತ್ತಿ ಜಾತಿಯವರನ್ನು ಪರೀಕ್ಷೆಗೆ ಒಳಪಡಿಸುವುದರ ಮೂಲಕ ಸಮುದಾಯದ ಲೋಪ ದೋಷಗಳನ್ನು ಮತ್ತು ಸ್ಥಾನ ಮಾನವನ್ನು ತಿಳಿಸುತ್ತಾರೆ. ಹಾರರ ಗುಂಡವ್ವ ಮತ್ತು ರಡ್ಡೇರ ನೀಲವ್ವ ಮನೆಗಳಿಗೆ ಭಿಕ್ಷೆಗೆ ಹೋಗುವರು. ಗುಂಡವ್ವ ಹೀಗೆ ಹೇಳುತ್ತಾಳೆ.

"ಕಡಿಯಾಗ ಆಗಿನಿ ಮಡಿಯಾ ಉಟ್ಟಿನಿ ಮುಂದಿನ ಮನಿಯೊಂದು ಆಗಲೆ
ಮಾನವಿಲ್ಲದ ಹೀನ ಜಾತಿ ಎಂಥಾ ಮಾತೊಂದು ಆಡಿದೆ
ಗುರುವ ರೇವಣಸಿದ್ಧನೆ ನಿಂತಲ್ಲೆ ಮಾಯವಾದನ"[೨೪]

ಅದೇ ರೀತಿಯಾಗಿ ರಡ್ಡೇರ ನೀಲವ್ವಳು ಸಹ ಭಿಕ್ಷೆ ಹಾಕಲು ನಿರಾಕರಿಸುತ್ತಾಳೆ.

"ಶರಣ ತಿಂಗಳ ಕಡಿಯಾ ಸೋಮರ ಹಾಲಿನ ಭಿಕ್ಷಕ ಬಂದೇನ
ಚರಗಿ ಹಿಡದೇನೆ ಕರಗೋಳ ಬಿಟ್ಟೇನೆ ಚರಗಿ ಕೈಯಾಗ ಹಿಡದೀನೆ
ಚರಗಿ ಕೈಯೋಳ ಹಿಡದೀನೆ ಕೈವಂದು ಖಾಲಿ ಇಲ್ಲೇನ"[೨೫]

ಈ ಪದ್ಯಗಳು ಭಿಕ್ಷೆಯನ್ನು ನಿರಾಕರಿಸಿದಕ್ಕೆ ಇವರು ಹಾಲುಮತ ಸಮುದಾಯದಿಂದ ದೂರವಿಡುವುದನ್ನು ತಿಳಿಸುತ್ತದೆ. ಆದರೆ ಯಾರು ಶರಣೆಂದು ಬರುವೆತ್ತಾರೋ ಅವರನ್ನು ಉಸಿರಿನಂತೆ ಕಾಪಾಡುವವರ ಸಮುದಾಯದ ಪ್ರತೀಕವಾಗಿ ರೇವಣಸಿದ್ಧರು ಕಂಡುಬರುತ್ತಾರೆ. ಈ ರೀತಿಯ ವ್ಯಕ್ತಿತ್ವವನ್ನು ಹೊಂದಿರುವವಳಾಗಿ ಮಡಿವಾಳ ನೀಲಮ್ಮ ಕಾಣಿಸಿಕೊಳ್ಳುತ್ತಾಳೆ. ರೇವಣರು ಕಂತಿ ಭಿಕ್ಷೆ ಬೇಡಿದಾಗ ಮಡಿವಾಳ ನೀಲಮ್ಮ ತನ್ನ ಶಿರವನ್ನೆ ಅರ್ಪಿಸುವಳು.

"ಕುತ್ತಿಗಿ ಕೊಯ್ದು ರಕ್ತನೆ ಆಳಿಯಾ ನೀರ ಮಾಡಯ್ಯ
ಅಂಗೈ ಬಂಡಿ ಮಾಡೋ ನೀನು ಮುಂಗೈ, ಹಿಂಡಲಿ ಬೇಕಯ್ಯ
ತೆಲಿಯಾ ಮಿದುಡ ತಗದ ನೀನು ಹಚ್ಚು ಸಾಬನ ಮಾಡಲಿ"[೭೬]

ಈ ಮೂಲಕ ಮಡಿವಾಳ ನೀಲಮ್ಮ ಬಡವಳಾದರೂ ಭಿಕ್ಷೆಗೆ ಬಂದವರನ್ನು ನಿರಾಕರಿಸದೆ ಕಂತಿಯನ್ನು ದಾನ ಮಾಡುವಳು. ಆಗ ರೇವಣಸಿದ್ಧರು ಪ್ರಸನ್ನರಾಗಿ ಆ ಸಮುದಾಯದಕ್ಕೆ ಶಾಶ್ವತ ವರವನ್ನು ದಯಪಾಲಿಸುವರು. ರೇವಣಸಿದ್ಧರು ಕೊಡುವ ವರವು ನಿರಪೇಕ್ಷ ಫಲವನ್ನು ಮಡಿವಾಳ ಸಮುದಾಯ ಹೊಂದಿತ್ತು ಎಂದು ಸೂಚಿಸುತ್ತದೆ.

"ಹರಿಯಾ ಗಂಗಿ ಒಳಗೇನೆ ಹರಿಯಾ ನೀರ ಬೇಡ್ಯಾರ
ಕಣಕಿಸ ಜ್ವಾಳ ಬೇಡ್ಯಾರೆ ಮನಿಗೊಂದು ರೊಟ್ಟಿ ಬೆಡ್ಯಾರ"[೭೭]

ಹೀಗೆ ಹಾಲುಮತ ಸಮುದಾಯದಿಂದ ಮಡಿವಾಳ ಸಮುದಾಯದವು ಮಾನ್ಯತೆಯನ್ನು ಪಡೆದುಕೊಂಡಿತು. ಈ ಮೂಲಕ ಅಗಸರು ಸಮಾಜಕ್ಕೆ ಬೇಕಾದ ಪ್ರಮುಖ ಸಮುದಾಯವೆಂದು ತಿಳಿಸಿಕೊಡುತ್ತದೆ. ಈಗಲೂ ಮಡಿವಾಳರು ಸುಗ್ಗಿಯ ಸಂದರ್ಭದಲ್ಲಿ ಕಣಕ್ಕೆ ಹೋಗಿ, ಜೋಳ, ನೆಲ್ಲು ಮುಂತಾದ ಆಹಾರ ಪದಾರ್ಥಗಳನ್ನು ಕೇಳಿ ಪಡೆಯುವ ಪ್ರವೃತ್ತಿಯು ಹಾಲುಮತ ಸಮುದಾಯದ ನಾಯಕರು ಕೊಟ್ಟ ವರಕ್ಕೆ ನಿದರ್ಶನವಾಗಿದೆ. ಮತ್ತು ಕೆಳ ಸಮುದಾಯವನ್ನು ಮೇಲೆತ್ತುವ ಸಂದರ್ಭದಲ್ಲಿ ವಿಲೀನಗೊಳ್ಳುವುದನ್ನು ಬಹಿರಂಗಪಡಿಸುತ್ತದೆ. ಈ ಹಿನ್ನೆಲೆಯೆಲ್ಲಿ ಜನಪದ ಹಾಲುಮತ ಪುರಾಣಗಳಲ್ಲಿ ಮಡ್ಡಪ್ಪ ಮತ್ತು ಗಾಣಿಗ ಮಲ್ಲಪ್ಪನ ಸಂಭಾಷಣೆಯು ವ್ಯಕ್ತಪಡಿಸುತ್ತದೆ.

"ಗಾಣಿಗ ಹೋಗಲಿಬೇಕಪ್ಪ ಗೌಳಿಗಿ ಆಗಲಿ ಬೇಕಪ್ಪ
ಗೌಳಿಗಿ ನಾದರಲ್ಲಪ್ಪ ನೀನೆ ಆಗಲಿಬೇಕಯ್ಯ
ನಾನು ಕೊಟ್ಟ ಮೂರು ಮಳದ ಕಂಬಳಿ ಹೆಗಲಿಗೆ ಇರಬೇಕು
ಕಂಬಳಿ ಹೆಗಲಿಗ ಇರಬೇಕ ಬಡಗಿ ಕೈಯಾಗ ಇರಬೇಕು"[೭೮]

ಈ ರೀತಿಯಾಗಿ ಹಾಲುಮತದವರು ಗಾಣಿಗ ಮಲ್ಲಪ್ಪನಿಗೆ ಹಾಲು ಉತ್ಪನ್ನವನ್ನು ಕೊಡುತ್ತಿದ್ದರು. ನಂತರ ಹಾಲಿನ ಋಣಕ್ಕೆ ಗಾಣಿಗ ಮಲ್ಲಪ್ಪನು ತನ್ನ ಮಗಳನ್ನು ಮಡಪ್ಪನಿಗೆ ಮದುವೆ ಮಾಡಿಕೊಡುತ್ತಾನೆ. ಈ ಮೂಲಕ ಗಾಣಿಗ ಮಲ್ಲಪ್ಪನಾಗಿ ಗೌಳಿಗ ಮಲ್ಲಪ್ಪನಾಗಿ ಹಾಲುಮತದವರ ಗುರುತಿಗಾಗಿ ಕಂಬಳಿ ಮತ್ತು ಕೈಯಲ್ಲಿ ಬಡಗಿಯನ್ನು ಹೊಂದುತ್ತಾರೆ. ಹಾಲುಮತ ಸಮುದಾಯವನ್ನು ಶಿವಭಕ್ತ ಶಾಂತಯ್ಯನಿಂದ ಮೂರು ಲೋಕಕ್ಕೆ ಪ್ರಜ್ವಲಿಸುವ ಕುಲವಾಗುತ್ತದೆ. ಇದರ ಸಾಕ್ಷಿಯಾಗಿ ಶಾಂತಮುತ್ತಯ್ಯನು ಲಿಂಗವಂತನಾದರೂ ಕ್ಷೀರಕುಲವನ್ನು ಅಲ್ಲಗಳೆಯಲಿಲ್ಲ ಎಂಬುದಕ್ಕೆ ದಿಕ್ಕು ದಿಕ್ಕುಗಳಿಂದ ಬಂದ ಅನ್ಯಕುಲದವರು ಹಾಲೋಕುಳಿ ಆಡುವುದರಲ್ಲಿ ವ್ಯಕ್ತವಾಗಿದೆ. ಹಾಲುಮತದ ಕುಲವರ್ಗಕ್ಕೆ ಶಾಂತಯ್ಯನು ಮೇಷ ಪವಾಡ ಮೆರೆದು 'ಒಡೆಯ' ಪದವಿಯನ್ನು ಪಡೆಯುತ್ತಾನೆ. ಇದರ ನೆನಪಿಗಾಗಿ ಬಸವಣ್ಣನವರು ಮೂರೇಣಿನ ಕಂಥೆಯನ್ನು ಉಡುಗೊರೆಯಾಗಿ ಕೊಡುವರು. ಆಗ ಲಿಂಗವಂತರೆಲ್ಲ ಈ ರೀತಿಯಾಗಿ ಸಂಭ್ರಮಿಸುತ್ತಾರೆ.

''ಹಾಲವೋಕುಳಿಯನು ಆಡಿ ಜಂಗಮರೆಲ್ಲ
ಹಾಲು ಕುಲದವರೆಂದು ಕರೆದು
ಹಾಲಿಂದ ಸಿರಿಯು ಸಂಪದವೆಂದು ಹರಸುತ
ಹಾಲಿಂದ ಕೈಯ ತೊಳೆದರು.''[೭೯]

ಈ ಮೂಲಕ ಕುರುಬರಿಗೆ ಹಾಲು ಮಾತ್ರ ಪವಿತ್ರವಾದ ವಸ್ತುವಾಗಿರಲಿಲ್ಲ. ಬದಲಾಗಿ ಸಮಾಜದ ಎಲ್ಲ ಜಂಗಮರಿಗೂ ಸಿರಿ ಸಂಪದವಾಗಿತ್ತು. ಈ ಹಿನ್ನೆಲೆಯಲ್ಲಿ ಹಾಲುಮತ ಸಮುದಾಯವು ಹಾಲಿನಂತೆ ಶ್ರೇಷ್ಠತೆಯನ್ನು ಮತ್ತು ಬಹುಪಯೋಗಿ ಕುಲಸಮುದಾಯವೆಂದು ಪುರಾಣಗಳು ಸಾಬೀತು ಪಡಿಸುತ್ತವೆ. ಇಂತಹ ಸಮುದಾಯವನ್ನು ಬಸವಣ್ಣನವರು ಭಾಗ್ಯದ ನಿಧಿಯೆಂದು ಕಂಬಳಿ ಗದ್ದುಗೆ ಮೇಲೆ ಆಸೀನರನ್ನಾಗಿಸುವುದು ಗಮನಿಸಿದರೆ ಲಿಂಗಾಯತ ಸಮುದಾಯಕ್ಕೆ ಹಾಲುಮತ ಸಮುದಾಯವು ಸರಿಸಮಾನವಾದ ಆಶಯವನ್ನು ಹೊಂದಿರುವ ವಿಷಯ ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿಯೇ ವೀರಗೊಲ್ಲಾಳನನ್ನು ಪೂಜಿಸುವುದನ್ನು ಗೊಲ್ಲಾಳಯ್ಯನ ಪುರಾಣ ತಿಳಿಸುತ್ತದೆ. ಗೊಲ್ಲಾಳೇಶ್ವರನು ಐಕ್ಯನಾದ ನಂತರ ಅನೇಕ ಕಡೆಯಲ್ಲಿಯೂ ಪೂಜೆಗೊಳ್ಳವುದರ ಮೂಲಕ ನೆಲೆಯನ್ನು ಪಡೆದಿದ್ದಾನೆ. ಇದನ್ನು ಮಲ್ಲಪ್ಪ ಮತ್ತು ಮಹದೇವಿ ದಂಪತಿಗಳ ಭಕ್ತಿ ಪರಾಕಾಷ್ಠೆಯಲ್ಲಿ ವ್ಯಕ್ತವಾಗಿದೆ.

''ಶಿವಪೂಜೆ ಶಿವಮತಿ ಶಿವಜ್ಞಾನ ಸದಾಚಾರ
ಶಿವತತ್ವ ಶಿವಗೋಷ್ಠಿ ಮಾರ್ಗ
ಶಿವನುಡಿ ಶಿಧ್ಯಾನ ಶಿವಮಂತ್ರ ಶಿವಪೂಜೆ
ಶಿವಭಕ್ತ ಮಲ್ಲಪ್ಪನೆನಿಪ''[೮೦]

ಈ ರೀತಿಯಾಗಿ ಕುಂತಳದೇಶದ ಮಲ್ಲಪ್ಪನು ಗೋಲ್ಗೇರಿ ಲಿಂಗವನ್ನು ದಿನನಿತ್ಯ ಜಂಗಮಾರ್ಚನೆಯನ್ನು ಮಾಡುತ್ತಾನೆ. ಈ ಜಂಗಮಾರ್ಚನೆಯಿಂದ ಕಳ್ಳರು, ಸುಳ್ಳರು, ಮೂರ್ಖರು, ಲೋಭಿಗಳು, ದುರ್ಜನರು, ಕಪಟಿಗಳು ಮುಂತಾದವರು ಧರ್ಮಿಷ್ಠರಾಗುತ್ತಾರೆ. ಹೀಗೆ ಗೋಲ್ಗೆರಿ ಲಿಂಗದ ಭಕ್ತರು, ಅನುಯಾಯಿಗಳು ಸದ್ಗತಿಯನ್ನು ಪಡೆಯುತ್ತಿದ್ದರು ಹಾಲುಮತ ಸಮುದಾಯದ ಸಾಂಸ್ಕೃತಿಕ ನಾಯಕರು ಜನಸಮುದಾಯವನ್ನು ಸಜ್ಜನರಾಗಿಸುವ ಸಾಮರ್ಥ್ಯ ಹೊಂದಿದ್ದರು ಎಂದು ಪ್ರತಿಪಾದಿಸುತ್ತಾರೆ. ಜೊತೆಗೆ ಶಿವ ಪರಾಯಣವು ಹಾಲುಮತ ಸಮುದಾಯದ ಪ್ರಸಾರವನ್ನು ಈ ಮೂಲಕ ತಿಳಿಯಪಡಿಸುತ್ತದೆ.

ಹಠಯೋಗಿಗಳನ್ನು ಹಾಲುಮತದ ನಾಯಕರು ಸಿದ್ಧಜೋಗಿಗಳನ್ನಾಗಿ ಮಾಡುವುದು. ಭವಿಗಳನ್ನು ಲಿಂಗವಂತರನ್ನಾಗಿ ಮಾಡಿ ಅವರವರ ಮನೋಧರ್ಮಕ್ಕೆ ಅನುಗುಣವಾಗಿ ಕುಲನಾಮಧೇಯವನ್ನು ಕೊಡುವ ಅಧಿಕಾರವಿತ್ತೆಂದು ಸೂಚಿಸುತ್ತದೆ.

''ಕುರಿಯ ಸಂತೋಷವಂ ತಡೆದಿರಾದುದರಿಂದ|
ಧರೆಯೊಳಗರ ಜೋಗಿಯಾಗಿ||

ತಿರಿದುಂಡು ಸಂತೋಷವಿಲ್ಲದೆ ಬಾಳಿರೆಂ|
ದೊರೆದೀಯೆ ಶಾಪವನವರ್ಗೆ||"[೮೧]

ಮರುಗುತ ಚರರುಗಳೆರಗುತ ಗುರುವೆ ತ|
ಪ್ಪಿರದೆ ಮನ್ನಿಸಿ ಕಾಯ್ವುದೆನಲು||
ಕುರುಗಳಂ ಸಲಹುತ ಪಾತ್ಮತದ ಬಿರುದನು|
ಮೆರೆಸಿರಿ ಸುಖವಪ್ಪುದೆನಲು||"[೮೨]

ಹೀಗೆ ಹಾಲುಮತ ಸಮುದಾಯವು ಸಮಾಜದ ಎಲ್ಲ ವರ್ಗಗಳನ್ನು ಪವಾಡ ಮತ್ತು ಸಿದ್ಧಿಯಿಂದ ಸಾಂಸ್ಕೃತಿಕ ವಿಸ್ತರಣೆಯನ್ನು ಕೈಗೊಂಡಿರುವುದು ಕಂಡುಬರುತ್ತದೆ.

**೪. ಪುಣ್ಯ ಕ್ಷೇತ್ರಗಳು**

ಹಾಲುಮತದವರು ಕರ್ನಾಟಕದಲ್ಲಿ ಕುರುಬರು ಎಂದು ಪ್ರಸಿದ್ಧ ಪಡೆದಿದ್ದಾರೆ. ಜೊತೆಗೆ ಐತಿಹಾಸಿಕ ಚರಿತ್ರೆಯನ್ನು ಕಾವ್ಯ, ಚರಿತ್ರೆ, ಪುರಾಣ, ವಚನಗಳು, ಶಾಸನಗಳಿಂದ ಮತ್ತು ಮೌಖಿಕ ಚರಿತೆಯಿಂದ ಹಾಲುಮತದವರ ಪುಣ್ಯಸ್ಥಳಗಳು ತಿಳಿದುಬರುತ್ತವೆ. ಯಾವುದೆ ಒಂದು ಜನ ಸಮುದಾಯದ ಹಿಂದ ಆ ಸಮುದಾಯವು ವಾಸ ಮಾಡಿದ್ದ ಸ್ಥಳಗಳು ಅವರ ಇರುವಿಕೆಯ ಕಟ್ಟಿಕೊಡುತ್ತವೆ. ಹೀಗಾಗಿ ಸ್ಥಳ ಪುರಾಣಗಳಲ್ಲಿ ಉಲ್ಲೇಖಗೊಂಡಿರುವ ಸ್ಥಳನಾಮಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖ ಆಕರಗಳಾಗುತ್ತವೆ. ಈ ಸಾಂಸ್ಕೃತಿಕ ಅಧ್ಯಯನದ ಮೂಲಕ ಚಾರಿತ್ರಿಕ ಮಹತ್ವವನ್ನು ಪುಣ್ಯ ಕ್ಷೇತ್ರಗಳು ತಿಳಿಸಿಕೊಡುತ್ತವೆ.

"ಕನ್ನಡ ಚಾರಿತ್ರಿಕ ಸಾಹಿತ್ಯ ವಿರಳವಾಗಿ ರಚನೆಯಾಗಿರುವುದಲ್ಲದೆ. ಸ್ತುತಿ, ಪವಾಡ, ವದಂತಿ, ಐತಿಹ್ಯ, ದಂತಕಥೆಗಳಿಂದ ಕೂಡಿದ್ದಾಗಿದೆ. ಉದಾಹರಣೆಗೆ ರಾಘವಾಂಕನು ಹರಿಶ್ಚಂದ್ರ ಕಾವ್ಯ ಬರೆದು ನರಸ್ತುತಿ ನಿಂದೆಗೆ ಕಾರಣವಾಗಿ ಹರಿಹರನಿಂದ ದಂತ ಭಗ್ನ ಹರಸ್ತುತಿ ಕಾವ್ಯಗಳ ಸೃಷ್ಟಿ ಹರಿಹರನಿಗೆ ಸಂಬಂಧಿಸಿದಂತೆ ಹಂಪೆಯ ವಿರುಪಾಕ್ಷ ದೇವಸ್ಥಾನದ ತೆರೆಗೆ ಬೆಂಕಿ ಹತ್ತಿದ ಪ್ರಸಂಗ ಹಾಗೂ ಹರಿಹರ ಕ್ಷೇತ್ರದಿಂದ ಬ್ರಹ್ಮ ಪಿಶಾಚಿಗಳನ್ನು ಓಡಿಸಿದ್ದು, ಕುಮಾರ ವ್ಯಾಸನ ಒದ್ದೆ ಬಟ್ಟೆಯ ಕಾವ್ಯ ರಚನಾ ಸ್ಫೂರ್ತಿ ಚಾಮರಸ ಕುಮಾರವ್ಯಾಸರ ಭಾರತದ ಕಥಾಸ್ಪರ್ಧೆ, ನೇಮಿನಾಥನ ಲೀಲಾವತಿ ಪ್ರಬಂಧವನ್ನು ಆನೆಯ ಮೇಲಿರಿಸಿ ಮೆರವಣಿಗೆ ಮಾಡಿದ ಪ್ರಸಂಗ ಆ ನಿಮಿತ್ತ ಷಡಕ್ಷರಿ ಕವಿಯ ರಾಜಶೇಖರ ವಿಳಾಸ ಸೃಷ್ಟಿಯಾದುದು ಇಂಥ ಅನೇಕ ವದಂತಿ, ಪವಾಡ, ಐತಿಹ್ಯಗಳು, ಧರ್ಮ, ವ್ಯಕ್ತಿಯ ಅಭಿಮಾನಗಳ ಉದ್ದೇಶಗಳಿಗಾಗಿ ಸಾಹಿತ್ಯ ಸೃಷ್ಟಿಯಲ್ಲಿ ಸ್ಥಾನ ಪಡೆಯುತ್ತವೆ."[೮೩] ಹಾಗೆಯೇ ಚಾರಿತ್ರಿಕ ಮಹತ್ವ ಹೊಂದಿದ ಆರಾಧನ ಕೇಂದ್ರಗಳು ಪುಣ್ಯಕ್ಷೇತ್ರಗಳಾಗುತ್ತವೆ. ಅಲ್ಲದೆ ಒಂದು ಸಮುದಾಯದ ಭಕ್ತಿಯ ಮುಖ್ಯ ಕೇಂದ್ರಗಳಾಗುತ್ತವೆ. ಹೀಗೆ ಹಾಲುಮತ ಸಮುದಾಯದ ನಾಯಕರುಗಳು ನೆಲೆಸಿರುವ ಸ್ಥಳಗಳು ಮಹಾತ್ಮೆಯನ್ನು ಹೊಂದಿವೆ. ಈ ಮಹಾತ್ಮೆಯು ಶ್ರೀಸಾಮಾನ್ಯರ ಭಕ್ತಿ ಶ್ರದ್ಧೆ, ನಂಬಿಕೆ ಮುಂತಾದ ಸಾಂಸ್ಕೃತಿಕ ಅನನ್ಯತೆಯನ್ನು ಪ್ರತಿಪಾದಿಸುತ್ತವೆ.

ಹಾಲುಮತದವರು ಕಾಡಿನಿಂದ ನಾಡಿಗೆ, ನಾಡಿನಿಂದ ಕಾಡಿಗೆ ಸಂಚರಿಸಿದ ಕುರುಹುಗಳಾಗಿ ಈ ಪುಣ್ಯಕ್ಷೇತ್ರಗಳು ಕಂಡುಬರುತ್ತವೆ. ಪ್ರಮುಖವಾಗಿ ಇಲ್ಲಿ ವಿಶ್ಲೇಷಣೆ ಮಾಡುವ ಪುಣ್ಯ ಕ್ಷೇತ್ರಗಳೆಂದರೆ, ಸರೂರು, ಹುಲಜಂತಿ, ಗೋಲ್ಗಿರಿ, ಬಂಕಾಪುರ. ಈ ಮುಖ್ಯ ಸ್ಥಳಗಳಿಗೆ ಪೂರಕವಾಗಿ ಕಲ್ಯಾಣ, ಸೊನ್ನಲಿಗೆ, ಮಾಸನೂರು, ಸಿರಿಡೋಣ, ಏಣಕೆ ಗ್ರಾಮ, ಹಾಲಹಳ್ಳ, ಹೊನ್ನೂರು, ಮುಮ್ಮಟಗಿರಿ, ಕೊಲ್ಲಿಪಾಕಿ, ಕೊಲ್ಲಾಪುರ, ಕೋಣನೂರು, ಮುಂಡಗನೂರು. ಹೀಗೆ ಅನೇಕ ಸ್ಥಳಗಳು ಹಾಲುಮತ ಪುರಾಣಗಳಲ್ಲಿ ಕಂಡುಬರುತ್ತವೆ.

**i. ಸರೂರು**

ಸರೂರು ಎಂಬುದು ಶಾಂತಮುತ್ತಯ್ಯ ಮತ್ತು ಸಿದ್ಧಮಂಕರವರು ಪವಾಡ ಮೇರೆಯುವದಕ್ಕೆ ಆಶ್ರಯಕೊಟ್ಟ ಸ್ಥಳವಾಗಿತ್ತು. ತಗರ ಪವಾಡದಲ್ಲಿ ರೇವಣಸಿದ್ಧರು ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆಯನ್ನು ಕೊಟ್ಟು ಸರೂರುನ ಶಾಂತಮುತ್ತಯ್ಯನಾಗಿ ಜಗದೊಳ ಮೇರೆ ಎಂದು ಹಾರೈಸುವರು. ಅದೇ ರೀತಿ ಸಿದ್ಧಮಂಕ ಚರಿತೆಯಲ್ಲಿಯೂ ಮರಳ ಮಂಕ ಅಥವಾ ಮರುಳಸಿದ್ಧರು ಸರೂರಿನ ಕೋಡುಗಲ್ಲಿನ ಮೇಲೆ ತಪಸ್ಸು ಮಾಡಿ ಹಾಲುಮತದವರ ಸ್ಥಳ ಮಹಾತ್ಮೆಯನ್ನು ತಿಳಿಸಿದ್ದಾರೆ.

ಸರೂರು ಆಧ್ಯಾತ್ಮಿಕ ನೆಲೆಯಾಗಿ ಹುಟ್ಟಿತೆಂದು ಪುರಾಣಗಳಲ್ಲಿ ವೇದ್ಯವಾಗಿದೆ. ಶಾಂತಮುತ್ತಯ್ಯನು ರೇವಣಸಿದ್ಧರಿಂದ ಲಿಂಗದೀಕ್ಷೆಯನ್ನು ಪಡೆದುಕೊಳ್ಳುವನು. ಲಿಂಗದೀಕ್ಷೆಗೆ ನಾಲ್ಕು ಕಲಶ ನಾಲ್ಕು ದಿಕ್ಕಿಗೆ ಇಟ್ಟು ಗುರುಕಲಶವನ್ನು ಮಧ್ಯದಲ್ಲಿಟ್ಟು ಪೂಜೆಗೆ ಅಣಿಯಾಗುವರು. ಈ ಲಿಂಗದೀಕ್ಷೆಗೆ ಪಂಡಿತಾರಾಧ್ಯ, ರೇವಣಾರಾಧ್ಯ ಏಕೋರಾಮ, ದಂಡಿಗ್ರ ಮರಳಸಿದ್ಧಯ್ಯರು ನಾಲ್ಕು ದಿಕ್ಕಿನಿಂದ ಕಲಶ ತರುವರು. ಆಗ ನೇಮದಂತೆ ಲಿಂಗದೀಕ್ಷೆಗೆ ಕರಿಯ ಮಲ್ಲಿಗೆ ಪುಷ್ಪವನ್ನು ಇವರು ಕೇಳುತ್ತಾರೆ. ಆಗ ಶಾಂತಯ್ಯನು ಶಿವನ ಚರಣಕ್ಕೆ ನಮಿಸಿ ಕರಿಯ ಮಲ್ಲಿಗೆ ಹೂವನ್ನು ತರಲು ಕೈಲಾಸಕ್ಕೆ ತೆರಳುವನು. ಅಲ್ಲಿ ಶಿವನು ನಿರಾಕರಿಸಿದಾಗ ಶಾಂತಮುತ್ತಯ್ಯನು ಚಂದರಾಯುಧದಿಂದ ಶಿರವನ್ನು ಹರಿಯಲು ಮುಂದಾಗುವನು. ಆಗ

"ಕೊರಲಿಗೆ ಖಡ್ಗವನೊತ್ತಿ ಅರಿವುತಿರೆ
ಸುರಿದವು ಕರಿಯ ಮಲ್ಲಿಗೆಯು
ಸರಸರಗಳು ಸಾಲುಗೊಳಿಸಿ ಬೀಳಲು ಕಂಡು
ಹರಹರ ಜಯವೆಂದರಾಗ"(೫)

ದೇವಲೋಕದಿಂದ ಕರಿಯ ಮಲ್ಲಿಗೆ ಹೂಗಳು ಸರಸರ ಸಾಲಾಗಿ ಬೀಳುವುದನ್ನು ಕಂಡು ಜನರು, ದೇವತೆಗಳು ಕಲ್ಲಿನ ಕೆರೆಯನ್ನು ಸರೂರು ಎಂದು ಕರೆದಿದ್ದಾರೆಂದು ಪುರಾಣಗಳು ತಿಳಿಸುತ್ತವೆ. ಜೊತೆಗೆ ಬಿಜ್ಜಳನ ಕಲ್ಯಾಣಪುರದಿಂದ ಏಳು ಬೇಲಿ ಆಚೆ ಈ ಹಾಲುಮತದವರನ್ನು ಹೊರಹಾಕಲಾಗಿರುತ್ತದೆ. ಈ ಕಳಂಕವನ್ನು ಕಳೆದುಕೊಳ್ಳಲು ಸಿದ್ಧಮಂಕನಿಗೆ ಮುಖ್ಯ ಕೇಂದ್ರವಾಗಿ ಸರೂರಿನ ಕೋಡುಗಲ್ಲು ಕಂಡುಬರುತ್ತದೆ. ಸಿದ್ಧಮಂಕ ಚರಿತೆಯಲ್ಲಿ ಸಿದ್ಧರಾಮರು ಸರೂರಿನ

ಪರಿಸರವನ್ನು ವರ್ಣಿಸುವರು. ಸರೂರಿನಲ್ಲಿ ಕೆರೆ ಬಾವಿ, ದೇಗುಲ, ಹೂದೋಟಗಳು ಕಂಗೋಳಿಸುತ್ತಿವೆ. ಈ ಪ್ರವೇಶವು ಸಮೃದ್ಧವಾಗಿತ್ತೆಂದು ಹೇಳುವಲ್ಲಿ ಬಾಳೆ, ಹಲಸು, ಮಾವು, ನೇರಳೆ, ದಾಳಿಂಬೆ, ನಿಂಬೆ, ರುದ್ರಾಕ್ಷಿಯ ತರುಗಳು ಮೇಳೈಸಿದ್ದವು. ಅಲ್ಲಿ ವನದೇವತೆಯು ಮನೆಮಾಡಿದಳೆಂದು ವರ್ಣಿಸುವರು. ಈ ಸರೂರು ಯಾವ ಕೊರತೆಯನ್ನು ಕಂಡಿಲ್ಲವೆಂದು ಹೇಳುತ್ತಲೇ ಕುಲಸಂಕಥನಕ್ಕೆ ದಕ್ಕೆಯಾದ ವಿಷಯವನ್ನು ವಿಶ್ಲೇಷಿಸುತ್ತದೆ. ಎಲ್ಲ ಸಕಲ ಸೌಲಭ್ಯಗಳಿರುತ್ತವೆಯೋ ಅಲ್ಲಿ ಕಳ್ಳಕಾಕರ ಭಯವಿರುವಂತೆ ಸರೂರಿನ ವರ್ಣನೆಯನ್ನು ಮಾಡಲಾಗಿದೆ.

ಸರೂರು ಒಂದು ಕಡೆ ಶಾಂತಮುತ್ತಯ್ಯನಿಂದ ಟಗರ ಪವಾಡಕ್ಕೆ ಮುಖ್ಯ ಕೇಂದ್ರಸ್ಥಳವಾಗಿದ್ದರೆ, ಮತ್ತೊಂದು ಕಡೆ ಸಿದ್ಧಮಂಕನ ಕಠಿಣ ತಪಸ್ಸಿನ ಕೇಂದ್ರವಾಗಿಯೂ ಕಂಡುಬರುತ್ತದೆ. ಪ್ರಸ್ತುತದಲ್ಲಿ ಈ ಸರೂರು ಬಿಜಾಪುರದ ಮುದ್ದೇಬಿಹಾಳು ತಾಲೂಕಿನಿಂದ ೧೫ ಕಿಲೋಮೀಟರ್ ದೂರದಲ್ಲಿದೆ. ಅಲ್ಲಿ ಶಾಂತ ಮುತ್ತಯ್ಯನ ಗದ್ದುಗೆ, ಮಲ್ಲಿಕಾರ್ಜುನ ದೇವಾಲಯ, ರೇವಣಸಿದ್ದೇಶ್ವರ ದೇವಾಲಯ, ಶಾಂತ ಸಂಪ್ರದಾಯರ ಒಡೆಯರುಗಳ ಸಮಾಧಿ, ರೆವಮುತ್ತಯ್ಯನ ಚಂದ್ರಗಿರಿಯನ್ನು ಈಗಲೂ ನೋಡಬಹುದು. ಶಾಂತಯ್ಯನಿಗೆ ಹಾಲುಮತ ಒಡೆಯ ಪಟ್ಟವನ್ನು ತಂದುಕೊಟ್ಟು ಸಾಂಸ್ಕೃತಿಕ ಮಹತ್ವವನ್ನು ತಿಳಿಸುತ್ತದೆ. ಜೊತೆಗೆ ಕುರುಬರ ಒಳಪಂಗಡಗಳಾದ ಉಣ್ಣೆಕಂಕಣ, ಹತ್ತಿ ಕಂಕಣದವರಿಗೆ ಗುರುವಿನ ಸ್ಥಾನವನ್ನು ಒದಗಿಸುತ್ತದೆ. ಶಾಂತಮುತ್ತಯ್ಯನು ಹತ್ತಿಕಂಕಣದಿಂದ ಬಂದ ವ್ಯಕ್ತಿ ಹೀಗಾಗಿ ಉಣ್ಣೆ ಕಂಕಣದವರಿಗೂ ಗುರುವಾಗಿದ್ದು, ದೂರವಾದ ಸಿರಿವಂತೆ (ಪದ್ಮಗೊಂಡನ ಕಿರಿಯ ಹೆಂಡತಿ)ಯ ಮಕ್ಕಳ ಪೋಷಣೆ ಕರ್ತವ್ಯವನ್ನು ನೆನಪಿಸುವ ಸ್ಥಳವಾಗಿ ಪರಿಣಮಿಸುವುದು. ಸಿದ್ಧಮಂಕನ ತಪಸ್ಸಿನ ರಕ್ಷಣೆಯಿಂದ ಹೆಗ್ಗೊಂಡನು ಹೆಸರು ಪಡೆದಂತೆ, ಶಾಂತಯ್ಯನು ಕುರಿಯನ್ನು ಗುರುವನ್ನು ಪಡೆದು ಕುಲೋದ್ಧಾರಕನಾಗುವುದಕ್ಕೆ ಇದು ಆಶ್ರಯಕೊಟ್ಟ ಸ್ಥಳವಾಗಿದೆ.

ಶಾಂತಮುತ್ತಯ್ಯ ಸಿದ್ಧಮಂಕರು ಈ ಸರೂರಿನಲ್ಲಿಯೇ ಐಕ್ಯಹೊಂದಿದರೆಂದು ಅಲ್ಲಿನ ಗದ್ದುಗೆಗಳು ತಿಳಿಸುತ್ತವೆ. ಈಗಲೂ ಸರೂರಿನಲ್ಲಿ ವಿಧಿವತ್ತಾಗಿ ಕುರುಬರು ಪೂಜಾಕಾರ್ಯವನ್ನು ನೆರವೇರಿಸಿಕೊಂಡು ಬರುತ್ತಿದ್ದಾರೆ. ಇದು ಧಾರ್ಮಿಕ ಕ್ಷೇತ್ರವಾಗಿ, ಪುಣ್ಯಕ್ಷೇತ್ರವಾಗಿ ಮತ್ತು ೧೨ನೇ ಶತಮನಾದ ಕಲ್ಯಾಣಕ್ಕೆ ಸರಿಸಮಾನವಾಗಿತ್ತು ಎಂದು ತಿಳಿಸುತ್ತದೆ. ಕೇವಲ ಕಲ್ಯಾಣದಲ್ಲಿ ಮಾತ್ರ ಕ್ರಾಂತಿ ಚಳುವಳಿಗಳು, ಸಾಮಾಜಿಕ ಚಳುವಳಿಗಳು ನಡೆಯುತ್ತಿರಲಿಲ್ಲ. ಬೇರೆ ಸ್ಥಳಗಳಲ್ಲಿಯೂ ಚಳುವಳಿಯ ಮನೋಭಾವನೆಯಿತ್ತು ಎಂದು ಈ ಸರೂರು ಸಾಬೀತು ಪಡಿಸುತ್ತದೆ. ಈಗಲೂ ಸರೂರಿನಲ್ಲಿ ಅತಿ ಹೆಚ್ಚಾಗಿ ಕುರುಬರೇ ವಾಸವಾಗಿದ್ದಾರೆ.

ಹಾಲುಮತದವರು ಲಿಂಗಾಯತಕ್ಕೆ ಮತಾಂತರ ಆಗುವುದನ್ನು ವಿರೋಧಿಸಿದ ಮೊದಲ ಸ್ಥಳವೆಂದರೂ ತಪ್ಪಾಗಲಾರದು. ಸರೂರು ನ್ಯಾಯದೇವತೆಯಾಗಿ ಕುರುಬರ ಮತ್ತು ವೀರಶೈವರ ವರ್ಗ ಸಂಘರ್ಷದ ತೀರ್ಮಾನವನ್ನು ನೀಡುತ್ತದೆ. ಸಿದ್ಧಮಂಕ ಚರಿತೆ, ತಗರ ಪವಾಡ ಕೃತಿಗಳಲ್ಲಿ ಸೊನ್ನಲಿಗೆ, ಕಲ್ಯಾಣ, ಕುರಿಬೆಟ್ಟದೂರು, ಆತಕೂರು, ತೊಗರಸಿ ತಮ್ಮಪುರ ಮುಂತಾದವುಗಳಲ್ಲಿ ಸರೂರು ಮಾತ್ರ ಪುಣ್ಯ ಕ್ಷೇತ್ರವಾಗಿ ಕಂಡುಬರುತ್ತದೆ. ಕುರಿಬೆಟ್ಟದೂರು

ಹಾಲುಮತದವರು ಜೀವನವನ್ನು ನಿಭಾಯಿಸಲು ಕುರಿಗಳನ್ನು ತಂಗಿದ ಸ್ಥಳವಾಗಿ ಕಂಡುಬಂದರೆ, ಸರೂರು ಇಡಿ ಕುರುಬ ಸಮುದಾಯದವರನ್ನು ಜಗತ್ತಿಗೆ ಮತ್ತೊಮ್ಮೆ ಪರಿಚಯಿಸಿದ ಕೀರ್ತಿಯನ್ನು ಪ್ರತಿಪಾದಿಸುತ್ತದೆ.

ಜೊತೆಗೆ ಇಲ್ಲಿನ ಮಲ್ಲಿಕಾರ್ಜುನ ದೇವಾಲಯವು ಸಹ ಪ್ರಾಚೀನದೆಂದು ಪುರಾಣಗಳು ಹೇಳುತ್ತವೆ. ಶಾಂತಮುತ್ತಯ್ಯನು ಚಕೋರಿಹೊಳೆಯಲ್ಲಿ ಸ್ನಾನಕ್ಕೆ ಇಳಿದಾಗ ಅಲ್ಲಿಗೆ ಬಂಡಿಕಾರರು ಬಂದು ಹೊಳೆಯಿಂದೆಳು ಎಂದು ಹೇಳುವರು. ಆಗ ಶಾಂತಯ್ಯನಿಗೆ ಅವಮಾನವಾದಂತಾಗುತ್ತದೆ. ತಕ್ಷಣ ಕೋಪದಿಂದ ಅವರ ಬಂಡಿನೋಡಿದಾಗ ಅದು ತುಂಡು ತುಂಡಾಗುತ್ತದೆ. ಬಂಡಿಕಾರರು ಭಯಭೀತರಾಗಿ ಕ್ಷಮೆಯಾಚಿಸಿದಾಗ ಶಾಂತಯ್ಯನು ''ನಮ್ಮಯ್ಯ ಶಿವ ಸಿದ್ಧಯ್ಯನಿಗೆ ದೇಗುಲ ಕಟ್ಟಿ'' ಎಂದು ಹೇಳುತ್ತಾನೆ. ಅಂದು ಕಟ್ಟಿದ ಶಿವಸಿದ್ದಯ್ಯನ ದೇವಾಲಯವೆ ಇವತ್ತಿನ ಮಲ್ಲಿಕಾರ್ಜುನ ದೇವಾಲಯವಾಗಿರಬಹುದೆಂದು ತಿಳಿದುಬರುತ್ತದೆ. ಆಗಿನ ಸಾಂಸ್ಕೃತಿಕ ನಾಯಕರು ತಮ್ಮ ಪವಾಡಗಳನ್ನು ಇಂದಿಗೂ ಜನರಲ್ಲಿ ಉಳಿಸಿಹೋಗಿದ್ದಾರೆ ಎಂಬುದಕ್ಕೆ ಗುರು ಒಡೆಯರ ಹೇಳಿಕೆಗಳು ನಿದರ್ಶನವಾಗಿವೆ. ಶಾಂತಮುತ್ತಯ್ಯನ, ರೇವಣಸಿದ್ಧರ, ಸಿದ್ಧಮಂಕ ಮತ್ತು ಸಿದ್ಧರಾಮ ಪರಂಪರೆಯಿಂದ ಬಂದವರು. ಈಗಲೂ ಸರೂರಿನ ರೇವಣಸಿದ್ದೇಶ್ವರ ದೇವಾಲಯದಲ್ಲಿ ಗುರು ಒಡೆಯರು ಪೂಜೆಯ ಕೈಂಕರ್ಯವನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಮಲ್ಲಿಕಾರ್ಜುನ ದೇವಾಲಯ ಜೊತೆಗೆ ಚಂದ್ರಗಿರಿಯಲ್ಲಿ ಶಾಂತಮುತ್ತಯ್ಯನ ಗದ್ದುಗೆಯಿದೆ. ಇಲ್ಲಿ ಶಿವರಾತ್ರಿ ಅಮವಾಸ್ಯೆಯಲ್ಲಿ ಪೂಜೆಯನ್ನು ಮಾಡಿ ಒಡೆಯರು ಹೇಳಿಕೆಯನ್ನು ಹೇಳುತ್ತಾರೆ. ಮತ್ತೊಂದು ವೈಶಿಷ್ಟ್ಯವೆಂದರೆ ರೇವಮುತ್ತಯ್ಯ ಎಂಬುವನು ಜೀವ ಸಮಾಧಿಯಾಗಿರುವನೆಂದು ಜನ ನಂಬುತ್ತಾರೆ. ಜೊತೆಗೆ ಶಿವರಾತ್ರಿಯಲ್ಲಿ ರೇವಮುತ್ತಯ್ಯನಿಗೆ ಎಣ್ಣೆಯನ್ನು ಭಕ್ತಾದಿಗಳು ಸುರುವರು. ಅದನ್ನು ಬಂಡೆಯಲ್ಲಿ ಸಮಾಧಿ ಹೊಂದಿದ್ದ ರೇವಮುತ್ತಯ್ಯ ಕುಡಿಯುತ್ತಾನೆಂಬ ನಂಬಿಕೆ ಜನರಲ್ಲಿ ಬೇರೂರಿದೆ. ಆದ್ದರಿಂದ ರೇವಮುತ್ತಯ್ಯ ಶಾಂತನಾಗುವನು ಎನ್ನುವರು. ಹಾಗೂ ಶಿವರಾತ್ರಿ ಅಮವಾಸ್ಯೆಯಲ್ಲಿ ನಡೆಯುವ ಹೇಳಿಕೆಯು ಮಳೆ ಬೆಳೆಗೆ ಸಂಬಂಧಿಸಿದಂತೆ ಹೇಳಲಾಗುತ್ತದೆ.

ಸರೂರಿನಿಂದ ೪ ಕಿ.ಮೀ. ದೂರದಲ್ಲಿ ತೂಗುಡ್ಡ ಅಥವಾ ಕೋಡುಗಲ್ಲು ಎಂಬ ಪ್ರದೇಶವು ಸರೂರಿನ ಕಳಸವಿದ್ದಂತೆ. ಬೆಟ್ಟಗುಡ್ಡ, ಗಿಡ ಮರಗಳಿಂದ ಆವೃತ್ತವಾದ ಈ ಪ್ರದೇಶವು ವಿಶಾಲ ಭೂಮಿಯನ್ನು ಹೊಂದಿದೆ. ಈ ಗುಡ್ಡದ ಸುತ್ತಲಿನ ಭೂಮಿಯ ಒಡೆಯರು ಹಾಲುಮತದವರೆ ಹೆಚ್ಚು. ಹೀಗೆ ಪ್ರಾಚೀನ ಕಾಲದಲ್ಲಿ ಋಷಿಮುನಿಗಳು ತಮ್ಮ ಬೇಡಿಕೆಯನ್ನು ಈಡೇರಿಸಲು ತಪಸ್ಸನ್ನು ಕಾಡಿನಲ್ಲಿ ಕೈಗೊಳ್ಳುತ್ತಿದ್ದರೋ ಅದೇ ರೀತಿ ಸಿದ್ಧಮಂಕನ ತಪಸ್ಸು ಗೋಚರಿಸುತ್ತದೆ. ಹಾಗೂ ಈ ಗುಡ್ಡದಲ್ಲಿ ಮರಳಸಿದ್ದನ ಗದ್ದುಗೆ, ರೇವಣಸಿದ್ಧರ ಗುಹೆ, ಕಾದೊಡಿ ಬಸವ, ಬಾಗೆವಾಡಿ ಬಸವ (ಎತ್ತು)ಗಳು ಹೋರಾಡಿದ ಹೆಜ್ಜೆಗಳ ಗುರುತು ಮತ್ತು ರಕ್ತದಹೊಂಡ, ಏಳುಕಂಟೆಗಿಡವನ್ನು ಪೂಜ್ಯನೀಯವೆಂದು ಜನರು ಪೂಜಿಸುತ್ತಾರೆ. ಈ ಏಳುಕಂಟೆಯೆಂಬುದು ಏಳುತರಹದ ಗಿಡಗಳಿಂದ ಕೂಡಿದ ವೃಕ್ಷ ಸಮೂಹ. ಇದರ ಮೇಲೆ ಶಿಷು ಮಕ್ಕಳು (ಒಡೆಯರು)

ನಿಂತುಕೊಂಡು ಶ್ರಾವಣ ಮಾಸದ ಮೊದಲ ಸೋಮವಾರ ಹೇಳಿಕೆಯನ್ನು ಹೇಳುತ್ತಾರೆ. ಹೀಗೆ ಕುರುಬರ ಸಾಂಸ್ಕೃತಿಕ ಮಹತ್ವವನ್ನು ಈಗಲೂ ಉಳಿಸಿಕೊಂಡು ಬಂದ ಕೀರ್ತಿಯೂ ಸರೂರು ಗ್ರಾಮಕ್ಕೆ ಇದೆ.

''ಸರೂರಿನ ಹೊರಗೆ ಅಣತಿ ದೂರದಲ್ಲಿ ಒಂದು ಗದ್ದುಗೆಯಿದ್ದು ಅದನ್ನು ಶಾಂತಮುತ್ತಯ್ಯನ ಗದ್ದುಗೆಯೆಂದು ಕರೆಯುವರು. ಆ ಗದ್ದುಗೆಯ ಪಕ್ಕದಲ್ಲಿಯೇ ಪಂಚಕೂಟ ದೇವಾಲಯವಿದ್ದು ಇದನ್ನು ರೇವಣಸಿದ್ಧ ದೇವಾಲಯವೆಂದು, ಏಳು ಗುಡಿಯೆಂದು ಕರೆಯುತ್ತಾರೆ. (ಆದರೆ ಎಸ್.ಆಯ್. ಆಯ್. ೧೫೮ ಕ್ರಿ.ಶ. ೧೨೧೦ ಶಾಸನದ ಪ್ರಕಾರ ಈ ದೇವಾಲಯದ ನಿಜವಾದ ಹೆಸರು ಮಲ್ಲಿಕಾರ್ಜುನ). ಈ ಗದ್ದುಗೆ ಮತ್ತು ದೇವಾಲಯದ ಅರ್ಚಕರು ಕುರುಬರು.[೬೭] ಈಗಲೂ ಈ ದೇವಾಲಯ ಮತ್ತು ಗದ್ದುಗೆ ಪೂಜೆಯನ್ನು ಕುರುಬರೇ ಮಾಡುತ್ತಿದ್ದಾರೆ. ಜೊತೆಗೆ ಇದರ ಹಿರಿಯರು ಅಥವಾ ಪೂಜಾರಿಗಳು ಅನೇಕ ಪವಾಡಗಳನ್ನು ಮೆರೆದು ಸಮಾಧಿಯಾಗಿರುವ ವಿಷಯವನ್ನು ಇಲ್ಲಿಯ ಜನರು ಹೇಳುತ್ತಾರೆ. ಹೀಗೆ ಪರಂಪರಾಗತವಾಗಿ ಶಾಂತಮುತ್ತಯ್ಯನ ಬಳಿಯವರು ಕುಲಗುರುಗಳಾಗಿ ಕಾರ್ಯ ನಿರ್ವಹಿಸುತ್ತಾ ಬಂದಿರುವುದನ್ನು ಅವರಲ್ಲಿರುವ ಸುರುಳಿ ಪತ್ರಗಳು ರುಜುವಾತು ಪಡಿಸುತ್ತವೆ. ಅಲ್ಲದೆ ಶಾಂತಮುತ್ತಯ್ಯನ ಕುರಿತು ಸಿರಿವಾಳ ಶಾಸನ (೧೯೭೦), ಹೋತಗಲ್ಲ ಶಾಸನ (೧೧೭೫) ಮತ್ತು ಸಿರಿವಾಳ ಶಾಸನ (೧೧೭೮)ಗಳು ಈತನನ್ನು ಸಿದ್ಧಸಾಂತೇಶ್ವರ ಎಂಬ ಹೆಸರಿನಲ್ಲಿ ಸಿರವಾಳದಲ್ಲಿ ದೇಗುಲವೊಂದು ನಿರ್ಮಿಸಿರುವುದನ್ನು ಹೇಳುತ್ತವೆ.

## ii. ಹುಲಜಂತಿ

ಹುಲಜಂತಿ ಪ್ರದೇಶವು ಮಹಾರಾಷ್ಟ್ರದ ಸೋಲ್ಲಾಪುರ ಜಿಲ್ಲೆಯಲ್ಲಿನ ಒಂದು ಗ್ರಾಮ. ಈ ಹುಲಜಂತಿ ಗ್ರಾಮದಲ್ಲಿಯೆ ಮಾಳಿಂಗರಾಯನ ಸಮಾದಿ ಇದೆ. ಇಲ್ಲಿ ಪ್ರತಿ ವರ್ಷ ದೀಪಾವಳಿ ಅಮಾವಾಸ್ಯೆಯೆಂದು ಜಾತ್ರೆ ನಡೆಯುತ್ತದೆ. ಈ ಉತ್ಸವಕ್ಕೆ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ತಮಿಳುನಾಡಿನಿಂದ ಅನೇಕರು ಬರುತ್ತಾರೆ. ಆದರೂ ಹೆಚ್ಚಾಗಿ ಕುರುಬರು ಈ ಜಾತ್ರೆಯಲ್ಲಿರುವುದು ಕಂಡುಬರುತ್ತದೆ. ಹುಲಜಂತಿ ಗ್ರಾಮಕ್ಕೆ ಪುರಾಣಗಳಲ್ಲಿ 'ಜಾಗ್ರತಪೂರ' ನಾರಾಯಣಪುರ ಎಂದು ಕರೆಯಲಾಗಿದೆ. 'ಮಾಳಿಂಗರಾಯನ ಕಾವ್ಯ'ದಲ್ಲಿ ಲಿಂಗಬೀರಣ್ಣನಿಗೆ ಹುಲಿಯ ಗಿಣ್ಣ ತಂದು ಊಟ ಬಿಡಿಸುತ್ತಾನೆ. ಆಗ ಹುಲಿಯನ್ನು ತರಲು ಕಾಡಿಗೆ ಹೋದಾಗ ಕಣ್ಣು ತರೆಯದ ಹುಲಿ ಮರಿಗಳನ್ನು ಹಾವು ಕಚ್ಚಲು ಬರುತ್ತದೆ. ಆ ಹುಲಿಮರಿಗಳಿಗೆ ಭಂಡಾರವನ್ನು ಹಾಕಿ ಕಣ್ಣು ತೆರಿಸಿ ಜೀವದಾನ ಮಾಡುವನು. ಹುಲಿಮರಿಯ ತಾಯಿಯು ಆ ಮರಿಗಳನ್ನು ಮಾಳಿಂಗರಾಯನಿಗೆ ಕೊಟ್ಟು, ಗಿಣ್ಣವನ್ನು ಕೊಟ್ಟು ಕಳುಹಿಸಿಕೊಡುತ್ತದೆ. ಹುಲಿ ಮರಿಗಳನ್ನು ತಂದು ಸಾಕಿದ ಪ್ರದೇಶವೇ ''ಹುಲಿಜಂತಿ'' ಆಯಿತು ಎಂದು ಕಾವ್ಯ ಹೇಳುತ್ತದೆ.

ಹುಲಿಯಿಂದ ಕುರಿಗಳನ್ನು ಕಾಯಿಸುತ್ತಾನೆ. ಹುಲಿ ಮರಿಗಳನ್ನು ಆಟಕ್ಕೆ ಬಳಸಿಕೊಳ್ಳುತ್ತಾನೆ. ಹುಲಿ ಉಗರ ತಗದು ಅಗಸಿ ಕಟ್ಟಿಸುತ್ತಾನೆ. ಹುಲಿ ಮುಖದಾಗಸಿ ಶ್ರೀ ಹುಲಜಂತಿ ಅನಿಸಿ

ಪ್ರಸಿದ್ಧಿಯನ್ನು ಪಡೆಯುತ್ತದೆ. ಈಗ ಹುಲಜಂತಿ ಊರ ಸುತ್ತ ಕೋಟೆ ಇದೆ. ಆ ಕೋಟೆಗೆ ಎರಡು ದ್ವಾರಗಳಿವೆ. ಕೋಟೆ ಬಾಗಿಲುಗಳಿಗೆ ಹುಲಿಮುಖದಗಿಸಿ ಎಂದು ಕರೆಯಲಾಗುತ್ತಿದೆ. ಮತ್ತು ಎರಡೂ ಕೋಟೆಗಳ ಬಾಗಿಲುಗಳ ತೋಳಗಳಲ್ಲಿ ಹುಲಿಯ ಚಿತ್ರಗಳಿವೆ. ಕೋಟೆಗೆ ಹತ್ತಿರದಲ್ಲಿ ಒಂದು ದೊಡ್ಡ ಹಳ್ಳವಿದೆ. ''ಈ ಹಳ್ಳಕ್ಕೆ 'ಹಾಲಹಳ್ಳ; ಮಾಳಿಂಗರಾಯನ ಹಳ್ಳ, ತೀರ್ಥನದಿ' ಎಂದು ಕರೆಯುತ್ತಾರೆ. ಈ ಹಳ್ಳದ ಉಗಮ ಸ್ಥಾನದಿಂದ ಭೀಮಾನದಿ ಕೊಡುವ ಸ್ಥರದ ಅಕ್ಕಪಕ್ಕದ ದಡಗಳಲ್ಲಿ ಹಾಲುಮತ ಜನಾಂಗದವರೇ ಹೆಚ್ಚಾಗಿ ವಾಸಿಸುತ್ತಾರೆ. ಈ ಕಾರಣಕ್ಕಾಗಿ ಹಾಲುಮತದವರ ಹಳ್ಳ ಎಂದು ಕರೆದಿರಬಹುದು.''[೮೭] ಎಲ್ಲಿ ನೀರಿನ ಸೌಲಭ್ಯ ಹಸಿರು ಸಮೃದ್ಧವಾಗಿರುತ್ತದೆ. ಅಲ್ಲಿ ಕುರುಬರು ನೆಲೆಸುವರೆಂದು ಅವರು ಆಚರಿಸುವ ಎಲ್ಲಾ ಜಾತ್ರೆ-ಉತ್ಸವಗಳಿಂದ ತಿಳಿದುಕೊಳ್ಳಬಹುದು. ಹುಲಜಂತಿ ಗ್ರಾಮದಿಂದ ಒಂದು ಕಿಲೋಮೀಟರ್ ಅಂತರದಲ್ಲಿ ಮಾಳಪ್ಪನ ಸಮಾಧಿ ಗದ್ದುಗೆಯಿದೆ. ಆ ಸ್ಥಳಕ್ಕೆ ಬೊಬ್ಬಲಿವನ ಎಂದು ಕರೆಯುವರು.

ಈ ಹುಲಿಜಂತಿಯ ಬೊಬ್ಬಲಿವನದಲ್ಲಿ ಮುಳಿಂಗರಾಯನು ಸದಾ ಕುಳಿತಿರುತಿದ್ದನಂತೆ ಅದ್ದಕ್ಕಾಗಿ ಆ ಸ್ಥಳಕ್ಕೆ 'ಮಾಲಕಂಬ' ಎಂದು ಕರೆಯುತ್ತಾರೆ. ಮಾಲಿಂಗರಾಯನ ಸಮಾಧಿ ಹಿಂದೆ ಒಂದು ಹೋಮದ ಕಟ್ಟೆ ಇದೆ. ಅಲ್ಲಿಯೇ ಒಂದು ಮರಕ್ಕೆ ಭಂಡಾರದ ಮರವೆಂದು ಕರೆಯುತ್ತಾರೆ. ಈ ಮರವು ಮಾಳಿಂಗರಾಯನ ವಂಶಜರು ಭಂಡಾರ ಸಂಪ್ರದಾಯದವರೆಂದು ಸೂಚಿಸುತ್ತದೆಂದು ಆ ಮರದ ಹಳದಿ ಹೂಗಳು ಹೇಳುತ್ತವೆ. ಜೊತೆಗೆ ಮಾಳಿಂಗರಾಯನ ಜಾತ್ರೆಯಲ್ಲಿ ಭಕ್ತಾದಿಗಳು ಭಂಡಾರ ಮತ್ತು ಉಣ್ಣೆಯನ್ನು ದೇವರಿಗೆ ಅರ್ಪಿಸುವುದು. ತುಂಬಾ ವರ್ಣರಂಜಿತವಾಗಿರುತ್ತದೆ. ಇದು ಹುಲಜಂತಿಯ ಊರ ಹೊರಗೆ ನಡೆಯುವುದು. ಇದೆ ಮಾಳಿಂಗರಾಯನ ಮೂಲ ಸ್ಥಳ. ಊರ ಒಳಗಿನ ದೇವಸ್ಥಾನದಲ್ಲಿ ಮಾಳಿಂಗರಾಯನ ಪಲ್ಲಕ್ಕಿಯನ್ನಿಟ್ಟಿರುತ್ತಾರೆ.

ಹುಲಜಂತಿಯಲ್ಲಿ ಮಾಳಿಂಗರಾಯ ನೆಲೆಸಿದಂತೆ, ಹುನ್ನೂರಿನಲ್ಲಿ ಬೀರಲಿಂಗೇಶ್ವರ, ಸಿಡಿಯಾಣ ಬೀರಪ್ಪ ಮತ್ತು ಶೀಲವಂತಿ ದೇವಸ್ಥಾನವಿದೆ. ಹೀಗೆ ಪ್ರತಿವರ್ಷ ದೀಪಾವಳಿ ಅಮಾವಾಸ್ಯೆಯಂದು ಸಾವಿರಾರು ಜನರು ಬೊಬ್ಬಲಿವನದಲ್ಲಿ ಸೇರಿರುತ್ತಾರೆ. ಮತ್ತೊಂದು ವಿಶೇಷವೆಂದರೆ ಶಿವ ಪಾರ್ವತಿಯರು ರಾತ್ರಿ ಹನ್ನೆರಡು ಗಂಟೆಗೆ ಬಂದು ಮಾಳಪ್ಪಗೆ ಮುಂಡಾಸ ಕೊಟ್ಟು, ಪಟಗಾ ಸುತ್ತಿ, ನಗಾರಿ ಬಾರಿಸಿ ಹೋಗುವರೆಂದು ನಂಬಿದ್ದಾರೆ. ನಂತರ ಬೆಳಗಿನ ಜಾವದಲ್ಲಿ ಸಿರಿಡೋಣ ಬೀರಪ್ಪಾ, ಶೀಲವಂತಿ ಜೇರಂಕಲಿಗಿ ಬೀರಪ್ಪಾ, ಉಟಗಿ ಬರಮಲಿಂಗ, ಬಿಜ್ಜೂರಿನ ಜಗಮುತ್ತಯ್ಯ, ಮಾಳಿಂಗರಾಯನ ಸಾಕು ಮಗ ಬುಳಪ್ಪಾ, ಸೋನ್ನಾಳದ ವಿಠ್ಠಲ ಪಲ್ಲಕ್ಕಿಯಲ್ಲಿ ಬಂದು ಹೋಗುತ್ತಾರೆ. ಇದನ್ನೆ ಪುರಾಣದಲ್ಲಿ ಸಿರಿಡೋಣದ ಶೀಲವಂತಿಯ ಸಂದರ್ಭದಿಂದ ವಾಸ್ತವವೆಂದು ಕಂಡುಬರುತ್ತದೆ. ಶೀಲವಂತಿ ಮುಗುತಿಯನ್ನು ಮಾಳಪ್ಪ ಮಾಯ ಮಾಡುತ್ತಾನೆ. ಆಗ ಆಕೆ ಗಾಬರಿಯಾಗಿರುವಾಗ ಮೂಗುತಿಯು ಆಕೆಯ ಉಡಿಯಲ್ಲಿಯೇ ಇರುವುದನ್ನು ತಿಳಿಸುತ್ತಾನೆ. ಇಲ್ಲಿ ಹೆಣ್ಣಿನ ಮೂಗುತಿ ನೆಲಕ್ಕೆ ಬಂದರೆ ಮುತ್ತೈದೆತನ ಹೋದಂತೆ ಎಂದು ತಿಳಿಸುತ್ತದೆ. ಮಾಳಪ್ಪನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಲು ಬಂದ ಶೀಲವಂತೆ ಭೂಲೋಕದಲ್ಲಿಯೆ ನೆಲೆಸುವಂತೆ ಮಾಳಪ್ಪ ಮಾಡುತ್ತಾನೆ.

''ಮಾಳಪ್ಪನ ಭಕ್ತೀಗಿ ಒಲಿತಾರೋ ಇಬ್ಬರು
 ನಿಂತಾರ ಭವದಾಗ
ಸಿದ್ಧರಲ್ಲಿ ಶೀಲವಂತಿ ಆಗಿ
ಮೆರಿತಾರೋ ಜಗದಾಗ
ಸಿಡಿಯಾಣದಲ್ಲಿ ವಾಸ ಮಾಡ್ಯಾರೊ
ಕೇಲರಿ ಆವಾಗ''[೮೮]

ಹೀಗೆ ಹುಲಜಂತಿಯು ಪಾಂಡುರಂಗನಿಗೂ ಸ್ಥಳವನ್ನು ಕೊಡುತ್ತದೆ. ಒಟ್ಟಾರೆ ಪುಣ್ಯಸ್ಥಳವು ಬ್ರಾಹ್ಮಣನಾದ ಪಾಂಡುರಂಗನನ್ನು ಪಂಡರಾಪುರಕ್ಕೆ ಹೋಗದಂತೆ ಮಾಡುವುದನ್ನು ತಿಳಿಸುತ್ತದೆ. ಇದು ವೈಷ್ಣವ ಮತ್ತು ಶೈವ ಆರಾಧಕರ ನಡುವೆ ನಡೆದ ಸಾಂಸ್ಕೃತಿಕ ಕ್ಷೇತ್ರವಾಗಿ ಗೋಚರಿಸುತ್ತದೆ.

**iii. ಗೋಲ್ಗೆರಿ**

''ಗೋಲಗೇರಿಯು ಬಿಜಾಪುರ ಜಿಲ್ಲೆಯಲ್ಲಿದೆ. ಅಲ್ಲಿ ಕಾಟಕೋಟನೆಂಬ ಕುರುಬನು ವಾಸಿಸುತ್ತಿದ್ದನು. ಗೊಲ್ಲಾಳನು ಅವನ ಮಗನು ಕುರಿ ಕಾಯುವುದೇ ಅವನ ಕಾಯಕವಾಗಿತ್ತು. ಈ ಪ್ರದೇಶವು ಗೊಲ್ಲಾಳೇಶ್ವರನ ಕಥೆಯ ಮೂಲಕ ಪ್ರಸಿದ್ಧಿ ಹೊಂದಿದೆ. ಗೋಲ್ಗೆರಿಯನ್ನು ಅನೇಕ ಶರಣರು, ಅನೇಕ ಕವಿಗಳು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸುವುದರ ಮೂಲಕ ಚಾರಿತ್ರಿಕತೆಯನ್ನು ಮೆರೆದಿದ್ದಾರೆ. ಗೊಲ್ಲಾಳಯ್ಯನ ಮುಗ್ಧ ಭಕ್ತಿಯ ಪ್ರಚಾರ ಕೇಂದ್ರವಾಗಿ ಕಂಡುಬರುತ್ತದೆ.

**iv. ಬಂಕಾಪುರ**

ಹಾಲುಮತ ಪುರಾಣಗಳಲ್ಲಿ ಬಂಕಾಪುರವನ್ನು ಕುರಿಗಳ ಮೂಲ ನೆಲೆಯೊಂದು ವಿವರಿಸುತ್ತವೆ. ಸಿದ್ಧಮಂಕ ಚರಿತೆ ಮತ್ತು ಗೊಲ್ಲಾಳಯ್ಯನ ಪುರಾಣಗಳನ್ನು ಹೊರತು ಪಡಿಸಿ ಉಳಿದ ಹಾಲುಮತ ಪುರಾಣಗಳು ಈ ಕ್ಷೇತ್ರವನ್ನು ಕುರಿತು ಕುರಿಗಳ ಆಗಮನದ ಮೊಟ್ಟ ಮೊದಲ ಪ್ರದೇಶವೆಂದು ಹೇಳುತ್ತವೆ. ತಗರ ಪವಾಡ ಕೃತಿಯಲ್ಲಿ ''ಬಂಕಾಪುರದ ಭದ್ರಗೌಡ''[೮೯] ಎಂಬುವನು ಶಾಂತಮುತ್ತಯ್ಯನ 'ತಗರ ಪವಾಡ' ಮೆರೆಯುವುದನ್ನು ವೀಕ್ಷಿಸಲು ಕಲ್ಯಾಣಕ್ಕೆ ಧಾವಿಸಿ ಬಂದನೆಂದು ತಿಳಿಸುತ್ತದೆ. ಬಂಕಾಪುರ ಭದ್ರಗೌಡನು ಕುರುಬ ಸಮುದಾಯದ ವ್ಯಕ್ತಿಯೆಂದು ಹೇಳುತ್ತದೆ. ಈ ಪ್ರದೇಶ ಕುರುಬಗೌಡರಿಗೆ ಸಂಬಂಧಿಸಿದ್ದು, ಈ ಮೂಲಕ ಬಂಕಾಪುರವು ಕುರಿಗಳ ದೊಡ್ಡಿಯಾಗಿತ್ತು ಎಂದು ಸೂಚಿಸುತ್ತದೆ. ಇದಕ್ಕೆ ಉಳಿದ ಹಾಲುಮತ ಪುರಾಣಗಳಿಂದ ಸ್ಪಷ್ಟತೆಯು ದೊರೆಯುತ್ತದೆ. ಶಿವಪದ್ಮನು ದೈತ್ಯನನ್ನು ಸಂಹರಿಸಲು ಬಂಕಾಪುರಕ್ಕೆ ಬರುವನು.

ನಿಮ್ಮಲ್ಲೋರ್ವನು ಪೋಗಿ ಬಂಕಾಪುರದೊಳಿರ್ಪ| ತಾಮಸಕುದಯದೈತ್ಯರೊಳು||
ಪ್ರೇಮದಿಂದುದಿಸಿಯೆ ಕೆಲಕಾಲ ಬಾಳೆಂದು| ನೇಮಿಸಿ ಮತ್ತೋರ್ವನಿಗೆ||[೯೦]
ಕಾಕನಾಗೆಂದನು ಮತ್ತೋರ್ವನಿಗೆ ನೀನು ಸಾಕು ಕಾಂಚಲ ಮರವಾಗು
ಕಾಕನೆ ಕಾಂಚಾಲ ಮರದಗ್ರದೊಳು ಗೂಡ ನೇಕಿಕರಿಸಿಕೊಂಡು ಬಾಳು||[೯೧]

ಈ ಪದ್ಯಗಳಿಂದ ಕೈಲಾಸದ ಗಂಧರ್ವರು ಶಾಪಗ್ರಸ್ತರಾಗಿ ಒಬ್ಬರು ದೈತ್ಯರಾಗಿ, ಮತ್ತೊಬ್ಬರು ಕಾಕನರೂಪದಲ್ಲಿ, ಮೈಗೊಬ್ಬರು ಕಾಂಚಾಲ ಮರವಾಗಿ ಬಂಕಾಪುರದಲ್ಲಿ ನೆಲೆಸುವರು ಈ

ಮೂವರ ರಾಕ್ಷಸರ ಪ್ರಾಮವು ಪರಸ್ಪರ ಹೊಂದಿಕೊಂಡಿರುತ್ತವೆ ಮರದ ಮೇಲೆ ಕಾಗೆ ಕುಳಿತಾಗ ದೈತ್ಯನನ್ನು ಕೊಲ್ಲಲ್ಲು ಸಾಧ್ಯ. ಈ ಶಾಪವಿಮೋಚನೆಯು ಕುರಿಗಾಯವ, ಶಿವಪದ್ಮನಿಂದಲೆ ಎಂದು ಶಿವನು ಹೆಲಿರುತ್ತಾನೆ. ಈ ಪ್ರಕಾರವಾಗಿಯೇ ರೇಣುಕನ ಶಿಷ್ಯ ಕುರಿಗಾಯ್ವ ಶಿವಪದ್ಮನು ಬಂಕಾಪುರದಲ್ಲಿ ವಾಸವಾಗಿದ್ದ ದೈತ್ಯನನ್ನು ಕೊಲ್ಲುವನು. ಅಲ್ಲದೆ ಆ ದೈತ್ಯನ ದೆಹದ ಅಂಗಾಂಗಗಳಿಂದ ವಾದ್ಯಗಳನ್ನು ನಿರ್ಮಿಸುವನು. ಶಿರದಿಂದ ಮಾಯ ಮೂರ್ತಿಯನ್ನು, ದನುಜೆ ಕೈ ಬೆರಳಿನಿಂದ ಹೆಗ್ಗಾಳಿ, ಕರ್ನಿಕೆ, ಕಹಳೆ, ಬುರುಗುನಪೂರಿ ಮತ್ತು ಘನಡೊಕ್ಕೆಯ ಡೊಳ್ಳು ನಿರ್ಮಿಸಿರುವುದನ್ನು ತಿಳಿಸುತ್ತದೆ. ಬಂಕಾಪುರವು ದೈತ್ಯನಿಂದ ತತ್ತರಿಸಿ ಹೋಗಿದ್ದರು ಶಿವಪದ್ಮನಿಂದ ಹತನಾಗಿದಕ್ಕೆ ಈತನು ಬಿರುದುಗಳನ್ನು ಪಡೆಯಲು ಸಾಧ್ಯವಾಯಿತು. ಜೊತೆಗೆ ಜಗತ್ತು ಇರುವವರೆಗೂ ಬಂಕಾಪುರ ಮತ್ತು ದೈತ್ಯನಿಂದಾದ ಹಾಲುಮತದವರ ಡೊಳ್ಳು ಪ್ರಸಿದ್ಧಿಯನ್ನು ಪಡೆಯಿತೆಂದು ಪುರಾಣಗಳು ತಳಿಸಿಕೊಡುತ್ತವೆ. ಹಾಲುಮತ ದೈವಗಳ ಪೂಜೆಯ ಜೊತೆಗೆ. ರಾಕ್ಷಸ ರೂಪ ಬಿಟ್ಟು ಘನಡೊಳ್ಳಾದ ದೈತ್ಯರಿಗೂ ಪೂಜೆ ನಡೆಯುತ್ತದೆ. ಇದು ಹಾಲುಮತ ಸಮಾಜವು ದುಷ್ಟರನ್ನು ಶಿಷ್ಟರನ್ನಾಗಿಸುವುದರ ಮೂಲಕ ಅವರಿಗೆ ಸಮಾಜದಲ್ಲಿ ಗೌರವಂತರಾಗಿ ಬಾಳುವಂತೆ ಮಾಡಿದ್ದಾರೆ.

ಈ ಹಿನ್ನೆಲೆಯಲ್ಲಿಯೇ ಜನಪದ ಹಾಲುಮತ ಮಹಾಕಾವ್ಯದಲ್ಲಿ ಬಂಕಾಪುರವನ್ನು ಶಿವ ಪಾರ್ವತಿಯ ನಿಲಯವೆಂದು ತಿಳಿಸುವುದು. ಶಿವನ ಪರಮ ಭಕ್ತ ಭೃಂಗೀಶನನ್ನು ಹೀಯಾಳಿಸಿದಕ್ಕೆ ಗಂಧರ್ವರು ಕುರಿಗಳಾಗಿ ಜನ್ಮ ಪಡೆಯುವರು. ಈ ಕುರಿಗಳನ್ನು ಕಾಯಲು ಬ್ರಹ್ಮ, ವಿಷ್ಣು ಮತ್ತು ದೇವಾನುದೇವತೆಗಳು ಕಾಯ್ದು ಬೇಸರಗೊಳ್ಳುತ್ತಾರೆ. ನಂತರ ಶಿವ ಪಾರ್ವತಿಯ ಸರಧಿಯು ಬರುತ್ತದೆ. ಆಗ ಇವರಿಬ್ಬರೂ ಕೈಲಾಸ ಬಿಟ್ಟು ಭೂಲೋಕದಲ್ಲಿನ ಬಂಕಾಪುರಕ್ಕೆ ಇಳಿಯುತ್ತಾರೆ. ಅಲ್ಲಿನ ಪರಿಸರಕ್ಕೆ ಮನಸೋತು ಪಾರ್ವತಿಯು ಮೂರು ಕಣ್ಣಿನ ಹುತ್ತದಲ್ಲಿ ಕುರಿಗಳನ್ನು ಹೊಗಿಸಿ, ಮುತ್ತುಗ ಮರವನ್ನು ಹುತ್ತಿನ ಮೇಲೆ ಮರೆಮಾಡುತ್ತಾಳೆ. ''ಬಂಕಾಪುರದ ಭೂಮ್ಯಾಗ ಕುರಿಯಾ ಇಳಿಸುತಾಳೇನೆ''[63] ಹೀಗೆ ಕುರಿಗಳಿಗೆ, ಕುರುಬಗೌಡರಿಗೆ ಮತ್ತು ಶಿವಪದ್ಮನಂತ ಅವತಾರ ಪುರುಷನ ಪವಾಡ ಕ್ಷೇತ್ರವಾಗಿ ಬಂಕಾಪುರವು ಕಂಗೊಳಿಸುತ್ತದೆ. ಸರೂರಿನಂತೆ ಈ ಬಂಕಾಪುರವೂ ಕುರಿಗಳು ಹಟ್ಟಿಯಾಗಿ, ಹಾಲುಮತದವರ ವಾಸಸ್ಥಳವಾಗಿಯೂ ಆಳ್ವಿಕೆಯನ್ನು ಮಾಡಿಸಿಕೊಂಡು ಮಹತ್ವದ ಪುರವೆಂದು ಹೆಸರು ಪಡೆದಿದೆ.

ಈ ನಾಲ್ಕು ಪುಣ್ಯಕ್ಷೇತ್ರಗಳಲ್ಲಿದೆ ಹಾಲುಮತ ಪುರಾಣಗಳಲ್ಲಿ ಕೆಲವು ಸ್ಥಳಗಳು ವಿಶೇಷ ಸಂಗತಿಯನ್ನು ವಿಶ್ಲೇಷಿಸುತ್ತವೆ.

**v. ಚಕೋರಿ ಹೊಳೆ**

ಈ ಹೊಳೆಯು ಸಾಂತಮುತ್ತಯ್ಯನ ಅಂತರ್‌ಶಕ್ತಿಯ ಪರೀಕ್ಷೆಯ ತಾಣವಾಗಿ ಕಂಡುಬರುತ್ತದೆ. ತಗರ ಪವಾಡಕ್ಕೆ ಈ ಚಕೋರಿ ಹೊಳೆಯಲ್ಲಿ ನಡೆದ ಘಟನೆಯು ಆರಂಭಿಕ ಎಂಬಂತೆ ಗೋಚರಿಸುತ್ತದೆ. ಒಂದು ದಿನ ಶಾಂತಮುತ್ತಯ್ಯನು ರೆವಣಸಿದ್ಧರಿಗೆ ಒಂದು ಕರಗ ಅಂಬಲಿಯನ್ನು ಒಂಬತ್ತು ಲಕ್ಷ ಜಂಗಮರಿಗೆ ಊಟ ನೀಡುವನು. ನಂತರ ಕುರಿಗಳನ್ನು ಕಾಯುತ್ತಾ ಶಾಂತಮುತ್ತಯ್ಯ

ಚಕೋರಿ ಹೊಳೆಯಲ್ಲಿ ನಿಂತು ಶಿವನ ಪೂಜೆಮಾಡುತ್ತಿರುವಾಗ ಕೋಪಿಷ್ಠರಾದ ಬಂಡಿಕಾರರು ಗರ್ವದಿಂದ ಆರ್ಭಟಿಸುತ್ತಾರೆ. ಆಗ ಶಾಂತಯ್ಯ ಬಂಡಿಯನ್ನು ತುಂಡು ತುಂಡಾಗಿಸುತ್ತಾನೆ. ಈ ತಪ್ಪಿಗೆ ಆ ಬಂಡಿಕಾರರು ಕ್ಷಮೆಯಾಚಿಸಿ ಚಕೋರ ಹೊಳೆಯ ಹತ್ತಿರ ಶಿವದೇವಾಲಯವನ್ನು ನಿರ್ಮಿಸುವರು. ಹೀಗೆ ಹಾಲುಮತ ಪುರಾಣಗಳಲ್ಲಿ ಬರುವ ಪ್ರತಿಯೊಂದು ಸ್ಥಳಕ್ಕೂ ಹಿಂದೆ ವಿಶೇಷ ತಾತ್ಪರ್ಯವಿರುವುದು ಈ ಮೂಲಕ ತಿಳಿದುಬರುವುದು.

**vi. ಮಾಸನೂರು**

ಈ ಸ್ಥಳ ಕುರಿತು ಹಾಲುಮತೋತ್ತೇಜಕ ಪುರಾಣದಲ್ಲಿ ಈ ರೀತಿ ವ್ಯಕ್ತವಾಗಿದೆ. ರೆವಣಸಿದ್ಧರು ಕೈಲಾಸದಲ್ಲಿ ದಾರುಕನನ್ನು ದಾಟಿಶಾಪಕ್ಕೆ ಗುರಿಯಾಗಿರುತ್ತಾರೆ. ಈ ಶಾಪ ಪರಿಹರಿಸಲು ಭೂಮಿಯಲ್ಲಿ ಸಂಚಾರವನ್ನು ಮಾಡುವರು. ಹೀಗಿರುವಾಗ ಕಾಂಚೀಪುರದ ಅರಸ ಚೋಳನೃಪನು ವಿಷ್ಣು ಪ್ರತಿಮೆಗೆ ಹದಿನಾರು ಬಗೆಯ ಪೂಜೆಯನ್ನು ಮಾಡುತ್ತಾನೆ. ಆಗ ಪ್ರತಿಮೆಯು ಅಲುಗಾಡುತ್ತದೆ. ಇದಕ್ಕೆ ಕಾರಣವೇನೆಂದು ರೇವಣಸಿದ್ದರನ್ನು ಕೇಳಿದಾಗ ಯತಿ ಶಾಪಕ್ಕೆ ಗುರಿಯಾದ ಕುಣಿಗಳಿಂದ ಈ ರೀತಿ ಸಂಭವಿಸಿದೆಂದು ಹೇಳುತ್ತಾನೆ. ಆದಕ್ಕೆ ಆ ಯಕ್ಷ ಕುಣಗಳನ್ನು ಕೊಂದು ಸುರಗಿ, ಕಠಾರಿಯನ್ನು ಮಾಡಿದುದರ ಬಗ್ಗೆ ಈ ಸ್ಥಳವು ಮಾಹಿತಿಯನ್ನು ಒದಗಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಕೂಡು ಕಟ್ಟು, ಪುರುಷೋತ್ತಮ ಬಿಳಿಮಲೆ, ಪು-೭೨
೨. ಅದೇ ಪುಟ-೭೪
೩. ಜಾನಪದ ಕೈಪಿಡಿ, (ಸಂ) ಡಾ.ಎಚ್.ಜೆ.ಲಕ್ಕಪ್ಪಗೌಡ, ಪುಟ-೫೨೪
೪. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೯೧
೫. ಅದೇ ಪುಟ-೨೦೫
೬. ಅದೇ ಪುಟ-೨೦೭
೭. ಅದೇ ಪುಟ-೨೦೮
೮. ಅದೇ ಪುಟ-೧೯೩
೯. ಅದೇ ಪುಟ-೮೫
೧೦. ಅದೇ ಪುಟ-೨೪೧
೧೧. ಗರತಿಹಾಡು, ಸಂ ದ.ರಾ. ಬೇಂದ್ರೆ, ಸಿಂಪಿಲಿಂಗಣ್ಣ, ಪುಟ-೧೨
೧೨. ತಗರ ಪವಾಡ, ಸಂ.೨ ಪುಟ-೫೭
೧೩. ಹಾಲುಮತ ಪುರಾಣವು, ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ, ಸಂ.೪, ಪು-೯೦
೧೪. ಹಾಲುಮತೋತ್ತೇಜಕ ಪುರಾಣ, ಸಂ.೮, ಪು-೫೧
೧೫. ಜನಪದ ಹಾಲುಮತ ಮಹಾಕಾವ್ಯ, ಪುಟ-೩೦
೧೬. ಜಾನಪದ ಅನ್ವಯಿಕತೆ, (ಸಂ) ಡಾ.ರಂಗಾರೆಡ್ಡಿ ಕೋಡಿರಾಂಪುರ, ಜಿ.ಆರ್.ತಿಪ್ಪೇಸ್ವಾಮಿ, ಪುಟ-೧೪೧
೧೭. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೩೮

ಚಕೋರಿ ಹೊಳೆಯಲ್ಲಿ ನಿಂತು ಶಿವನ ಪೂಜೆಮಾಡುತ್ತಿರುವಾಗ ಕೋಪಿಷ್ಟರಾದ ಬಂಡಿಕಾರರು ಗರ್ವದಿಂದ ಆರ್ಭಟಿಸುತ್ತಾರೆ. ಆಗ ಶಾಂತಯ್ಯ ಬಂಡಿಯನ್ನು ತುಂಡು ತುಂಡಾಗಿಸುತ್ತಾನೆ. ಈ ತಪ್ಪಿಗೆ ಆ ಬಂಡಿಕಾರರು ಕ್ಷಮೆಯಾಚಿಸಿ ಚಕೋರ ಹೊಳೆಯ ಹತ್ತಿರ ಶಿವದೇವಾಲಯವನ್ನು ನಿರ್ಮಿಸುವರು. ಹೀಗೆ ಹಾಲುಮತ ಪುರಾಣಗಳಲ್ಲಿ ಬರುವ ಪ್ರತಿಯೊಂದು ಸ್ಥಳಕ್ಕೂ ಹಿಂದೆ ವಿಶೇಷ ತಾತ್ಪರ್ಯವಿರುವುದು ಈ ಮೂಲಕ ತಿಳಿದುಬರುವುದು.

**vi. ಮಾಸನೂರು**

ಈ ಸ್ಥಳ ಕುರಿತು ಹಾಲುಮತೋತ್ತೇಜಕ ಪುರಾಣದಲ್ಲಿ ಈ ರೀತಿ ವ್ಯಕ್ತವಾಗಿದೆ. ರೆವಣಸಿದ್ಧರು ಕೈಲಾಸದಲ್ಲಿ ದಾರುಕನನ್ನು ದಾಟಿಶಾಪಕ್ಕೆ ಗುರಿಯಾಗಿರುತ್ತಾರೆ. ಈ ಶಾಪ ಪರಿಹರಿಸಲು ಭೂಮಿಯಲ್ಲಿ ಸಂಚಾರವನ್ನು ಮಾಡುವರು. ಹೀಗಿರುವಾಗ ಕಾಂಚೀಪುರದ ಅರಸ ಚೋಳನೃಪನು ವಿಷ್ಣು ಪ್ರತಿಮೆಗೆ ಹದಿನಾರು ಬಗೆಯ ಪೂಜೆಯನ್ನು ಮಾಡುತ್ತಾನೆ. ಆಗ ಪ್ರತಿಮೆಯು ಅಲುಗಾಡುತ್ತದೆ. ಇದಕ್ಕೆ ಕಾರಣವೇನೆಂದು ರೇವಣಸಿದ್ದರನ್ನು ಕೇಳಿದಾಗ ಯತಿ ಶಾಪಕ್ಕೆ ಗುರಿಯಾದ ಕುಣಿಗಳಿಂದ ಈ ರೀತಿ ಸಂಭವಿಸಿದೆಂದು ಹೇಳುತ್ತಾನೆ. ಅದಕ್ಕೆ ಆ ಯಕ್ಷ ಕುಣಗಳನ್ನು ಕೊಂದು ಸುರಗಿ, ಕಠಾರಿಯನ್ನು ಮಾಡಿದುದರ ಬಗ್ಗೆ ಈ ಸ್ಥಳವು ಮಾಹಿತಿಯನ್ನು ಒದಗಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಕೂಡು ಕಟ್ಟು, ಪುರುಷೋತ್ತಮ ಬಿಳಿಮಲೆ, ಪು-೭೨
೨. ಅದೇ ಪುಟ-೭೪
೩. ಜಾನಪದ ಕೈಪಿಡಿ, (ಸಂ) ಡಾ.ಎಚ್.ಜೆ.ಲಕ್ಕಪ್ಪಗೌಡ, ಪುಟ-೫೨೪
೪. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೯೧
೫. ಅದೇ ಪುಟ-೨೦೫
೬. ಅದೇ ಪುಟ-೨೦೭
೭. ಅದೇ ಪುಟ-೨೦೮
೮. ಅದೇ ಪುಟ-೧೯೩
೯. ಅದೇ ಪುಟ-೮೫
೧೦. ಅದೇ ಪುಟ-೨೪೧
೧೧. ಗರತಿಹಾಡು, ಸಂ ದ.ರಾ. ಬೇಂದ್ರೆ, ಸಿಂಪಿಲಿಂಗಣ್ಣ, ಪುಟ-೧೨
೧೨. ತಗರ ಪವಾಡ, ಸಂ.೨ ಪುಟ-೫೭
೧೩. ಹಾಲುಮತ ಪುರಾಣವು, ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ, ಸಂ.೪, ಪು-೯೦
೧೪. ಹಾಲುಮತೋತ್ತೇಜಕ ಪುರಾಣ, ಸಂ.೮, ಪು-೫೧
೧೫. ಜನಪದ ಹಾಲುಮತ ಮಹಾಕಾವ್ಯ, ಪುಟ-೩೦
೧೬. ಜಾನಪದ ಅನ್ವಯಿಕತೆ, (ಸಂ) ಡಾ.ರಂಗಾರೆಡ್ಡಿ ಕೋಡಿರಾಂಪುರ, ಜಿ.ಆರ್.ತಿಪ್ಪೇಸ್ವಾಮಿ, ಪುಟ-೧೪೧
೧೭. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೩೮

ಚಕೋರಿ ಹೊಳೆಯಲ್ಲಿ ನಿಂತು ಶಿವನ ಪೂಜೆಮಾಡುತ್ತಿರುವಾಗ ಕೋಪಿಷ್ಟರಾದ ಬಂಡಿಕಾರರು ಗರ್ವದಿಂದ ಆರ್ಭಟಿಸುತ್ತಾರೆ. ಆಗ ಶಾಂತಯ್ಯ ಬಂಡಿಯನ್ನು ತುಂಡು ತುಂಡಾಗಿಸುತ್ತಾನೆ. ಈ ತಪ್ಪಿಗೆ ಆ ಬಂಡಿಕಾರರು ಕ್ಷಮೆಯಾಚಿಸಿ ಚಕೋರ ಹೊಳೆಯ ಹತ್ತಿರ ಶಿವದೇವಾಲಯವನ್ನು ನಿರ್ಮಿಸುವರು. ಹೀಗೆ ಹಾಲುಮತ ಪುರಾಣಗಳಲ್ಲಿ ಬರುವ ಪ್ರತಿಯೊಂದು ಸ್ಥಳಕ್ಕೂ ಹಿಂದೆ ವಿಶೇಷ ತಾತ್ಪರ್ಯವಿರುವುದು ಈ ಮೂಲಕ ತಿಳಿದುಬರುವುದು.

**vi. ಮಾಸನೂರು**

ಈ ಸ್ಥಳ ಕುರಿತು ಹಾಲುಮತೋತ್ತೇಜಕ ಪುರಾಣದಲ್ಲಿ ಈ ರೀತಿ ವ್ಯಕ್ತವಾಗಿದೆ. ರೆವಣಸಿದ್ಧರು ಕೈಲಾಸದಲ್ಲಿ ದಾರುಕನನ್ನು ದಾಟಿಶಾಪಕ್ಕೆ ಗುರಿಯಾಗಿರುತ್ತಾರೆ. ಈ ಶಾಪ ಪರಿಹರಿಸಲು ಭೂಮಿಯಲ್ಲಿ ಸಂಚಾರವನ್ನು ಮಾಡುವರು. ಹೀಗಿರುವಾಗ ಕಾಂಚೀಪುರದ ಅರಸ ಚೋಳನೃಪನು ವಿಷ್ಣು ಪ್ರತಿಮೆಗೆ ಹದಿನಾರು ಬಗೆಯ ಪೂಜೆಯನ್ನು ಮಾಡುತ್ತಾನೆ. ಆಗ ಪ್ರತಿಮೆಯು ಅಲುಗಾಡುತ್ತದೆ. ಇದಕ್ಕೆ ಕಾರಣವೇನೆಂದು ರೇವಣಸಿದ್ಧರನ್ನು ಕೇಳಿದಾಗ ಯತಿ ಶಾಪಕ್ಕೆ ಗುರಿಯಾದ ಕುಣಿಗಳಿಂದ ಈ ರೀತಿ ಸಂಭವಿಸಿದೆಂದು ಹೇಳುತ್ತಾನೆ. ಅದಕ್ಕೆ ಆ ಯಕ್ಷ ಕುಣಗಳನ್ನು ಕೊಂದು ಸುರಗಿ, ಕಠಾರಿಯನ್ನು ಮಾಡಿದುದರ ಬಗ್ಗೆ ಈ ಸ್ಥಳವು ಮಾಹಿತಿಯನ್ನು ಒದಗಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಕೂಡು ಕಟ್ಟು, ಪುರುಷೋತ್ತಮ ಬಿಳಿಮಳೆ, ಪು-೭೨
೨. ಅದೇ ಪುಟ-೭೪
೩. ಜಾನಪದ ಕೈಪಿಡಿ, (ಸಂ) ಡಾ.ಎಚ್.ಜೆ.ಲಕ್ಕಪ್ಪಗೌಡ, ಪುಟ-೫೨೪
೪. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೯೯೧
೫. ಅದೇ ಪುಟ-೨೦೫
೬. ಅದೇ ಪುಟ-೨೦೬
೭. ಅದೇ ಪುಟ-೨೦೮
೮. ಅದೇ ಪುಟ-೯೯೩
೯. ಅದೇ ಪುಟ-೮೫
೧೦. ಅದೇ ಪುಟ-೨೪೧
೧೧. ಗರತಿಹಾಡು, ಸಂ ದ.ರಾ. ಬೇಂದ್ರೆ, ಶಿಂಪಿಲಿಂಗಣ್ಣ, ಪುಟ-೧೨
೧೨. ತಗರ ಪವಾಡ, ಸಂ.೨ ಪುಟ-೫೭
೧೩. ಹಾಲುಮತ ಪುರಾಣವು, ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ, ಸಂ.೪, ಪು-೯೦
೧೪. ಹಾಲುಮತೋತ್ತೇಜಕ ಪುರಾಣ, ಸಂ.೮, ಪು-೫೧
೧೫. ಜನಪದ ಹಾಲುಮತ ಮಹಾಕಾವ್ಯ, ಪುಟ-೩೦
೧೬ ಜಾನಪದ ಅನ್ವಯಿಕತೆ, (ಸಂ) ಡಾ.ರಂಗಾರೆಡ್ಡಿ ಕೋಡಿರಾಂಪುರ, ಜಿ.ಆರ್.ತಿಪ್ಪೇಸ್ವಾಮಿ, ಪುಟ-೧೪೧
೧೭. ಜನಪದ ಹಾಲುಮತ ಮಹಾಕಾವ್ಯ, ವೀರಣ್ಣ ದಂಡೆ, ಪುಟ-೧೩೮

